ಗಳಗನಾಥ ಸುರಸಗ್ರಂಥಮಾಲೆಯು

೪೮ ನೆಯ ಗ್ರಂಥ

ಶ್ರೀ

— ಸಚಿತ್ರ —

# ರಾಮಚರಿತ-ಮಾನಸ

ಅಥವಾ

# ತುಲಸೀ-ರಾಮಾಯಣ.



ಇದನ್ನು

ವೆಂಕಟೇಶ ತಿರಕೋ ಕುಲಕರ್ಣಿ ಗಳಗನಾಥ

ಪೆನಶನರ ಅ|| ಮಾಸ್ತರ

ಟ್ರೇನಿಂಗ ಕಾಲೇಜ

ಧಾರವಾಡ.

ಇವರು ಸಂಪಾದಿಸಿದರು.

**1926.**

[ ಮೊದಲನೇ ಆವೃತ್ತಿ ೨೦೦೦ ಪ್ರತಿಗಳು ]

ಶಕೆ ೧೮೪೭ ಕ್ರೋಧನನಾಮ ಸಂವತ್ಸರ.

ಬೆಲೆ; ೩ ರೂಪಾಯಿ.

ಮುದ್ರಕ—ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ
ಮುದ್ರಣಾಲಯ—ಶ್ರೀವೇಂಕಟೇಶ ಪ್ರಿಂಟಿಂಗ ಪ್ರೆಸ್ ಹಾವೇರಿ.
ಪ್ರಕಾಶಕ—ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ.
ಪ್ರಶಿದ್ಧಿಸುವ ಸ್ಥಳ— ಶ್ರೀ ಸದ್ಗುರು ಆಫೀಸ ಹಾವೇರಿ ಜಿ.ಧಾರವಾಡ.

Printed by V. T. Kulkarni, Galgnath, at the
Venkatesh Printing Pres,
**HAVERI**. Dt: Dharwar

# ಪ್ರಸ್ತಾವನೆ.



ಶ್ರೀಸೀತಾರಾಮನ ಕೃಪೆಯಿಂದ "ಶ್ರೀರಾಮಚರಿತಮಾನಸವು" ಅಥವಾ "ತುಲಸೀ ರಾಮಾಯಣವು" ಮುಗಿದದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿದೆ. ನನ್ನ ಋಣಭಾರವು ಕಡಿಮೆಯಾಗಬೇಕೆಂದು ಬಹುಶ್ರಮಪಟ್ಟು ಈ ಮೊದಲೇ "ಮಾಧವಕರುಣಾವಿಲಾಸ" "ಭಾಗವತಾಮೃತ" "ಶೈವಸುಧಾರ್ಣವ" ಎಂಬ ದೊಡ್ಡ ದೊಡ್ಡ ಮೂರು ಪುಸ್ತಕಗಳನ್ನು ಬರೆದು ಪ್ರಸಿದ್ಧಮಾಡಿದೆನು; ನನ್ನ ಶ್ರಮಕ್ಕೆ ತಕ್ಕಂತೆ ನಮ್ಮ ಪ್ರಿಯ ಆಶ್ರಯದಾತೃಗಳು ನನಗೆ ಆಶ್ರಯವನ್ನು ಕೊಟ್ಟರು; ಆದರೆ ಋಣಭಾರದ ನೆವದಿಂದ ಇಂಥ ಹಲವು ಪುಸ್ತಕಗಳು ಶ್ರೀಗುರುಪ್ರೇರಣೆಯಿಂದ ನನ್ನ ಮುಖಾಂತರ ಒಡಬಡ ಹೊರಬೀಳಬೇಕೆಂದು ದೇವರ ಸಂಕೇತವಿರುವದೋ ಅನ್ಯವಂತೆ, ಸಾಲವು ತೀರದೆ "ಇನ್ನು ಮತ್ತೆ ಯಾವ ಪುಸ್ತಕ ಬರೆಯಬೇಕೆಂಬ" ಆತುರತೆಯು ಮಾತ್ರ ನನ್ನಲ್ಲಿ ಹೆಚ್ಚುತ್ತಿರುವದು! ಹೀಗೆ ಹೆಚ್ಚುತ್ತಿರುವ ಆ ಆತುರತೆಯ ಫಲವೇ ಈಗ ಪ್ರಸಿದ್ಧವಾಗಿರುವ ಈ ತುಲಸೀರಾಮಾಯಣವಾಗಿದ್ದು, ಇದರ ಸಂಗಡಲೇ "ಸಂಸಾರಸುಖ" ಅಥವಾ "ಲೋಕಭ್ರಮ" ಎಂಬ ಬೋಧಪ್ರದವಾದ ಐತಿಹಾಸಿಕ ಕಾದಂಬರಿಯೊಂದು ಪ್ರಸಿದ್ಧವಾಗಿರುತ್ತದೆಂದು ಸಂತೋಷದಿಂದ ತಿಳಿಸುವೆನು. ನನಗೆ ಈ ಹನ್ನೆರಡುಸಾವಿರ ರೂಪಾಯಿಗಳ ಸಾಲವಾಗದಿದ್ದರೆ, ಹೀಗೆ ದೊಡ್ಡದೊಡ್ಡ ಪುಸ್ತಕಗಳು ಒಂದರಹಿಂದೊಂದು ಪ್ರಸಿದ್ಧವಾಗುತ್ತಿದ್ದವೋ ಇಲ್ಲವೋ ಎಂಬದನ್ನು ನಾನು ಹೇಳಲಾರೆನು; ಆದ್ದರಿಂದ ಇಂಥ ಸದ್ಗ್ರಂಥಗಳ ವ್ಯವಸಾಯದಿಂದ ನನ್ನ ಆತ್ಮಕ್ಕಾದ ಸುಸಂಸ್ಕಾರಕ್ಕಾಗಿ ನಾನು ನನ್ನ ಋಣಭಾರದ ವಿಷಯದಲ್ಲಿ ಅತ್ಯಂತ ಕೃತಜ್ಞನಾಗಿರುವದು ಅತ್ಯವಶ್ಯವು; ಆದರೆ ಪ್ರಿಯ ಕನ್ನಡಿಗರೇ, ಇಷ್ಟು ಯತ್ನಮಾಡಿದ್ದರೂ ಸಾಲವು ತೀರಲೊಲ್ಲದಾದ್ದರಿಂದ ಇನ್ನು ಸಾಲವು ತೀರಲಿ-ತೀರದಿರಲಿ ಎಲ್ಲಭಾರವನ್ನು ದೇವರಮೇಲೆ ಹಾಕಿ, ಸಾಲತೀರಬೇಕೆಂದು ಮಾತ್ರ ಇಚ್ಛಿಸುತ್ತ ಹೀಗೆಯೇ ಭಗವದ್ಗುಣಾನುವಾದದ ಹಾಗು ನೀತಿಬೋಧಕ ಗ್ರಂಥಗಳನ್ನು ಬರೆಯುತ್ತ ಹೋಗಬೇಕೆಂದು ನಿಶ್ಚಯಿಸಿರುವೆನು. ಇದಲ್ಲದೆ ಈಗ ನಿಲ್ಲಿಸಿಬಿಟ್ಟಿರುವ "ಸದ್ಗುರು" ಮಾಸಪತ್ರಿಕೆಯನ್ನೂ, ಸಂಸ್ಕೃತ ಪಾಠಶಾಲೆಯನ್ನೂ ಆದಷ್ಟು ಬೇಗನೆ ಮತ್ತೆ ಆರಂಭಿಸಬೇಕೆಂತಲೂ ನಿರ್ಧರಿಸಿರುವೆನು. ಆದರೆ ನನ್ನ ಆ ನಿಶ್ಚಯ-ನಿರ್ಧಾರಗಳು ಫಲದ್ರೂಪವಾಗುವ ಸುಯೋಗವು ಶ್ರೀಗುರುಪ್ರೇರಣೆಯಿಂದ ಕನ್ನಡಿಗರು ಕೊಡುವ ಆಶ್ರಯವನ್ನು ಪ್ರಾಮುಖ್ಯವಾಗಿ ಅವಲಂಬಿಸಿರುವದರಿಂದ, ನನ್ನ ಸೇವ್ಯರಾದ ಪ್ರಿಯಕನ್ನಡಿಗರು ನೀವು ಆಶ್ರಯಕೊಡುವದಕ್ಕಾಗಿ ಎಂದಿನಂತೆ ನಿಮ್ಮ ಕೊಡಗೈಯನ್ನು ಮುಂದೆಮಾಡತಕ್ಕದ್ದು.

ತುಲಸೀದಾಸರಂಥ ಸರ್ವಮಾನ್ಯ ಧುರೀಣ-ಭಗವದ್ಭಕ್ತರು ಬರೆದಿರುವ ರಾಮಾಯಣದ ವಿಷಯವಾಗಿ ನನ್ನಂಥ ಪಾಮರನು ಅಭಿಪ್ರಾಯವ ಪ್ರಕಟಿಸುವದು ಸಾಹಸವಾಗಿದ್ದರೂ, ಈ ಸದ್ಗ್ರಂಥದ ವ್ಯಾಸಂಗದಿಂದ ನನ್ನ ಪಾಮರತ್ವವು ಹೆಚ್ಚು ಸ್ಪಷ್ಟವಾಗಿದ್ದು, ಸತ್ಯಾಸತ್ಯದ ದರ್ಶನವು ನನ್ನಲ್ಲಿ ಹೆಚ್ಚಿತೆಂಬುದನ್ನು ಬರೆಯದೆ ಇರಲಾರೆನು. ಶಾಸ್ತ್ರಜ್ಞರೂ, ಪಂಡಿತರೂ, ಕವಿಗಳೂ ಮೊದಲಾದ ಪ್ರಯತ್ನಸಿದ್ಧಪುರುಷರು ತಮ್ಮ ಯೋಗ್ಯತೆಯ ಅಹಂಕಾರ-ಬಲಗಳಿಂದ ಬರೆದಿರುವ ಗ್ರಂಥಗಳಿಗೂ, ಭಗವಂತನಿಗೆ ಶರಣಾಗತರಾಗಿ, ತಮ್ಮ ಸಾಮರ್ಥ್ಯವನ್ನು ಪೂರ್ಣ ಅರಿತು, ಆತನ ಕೃಪೆಯಿಂದ ಧನ್ಯರಾದ ಅಹಂಕಾರರಹಿತ ಸಾಧು ಸತ್ಪುರುಷರು ಬರೆದಿರುವ ಗ್ರಂಥಗಳಿಗೂ ಮಹದಂತರವಿರುತ್ತದೆ; ಯಾಕೆಂದರೆ ಮೊದಲನೆಯ ಪ್ರಕಾರದ ಗ್ರಂಥಗಳಲ್ಲಿ ಪಾಂಡಿತ್ಯಫಲಿತ ತರ್ಕವಿತರ್ಕಗಳಿಗೆ ಪ್ರಾಧಾನ್ಯವಿದ್ದು, ಸತ್ಸಂಗಫಲಿತ ಸದನುಭವಕ್ಕೆ ಗೌಣತ್ವವಿದ್ದರೆ, ಎರಡನೆಯ ಪ್ರಕಾರದ ಗ್ರಂಥಗಳಲ್ಲಿ ಸತ್ಸಂಗಫಲಿತ ಸದನುಭವಕ್ಕೆ ಪ್ರಾಧಾನ್ಯವಿದ್ದು, ಪಾಂಡಿತ್ಯಫಲಿತ ತರ್ಕವಿತರ್ಕಗಳಿಗೆ ಗೌಣತ್ವವಿರುತ್ತದೆ; ಆದ್ದರಿಂದ ಮೊದಲನೆಯ ಪ್ರಕಾರದ ಗ್ರಂಥಗಳು ಅಹಂಕಾರಜನ್ಯ ವಿವಾದಬುದ್ಧಿಯ, ಹಾಗೂ ಸ್ವಾರ್ಥದ ಅಭಿವೃದ್ಧಿಗೆ ಕಾರಣವಾದರೆ, ಎರಡನೆಯ ಪ್ರಕಾರದ ಗ್ರಂಥಗಳು ಪಶ್ಚಾತ್ತಾಪಜನ್ಯ ವಿನೀತಭಾವದ ಹಾಗು ಪರಮಾರ್ಥದ ಅಭಿವೃದ್ಧಿಗೆ ಕಾರಣವಾಗುವವು. ಹೃದಯದಲ್ಲಿ ಭಕ್ತಿಯ–ಪಶ್ಚಾತ್ತಾಪಗಳುಂಟಾಗುವದೇ ಮನುಷ್ಯನ ಕೃತಾರ್ಥತೆಯ ಸಾಧನವಾದ್ದರಿಂದ, ಈ ತುಲಸೀ ರಾಮಾಯಣದಂಥ ಸತ್ಪುರುಷರು ಬರೆದ ಗ್ರಂಥಗಳು ಎಲ್ಲರ, ವಿಶೇಷವಾಗಿ ಸಾಧಕರ ಶ್ರವಣ–ಮನನ-ನಿದಿಧ್ಯಾಸಗಳಿಗೆ ಅತ್ಯಂತ ಯೋಗ್ಯವಾಗಿರುವವು. ಇಂಥ ಗ್ರಂಥಗಳ ಅವಲೋಕನದಿಂದ ವಿವೇಕಿಗಳ ತರ್ಕ–ವಿತರ್ಕಶಕ್ತಿಯು ಶೀಘ್ರ, ಗುರು ಹಿರಿಯರ ವಿಷಯವಾಗಿಯೂ, ದೇವರ ವಿಷಯವಾಗಿಯೂ, ಸಾಧುಸಂತರ ವಿಷಯವಾಗಿಯೂ, ಸದ್ಗ್ರಂಥಗಳ ವಿಷಯವಾಗಿಯೂ ಅವರ ಶ್ರದ್ಧಾ–ಭಕ್ತಿಗಳ ಹೆಚ್ಚಿ, ಧಾರ್ಮಿಕವೃತ್ತಿಯು ಅಭಿವೃದ್ಧಿಯಾಗಿ, ಮನಸ್ಸು ಉದಾರವಾಗ ತೊಡಗುತ್ತ ಕಡೆಗೆ ಅದು ನಿಸ್ಪೃಹವಾಗುವ ಸಂಭವವು ವಿಶೇಷವಾಗಿರುತ್ತದೆ.

ತುಲಸೀ ದಾಸರು ಭಗವದ್ದರ್ಶನರೂಪ ಸಿದ್ಧಿಯನ್ನು ಪಡೆದ ಶ್ರೇಷ್ಠ ಭಗವದ್ಭಕ್ತರಾಗಿರುವರಲ್ಲದೆ, ವಿದ್ವಾಂಸರೂ, ಕವಿಗಳೂ ಆಗಿರುವದು ರತ್ನಕ್ಕೆ ಕುಂದಣಹಾಕಿ ಮೇಲೆ ಬಣ್ಣವಿಟ್ಟಹಾಗೆ ಆಗಿರುತ್ತದೆ! ಭಗವದ್ಭಕ್ತರಲ್ಲಿರುವ ವಿನಯ, ತಾರತಮ್ಯಶೀಲವಾದ ಸದಾಚರಣೆ, ಉತ್ಕಟ ವೈರಾಗ್ಯ, ನಿರ್ಮಲಭಕ್ತಿ, ಸ್ವಕೀಯ ದೋಷಪರಿಜ್ಞಾನ ಪರಗುಣಾಭಿಜ್ಞತೆ, ಸಹೃದಯತೆ, ದಯಾಳುತ್ವ ಮೊದಲಾದ ಪವಿತ್ರ ಗುಣಗಳ ಪಸ್ಫೋಟವು ಈ ಕಾವ್ಯದಲ್ಲಿ ಬಹುಸ್ಪಷ್ಟವಾಗಿ ಕಾಣುವದಲ್ಲದೆ, ಈ ಕಾವ್ಯದಲ್ಲಿ ಶ್ರುತಿ–ಸ್ಮೃತಿ ಸಮ್ಮತವಾಗಿ ಉದಾತ್ತ ಧರ್ಮತತ್ತ್ವಗಳನ್ನು ಶಾಸ್ತ್ರೀಯಪದ್ಧತಿಯಿಂದ ವಿವೇ

ದ್ದೂ, ಸುಸಂಗತವಾದ ಸುಲಭಶೈಲಿಯಿಂದ ವಾಚಕರ ಮನಸ್ಸಿನಲ್ಲಿಯ ಉದಾತ್ತ ಭಾವನೆಗಳನ್ನು ಜಾಗೃತಗೊಳಿಸಿದ್ದೂ, ಉಪಮಾದಿ ವಿವಿಧ ಅಲಂಕಾರಗಳ ಸೌಷ್ಠವದಿಂದ ಕಾವ್ಯವನ್ನು ಅಲಂಕರಿಸಿದ್ದೂ, ದಾಸರ ಪಾಂಡಿತ್ಯ-ಕವಿತ್ವಗಳ ಪ್ರದರ್ಶನವನ್ನು ಚನ್ನಾಗಿ ಮಾಡುತ್ತಿರುವವು. ಸದ್ಗುರುಸೇವೆಯಲ್ಲಿಯೂ, ಶ್ರೀರಾಮನ ಸೇವೆಯಲ್ಲಿಯೂ ದೇಹವನ್ನು ಸವಿಸಿ ಕೃತಾರ್ಥರಾಗಿದ್ದ ಈ ಭಾಗ್ಯಶಾಲಿಗಳಿಗೆ ಸೇವ್ಯ ಸೇವಕಭಾವದ ಪರಿಜ್ಞಾನವೂ, ಪವಿತ್ರಸೇವಾಪದ್ಧತಿಯ ಮರ್ಮವೂ ವೈಉಂಡವಿಷಯಗಳಾದ್ದರಿಂದ, ಅವುಗಳ ವರ್ಣನವು ಈ ಗ್ರಂಥದಲ್ಲಿ ಅತ್ಯಂತ ಹೃದಯಂಗಮವಾಗಿಯೂ, ಚಿತ್ತವೇಧಕವಾಗಿಯೂ ಆಗಿರುವದು. ಈ ಗ್ರಂಥವು ಶ್ರುತಿ-ಸ್ಮೃತ್ಯುಕ್ತ ಧರ್ಮಪದ್ಧತಿಯನ್ನು ಬೋಧಿಸುವದರಲ್ಲಿ ಕೇವಲ ಅಧಿಕಾರಸಂಪನ್ನನಾದ ಶ್ರೇಷ್ಠ ಧರ್ಮಬೋಧಕನಂತೆ ಇರುವದು. ಅಂತೇ ಇಡಿಯ ಉತ್ತರಹಿಂದುಸ್ಥಾನದ ಎಂಟುಕೋಟಿ ಜನರಲ್ಲಿ ಸರಾಸರಿ ಮೂರುವರೆಶತಕಗಳಿಂದ ಇದು ಧರ್ಮತತ್ವಗಳನ್ನು ಬೋಧಿಸುವ ಕಾರ್ಯವನ್ನು ಅವ್ಯಾಹತವಾಗಿ ಸಾಗಿಸುತ್ತಬಂದಿರುವದು; ಮತ್ತು ಈಗಿನ ಸ್ವಚ್ಛಂದಾಚರಣೆಯ ಕಲಿಕಾಲದಲ್ಲಿ ಈಶ್ವರಕೃಪೆಯಿಂದ ಚಾತುರ್ವರ್ಣ್ಯದ ಜಾಗೃತಿಯೂ, ಶ್ರದ್ಧೆಯೂ ಉಳ್ಳವರು ಇರುವವರೆಗೆ ಈ ಪವಿತ್ರಗ್ರಂಥವು ಹೀಗೆಯೇ ಧರ್ಮವನ್ನು ಬೋಧಿಸುತ್ತಿರುವಲ್ಲಿ ಸಂಶಯವಿಲ್ಲ. ಉತ್ತರಹಿಂದುಸ್ಥಾನದಲ್ಲಿ ವೇದದ ತರುವಾಯದಲ್ಲಿ ಈ ಗ್ರಂಥದ ಮಹತ್ವವು ಎಣಿಸಲ್ಪಡುತ್ತಿರುವದು, ಇದರ ಶ್ರೇಷ್ಠತೆಯ ದರ್ಶನವಾಗಿರುತ್ತದೆ. ಹಿಂದೀಭಾಷೆಯಲ್ಲಿ ಈ ಗ್ರಂಥದಷ್ಟು ಲೋಕಪ್ರಿಯವಾದ ಶ್ರೇಷ್ಠ ಗ್ರಂಥವು ಮತ್ತೊಂದಿಲ್ಲವಂತೆ. ಇದಲ್ಲದೆ ಭರತಖಂಡದೊಳಗಿನ ಬೇರೆ ಯಾವಭಾಷೆಯಲ್ಲಿಯೂ ಈ ಗ್ರಂಥದಷ್ಟು ಪ್ರಸಾರವುಳ್ಳ ಬೇರೆ ಗ್ರಂಥಗಳಿಲ್ಲವೆಂತಲೂ ಹೇಳುವದುಂಟು. ಒಟ್ಟಿಗೆ ಯಾವನಾದರೂ ಮುಮುಕ್ಷುವು—"ನನಗೆ ಇಹಪರ ಸಾಧನದ ಆಚರಣೆಯು ಹೇಗೆ ಗೊತ್ತಾದೀತೆಂದು" ಚಿಂತಿಸುತ್ತಿದ್ದರೆ ಆತನ ಆ ಚಿಂತೆಯನ್ನು ಈ ಸಾಧುಪ್ರಣೀತ ನಿರ್ಮಲ ಗ್ರಂಥವು ನಿಃಸಂಶಯವಾಗಿ ದೂರಮಾಡುವದೆಂದು ಇದನ್ನು ಓದುವವರಿಗೆ ತೋರದೆ ಇರಲಾರದು; ಅದರಲ್ಲಿ ಸತ್ತ್ವಮಾಗತು ಮಾಡಿದವರಿದ್ದರಂತೂ, ಅವರ ಸದನುಭವದ ಹಾಗೂ ಸದ್ಬೋಧಶ್ರವಣದ ಪುನರಾವರ್ತನವಾದಂತೆ ಅವರಿಗೆ ಆನಂದವಾಗುವದು.

ಹೀಗೆ ಈ ಶ್ರೇಷ್ಠ ಗ್ರಂಥದ ಮಹತ್ವವನ್ನು ಪವಿತ್ರ ಹೃದಯದ ತತ್ವಜ್ಞಾನಿಗಳು ಬೇಕಾದಷ್ಟು ವರ್ಣಿಸಬಹುದು; ಯಾಕಂದರೆ ಅಲ್ಲಲ್ಲಿ ಧರ್ಮತತ್ವಗಳ ನಿಜವಾದ ವಿವರಣವು ಉದಾಹರಣೆಗಳಿಂದ ಆಯಾ ಪಾತ್ರಗಳ ಮುಖಾಂತರ ಮಾಡಲ್ಪಟ್ಟದ್ದಾಗಿದ್ದು, ಉತ್ತರಕಾಂಡದೊಳಗಿನ ಶ್ರೀರಾಮನ, ಹಾಗು ಕಾಕಭುಶುಂಡಿಯ ಬೋಧವಂತು ಎಲ್ಲರೂ ನೆನಪಿನಲ್ಲಿಟ್ಟು ಆಚರಿಸಲು ತಕ್ಕದ್ದಾಗಿರುವದು. ಅದರಂತೆ ರಾಮಚಂದ್ರನ ಬಾಲಲೀಲೆ, ಧನುರ್ಭಂಗ, ಸೀತಾಸ್ವಯಂವರ, ಪರಶುರಾಮ-ರಾಮಸಂವಾದ, ಅಂಗದ

ಸಂಧಾನ ಮುಂತಾದ ಒಂದಲ್ಲ ಎರಡಲ್ಲ ಹಲವು ಪ್ರಸಂಗಗಳು ಅತ್ಯಂತ ಹೃದಯಂಗಮವಾಗಿರುವವು; ಭರತನ ಗುಣಗಳ ಹಾಗು ಆತನ ರಾಮಭಕ್ತಿಯ ವರ್ಣನವು ಅತ್ಯಂತ ಉಜ್ವಲವಾಗಿದ್ದು, ಗುಹನ ಮೂಢಭಕ್ತಿಯು ಭೋಳೇ ಭಾವಿಕತನವು ಮನನ ಮಾಡಲಿಕ್ಕೆ ತಕ್ಕದ್ದಾಗಿರುವದು. ಒಟ್ಟಿಗೆ, ಏನಾದರೂ ಬರೆಯಬೇಕೆಂದು ಹೀಗೆ ನಾನು ಉತ್ತಮಸ್ಥಳಗಳೆಂದು ನಿರ್ದೇಶ ಮಾಡಿರುವೆನಲ್ಲದೆ, ನಿಜವಾಗಿ ಇಡಿಯ ಗ್ರಂಥವೇ ಅವಲೋಕನಾರ್ಹವಾಗಿರುವದೆಂದು ನಾನು ಸ್ಪಷ್ಟವಾಗಿ ಹೇಳುವೆನು. ಸಾಂಸಾರಿಕರು ಇಂಥ ಗ್ರಂಥಗಳ ಅವಲೋಕನ ಮಾಡದಿರುವದೊಂದು ದೊಡ್ಡ ಹಾನಿಯೆಂತಲೇ ತಿಳಿದುಕೊಳ್ಳಬೇಕು. ಸೇವಾಧರ್ಮದ ಐಹಿಕ ಹಾಗು ಪಾರಮಾರ್ಥಿಕ ರಹಸ್ಯವನ್ನೂ, ಸ್ವಾಮಿಸೇವಕರ ಅನನ್ಯ ಹಾಗು ಅನ್ಯೋನ್ಯ ಸಂಬಂಧವನ್ನೂ ಇಷ್ಟು ಯಥಾರ್ಥವಾಗಿಯೂ, ಸರಸವಾಗಿಯೂ ಯಾರೂ ವರ್ಣಿಸಿರಲಿಕ್ಕಿಲ್ಲ! ಮಾರುತಿಯ ಸೇವ್ಯಭಕ್ತಿಯನ್ನು ವರ್ಣಿಸುವಾಗ ತುಲಸೀದಾಸರ ತಾದಾತ್ಮ್ಯವಾಗಿಹೋಗಿರುತ್ತದೆ. ಅದರಂತೆ, ಪೃಥ್ವಿಯನ್ನು ಕಂಪಾಯಮಾನವಾಗ ಮಾಡುವ ರಾವಣನ ಉನ್ಮಾದ, ದುರಾಗ್ರಹ, ಆತನ ಅತುಲಿತ ಶೌರ್ಯ, ಹಾಗು ಅವೆಲ್ಲವುಗಳ ಮೂಲದಲ್ಲಿರುವ ಆತನ ವಿರೋಧಭಕ್ತಿ ಇವು ಅತ್ಯುತ್ತಮ ರೀತಿಯಿಂದ ವರ್ಣಿಸಲ್ಪಟ್ಟಿರುವವು. ಈ ಭಗವದ್ಭಕ್ತರು ತಮ್ಮ ಭಕ್ತಿಯ ಯೋಗದಿಂದಲೇ ವೈರಾಗ್ಯ, ಜ್ಞಾನಗಳನ್ನು ಸಂಪಾದಿಸಿಕೊಂಡವರಾದದ್ದರಿಂದ, ಈ ರಾಮಾಯಣದಲ್ಲಿ ಭಕ್ತಿ–ಪ್ರೇಮ–ವೈರಾಗ್ಯ–ಜ್ಞಾನಗಳನ್ನು ವರ್ಣಿಸುವ ಪ್ರಸಂಗದಲ್ಲಿ ಅವರು ತನ್ಮಯರಾಗಿ, ತಮ್ಮ ಭಗವತ್ಕೃಪಾಸಿದ್ಧವಾದ ಸುಸಂಸ್ಕೃತ ಹೃದಯವನ್ನು ಬಿಚ್ಚಿ ಇಟ್ಟುಬಿಟ್ಟಿರುವರು! ಅದರಂತೆ ಬಾಲಕಾಂಡದಲ್ಲಿ ರಾಮನಾಮದ ಮಹಿಮೆಯನ್ನು ವರ್ಣಿಸುವಾಗಲೂ, ಉತ್ತರಕಾಂಡದಲ್ಲಿ ಜ್ಞಾನಕ್ಕಿಂತ ಭಕ್ತಿಯು ಕೃತಾರ್ಥತೆಯ ಸುಲಭ ಸಾಧನವೆಂದು ಹೇಳುವಾಗಲೂ, ಜ್ಞಾನಮಾರ್ಗದ ದುರ್ಗಮತೆಯನ್ನು ವರ್ಣಿಸುವಾಗಲೂ ದಾಸರ ಚಾತುರ್ಯವೂ, ಕಲ್ಪಕತೆಯೂ, ಪರಿಪಕ್ವ ಹೃದಯವೂ, ವಿದ್ವತ್ತೆಯೂ ಚನ್ನಾಗಿ ವ್ಯಕ್ತವಾಗಿರುತ್ತವೆ. ಈ ಪುಣ್ಯವಂತರು ದ್ವೈತಾದ್ವೈತಗಳೆರಡೂ ಸತ್ಯ ಮಾರ್ಗಗಳೆಂದು ಹೇಳಿ, ಸೇವ್ಯಸೇವಕಭಾವದ ಭಕ್ತಿಮಾರ್ಗವು ಸರ್ವರಿಗೂ ಉಪಯೋಗಿಸುವಂಥ ಸುಲಭ ಸಾಧನವೆಂದು ಹೇಳಿರುವರು. ಸರ್ವೋತ್ತಮತ್ವೇನ ಶ್ರೀರಾಮನೇ, ತುಲಸೀದಾಸರ ಉಪಾಸ್ಯ ದೈವತವಾದದ್ದರಿಂದ ಸೇವ್ಯಧರ್ಮಕ್ಕನುಸರಿಸಿ ಪುರಾಣಗಳ ರಹಸ್ಯದಂತೆ ದೇವತೆಗಳಲ್ಲಿ ಶ್ರೀರಾಮನಿಗೇ ಅಗ್ರಸ್ಥಾನವನ್ನು ಕೊಟ್ಟಿದ್ದರೂ, ಅನ್ಯದೇವತೆಗಳ ನಿಂದೆಯು ಸರ್ವಥಾ ಅವರ ಈ ಗ್ರಂಥದಲ್ಲಿರುವದಿಲ್ಲವೆಂಬುದು "ಶಿವಭಕ್ತಿಯಿಲ್ಲದೆ ರಾಮಭಕ್ತಿಯೂ, ರಾಮಭಕ್ತಿಯಿಲ್ಲದೆ ಶಿವಭಕ್ತಿಯೂ ಸಫಲವಾಗದೆಂಬ" ಮಾತನ್ನು ಇವರು ಸ್ವೀಕರಿಸಿದ್ದನ್ನು ನೋಡಿದರೆ ಯಾರಿಗಾದರೂ ಗೊತ್ತಾಗುವದು. ಅದರಂತೆ ರಾಜ–ಪ್ರಜಾಸಂಬಂಧದ ವರ್ಣನವು ಉಭಯರ ಕಲ್ಯಾಣಮಾಡುವಂತಹದಾಗಿರುವದರಿಂದ, ಅದನ್ನು ಎಲ್ಲರೂ ಅವಶ್ಯವಾಗಿ ಗಮನಿಸತಕ್ಕದ್ದು.

ಇಂಥ ಉತ್ಕೃಷ್ಟ ಗ್ರಂಥದ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಡುವ ಸುಯೋಗವು ಒದಗಿದ್ದಕ್ಕಾಗಿ ನನಗೆ ಯಾಕೆ ಆನಂದವಾಗಿರಲಿಕ್ಕಿಲ್ಲ! ಈ ಗ್ರಂಥದಲ್ಲಿ ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಲಂಕಾಕಾಂಡ, ಉತ್ತರಕಾಂಡ ಎಂಬ ಸಪ್ತಕಾಂಡಗಳಿದ್ದು, ಅವನ್ನು ಮೋಕ್ಷಸಾಧನದ ಏಳು ಸೋಪಾನಗಳೆಂದು ಶ್ರೀ ತುಲಸೀದಾಸರು ಹೇಳಿರುವರು. ಗುರು-ಹಿರಿಯರ, ಅಥವಾ ಶ್ರುತಿ-ಸ್ಮೃತ್ಯಾದಿ ಪವಿತ್ರ ಧರ್ಮಗ್ರಂಥಗಳ ಹೇಳಿಕೆ ಕೇಳಿಕೆಗಳಿಗಿಂತ "ತನ್ನ ಮನೋದೇವತೆಯು ಹೇಳಿದಂತೆ ನಡೆಯುವದೇ ಶ್ರೇಯಸ್ಕರವೆಂದು" ಪ್ರಾಮುಖ್ಯವಾಗಿ ಪಾಶ್ಚಾತ್ಯ ಸಂಸ್ಕೃತಿಯ ಸೆಳವಿಗೆ ಸಿಕ್ಕು ತಲೆಯ ಮಾಸವಾರದ ಹುಡುಗರಿಂದ, ಓದಿಓದಿ ತಲೆಹಣ್ಣಾಗಿದ್ದ ಪ್ರಬುದ್ಧ ಪದವೀಧರರವರೆಗೆ ಎಲ್ಲರೂ ತಿಳಿದು ಮನಬಂದಂತೆ ನಡೆಯುತ್ತಿರುವ ಈಗಿನ ಕಾಲದಲ್ಲಿ ಈ ಗ್ರಂಥದ ಅವಲೋಕನವು ಅತ್ಯಾವಶ್ಯಕವಾಗಬಹುದು. ಅಂತೇ ನಾನು ಇದನ್ನು ಎಲ್ಲರಿಗೂ ಓದಲಿಕ್ಕೆ ಹವಣಿಯಾಗುವಂತೆ, ಬೇಸರ ಬರುವ ಭಾಗವನ್ನೂ, ಇಷ್ಟೊಂದು ಹೇಳದಿದ್ದರೂ ಬರುತ್ತಿತ್ತೆಂಬ ಭಾಗವನ್ನೂ ಬಿಟ್ಟು ಸದ್ಗುರುವು ಪ್ರೇರಿಸಿದಂತೆ ಕನ್ನಡದಲ್ಲಿ ಇದನ್ನು ಭಾಷಾಂತರಿಸಿರುವೆನು; ಮೇಲಾಗಿ ಕೆಲವು ಶ್ರೇಷ್ಠ ದೇಶಭಕ್ತರು ತಮ್ಮ ಕಡೆಗಾಣದ ಅಧಾರ್ಮಿಕವಾದ ಅಹಿತಕಾರಕ ಕೆಲವು ಮತಗಳನ್ನು ಪ್ರಸಾರಗೊಳಿಸುವಾಗ ಈ ತುಲಸೀರಾಮಾಯಣವನ್ನು ಕೆಲ ವಿಷಯಗಳಲ್ಲಿ ಮುಂದು ಮಾಡುತ್ತಿರುವರು; ಆದರೆ ಆ ರಾಮಾಯಣದ ಬೋಧಕ್ರಮಕ್ಕೆ ಅವರು ಒಟ್ಟಿನಲ್ಲಿ ಎಷ್ಟು ವಿರೋಧವಾಗಿ ನಡೆದುಕೊಳ್ಳುವರೆಂಬದನ್ನು ಎಲ್ಲರ ಕಣ್ಣಮುಂದೆ ಇಡುವದಕ್ಕಾಗಿಯೂ ನಾನು ಈ ಬಗೆಯ ಭಾಷಾಂತರವನ್ನು ಮಾಡಬೇಕಾಯಿತು. ನನ್ನ ಈ ಭಾಷಾಂತರದ ಕಾರ್ಯಕ್ಕೆ ಮರಾಠೀ ಭಾಷಾಂತರವು ಅತ್ಯಂತ ಸಹಾಯಕವಾದದ್ದರಿಂದ, ಆ ಭಾಷಾಂತರಕಾರರಾದ ಶ್ರೀ ಮಂತ ಯಾದವ ಶಂಕರ ಜಾವಡಾರ ಮುನಸಫರವರ ಉಪಕಾರವನ್ನು ನಾನು ಕೃತಜ್ಞತೆಯಿಂದ ಸ್ಮರಿಸುವೆನು.

ನನ್ನ ಈ ಭಾಷಾಂತರವು ಸರಾಸರಿ ಮೂರು ತಿಂಗಳಲ್ಲಿ ಮುಗಿಯಿತು. ಇದನ್ನೂ "ಸಂಸಾರಸುಖ"ವೆಂಬ ಐತಿಹಾಸಿಕ ಕಾದಂಬರಿಯನ್ನೂ ಮೈಸೂರ ದೇವರಾಜಬಹದ್ದೂರ ಚಾರ್ಟಿ ಫಂಡಿನ ಇನಾಮಿಗಾಗಿ ತಾರೀಖು ೧೫ । ೧ । ೬ ಇ. ಒಳಗಾಗಿ ಕಳಿಸಬೇಕೆಂಬ ವಿಚಾರವು ನನ್ನಲ್ಲಿ ಉತ್ಪನ್ನವಾಯಿತು. ಆಗ ನಮ್ಮ ಶ್ರೀ ವೆಂಕಟೇಶ ಪ್ರೆಸಿನ ತರುಣರು ಹಗಲು ರಾತ್ರಿ ಒಂದೇಸವನೆ ಕೆಲಸಮಾಡಿ ದಿನಾಲು ೧೬ ಪುಟಗಳಂತೆ ಪ್ರಸಿದ್ಧಿಸುತ್ತ ಸರಾಸರಿ ಎರಡು ತಿಂಗಳಲ್ಲಿ ಎರಡೂ ಪುಸ್ತಕಗಳನ್ನು ಮುಗಿಸಿದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿರುವದು. ಹೀಗೆ ನಮ್ಮ ಎರಡೂ ಪುಸ್ತಕಗಳು ಬೇಗನೆ ಮುಗಿಯಲಿಕ್ಕೆ ನಮ್ಮ ದೇವರಾಜ ಬಹದ್ದೂರ ಚಾರ್ಟಿ ಫಂಡೇ ಕಾರಣವಾದದ್ದರಿಂದ ನಾನು ಆ ಫಂಡಿನ ಉತ್ಪಾದಕರ ವಿಷಯವಾಗಿ ಅತ್ಯಂತ ಕೃತಜ್ಞನಾಗಿರುವೆನು. ಈ ಫಂಡಿ

ನಿಂದ ಹೋದವರ್ಷ ನಮ್ಮ "ಮಾಧವಕರುಣಾವಿಲಾಸ"ವೆಂಬ ವಿಸ್ತೃತಕಾದಂಬರಿಗೆ ೩೦೦ ರೂಪಾಯಿಗಳ ಇನಾಮು ದೊರೆತಿರುವದೆಂಬ ಮಾತು ಬಹು ಜನರಿಗೆ ಗೊತ್ತಿರಬಹುದು. ಹೀಗೆ ಅನೇಕ ಅನುಕೂಲ-ಪ್ರತಿಕೂಲಪರಿಸ್ಥಿತಿಗಳಲ್ಲಿ ಬಹುಶ್ರಮದಿಂದಸಿದ್ಧವಾಗಿರುವ ನನ್ನ ಈ ಕನ್ನಡ ತುಲಸೀರಾಮಾಯಣವನ್ನು ಓದುವ ಪ್ರಿಯಕನ್ನಡಿಗರಿಗೆ ಒಂದೇ ಒಂದು ಮಾತಿನಸಲುವಾಗಿ ನಾನು ಕೈ ಜೋಡಿಸಿ ಬುದ್ಧಿಪೂರ್ವಕವಾಗಿ ಬೇಡಿಕೊಳ್ಳುವದೇನಂದರೆ-ಇದನ್ನು ಓದುವವರಲ್ಲಿ ಯಾರಿಗಾದರೂ "ನಮ್ಮ ಮನೋದೇವತೆಯು ಹೇಳಿದಂತೆನಾವು ನಡೆಯುವೆವು" ಎಂದು ಅನ್ನುವಹಾಗೆ ಆಗುತ್ತಿದ್ದರೆ, ಅವರು ತಮ್ಮಮನಸ್ಸು ಅಥವಾ ತಮಗೆ ಹಾದಿ ತೋರಿಸುವವರ ಮನಸ್ಸು ದೇವತೆಯಾಗಿರುವದೋ, ಸೈತಾನ (ಪಿಶಾಚ)ವಾಗಿರುವದೋ ಎಂಬದನ್ನು ನೋಡಿಕೊಳ್ಳತಕ್ಕದ್ದು. ಇಲ್ಲದಿದ್ದರೆ ಸೈತಾನನ ಸೆಳವಿಗೆ ಬಿದ್ದು ತಾವು ಕೆಡುವದಲ್ಲದೆ ಜನರನ್ನೂ ಕೆಡಿಸಿದ ದ್ರೋಹಕ್ಕೆ ಪಾತ್ರರಾಗಬೇಕಾದೀತು! ಮನ್ವಾದಿಮಹರ್ಷಿಗಳಂಥವರ ಹಂಗು ಇಲ್ಲದೆ ಸಿಕ್ಕ ಸಿಕ್ಕ ಹಾಗೆ ಎಳೆದೊಯ್ಯುವ ವೈದಿಕಧರ್ಮದವರ ಮನಸ್ಸು ಸೈತಾನವೇ ಇರುವನೆಂಬದನ್ನು ಎಲ್ಲರೂ ಲಕ್ಷದಲ್ಲಿಡಬೇಕು. ಹೀಗೆ ಭರತಭೂಮಿಯು ಸೈತಾನನವಶವಾಗಿ ಮತ್ತಿಷ್ಟು ಅಧೋಗತಿಗೆ ಇಳಿಯದಂತೆ ಸದ್ಬುದ್ಧಿಯನ್ನು ಕೊಡೆಂದು ಎಲ್ಲರೂ ಪರಮಾತ್ಮನನ್ನು ಪ್ರಾರ್ಥಿಸುವದು ಅಗತ್ಯವಾಗಿರುವದು.

ಪುಣ್ಯವಂತರಾದ ನನ್ನ ಧನಕೋಜನರೊಳಗಿನ ಪ್ರಮುಖ ಧನಕೋಗಳಾದ ತೀರ್ಥಸ್ವರೂಪ ಗಂಗಾಭಾಗೀರಥೀ ಮಾತೃಶ್ರೀಸಮಾನ ರಾಧಾಬಾಯಿ ಭೃತಾರ ರಾವಜಿರಾವ ಬಾಳಾಜಿ ಕರಂದೀಕರ ಇವರು, ನನ್ನ ಲೇಖನ ವ್ಯವಸಾಯಕ್ಕೆ ಪರಿಪೋಷಕವಾಗುವಂತೆ ನನ್ನನ್ನು ಪುತ್ರವಾತ್ಸಲ್ಯದಿಂದ ನಡಿಸಿಕೊಳ್ಳುತ್ತ, ನನಗೆ ಸಾಲದ ನೆನಪುಕೂಡ ಆಗದಂತೆ ಉದಾರಮನಸ್ಸಿನಿಂದ ನಡೆದುಕೊಳ್ಳುತ್ತಿರುವದಕ್ಕಾಗಿ ಈ ಪವಿತ್ರ ಧಾರ್ಮಿಕ ಗ್ರಂಥವನ್ನು ಅವರ ಧಾರ್ಮಿಕವೃತ್ತಿಯ ಸ್ಮಾರಕವೆಂದು ಅವರಿಗೆ ಕಾಣಿಕೆಯಾಗಿ ವಿನಯದಿಂದಅರ್ಪಿಸುವೆನು; ಮತ್ತು ಈ ಪೂಜ್ಯಮಾತೃಶ್ರೀಯವರ ಸುಪುತ್ರರಾದ ಶ್ರೀಯುತ ರಾಮುಭಾವು ರಾವಜೀರಾವ ಕರಂದೀಕರ ಬಿ. ಎ. ರವರ ಮಾತೃಭಕ್ತಿಯನ್ನು, ಸೌಜನ್ಯವನ್ನೂ ನೋಡಿ, ತಮ್ಮ ಮಾತೃಶ್ರೀಯವರ ನನ್ನ ಮೇಲಿನ ವಾತ್ಸಲ್ಯಕ್ಕೋಸ್ಕರ ಸಹಾನುಭೂತಿಯನ್ನಿತ್ತು ನನ್ನನ್ನು ಅನುರಾಗಪೂರ್ವಕ ಪ್ರೀತಿಸುವದಕ್ಕಾಗಿ ನಾನು ಅವರಿಗೆ ಅತ್ಯಂತ ಕೃತಜ್ಞನಾಗಿರುವೆನು. ಶ್ರೀ ಸದ್ಗುರುವು ಈ ನಮ್ಮಗುರುಮನೆತನದ ಉತ್ತರೋತ್ತರ ಕಲ್ಯಾಣಮಾಡಲೆಂದು ಅನನ್ಯ ಭಾವದಿಂದ ಪ್ರಾರ್ಥಿಸುವೆನು.

ಸದ್ಗುರು ಕಾರ್ಯಾಲಯ
ಹಾವೇರಿ ಪ್ರೆಸ್ಸ ಹಾವೇರಿ. ಜಿ. ಧಾರವಾಡ
ತಾ. ೯-೧-೩೬

ಕನ್ನಡಿಗರ ಸೇವಕ
ವೇ. ತಿ. ಕುಲಕರಣಿ. ಗಳಗನಾಥ.

# ವಿಷಯಾನುಕ್ರಮಣಿಕೆ.



*

# ಅರ್ಪಣ ಪತ್ರಿಕೆ.

# ಓಂ

ನಮೋ ಭಗವತೇ ಶ್ರೀ ಸೀತಾರಾಮಚಂದ್ರಾಯ

## ಶ್ರೀ ರಾಮಚರಿತಮಾನಸ

ಅಥವಾ

## ತುಲಸೀ-ರಾಮಾಯಣ-ರೂಪವಾದ

**ಈ ಭಗವತ್ಸೇವೆಯನ್ನು**

ಶ್ರೀಗುರು ಶಕ್ತಿಯವರೂ, ಮಾತೃಶ್ರೀಸ್ವರೂಪರೂ, ಧರ್ಮಸ್ವರೂಪರೂ ಆದ

ತೀರ್ಥಸ್ವರೂಪ ಗಂಗಾಭಾಗೀರಥೀ ಮಾತೃಶ್ರೀ

ರಾಧಾಬಾಯಿ ಸಾಹೇಬ ಭ್ರತಾರ ರಾಜಿ

ಬಾಳಾಜಿ ಕರಂದೀಕರ ಇವರು

ನನ್ನ ಮೇಲೆ ಮಾಡುವ ಪುತ್ರವಾತ್ಸಲ್ಯದ ಸ್ಮಾರಕಕ್ಕಾಗಿ

ವಿಧೇಯ ಸೇವಕ

**ವೇಂಕಟೇಶ ತಿರಕೋ ಕುಲಕರಣಿ ಗಳಗನಾಥನು**

**ನಾನು**

ವಿನಮ್ರನಾಗಿ

**ಭಕ್ತಿಪುರಸ್ಸರ**

ಕಾಣಿಕೆಯಾಗಿ

**ಅರ್ಪಿಸಿರುವೆನು!**

॥ ಶ್ರೀ ಗಣೇಶಾಯ ನಮಃ ॥

ಶ್ರೀ ಸೀತಾ–ರಾಮಚಂದ್ರಾಯ ನಮಃ

ಶ್ರೀ ಶೇಷಸದ್ಗುರವೇ ನಮಃ

# ರಾಮಚರಿತ-ಮಾನಸ

## ಶ್ರೀ ತುಲಸೀ-

# ರಾಮಾಯಣಾಮೃತ.

## ಪ್ರಥಮ-ಸೋಪಾನ.

### - ಬಾಲಕಾಂಡ -

**ದೇವತಾಗುರುವಂದನ**—ಸ್ಮರಣಮಾತ್ರದಿಂದ ಕಾರ್ಯಸಿದ್ಧಿಯಾಗುವ ಬುದ್ಧಿರಾಶಿಯಾದ ಶುಭಗುಣಸಾಗರ ಗಜಾನನನು ನನ್ನನ್ನು ಅನುಗ್ರಹಿಸಲಿ. ಆ ಭಗವಂತನ ಕೃಪೆಯಿಂದ ಮೂಕನು ವಾಚಸ್ಪತಿಯಾಗುವನು; ಹೆಳವನು ವಿರಲಶಕ್ಯವಾದ ಪರ್ವತವನ್ನು ಏರುವನು; ಅಂಥ ಆ ಕಲಿಕಿಲ್ಮಿಷದಾಹಿಯೆನಿಸುವ ದಯಾಳುವು ನನ್ನ ಮೇಲೆ ಕೃಪೆಮಾಡಲಿ. ನೀಲಕಮಲದಂತೆ ಶ್ಯಾಮವರ್ಣವುಳ್ಳ, ಕೋಮಲ ಕೆಂಪು ಕಮಲದಂತೆ ನೇತ್ರಗಳುಳ್ಳ ಕ್ಷೀರಸಾಗರಶಾಯಿಯಾದ ಭಗವಾನ್ ನಾರಾಯಣನು ನನ್ನ ಹೃದಯದಲ್ಲಿ ನಿರಂತರವಾಗಿ ವಾಸಿಸಲಿ. ಕುಂದಪುಷ್ಪ–ಚಂದ್ರಮರಂತೆ ದೇಹಕಾಂತಿಯುಳ್ಳ, ದೀನಜನರನ್ನು ಅನುಗ್ರಹಿಸುತ್ತಿರುವ ಕರುಣಾಸಾಗರನಾದ ಮದನಾರಿ ಶ್ರೀ ಉಮಾರಮಣನು ನನ್ನಮೇಲೆ ಕೃಪೆಮಾಡಲಿ. ಪ್ರತ್ಯಕ್ಷ ಸೂರ್ಯಕಿರಣಗಳ ಸಮೂಹದಂತೆ ತನ್ನ ವಚನ ಪ್ರಭಾವದಿಂದ ಮಹಾಮೋಹರೂಪವಾದ ಕಗ್ಗತ್ತಲೆಯನ್ನು ನಾಶಗೊಳಿಸುವ ಕೃಪಾಸಾಗರನಾದ ಸದ್ಗುರು ನರಹರಿಪದಕಮಲಗಳಿಗೆ ನಾನು ವಂದಿಸುವೆನು. ಶ್ರೀ ಗುರುಪದಧೂಲಿಯು ಸಾಂಸಾರಿಕ ಸಮಸ್ತ ವ್ಯಾಧಿಗಳ ಸಮೂಹವನ್ನು ಶಾಂತ

ಗೊಳಿಸುವಂತಹದೂ, ಸ್ಪೃಹಣೀಯವಾದ ಕಲ್ಯಾಣಾನಂದವನ್ನುಂಟುಮಾಡುವ ಶ್ರೀ ಶಂಕರರ ಮೈಮೇಲಿನ ಪುಣ್ಯಕಾರಕವಾದ ಉಜ್ವಲ ವಿಭೂತಿಗೆ ಸಮಾನ ದವಗ್ರಹಣೆಗೆ ಹಚ್ಚಿಕೆ ಗಂಧಮಾತ್ರದಿಂದ ಸದ್ಗುಣಸಮೂಹವನ್ನು ಕೈಸೇರಿಸಿ ಕೊಡುವಂತಹದೂ ಆಗಿರುವದು! ಶ್ರೀಸದ್ಗುರು ಚರಣಗಳ ನಖಗಳ ಪ್ರಕಾಶದಿಂದ ಅಲ್ಲಲ್ಲಿ ಆಯಾ ಖನಿಗಳಲ್ಲಿ ಗುಪ್ತವಾಗಿಯಾಗಲಿ, ವ್ಯಕ್ತವಾಗಿಯಾಗಲಿ ಇರುವ ರಾಮಚರಿತರೂಪ ರತ್ನಮಾಣಿಕಗಳು ದೃಷ್ಟಿಗೋಚರವಾಗುವವು! ಇಂಥ ಗುರುಪದ ಧೂಳಿಯ ಸಹಾಯದಿಂದಲೇ ನಾನು ನನ್ನ ಜ್ಞಾನನೇತ್ರವನ್ನು ಶುದ್ಧೀಕರಿಸಿಕೊಂಡು ಸಂಸಾರದಿಂದ ಮುಕ್ತವಾಗಮಾಡುವ ರಾಮ ಚರಿತ್ರವನ್ನು ವರ್ಣಿಸುವೆನು.

**ಸಜ್ಜನವಂದನ**—ಅಜ್ಞಾನದಿಂದುಂಟಾಗುವ ಎಲ್ಲ ಸಂಶಯಗಳನ್ನು ದೂರ ಮಾಡುವ ಬ್ರಾಹ್ಮಣರನ್ನು ಮೊದಲು ನಮಸ್ಕರಿಸುವೆನು. ಅದರಂತೆ ಯಾವತ್ತು ಸದ್ಗುಣಗಳ ಖನಿಯೆನಿಸುವ ಸಂತಸಮಾಜಕ್ಕೆ ಪ್ರೇಮದಿಂದಲೂ, ವಿನಯದಿಂದಲೂ ನಮಸ್ಕರಿಸುವೆನು. ಸಂತಚರಿತ್ರವು ಅತ್ಯಂತ ಪವಿತ್ರವಾಗಿದ್ದು, ಅದು ರಾಮಭಕ್ತಿ–ಬ್ರಹ್ಮವಿಚಾರಗಳುಳ್ಳದ್ದು, ವಿಧಿನಿಷೇಧಾತ್ಮಕ ಕರ್ಮಕಾಂಡದ ಚರ್ಚೆಯುಳ್ಳದ್ದು, ಹರಿಹರರ ಕಥಾರೂಪ ತ್ರಿವೇಣಿಯ ಸಂಗಮವುಳ್ಳದ್ದು ಆಗಿರುವದು. ಸ್ವಧರ್ಮನಿಷ್ಠೆ–ಸದಾಚಾರಸಂಪನ್ನತೆಗಳಿಗೆ ಸಂತಚರಿತ್ರವು ಆಶ್ರಯಸ್ಥಾನವಾಗಿರುವದು. ಸಂತಸಮಾಗಮದ ಮಹಿಮೆಯು ಸಾಮಾನ್ಯವಾದದ್ದಲ್ಲ; ಕಾಗೆಗಳಿಗೆ ಕೋಗಿಲೆಗಳ, ನೀರುಗೋಳಿಗಳಿಗೆ ರಾಜಹಂಸಗಳ ಸ್ವರೂಪವು ಪ್ರಾಪ್ತವಾಗುವಂತೆ, ಸತ್ಸಂಗವು ಮನುಷ್ಯನನ್ನು ರೂಪಾಂತರಗೊಳಿಸುವದು. ಈ ಮಾತನ್ನು ವಾಲ್ಮೀಕಿ, ನಾರದ, ಅಗಸ್ತ್ಯರು ತಮ್ಮ ಮುಖದಿಂದಲೇ ತಮ್ಮ ವೃತ್ತಾಂತವನ್ನು ವರ್ಣಿಸುವಾಗ ಹೇಳಿರುವರು. ಆಯಾ ಸ್ಥಳಗಳಲ್ಲಿ ಆಯಾ ಯತ್ನಗಳಿಂದ ಸದ್ಬುದ್ಧಿ, ಸತ್ಕೀರ್ತಿ, ಸದ್ಗತಿ, ಐಶ್ವರ್ಯ, ಔನ್ನತ್ಯ ಇವನ್ನು ಸಂಪಾದಿಸಿದವರೇ ಸತ್ಸಮಾಗಮದ ಪ್ರಭಾವವನ್ನು ತಿಳಿಸುವರು. ಶಾಸ್ತ್ರದಲ್ಲಾಗಲಿ, ಲೌಕಿಕದಲ್ಲಾಗಲಿ ಉನ್ನತಿಗಾಗಿ ಸತ್ಸಮಾಗಮದ ಹೊರತು ಬೇರೆ ಉಪಾಯವನ್ನು ಹೇಳಿರುವದಿಲ್ಲ. ಸತ್ಸಂಗವಿಲ್ಲದೆ ವಿವೇಕವು ಉತ್ಪನ್ನವಾಗುವದಿಲ್ಲ; ರಾಮಕೃಪೆಯಿಲ್ಲದೆ ಸತ್ಸಂಗವಾಗುವದಿಲ್ಲ. ಸತ್ಸಂಗವು ಆನಂದ–ಕಲ್ಯಾಣ ರೂಪಗಳಾದ ವೃಕ್ಷಗಳ ಬೊಡ್ಡೆಯಾಗಿರುವದು; ಸರ್ವಸಾಧನಗಳು ಆ ವೃಕ್ಷಗಳ ಪುಷ್ಪಗಳೂ, ಸಿದ್ಧಿಯು ಫಲವೂ ಆಗಿರುವವು. ಪರಶುಗಲ್ಲಿನ ಸ್ಪರ್ಶದಿಂದ ಕಬ್ಬಿಣವು ಬಂಗಾರವಾಗುವಂತೆ, ಸತ್ಸಮಾಗಮದಿಂದ ದುರ್ಜನರೂ ಸಜ್ಜನರಾಗುವರು. ದೈವವಶಾತ್ ಸಜ್ಜನರೂ ದುರ್ಜನರ ಸಹವಾಸವನ್ನು ಹೊಂದುವರು; ಆದರೆ ಸರ್ಪದ ಹೆಡೆಯೊಳಗಿನ ರತ್ನವು ವಿಷವಿಳಿಸುವ ತನ್ನ ಗುಣವನ್ನು ಬಿಡದಿರುವಂತೆ, ದುಷ್ಟ ಸಹವಾಸದಲ್ಲಿದ್ದ ಸಜ್ಜನರು ಲೋಕಕಲ್ಯಾಣದ ತಮ್ಮ ಗುಣವನ್ನು ಬಿಡುವದಿಲ್ಲ. ಸಂತರ ಚಿತ್ತವು ಹಿತಾಹಿತಗಳಲ್ಲಿ ಸಮ

ತೋಲನಾಗಿರುವದು. ಜಗದೊಳಗಿನ ಸುವಾಸಿಕ ಪುಷ್ಪಗಳ ಸುಗಂಧವು ಎರಡೂ ಹಸ್ತಗಳಿಗೆ ಸಮಾನ ವಾಸವಾಗಿ ಹತ್ತುವಂತೆ, ಸಂತರು ಯಾವಾಗಲೂ ಸಮದರ್ಶಿಗಳಾಗಿರುವರು. ಇಂಥ ಸಂತರಿಗೆ ನನ್ನ ಅನಂತಪ್ರಣಾಮಗಳು. ಎಲೈಸಂತಜನರೇ, ನೀವು ಸದಾ ಸುಪ್ರಸನ್ನರಿದ್ದು ಜಗತ್ತಿನ ಹಿತಚಿಂತಕರಿರುವಿರಿ. ನನ್ನಸದ್ಭಾವವನ್ನೂ ಸ್ನೇಹವನ್ನೂ ಗುರುತಿಸಿ ಬಾಲಕನಾದ ನನ್ನ ವಿನಂತಿಗೆ ಕಿವಿಗೊಟ್ಟು ಕೃಪಾಳುಗಳಾಗಿ ರಾಮಚರಣದಲ್ಲಿ ನನ್ನ ಪ್ರೇಮವಿರುವಂತೆ ಮಾಡಿರಿ.

ದುರ್ಜನರ ವಂದನ— ಇನ್ನು ಸಜ್ಜನರ ತರುವಾಯದಲ್ಲಿ ನನಗೆ ವಂದನೀಯರೆಂದರೆ ದುರ್ಜನರು; ಅವರನ್ನು ನಾನು ಸದ್ಭಾವದಿಂದ ವಂದಿಸುವೆನು. ದುರ್ಜನರು ಸರಳಮನಸ್ಸಿನವರ ಸಂಗಡಲೂ ನಿಷ್ಕಾರಣವಾಗಿ ದ್ವೇಷಕಟ್ಟಿಕೊಳ್ಳುವರು. ಪರಹಿತದ ಹಾನಿಯಲ್ಲಿಯೇ ಅವರಿಗೆ ಲಾಭವೆನಿಸುವದು; ಒಳ್ಳೆಯಸ್ಥಿತಿಯಲ್ಲಿರುವವರನ್ನು ನೋಡಿ ಅವರಿಗೆ ವಿಷಾದವಾಗುವದು; ಇನ್ನೊಬ್ಬರ ಸರ್ವನಾಶವಾದದ್ದನ್ನು ನೋಡಿ ಅವರು ಆನಂದಪಡುವರು. ಎರಡನೆಯವರ ಕೆಲಸ ಕೆಡಿಸುವ ವಿಷಯದಲ್ಲಿ ದುರ್ಜನರು ಸಹಸ್ರಬಾಹುವಾದ ಕಾರ್ತವೀರ್ಯನಂತೆ ಪರಾಕ್ರಮಿಗಳೂ, ಅನ್ಯರ ದೋಷವೆಣಿಸುವಲ್ಲಿ ಸಹಸ್ರಾಕ್ಷನಾದ ಇಂದ್ರನಂತೆ ಸೂಕ್ಷ್ಮದರ್ಶಿಗಳೂ ಆಗಿದ್ದು, ಉಗ್ರತೆಯಲ್ಲಿ ಅಗ್ನಿಯಂತೆಯೂ, ರೋಷದಲ್ಲಿ ಮಹಿಷಾಸುರನಂತೆಯೂ ಇರುವರು. ಪಾಪ ಮತ್ತು ದುರ್ಗುಣಗಳೆಂಬ ಸಂಪತ್ತುಗಳಲ್ಲಿ ಕುಬೇರನಂತೆ ಅವರು ಧನಾಢ್ಯರಾಗಿರುವರು. ಯಾರು ಕುಂಭಕರ್ಣನಂತೆ ನಿದ್ರಾಪ್ರಿಯರಾಗಿರುವರೋ, ಯಾರು ಪೈರು ಕೆಡಿಸುವ ಆಣೆಯಕಲ್ಲಿನಂತೆ ಎರಡನೆಯವರ ಕೆಲಸ ಕೆಡಿಸುವಲ್ಲಿ ತಮ್ಮ ದೇಹತನ್ನಾದರೂ ಅರ್ಪಿಸುವರೋ, ಯಾರು ಎರಡನೆಯವರ ಪಾಪಗಳನ್ನು ಪೃಥುರಾಜನಂತೆ ಸಹಸ್ರ ಕಿವಿಗಳಿಂದ ಕೇಳುವರೋ ಅಂಥ ಈ ಸರ್ವಾವಗುಣ ಸಂಪನ್ನರಾದ ದುಷ್ಟರಿಗೆ ನಾನು ಎರಡೂ ಕೈಜೋಡಿಸಿ ನಮಸ್ಕರಿಸುವೆನು; ಯಾಕೆಂದರೆ ಇವರು ಶತ್ರು-ಮಿತ್ರ-ಉದಾಸೀನಭಾವದವರಲ್ಲಿ, ಯಾರ ಒಳಿತನ್ನು ಕೇಳಿದರೂ ತಳಮಳಿಸುವರು! ಸಜ್ಜನ-ದುರ್ಜನರಿಬ್ಬರಲ್ಲಿಯೂ ಕೆಲವು ದುಃಖಪ್ರದ ಸಂಗತಿಗಳಿರುವವರಿಂದ ನಾನು ಅವರಿಬ್ಬರ ಚರಣಗಳಿಗೂ ವಂದಿಸುವೆನು. ಸಜ್ಜನರು ವಿಯೋಗಕಾಲದಲ್ಲಿ ದುಃಖ ಕೊಡುವರು; ದುರ್ಜನರು ದರ್ಶನಮಾತ್ರದಲ್ಲಿ ದುಃಖ ಕೊಡುವರು. ಈ ಜಗತ್ತಿನಲ್ಲಿ ಸದ್ಗುಣ-ದುರ್ಗುಣಗಳೆರಡನ್ನೂ ಎಲ್ಲರೂ ಅರಿತಿದ್ದರೂ, ಯಾರಿಗೆ ಯಾವದು ಸೇರುವದೋ ಅವರಿಗೆ ಅದೇ ನೆಟ್ಟಗೆ ಕಾಣುವದು.

ಒಳಿತು ಕೆಡಕುಗಳೆರಡನ್ನೂ ಬ್ರಹ್ಮದೇವನೇ ನಿರ್ಮಿಸಿರುವನು. ಬ್ರಹ್ಮದೇವನ ಸೃಷ್ಟಿಯು, ಗುಣ-ಅವಗುಣಗಳುಳ್ಳದ್ದಾಗಿರುವದೆಂದು ವೇದಗಳೂ, ಇತಿಹಾಸಪುರಾಣಗಳೂ ಹೇಳುವವು. ಸುಖ-ದುಃಖ, ಪಾಪ-ಪುಣ್ಯ, ದಿವಸ-ರಾತ್ರಿ, ಸಜ್ಜನ-ದುರ್ಜನ

ಶ್ರೇಷ್ಠವರ್ಣ-ನೀಚವರ್ಣ, ಅಮೃತ-ವಿಷ, ಜನ್ಮ-ಮೃತ್ಯು, ಬ್ರಹ್ಮ-ಮಾಯಾ, ಜೀವ-ಶಿವ ಲಕ್ಷ-ಅಲಕ್ಷ, ರಾಜಾ-ರಂಕ, ಕಾಶಿ-ಮಗಧ (ಇಲ್ಲಿಯು ಸ್ತ್ರೀಯರ ಭ್ರಷ್ಟತೆಯು ಪುರಾಣಪ್ರಸಿದ್ಧವಾಗಿರುವದು) ಭಾಗೀರಥಿ-ಕರ್ಮನಾಶ (ಈ ಹೊಳೆಯಲ್ಲಿಸ್ನಾನ ಮಾಡಿದವರಸತ್ಕರ್ಮನಾಶವಾಗುವದು ) ಮಾರವಾಡ-ಮಾಳವಾ, ಬ್ರಾಹ್ಮಣ-ಮ್ಲೇಂಛ, ಸ್ವರ್ಗ-ನರಕ, ಪ್ರೇಮ-ವಿರಕ್ತಿ ಇತ್ಯಾದಿ ಗುಣದೋಷವಿಭಾಗವು ವೇದಶಾಸ್ತ್ರಗಳಲ್ಲಿಯೇ ಇರುವದು. ಹೀಗೆ ಸ್ಥಾವರಜಂಗಮಾತ್ಮಕವಾದ ಈ ವಿಶ್ವವನ್ನು ಬ್ರಹ್ಮದೇವನು ಗುಣದೋಷಾತ್ಮಕವಾಗಿ ಮಾಡಿದ್ದರೂ, ಸಂತರೂಪ ಹಂಸಗಳು ಅದರೊಳಗಿನ ದೋಷರೂಪ ಜಲವನ್ನು ಬಿಟ್ಟು ಗುಣರೂಪ ಹಾಲನ್ನೇ ಸ್ವೀಕರಿಸುವವು. ಈ ಪ್ರಕಾರದ ವಿವೇಕವು ಪರಮೇಶ್ವರ ಕೃಪೆಯಿಂದ ಉತ್ಪನ್ನವಾದಾಗಲೇ ದೋಷಗಳಲ್ಲಿ ಹೇಯಬುದ್ಧಿ ಉತ್ಪನ್ನವಾಗಿ ಗುಣಗಳಲ್ಲಿ ಮನಸ್ಸು ರಮಿಸುವದು. ಕಾಲ-ಸ್ವಭಾವ-ಕರ್ಮಗಳ ಪ್ರಾಬಲ್ಯದಿಂದ ಮಾಯಾವಶರಾಗಿ ದೊಡ್ಡ ಜನರೂ ತಮ್ಮ ಒಳ್ಳೆಯ ಗುಣಗಳನ್ನು ಬಿಡುವದುಂಟು; ಆದರೆ ಅವರ ಆ ತಪ್ಪನ್ನು ಭಗವದ್ಭಕ್ತರು ಒಳ್ಳೆಯ ಚಾತುರ್ಯದಿಂದ ತಿದ್ದಿ, ಅವರ ದುಃಖ-ಪಾಪಗಳ ನಾಶಮಾಡಿ ಅವರ ಸಂಗಿನಲ್ಲಿ ನಿರ್ಮಲ ಯಶಸ್ಸನ್ನೇ ಕೊಡುವರು. ಸಜ್ಜನರ ಸಹವಾಸದಿಂದ ದುರ್ಜನರೂ ಸದಾಚರಣಗಳನ್ನು ಆಚರಿಸುವರು; ಆದರೆ ಅವರನಿರಂತರದದುಷ್ಟಸ್ವಭಾವವುಮಾತ್ರ ಅಳಿದುಹೋಗುವದಿಲ್ಲ. ಅಂಥ ಆ ದುರ್ಜನರ ಅಪ್ರತಿಮವಾದ ಸತ್ಪುರುಷವೇಷವನ್ನು ನೋಡಿ ಒಳ್ಳೊಳ್ಳೆಯ ನಿಂದಕರೂ ಮರುಳಾಗಿ ಬಿದ್ದು ಅವರನ್ನು ಸೇವಿಸತೊಡಗುವರು; ಆದರೆ ಅದು ಕಡೆಗಾಣದೆ ಅವರ ಸತ್ಯಸ್ವರೂಪವು ಬೈಲಿಗೆ ಬೀಳದೆ ಹೋಗುವದಿಲ್ಲ. ನಿಜವಾದ ಸತ್ಪುರುಷರು ಅಮಂಗಲವೇಷದವರಿದ್ದರೂ ಜಾಂಬುವಂತ-ಹನುಮಂತರಂತೆ ಅವರ ಸನ್ಮಾನವೇ ಆಗುವದು. ಕುಸಂಗತಿಯಿಂದ ಹಾನಿಯೂ, ಸತ್ಸಂಗತಿಯಿಂದ ಲಾಭವೂ ಆಗುವದೆಂಬುದು ವೇದದೊಳಗಿನ ಹಾಗು ವ್ಯವಹಾರದೊಳಗಿನ ಸಿದ್ಧಾಂತವಾಗಿರುವದು.

**ಜಗದ್ವಂದನವೂ, ಉತ್ತಮ ಕಾವ್ಯಲಕ್ಷಣವೂ**— ಜಗತ್ತಿನೊಳಗಿನ ಯಾವತ್ತು ಚೇತನಾಚೇತನಾತ್ಮಕವಾದ ವಸ್ತುಗಳನ್ನು ರಾಮಮಯವೆಂದು ತಿಳಿದು ಎಲ್ಲವುಗಳ ಪದದ್ವಯಗಳಿಗೆ ನಾನು ಕೈಜೋಡಿಸಿ ವಂದಿಸುವೆನು. ದೇವತೆಗಳು, ದೈತ್ಯರು, ನಾಗರು, ಪಕ್ಷಿಗಳು, ಪ್ರೇತಗಳು, ಪಿತರರು, ಗಂಧರ್ವರು, ರಾಕ್ಷಸರು, ಕಿನ್ನರರು ಇವರೆಲ್ಲರನ್ನು ನಾನು ವಂದಿಸುವೆನು; ಎಲ್ಲರೂ ನನ್ನ ಮೇಲೆ ಕೃಪೆಮಾಡಬೇಕು. ನನಗೆ ನನ್ನ ಬುದ್ಧಿಬಲದ ನಂಬಿಗೆಯು ಸ್ವಲ್ಪವೂ ಇರುವದಿಲ್ಲ; ಆದ್ದರಿಂದಲೇ ನಾನು ಎಲ್ಲರನ್ನೂ ಬೇಡಿಕೊಂಡಿರುವೆನು. ಶ್ರೀ ರಾಮಚಂದ್ರನ ಗುಣಕಥೆಯನ್ನು ವರ್ಣಿಸಲು ನಾನು ಇಚ್ಛಿಸುವೆನು; ಆದರೆ ನನ್ನ ಬುದ್ಧಿಯು ಅಲ್ಪವಿದ್ದು, ಪ್ರಭುಚರಿತ್ರವು ಅಗಾಧವಾಗಿರುವದು. ನಾನು ಮಾಡುವ ರಾಮಗುಣಗಾಯನವನ್ನು ಕೇಳಿ ದುರ್ಜನರು

ಉಪಹಾಸಮಾಡಿದರೂ, ಯಾವತ್ತೂ ಸಜ್ಜನರು ಆನಂದವನ್ನೇ ಹೊಂದುವರೆಂಬ ನಂಬಿಗೆಯು ನನಗಿದೆ. ಕಾವ್ಯವು ಉತ್ತಮ ಕವಿಯಿಂದ ರಚಿಸಲ್ಪಟ್ಟದ್ದಾಗಿದ್ದು, ವೈಚಿತ್ರ್ಯಪೂರ್ಣವಾಗಿದ್ದರೂ ಅದು ರಾಮನಾಮವ್ಯತಿರಿಕ್ತವಾಗಿದ್ದರೆ, ಸರ್ವಾಲಂಕಾರವಿಭೂಷಿತೆಯಾಗಿದ್ದ ಚಂದ್ರಮುಖಿ ಸುಂದರ ಸ್ತ್ರೀಯು ಕೂಡ ಬತ್ತಲೆಯಿದ್ದರೆ ಶೋಭಿಸದಿರುವಂತೆ ಆ ಕಾವ್ಯವು ಶೋಭಿಸುವದಿಲ್ಲವು. ನನ್ನ ಕಾವ್ಯವು ತೀರ ತಿರಸ್ಕರಣೀಯವಾಗಿದ್ದರೂ ಅದರಲ್ಲಿ ವರ್ಣಿಸಿರುವದು ರಾಮಕಥೆಯಿರುವದರಿಂದ, ಹೊಗೆಯು ಅಗರು ಚಂದನಗಳ ಸಾನ್ನಿಧ್ಯದಿಂದ ತನ್ನೊಳಗಿನ ಕೆಟ್ಟ ಗುಣವನ್ನು ಬಿಟ್ಟು ಎಲ್ಲಕಡೆಗೂ ಸುಗಂಧವನ್ನು ಪಸರಿಸುವಂತೆ, ನನ್ನ ಈ ಕಥೆಯು ಜಗತ್ತಿನ ಕಲ್ಯಾಣವನ್ನೇ ಮಾಡುವದು. ಶ್ರೀ ಶಂಕರನ ಮೈಮೇಲಿನ ವಿಭೂತಿಯು ಪ್ರೇತದ್ದೆಂಬುವದೇನೋ ನಿಜ; ಆದರೆ ಶಂಕರನ ಅಂಗಸ್ಪರ್ಶದಿಂದ ಅದು ಸ್ಮರಣೀಯವೂ, ಸುಂದರವೂ, ಪವಿತ್ರವೂ ಆಗುವಂತೆ, ಪ್ರಭುವಿನ ಸುಯಶದ ಜೋಡು ನನ್ನ ಕಾವ್ಯಕ್ಕಿರುವದರಿಂದ ಅದು ಸದ್ಭಕ್ತರ ಮನಸ್ಸನ್ನು ಪ್ರಸನ್ನವಾಗಿ ಮಾಡುವದು!

ಕವಿಯ ಸಾಮರ್ಥ್ಯವೂ, ಶಿವಕೃಪೆಯ ಮಹತ್ವವೂ—ನನ್ನಂಥ ಗುಣಹೀನ ಮನುಷ್ಯನ ಕಾವ್ಯವನ್ನು ನಿಂದಿಸುವದರಿಂದ ನಿಂದಕರಿಗೆ ಬರುವ ಮಹತ್ವವಾದರೂ ಏನು? ನಾನು ಗುಣಹೀನರಲ್ಲಿ ಅತ್ಯಂತ ಗುಣಹೀನನು, ದುರಾಚಾರಿಗಳಲ್ಲಿ ಅತ್ಯಂತ ದುರಾಚಾರಿಯು! ಎಲ್ಲಿಯ ರಘುಪತಿಯ ಅಪಾರವಾದ ಚರಿತ್ರವು, ಎಲ್ಲಿಯ ನನ್ನ ಸಂಸಾರಾಸಕ್ತ ಬುದ್ಧಿಯು! ನಾನು ರಾಮಸೇವಕನೆನಿಸುವೆನು; ಆದರೆ ಕಾಮ, ಕ್ರೋಧ ಕಾಂಚನಗಳ ಸೇವಕರಲ್ಲಿ ಅಗ್ರಗಣ್ಯನಾಗಿರುವೆನು! ಸಂತತನದ ಜಂಭ ತೋರಿಸುವ ವಿಷಯಲಂಪಟನಾದ ಇಂಥ ನಾನು ತಿರಸ್ಕರಣೀಯನಲ್ಲದಿದ್ದರೆ ಮತ್ತೇನು? ಆದರೂ ಮುನಿಜನರು ಈ ಮೊದಲೇ ಭಗವದ್ಯಶದಗಾಯನಮಾಡಿರುವದರಿಂದ, ಅದರ ಗೊತ್ತು ಹಚ್ಚುತ್ತ ನಡೆದರೆ, ನನಗೂ ಅದು ಸುಲಭವಾಗಬಹುದು. ದೊಡ್ಡ ದೊಡ್ಡ ನದಿಗಳಿಗೆ ಅರಸರು ಪೂಲುಗಳನ್ನು ಕಟ್ಟಿದರೆ, ಕ್ಷುದ್ರ ಇರುವೆಗಳೂ ಆ ಪೂಲನ್ನು ಹತ್ತಿ ಆಚೆಯ ದಂಡೆಗೆ ಹೋಗಲಿಕ್ಕಿಲ್ಲವೆ? ಆದ್ದರಿಂದ ಈ ಮೊದಲೆ ಭಗವದ್ಯಶವನ್ನು ವರ್ಣಿಸಿರುವ ವ್ಯಾಸಾದಿ ಕವಿಪುಂಗವರವರ ಚರಣಕಮಲಗಳನ್ನು ನಾನು ವಂದಿಸುವೆನು; ಮತ್ತು ಖರದೂಷಣಾದಿ ರಾಕ್ಷಸರ ಕಥೆಗಳಿಂದ ಕೂಡಿರುವ, ಆದರೆ ಅತ್ಯಂತ ಕೋಮಲವೂ, ಹೃದಯಂಗಮವೂ, ಸುತರಾಂ ನಿರ್ದೋಷವೂ ಆಗಿರುವ ರಾಮಾಯಣವನ್ನು ನಿರ್ಮಿಸಿರುವ ಮಹಾಮುನಿ ವಾಲ್ಮೀಕಿಯ ಪದಕಮಲಗಳಿಗೆ ನಾನು ವಂದಿಸುವೆನು. ಅದರಂತೆ ರಾಮಯಶಸ್ಸನ್ನು ವರ್ಣಿಸಲು ಬೇಸರಿಯದಿರುವ ನಾಲ್ಕು ವೇದಗಳಿಗೂ, ಭವಸಾಗರವನ್ನು ನಿರ್ಮಿಸಿರುವ ಬ್ರಹ್ಮದೇವನಿಗೂ ನಾನು ನಮಸ್ಕಾರ ಮಾಡುವೆನು- ಗುರುವೂ, ಮಾತಾಪಿತೃಗಳೂ ಆದ ಪಾರ್ವತೀಪರಮೇಶ್ವರರನ್ನು ನಾನು ವಂದಿಸುವೆನು- ಅವರು ದೀನಬಂಧುಗಳೂ,

ನುಬಂಧಿಯಾದ ಮಾಯೆಯನ್ನು ಪರಿಹರಿಸಿಕೊಂಡು ಹರಿಹರರಿಗೂ ಪ್ರಾಣಕ್ಕಿಂತ ಅಧಿಕ ಪ್ರಿಯನಾದನು! ಭಕ್ತಶಿರೋಮಣಿಗಳಾದ ಪ್ರಹ್ಲಾದ, ಧ್ರುವ, ಹನುಮಂತ ಮೊದಲಾದ ವರೂ, ಅಜಾಮಿಳ, ಗಜೇಂದ್ರ, ಪಿಂಗಳಾ ಮೊದಲಾದವರೂ ಹರಿನಾಮಪ್ರಭಾವದಿಂದಲೇ ಧನ್ಯರಾದರು. ಹೀಗೆ ನಾಮದ ಮಹಿಮೆಯನ್ನು ಎಷ್ಟೆಂದು ವರ್ಣಿಸಬೇಕು? ಪ್ರತ್ಯಕ್ಷ ರಾಮನೂ ತನ್ನ ನಾಮದಗುಣವನ್ನು ವರ್ಣಿಸಲು ಶಕ್ತನಾಗಲಾರ! ಈ ಕಲಿಯುಗದಲ್ಲಿ ಕಲ್ಯಾಣಭವನವಾಗಿರುವ ಕಲ್ಪತರುವು ಒಂದು ರಾಮನನಾಮವೇ ಆಗಿರುವದು. ಅದನ್ನು ಸ್ಮರಿಸಿದವರೆಲ್ಲ ಭಾಗ್ಯಶಾಲಿಗಳೇ ಆದರು. ಮೊದಲಿನ ತುಳಸಿಯು ನಾನು, ಈಗ ತುಳಸೀ ದಾಸನೆಂದು ಪ್ರಸಿದ್ಧನಾಗಿರುವೆನು. ನಾಲ್ಕು ಯುಗಗಳಲ್ಲಿ, ಮೂರೂ ಕಾಲಗಳಲ್ಲಿ, ಮೂರೂ ಲೋಕಗಳಲ್ಲಿ ಯಾವ ಜೀವಗಳಾದರೂ ಶೋಕರಹಿತವಾಗಿದ್ದರೆ, ನಾಮಜಪ ದಿಂದಲೇ ಸರಿ; ವೇದಗಳು, ಪುರಾಣಗಳು, ಸಂತರು ರಾಮಭಕ್ತಿಯೇ ಯಾವತ್ತು ಸುಕೃತದ ಫಲವೆಂದು ಹೇಳುವರು. ಕೃತಯುಗದಲ್ಲಿ ಧ್ಯಾನಯೋಗದಿಂದ, ತ್ರೇತಾಯುಗದಲ್ಲಿ ಯಜ್ಞಯಾಗಗಳಿಂದ, ದ್ವಾಪರದಲ್ಲಿ ಪೂಜಾವಿಧಿಯಿಂದ ಪ್ರಭುವು ಸಂತುಷ್ಟನಾಗುವನು. ಕಲಿಯುಗವು ಕೇವಲ ಪಾಪಮೂಲವೂ, ಮಲಿನವೂ ಆಗಿದ್ದು, ಅದರೊಳಗಿನ ಜನರ ಮನಸ್ಸುಗಳು ಪಾಪಸಮುದ್ರದಲ್ಲಿ ಮೀನಗಳಂತೆ ಮುಣುಗಿರುವವು. ಇಂಥ ಭಯಂಕರ ವಾದ ಕಲಿಕಾಲದಲ್ಲಿ ನಾಮವೇ ಕಲ್ಪತರುವಾಗಿದ್ದು, ಅದರ ಸ್ಮರಣಮಾತ್ರದಿಂದ ಸಕಲ ಮಾಯಾಜಾಲವು ನಾಶವಾಗುವದು. ರಾಮನಾಮವು ಸಾಮಾನ್ಯವಾದದ್ದಲ್ಲ. ಅದರ ಜಪದಿಂದ ಸಾಕ್ಷಾತ್ ಶ್ರೀ ಶಂಕರನ ಕಾಲಕೂಟವಿಷವು ಶಾಂತವಾಯಿತು. ಆ ಭಗವಾನ್ ಶಂಕರನು ಕಾಶಿಯಲ್ಲಿ "ರಾಮ" ಎಂಬ ತಾರಕಮಂತ್ರವನ್ನು ಜೀವಿಗಳಿಗೆ ಉಪದೇಶಿಸಿ ಉದ್ಧರಿಸುವನು! ಕಲಿಯುಗದಲ್ಲಿ ಕರ್ಮವಿಲ್ಲ, ಭಕ್ತಿಯಿಲ್ಲ, ಜ್ಞಾನವಿಲ್ಲ. ಅದ ರಲ್ಲಿ ನಾಮದೊಂದೇ ಆಧಾರವಿರುವದು! ಸದ್ಭಾವದಿಂದಾಗಲಿ, ಕುಚೇಷ್ಟೆಯಿಂದಾಗಲಿ, ಉಲ್ಲಾಸದಿಂದಾಗಲಿ, ಆಲಸ್ಯದಿಂದಾಗಲಿ ನಾಮವನ್ನು ಜಪಿಸಿದರೂ ಎಲ್ಲ ಕಡೆಯಿಂದ ಕಲ್ಯಾಣವೇ ಆಗುತ್ತಿರುವದು. ಇಂಥ ಆ ನಾಮದ ಸ್ಮರಣ ಮಾಡಿ, ರಾಘವನಿಗೆ ಮಸ್ತಕ ವನ್ನು ನಮಿಸಿ ನಾನು ರಾಮಗುಣ ಕೀರ್ತನವನ್ನು ಆರಂಭಿಸುವೆನು.

**ಕಥೆಯ ಉಪೋದ್ಘಾತ**—ಪರಮ ಸಿದ್ಧ ಯಾಜ್ಞವಲ್ಕ್ಯನು ಮುನಿಶ್ರೇಷ್ಠ ಭರದ್ವಾಜನನ್ನು ಕುರಿತು ಹೇಳಿದ ಕಥೆಯನ್ನೇ ಸಂವಾದ ರೂಪದಿಂದ ವರ್ಣನಮಾಡಿ ನಾನು ಹೇಳುವೆನು; ಸರ್ವ ಸಜ್ಜನರೇ, ಸುಖದಿಂದ ಕೇಳಿರಿ. ಶಂಕರನು ಈ ಶೋಭನ ಚರಿತ್ರವನ್ನು, ಅಂದರೆ ಅಧ್ಯಾತ್ಮರಾಮಾಯಣವನ್ನು ನಿರ್ಮಿಸಿ ಅದನ್ನು ಕೃಪೆಮಾಡಿ ಪಾರ್ವತಿಯನ್ನು ಕುರಿತು ಹೇಳಿದನು. ಅದನ್ನೇ ಶಂಕರನು ಕಾಕಭುಶುಂಡಿಗೆ, ಆತನು ಅಧಿಕಾರಿಯಾದ ರಾಮಭಕ್ತನಿರುವನೆಂದು ತಿಳಿದು ಅರ್ಪಿಸಿದನು. ಕಾಕಭುಶುಂಡಿಯಿಂದ ಆ ಕಥೆಯು ಯಾಜ್ಞವಲ್ಕ್ಯನಿಗೆ ಪ್ರಾಪ್ತವಾಯಿತು. ಯಾಜ್ಞವಲ್ಕ್ಯನು ಪುನಃ ಭರದ್ವಾಜ

ನನ್ನು ಕುರಿತು ಆ ಕಥೆಯು ಗಾನ ಮಾಡಿದನು. ನಾನು ಈ ಕಥೆಯನ್ನು ನನ್ನ ಗುರುವಿನ ಮುಖದಿಂದ ವರಾಹತೀರ್ಥದಲ್ಲಿ ಶ್ರವಣ ಮಾಡಿದೆನು. ಆಗ ನಾನು ತೀರ ಅಜ್ಞಾನಿಯು ಇದ್ದದ್ದರಿಂದ ಬಾಲ್ಯದಲ್ಲಿ ಅದು ನನ್ನ ಲಕ್ಷದಲ್ಲಿ ಉಳಿದಿದ್ದಿಲ್ಲ. ರಾಮಕಥೆಯು ಅತ್ಯಂತ ಗೂಢವಾದದ್ದು ಅದು ತಿಳಿಯಲಿಕ್ಕೆ, ಹೇಳುವವರೂ ಕೇಳುವವರೂ ಅತ್ಯಂತ ಜ್ಞಾನ ನಿಧಿಗಳಿರಬೇಕಾಗುವದು; ಆದರೆ ಕಲಿಮಲದಿಂದ ಗ್ರಸ್ತನಾಗಿರುವ ಅತ್ಯಂತ ಮೂಢನಾದ ಜಡ ಜೀವನು ನಾನು ಅದನ್ನು ಹೇಗೆ ತಿಳಿಯುವೆನು? ಆದರೂ ಗುರುಗಳು ಅದನ್ನು ಹಲವು ಸಾರೆ ಹೇಳಿದ್ದರಿಂದ ನನ್ನ ಬುದ್ಧಿಯನ್ನನುಸರಿಸಿ ಅದು ನನಗೆ ತಿಳಿಯಿತು. ಅದರ ಯೋಗದಿಂದ ನನ್ನ ಬುದ್ಧಿಗೆ ಪ್ರಬೋಧವಾಗುವದಕ್ಕಾಗಿ ಅದನ್ನು ನಾನು ಭಾಷಾಬದ್ಧ ವಾಗಿ ಮಾಡುವೆನು. ನನ್ನಲ್ಲಿರುವ ಅಲ್ಪ ಸ್ವಲ್ಪ ಬುದ್ಧಿವಿವೇಕವನ್ನನುಸರಿಸಿ ಹೃದಯ ದಲ್ಲಿ ಹರಿಯ ಪ್ರೇರಣೆಯಾದದ್ದರಿಂದ, ನಾನು ಅದನ್ನು ಹೇಳುವೆನು. ನನ್ನಲ್ಲಿ ರುವ ಸಂದೇಹ, ಮೋಹ, ಭ್ರಮ ಇವುಗಳ ಹರಣವಾಗಬೇಕೆಂತಲೂ, ಭವ ನದಿ ಯನ್ನು ದಾಟುವದಕ್ಕಾಗಿ ನೌಕೆಯು ಇರಬೇಕೆಂತಲೂ ನಾನು ಈ ಕಥೆಯನ್ನು ರಚಿಸುವೆನು. ರಾಮಗುಣಸಮೂಹವು ಕುಪಂಥ, ಕುತರ್ಕ, ದುರ್ವೃತ್ತ, ಕಲಹ, ಕಪಟ, ದಂಭ, ಪಾಖಂಡಗಳೆಂಬ ಉರವಲಗಳನ್ನು ಸುಡುವ ಪ್ರಚಂಡ ಅಗ್ನಿಯಾಗಿ ರುವವು. ಭವಾನಿಯು ಹೇಗೆ ಪ್ರಶ್ನೆ ಮಾಡಿದಳು, ಶಂಕರನು ವಿಸ್ತರಿಸಿ ಹೇಗೆ ನಿರೂ ಪಿಸಿದನು ಎಂಬದನ್ನು ಚಿತ್ರವಿಚಿತ್ರ ಕಥಾಪ್ರಬಂಧ ರೂಪದಿಂದ ನಾನು ಪದ್ಯದಲ್ಲಿ ನಿವೇದನ ಮಾಡುವೆನು.

ಈ ಕಥೆಯನ್ನು ಕೇಳದವರು ಕಥೆಕೇಳಿ ಆಶ್ಚರ್ಯಪಡಬಾರದು ಈ ಕಥೆಯು ಹೀಗೆ ಅಲೌಕಿಕವಾದದ್ದೆಂದು ತಿಳಿದು ಅದನ್ನು ಕೇಳಿ ಜ್ಞಾನಿಗಳು ಆಶ್ಚರ್ಯಪಡುವದಿಲ್ಲ. ಜಗತ್ತಿನಲ್ಲಿ ರಾಮಕಥೆಗೆ ಮಿತಿಯಿಲ್ಲೆಂಬದು ಅವರ ಮನಸ್ಸಿಗೆ ನಂಬಿಗೆಯೇ ಆಗಿರುತ್ತದೆ. ರಾಮನ ಅವತಾರಗಳು ಹಲವು ಆಗಿರುವವು. ರಾಮಾಯಣಗಳಾದರೂ ಶತಕೋಟಿ, ಅಂದರೆ ಅಪರಂಪಾರವಾಗಿರುವವು; ಅದ್ದರಿಂದ ಕಲ್ಪಭೇದಕ್ಕನುಸರಿಸಿ ಭಗವಂತನ ಶೋಭನ ಚರಿತ್ರಗಳು ಹಲವು ಪ್ರಕಾರದವಾಗಿದ್ದು, ಅವನ್ನು ಮುನೀಶ್ವರರು ಇದ್ದಹಾಗೆ ವರ್ಣಿಸಿರುವರೆಂದು ತಿಳಿದು ಸಂಶಯಪಡದೆ ಆದರದಿಂದಲೂ, ಪ್ರೇಮದಿಂದಲೂ ರಾಮನ ಕಥೆಯನ್ನು ಕೇಳಬೇಕು. ಶ್ರೀ ರಾಮರು ಅನಂತರಿದ್ದು ಅವರ ಗುಣಗಳೂ ಅನಂತ ವಾಗಿಯೇ ಇರುವವು. ಅಂದಬಳಿಕ ಅವರ ಕಥಾವಿಸ್ತಾರಗಳೂ ಅನಂತವಾಗಿಯೇ ಇರಬೇಕಾಗುವವು; ಆದ್ದರಿಂದಲೇ ಶುದ್ಧವಿಚಾರದ ಜನರು ರಾಮಕಥೆಯ ಭೇದವನು ಕೇಳಿ ಆಶ್ಚರ್ಯಪಡುವದಿಲ್ಲ. ನಾನು ಮಸ್ತಕವಲ್ಲಿ ಹರಿಪದವನ್ನು ಧರಿಸಿನಾತಿ ಶಂಕರಗಣರಗಳಲ್ಲಿ ಈ ಕಥೆಯನ್ನು ರಚಿಸತೊಡಗವೆನು. ಚೈತ್ರ ಶುದ್ಧ ೯ ಮಂಗಳ ವಾರ ಅಯೋಧ್ಯೆಯಲ್ಲಿ ಈ ಚರಿತ್ರವು ಪ್ರಕಟವಾಯಿತು. ಇದರ ಹೆಸರು "ರಾಮಚ

ಆಜ್ಞೆಯಿಂದ ರಾಜ್ಯವನ್ನು ಬಿಟ್ಟುಕೊಟ್ಟು ಮುನಿವೃತ್ತಿಯಿಂದ ದಂಡಕಾರಣ್ಯದಲ್ಲಿ ಸಂಚರಿಸುತ್ತಿದ್ದನು.

ಪರಮೇಶ್ವರನು ಸತಿಯೊಡನೆ ಮಾರ್ಗಕ್ರಮಣ ಮಾಡುತ್ತಿರುವಾಗ ರಾಮದರ್ಶನವು ಹೇಗಾದೀತೆಂದು ಮನಸ್ಸಿನಲ್ಲಿ ವಿಚಾರಮಾಡತೊಡಗಿದನು. ಪ್ರಭುವು ಗುಪ್ತರೀತಿಯಿಂದ ಅವತರಿಸಿರುವದರಿಂದ ತಾನು ಆತನಬಳಿಗೆ ಹೋದರೆ, ಅವತಾರವನ್ನು ಸರ್ವರಿಗೂ ಪ್ರಕಟಮಾಡಿದಹಾಗಾಗುವದೆಂಬ ಚಿಂತೆಯು ಮಹೇಶನಲ್ಲಿ ಉತ್ಪನ್ನವಾಯಿತು. ಈ ಮರ್ಮವು ಸತಿಯ ಲಕ್ಷದಲ್ಲಿ ಬರಲಿಲ್ಲವು. ರಾವಣನು ಬ್ರಹ್ಮದೇವನನ್ನು ಕುರಿತು—"ಮನುಷ್ಯನಕೈಯಿಂದ ತನ್ನಮರಣವಾಗಬೇಕೆಂದು ವರವನ್ನುಬೇಡಿಕೊಂಡಿದ್ದ. ಆ ಬ್ರಹ್ಮವರವನ್ನು ಸತ್ಯವಾಗಿ ಮಾಡುವದಕ್ಕಾಗಿ ಪ್ರಭುವು ಯತ್ನಮಾಡುತ್ತಿರಲು, ತಾನು ಆತನ ಬಳಿಗೆ ಹೋಗದಿರುವದು ಪಶ್ಚಾತ್ತಾಪಕ್ಕೆ ಕಾರಣವಾಗಬಹುದೆಂತಲೂ ಶಂಕರನು ಚಿಂತಿಸಿದನು; ಆದರೆ ಪ್ರತ್ಯಕ್ಷ ಹೋಗುವದು ಆತನಿಂದ ಆಗಲಿಲ್ಲ. ಈ ವೇಳೆಗೆ ಕೈಲಾಸನಾಥನು ಶೋಕವಿಹ್ವಲನಾಗಿರಲು, ಅಷ್ಟು ಹೊತ್ತಿಗೆ ನೀಚ ಮಾರೀಚರಾಕ್ಷಸನನ್ನು ಸಂಗಡ ಕರಕೊಂಡು ರಾವಣನು ಹೋಗುತ್ತಿದ್ದನು. ಅಷ್ಟರಲ್ಲಿ ಮಾರೀಚನು ಕಪಟ ಮೃಗದ ರೂಪವನ್ನು ಧರಿಸಿದನು. ಮೂಢ ರಾವಣನಿಗೆ ಪ್ರಭುವಿನ ಪ್ರತಾಪವು ಆಗ ಗೊತ್ತಾಗದ್ದರಿಂದ ಕಪಟದಿಂದ ಜಾನಕಿಯನ್ನು ಹರಣಮಾಡಿದನು. ಇತ್ತ ಶ್ರೀರಾಮನು ಮೃಗವನ್ನು ಸಂಹರಿಸಿ, ಬಂಧು ಲಕ್ಷ್ಮಣನೊಡನೆ ತಿರುಗಿಬಂದು ಆಶ್ರಮದಲ್ಲಿ ನೋಡಲು, ಪ್ರಭುವಿನ ನೇತ್ರಗಳು ಅಶ್ರುಪೂರ್ಣವಾದವು. ವಿರಹದಿಂದ ದುಃಖಿತನಾದ ಪ್ರಾಕೃತಮನುಷ್ಯನಂತೆ ರಘುರಾಮನೂ, ಬಂಧುವಾದಲಕ್ಷ್ಮಣನೂ ಸೀತೆಯನ್ನು ಹುಡುಕುತ್ತ ಅರಣ್ಯದಲ್ಲಿ ಭ್ರಮಣಮಾಡತೊಡಗಿದರು. ಯಾವಪ್ರಭುವಿಗೆ ಯೋಗವೂ, ವಿಯೋಗವೂ ಮೂಲತಃ ಇಲ್ಲವೇ ಇಲ್ಲವೋ ಅಂಥ ಆತನಿಗೆ ಈಗ ನೋಡಿದರೆ ಪ್ರತ್ಯಕ್ಷ ವಿರಹದುಃಖವು ಆಗುತ್ತಿರುವದು! ರಘುಪತಿಯ ಚರಿತ್ರವು ಅತಿ ವಿಚಿತ್ರವಾದದ್ದು. ಜ್ಞಾನಿಗಳೇ ಅದನ್ನು ತಿಳಿಯುವರು. ಬುದ್ಧಿಹೀನರು ಮೋಹಾಧೀನರಾದದ್ದರಿಂದ ಆ ಪ್ರಭುವಿನ ಚರಿತ್ರದವಿಷಯವಾಗಿ ವಿಪರೀತ ಕಲ್ಪನೆಮಾಡುತ್ತ ಕುಳಿತುಕೊಳ್ಳುವರು. ಭಗವಾನ್ ಶಂಕರನಿಗೆ ಮಾತ್ರ ಶೋಕವಿಹ್ವಲವಾದ ರಾಮರೂಪವನ್ನು ನೋಡಿ ವಿಶೇಷವಾಗಿ ಆನಂದವಾಯಿತು. ರಾಮನ ಆ ಲಾವಣ್ಯಸಾಗರವನ್ನು ಆತನು ಕಣ್ಣುತುಂಬನೋಡಿದನು; ಆದರೆ ಅಪ್ರಾಸಂಗಿಕವೆಂದು ತಿಳಿದು ಪ್ರಭುವಿಗೆ ತನ್ನ ಗುರುತುಹತ್ತಗೊಡದೆ, "ಜಯಸಚ್ಚಿದಾನಂದಾ! ಜಗತ್ಪಾವನಾ" ಎಂದು ರಾಮನನ್ನು ನಮಸ್ಕರಿಸಿ ಮದನಾರಿಯು ಮುಂದಕ್ಕೆ ಸಾಗಿದನು!

**ಸತಿಯ ಸಂದೇಹ**—ಕೃಪಾನಿಧಾನನಾದ ಶಿವನು ಸತಿಯೊಡನೆ ಗಮನಮಾಡುತ್ತಿರುವಾಗ ಆತನ ದೇಹವು ಆಗಾಗ್ಗೆ ರೋಮಾಂಚಿತವಾಗುತ್ತಿತ್ತು. ಶಂಭುವಿನ

ಈ ಅವಸ್ಥೆಯನ್ನು ನೋಡಿ ಸತಿಗೆ ವಿಶೇಷಸಂದೇಹವು ಉತ್ಪನ್ನವಾಯಿತು. ಆಕೆಯು ಮನಸ್ಸಿನಲ್ಲಿ—"ಶಂಕರನು ಜಗದೀಶನೂ, ಜಗದ್ವಂದ್ಯನೂ ಇದ್ದು, ಸುರ-ನರ-ಮುನಿಗಳೆಲ್ಲ ಆತನಮುಂದೆ ಮಸ್ತಕವನ್ನು ನಮಿಸುವರು ಅಂಥ ಆ ಪ್ರಭು ಶಂಕರನು "ಸಚ್ಚಿದಾನಂದ,, "ಪರಂಧಾಮ,, ಎಂದು ಸ್ತೋತ್ರಮಾಡಿ ಯಃಕಶ್ಚಿತರಾಜಕುಮಾರನಿಗೆ ನಮಸ್ಕಾರ ಮಾಡಿದನು. ಆ ರಾಮನ ಸೌಂದರ್ಯವನ್ನು ನೋಡಿ ತ್ರಿಪುರಾರಿಯ ಹೃದಯದಲ್ಲಿಯು ಪ್ರೇಮವು ಇನ್ನೂ ಉಕ್ಕಿಬರುತ್ತಿರುವದು. ಪರಬ್ರಹ್ಮವಂತು ವ್ಯಾಪಕವೂ, ಮಾಯಾರಹಿತವೂ, ಕಲಾರಹಿತವೂ, ಇಚ್ಛಾರಹಿತವೂ, ಭೇದಾತೀತವೂ, ವೇದಗಳಿಗೂ ಅಸಮಾನವೊಡಲಿಕ್ಕೆ ಬಾರದ್ದು ಆಗಿರುವದು. ಅದು ದೇಹಧಾರಣ ಮಾಡಿ ನರರೂಪದಿಂದ ಅವತರಿಸುವದು ಶಕ್ಯವಾದರೂ ಇರುವದೆಯೇ! ಇನ್ನು ಒಂದು ಪಕ್ಷದಲ್ಲಿ ವಿಷ್ಣುವು ದೇವತೆಗಳಹಿತಕ್ಕಾಗಿ ನರಾವತಾರವನ್ನು ಧರಿಸಿದ್ದರೂ, ಆತನಾದರೂ ಮಹಾದೇವನಂತೆಯೇ ಸರ್ವಜ್ಞನಾಗಿರುವನು. ಆ ಅಸುರಾರಿಯಾದ ಶ್ರೀಪತಿಯು ಜ್ಞಾನಧಾಮನಿದ್ದು, ಅಜಾಗಲನಂತೆ ಸ್ತ್ರೀಯನ್ನು ಹುಡುಕುತ್ತಿರಬಹುದೇನು! ಆದರೆ ಶಂಕರನವಾಣಿಯು ಅಸತ್ಯವಾಗತಕ್ಕದ್ದಲ್ಲವಲ್ಲ! ಆ ಭಗವಂತನ ಸರ್ವಸಾಕ್ಷಿತ್ವವು ಎಲ್ಲರಿಗೂ ಗೊತ್ತಿರುವದು" ಎಂಬಿವೇ ಮೊದಲಾದ ವಿಚಾರಗಳಿಂದ ಸತಿಯ ಮನಸ್ಸು ಪೂರ್ಣಸಂಶಯಗ್ರಸ್ತವಾದದ್ದರಿಂದ ಆಕೆಯ ಅಂತಃಕರಣದಲ್ಲಿ ಜ್ಞಾನದ ಪ್ರವೇಶಕ್ಕೆ ಆಸ್ಪದವೇ ದೊರೆಯಲಿಲ್ಲ. ಸತಿಯು ಇದನ್ನಾವದನ್ನೂ ಆಡಿತೋರಿಸದಿದ್ದರೂ, ಅಂತರ್ಯಾಮಿಯಾದ ಶಂಭುವು ಅದನ್ನೆಲ್ಲ ತಿಳಿದುಕೊಂಡನು. ಆಗ ಶಂಭುವು ಸತಿಯನ್ನು ಕುರಿತು—ಹೇ ಸತಿಯೇ, ಕೇಳು. ನಿನ್ನದು ಸ್ತ್ರೀಸ್ವಭಾವವು. ಇಂಥ ಸಂಶಯಗಳನ್ನು ಮನಸ್ಸಿನಲ್ಲಿ ತರಬೇಡ. ಅಗಸ್ತ್ಯಮುನಿಯು ಯಾರ ಲೀಲಾಗಾಯನಮಾಡಿದನೋ, ಆ ಮುನಿಗೆ ನಾನು ಯಾರ ಭಕ್ತಿಯನ್ನು ನಿರೂಪಿಸಿದೆನೋ, ಯಾರನ್ನು ಸ್ಥಿತಪ್ರಜ್ಞರು ಕೂಡ ನಿತ್ಯದಲ್ಲಿ ಸೇವಿಸುವರೋ ಆ ನನ್ನ ಉಪಾಸ್ಯದೇವನಾದ ರಘುವೀರನು ಈತನೇ ಇರುವನು! ಮುನಿಗಳೂ, ಯೋಗಿಗಳೂ ಸಿದ್ಧರೂ ಇತ್ಯಾದಿ ಮತಿಧೀರರು ವಿಮಲಮನಸ್ಸಿನಿಂದ ನಿರಂತರವಾಗಿ ಯಾರನ್ನು ಧ್ಯಾನಿಸುತ್ತಿರುವರೋ; ವೇದಗಳು, ಶಾಸ್ತ್ರಗಳು, ಪುರಾಣಗಳು "ನೇತಿ ನೇತಿ,, ಎಂದು ಉಚ್ಚಸ್ವರದಿಂದ ಯಾವನ ಯಶೋಗಾಯನಮಾಡುವವೋ ಅವನೇ ಈ ರಾಮನಿರುವನು. ಈತನು ಸರ್ವವ್ಯಾಪಕ-ಪರಬ್ರಹ್ಮನೂ, ಅನೇಕ ಬ್ರಹ್ಮಾಂಡನಾಯಕನೂ, ಮಾಯೆಯ ಈಶನೂ, ನಿತ್ಯನೂ, ಸ್ವತಂತ್ರನೂ ಇದ್ದು, ತನ್ನ ಭಕ್ತನ ಕಲ್ಯಾಣಕ್ಕಾಗಿ ರಘುಕುಲಮಣಿರೂಪದಿಂದ ಅವತರಿಸಿರುವನು.

ಈ ಮೇರೆಗೆ ಶಿವನು ಹಲವು ಸಾರೆ ಹೇಳಿದರೂ, ಆತನ ಉಪದೇಶವು ಸತಿಯ ಮನಸ್ಸಿಗೆ ನಾಟಲಿಲ್ಲ. ಕಡೆಗೆ ಭಗವನ್ಮಾಯೆಯೇ ಬಲವತ್ತರವಾದದ್ದೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಶಂಕರನು ನಕ್ಕು ಸತಿಯನ್ನು ಕುರಿತು-ದಾಕ್ಷಾಯಣೀ, ನಿನ್ನಮನಸ್ಸಿನಲ್ಲಿ

ಅಜ್ಞಾನದ ಆರೋಪವನ್ನು ರಾಮನ ಮೇಲೆ ಮಾಡಿದೆನೆಂದು ಆಕೆಯು ಪಶ್ಚಾತ್ತಾಪಪಡ ಹತ್ತಿದಳು. ಇನ್ನುತಾನು ಉತ್ತರವೇನು ಕೊಡಬೇಕೆಂಬ ವಿಚಾರದಿಂದ ಆಕೆಯು ಅಂತಃಕರಣದಲ್ಲಿ ಬಹಳ ತಾಪವಾಗಹತ್ತಿತು. ಸತಿಯು ದುಃಖಿತಳಾಗಿರುವಳೆಂದು ತಿಳಿದು ರಾಮನು ತನ್ನ ಪ್ರಭಾವವನ್ನು ಅಲ್ಪಮಟ್ಟಿಗೆ ಆಕೆಗೆ ತಿಳಿಸಿದನು ಸತಿಯು ಹಾದಿಯ ಹಿಡಿದು ಹೋಗುವಾಗ ಒಂದು ಚಮತ್ಕಾರವನ್ನು ಕಂಡಳು. ಆಕೆಯು ಮುಂದುಗಡೆಯಲ್ಲಿ ರಾಮನು ಸೀತಾ ಲಕ್ಷ್ಮಣರೊಡನೆ ಹೋಗುತ್ತಲಿದ್ದನು ಆಕೆಯು ಹಿಂದಕ್ಕೆ ತಿರುಗಿ ನೋಡಲು, ಅಲ್ಲಿಯೂ ಸೀತಾಲಕ್ಷ್ಮಣರೊಡನೆ ಪ್ರಭುವು ಕಾಣುತ್ತಿದ್ದನು. ಸತಿಯು ನೋಡಿದತ್ತೆಲ್ಲ ಪ್ರಭುಶ್ರೀರಾಮಚಂದ್ರನು ಕುಳಿತೇಇರುತ್ತಿದ್ದನು. ಸಿದ್ಧರೂ, ಮುನೀಂದ್ರರೂ ಆತನ ಸೇವೆಯಲ್ಲಿ ತತ್ಪರರಾಗಿರುತ್ತಿದ್ದರು. ಒಬ್ಬರಿಗಿಂತಲೂ ಒಬ್ಬರುಹೆಚ್ಚು ಪ್ರಭಾವವಂತರಾಗಿ ಅನೇಕ ಶಿವ-ಬ್ರಹ್ಮ-ವಿಷ್ಣುಗಳು ಪ್ರಭುವಿನ ಚರಣಗಳನ್ನು ವಂದಿಸಿ ಸೇವಿಸುತ್ತಲಿದ್ದರು; ಹಲವು ವಿಧದ ವೇಷದಿಂದ ಯಾವತ್ತು ದೇವತೆಗಳೂ ಆಕೆಯ ಕಣ್ಣಿಗೆಬಿದ್ದರು. ಸತಿಯು ಹೀಗೆ ಅನೇಕ ಬ್ರಹ್ಮಾದಿಕ ದೇವತೆಗಳಸ್ವರೂಪವನ್ನು ನೋಡಿದಂತೆ, ರೂಪವತಿಯರಾದ ಅನೇಕ ಅನುಪಮ ಸತಿ-ಸಾವಿತ್ರಿ-ಲಕ್ಷ್ಮಿಯರನು ಆಕೆಯು ನೋಡಿದಳು. ಆಕೆಯು ರಾಮರೂಪವನ್ನು ನೋಡಿದಲ್ಲೆಲ್ಲ ಯಾವತ್ತು ದೇವತೆಗಳು ತಮ್ಮ ತಮ್ಮ ಶಕ್ತಿಯರೊಡನೆ ಇರುತ್ತಿದ್ದರು. ಚರಾಚರ ವಿಶ್ವದೊಳಗಿನ ಅನೇಕ ಪ್ರಾಣಿಗಳನ್ನು ಆಕೆಯು ನೋಡಿದಳು ನಾನಾಪ್ರಕಾರದ ವೇಷಧಾರಿಗಳಾದ ದೇವತೆಗಳು ಪ್ರಭುವನ್ನುಪೂಜಿಸುತ್ತಿರುವಂತೆ ತೋರಿತು. ಆದರೆ ಅನ್ಯರಾಮರೂಪವು ಮಾತ್ರ ಆಕೆಯ ದೃಷ್ಟಿಗೆಗೋಚರವಾಗಲಿಲ್ಲ. ಸೀತೆಯಿಂದೊಡಗೂಡಿದ ಹಲವುಜನ ರಾಮರನ್ನು ಆಕೆಯು ನೋಡಿದರೂ, ಅವರ ಸ್ವರೂಪವು ಮಾತ್ರ ಬೇರೆಯಿದ್ದಿಲ್ಲ. ಎಲ್ಲಕಡೆಯಲ್ಲಿ ಅದೇರಘುವೀರನನ್ನು, ಅದೇಲಕ್ಷ್ಮಣನನ್ನು, ಅದೇಸೀತೆಯನ್ನು ನೋಡಿ ಸತಿಯು ಅತ್ಯಂತ ಭಯಭೀತಳಾದಳು. ಆಕೆಯ ಹೃದಯವು ಕಂಪಿಸಹತ್ತಿ ದೇಹಸ್ಮೃತಿಯು ಉಳಿಯದಂತಾಯಿತು. ಈಸ್ಥಿತಿಯಲ್ಲಿಯೇ ಆಕೆಯು ಕಣ್ಣು ಮುಚ್ಚಿಕೊಂಡು ಮಾರ್ಗದಲ್ಲಿ ಕುಳಿತುಕೊಂಡಳು. ಪುನಃ ಸತಿಯು ಕಣ್ಣು ತೆರೆದು ನೋಡಲು, ಆಕೆಯ ಕಣ್ಣಿಗೆ ಏನೂ ಕಾಣಲಿಲ್ಲ. ಕಡೆಗೆ ಆಕೆಯು ರಾಮಪದಗಳಿಗೆ ತಿರುತಿರುಗಿ ನಮಸ್ಕರಿಸಿ ಕೈಲಾಸನಾಥನು ಕುಳಿತಲ್ಲಿಗೆ ಹೋದಳು.

**ಮಹೇಶನಪ್ರತಿಜ್ಞೆ**—ಸತಿಯು ಹತ್ತರಬಂದ ಕೂಡಲೆ ಮಹೇಶನು ಹಾಸ್ಯಪೂರ್ವಕವಾಗಿ ಆಕೆಯ ಕುಶಲವನ್ನುಕೇಳಿ—"ದೇವಿ, ಶ್ರೀರಾಮನನ್ನು ನೀನು ಯಾವಬಗೆಯಿಂದ ಪರೀಕ್ಷಿಸಿದೆಯೆಂಬದನ್ನು ಯಥಾರ್ಥವಾಗಿ ನನಗೆ ಹೇಳು" ಎಂದು ವಿಚಾರಿಸಲು, ರಘುವೀರನ ಪ್ರಭಾವವನ್ನರಿತು ಭಯಭೀತಳಾಗಿದ್ದರೂ ಮತ್ತೆ ಸತಿಯು ಶಿವನನ್ನು ವಂಚಿಸುವದಕ್ಕಾಗಿ—"ಮಹಾರಾಜ, ನಾನು ಪರೀಕ್ಷೆಮೊದಲಾದದ್ದೇನನ್ನೂ ಮಾಡಲಿಲ್ಲ.

ತನ್ನಂತೆ, ನಾನೂ ಶ್ರೀ ರಾಮನನ್ನು ಅಭಿವಂದಿಸಿದೆನು. ತಮ್ಮ ಮಾತು ಎಂದೂ ಅಸತ್ಯವಾಗದೆಂದು ನನ್ನಮನಸ್ಸಿಗೆ ನಂಬಿಗೆಯಾಗಿಹೋಯಿತು, ಎಂದು ಹೇಳಿದಳು. ಆಗ ಶಂಕರನು ಅಂತರ್ಧ್ಯಾನದಿಂದ ಸತಿಯ ಕೃತ್ಯಗಳನ್ನೆಲ್ಲ ತಿಳಿದುಕೊಂಡು, ಸತಿಗೂ ಅಸತ್ಯಭಾಷಣಮಾಡಲು ಪ್ರೇರಿಸಿದ ರಾಮಮಾಯೆಗೆ ಆ ಪ್ರಭುವು ತಲೆಬಾಗಿ ನಮಸ್ಕರಿಸಿದನು. ಹರಿಯ ಇಚ್ಛೆಯೇ ಬಲವತ್ತರವಾದದ್ದೆಂದು ಶಂಕರನು ವಿಚಾರಿಸುತ್ತಿರುವಾಗ, ಸತಿಯು ಸೀತೆಯ ರೂಪವನ್ನು ಧರಿಸಿದ್ದಕ್ಕಾಗಿ ಆತನಿಗೆ ಪರಮವಿಷಾದವಾಯಿತು. ಆತನು ಮನಸ್ಸಿನಲ್ಲಿ "ಇನ್ನು ತಾನು ಸತಿಯಮೇಲೆ ಪತ್ನಿಯಪ್ರೇಮ ಮಾಡಿದರೆ ಭಕ್ತಿಮಾರ್ಗವು ಉಧ್ವಸ್ತವಾಗಿ ಎಲ್ಲಕಡೆಗೂ ಅನೀತಿಯು ಪ್ರಸಾರವಾದೀತು. ಈ ಸಾಧ್ವಿಯು ತ್ಯಾಗಮಾಡುವದೂ ಶಕ್ಯವಲ್ಲ. ಈಕೆಯಮೇಲೆ ಪ್ರೇಮಮಾಡಿದರೆ ಮಹತ್ಪಾಪವಾಗುವದು, ಎಂದು ವಿಚಾರಿಸುವಾಗ ಶಂಕರನು ಬಾಯಿಯಿಂದ ಏನೂ ಮಾತಾಡದಿದ್ದರೂ, ಅಂತಃಕರಣದಲ್ಲಿ ಆತನಿಗೆ ಅತ್ಯಂತ ದಾಹವು ಆಗಹತ್ತಿತು. ಆಗ ಪ್ರಭುಪದವನ್ನು ವಂದಿಸಿ ರಾಮಸ್ಮರಣವನ್ನು ಮಾಡುತ್ತಿರುವಾಗ ಶಂಕರನ ಮನಸ್ಸಿನಲ್ಲಿ--"ಸತಿಯು ಈಗಿನ ದೇಹದಿಂದಲಾದರೂ ಆಕೆಯ ಹಾಗೂ ನನ್ನ ಸಂಯೋಗವಾಗಲಾರದೆಂ"ಬ ವಿಚಾರವು ಉತ್ಪನ್ನವಾಯಿತು. ಆಗ ಅದೇವಿಚಾರವನ್ನೇ ಶಂಕರನು ಮನಸ್ಸಿನಲ್ಲಿ ನಿಶ್ಚಯಿಸಿ, ರಾಮಸ್ಮರಣಮಾಡುತ್ತ ಸ್ವಸ್ಥಾನಕ್ಕೆ ಹೋಗುವದಕ್ಕಾಗಿ ಹೊರಟನು. ಮಾರ್ಗವಿಡಿದು ಹೋಗುತ್ತಿರುವಾಗ ಸುಂದರ ಆಕಾಶವಾಣಿಯು--"ಶಂಕರನ ಜಯ ಜಯಕಾರವಿರಲಿ! ತಮ್ಮ ದೃಢಭಕ್ತಿಯು ಧನ್ಯವಾದದ್ದು- ತಮ್ಮ ಹೊರತು ಇಂಥ ಪ್ರತಿಜ್ಞೆಯನ್ನು ಮಾಡಲು ಯಾರು ಸಮರ್ಥರು? ಭಗವನ್, ಸಮರ್ಥ ರಾಮಭಕ್ತರು ತಾವೇಇರುವಿರಿ,, ಎಂದುಆದದ್ದನ್ನು ಕೇಳಿ, ಸತಿಯ ಹೃದಯದಲ್ಲಿ ದುಃಖವು ಉತ್ಪನ್ನವಾಯಿತು. ಆಕೆಯು ಸಂಕೋಚಪೂರ್ವಕವಾಗಿಶಿವನನ್ನು ಕುರಿತು-ಎಲೈ, ಸತ್ಯಸಾಗರನೇ, ದೀನದಯಾಲೂ ಪ್ರಭೋ, ನೀವು ಯಾವ ಪ್ರತಿಜ್ಞೆಯನ್ನು ಮಾಡಿದಿರಿ, ಹೇಳೋಣವಾಗಬೇಕು, ಎಂದು ಹಲವು ಪ್ರಕಾರದಿಂದ ಕೇಳಿದಳು. ಆದರೂ ಮಹಾದೇವನು ತನ್ನ ಪ್ರತಿಜ್ಞೆಯನ್ನು ಆಕೆಯ ಮುಂದೆ ಹೇಳಲಿಲ್ಲ. ಆಗ ಸತಿಯು ಮನಸ್ಸಿನಲ್ಲಿ-ಸರ್ವಜ್ಞ ಪ್ರಭುವು ಎಲ್ಲವನ್ನು ತಿಳಿದಿರುವನು. ನಾನು ಶಂಕರನೊಡನೆಯೂ ಕಪಟಾಚರಣೆಯನ್ನು ಮಾಡಿದೆನಲ್ಲವೆ? ಸ್ತ್ರೀಜಾತಿಯೇ ಜಡವೂ, ಮೂರ್ಖವೂ ಆಗಿರುವದು. ಎಂದು ಆಲೋಚಿಸುವಾಗ ಸತಿಯ ಹೃದಯದಲ್ಲಿ ಅಪಾರವಾದ ಶೋಕವುಂಟಾಗಿ, ಆಕೆಯು ಅತ್ಯಂತಚಿಂತಾತುರಳಾದಳು. ಕೃಪಾಸಾಗರನಾದ ಶಂಕರನು ಪರಮ ಗಂಭೀರನಾಗಿರುವದರಿಂದಲೂ, ನನ್ನಅಪರಾಧವನ್ನು ಬಾಯಿಬಿಟ್ಟುಹೇಳದಿರುವದರಿಂದಲೂ ಶಂಕರನು ನನ್ನ ಪರಿತ್ಯಾಗಮಾಡಿರುವನೆಂದು ಸತಿಯು ತರ್ಕಿಸಿ, ಅತ್ಯಂತ ವ್ಯಥಿತಳಾದಳು. ಹೀಗೆ ಸತಿಯು ದುಃಖಿತಳಾಗಿರುವದನ್ನು ತಿಳಿದು ಶಂಕರನು ಆಕೆಯ ಸಮಾಧಾನಕ್ಕಾಗಿ

ದಿಯಲ್ಲಿ ಹೋಗುವಾಗ, ಸುಂದರ ಕಥೆಗಳನ್ನೂ, ಇತಿಹಾಸವನ್ನೂ ಹೇಳುತ್ತ ಕೈಲಾಸವನ್ನು ಮುಟ್ಟಿದನು. ಅಲ್ಲಿಗೆ ಹೋದಬಳಿಕವಾದರೂ ತನ್ನ ಪ್ರತಿಜ್ಞೆಯು ವಿಚಾರಮಾಡಿ ಆತನು ವಟವೃಕ್ಷದಬುಡದಲ್ಲಿ ಕಮಲಾಸನದಿಂದ ಕುಳಿತುಕೊಳ್ಳಲು, ಅನಾಯಾಸದಿಂದಲೇ ಸ್ವಸ್ವರೂಪದಲ್ಲಿ ನಿಮಗ್ನತೆಯುಂಟಾಗಿ ಶಂಕರನಿಗೆ ಅಖಂಡವೂ, ಅಪಾರವೂ ಆದ ಸಮಾಧಿಯು ಒದಗಿತು!

**ಸತಿಯ ದೇಹತ್ಯಾಗ**–ಆಗ ಸತಿಯು ಕೈಲಾಸದಲ್ಲಿಯೇ ಇದ್ದಳು; ಆದರೆ ಆಕೆಯ ಮನಸ್ಸಿನ ಚಿಂತೆಯು ಹೆಚ್ಚುತ್ತಹೋಯಿತು. ಅದರ ಮರ್ಮವನ್ನು ಯಾರೂ ತಿಳಿಯಲಿಲ್ಲ. ಆಕೆಗೆ ಪ್ರತಿ ಒಂದು ದಿವಸವು ಯುಗದಂತೆ ಹೋಗ ಹತ್ತಿತು. ದಿನದಿನಕ್ಕೆ ಆಕೆಯ ಶೋಕಭಾರವು ಹೆಚ್ಚುತ್ತಹೋದದ್ದರಿಂದ, ತಾನು ಎಂದಾದರೂ ಈ ಶೋಕಸಾಗರದಿಂದ ಪಾರಾಗುವೆನೋ ಇಲ್ಲವೋ ಎನ್ನುವ ಹಾಗೆ ಆಕೆಗೆ ಆಯಿತು. ಆಕೆಯು ಮನಸ್ಸಿನಲ್ಲಿ–ನಾನು ರಘುಪತಿಯ ಅಪಮಾನ ಮಾಡಿದ್ದಲ್ಲದೆ, ಪತಿವಚನವನ್ನು ಸುಳ್ಳೆಂದು ತಿಳಿದೆನು. ಅವಕ್ಕಾಗಿ ಎಲೈ ವಿಧಾತೃವೇ, ತಕ್ಕಫಲವನ್ನು ನನಗೆ ಕೊಟ್ಟೆ. ಎಲೈ ವಿಧಿಯೇ, ಶಂಕರ–ವಿಮುಖ–ಸ್ಥಿತಿಯಲ್ಲಿ ನನ್ನನ್ನು ನೀನು ಜೀವದಿಂದಿರಗೊಟ್ಟಿರುವೆಯೆಂಬದು ಇನ್ನೂ ನಿನಗೆ ಗೊತ್ತಾಗಲೊಲ್ಲದೇನು? ಎಂದು ನುಡಿದು ವಿವೇಕಿಯಾದ ಸತಿಯು ರಾಮಚಂದ್ರನನ್ನು ಸ್ಮರಿಸುತ್ತ–"ಪ್ರಭು ಶ್ರೀ ರಾಮನು ದೀನದಯಾಳುವೆನಿಸುವನು; ಶೋಕಮೋಚನನೆಂದು ವೇದಗಳೂ ಕೂಡ ಆತನ ಯಶಸ್ಸಿನಗಾಯನ ಮಾಡುವವು; ಆದರೆ ಈಗ ನಾನು ಕೈಜೋಡಿಸಿ ಪ್ರಾರ್ಥಿಸುವೆನೇನಂದರೆ, ಇನ್ನು ನನ್ನ ಈ ದೇಹವು ನಷ್ಟವಾಗಬೇಕು. ಶಿವಚರಣದಲ್ಲಿ ನನ್ನ ಪ್ರೇಮವಿದ್ದರೆ, ತ್ರಿಕರಣಪೂರ್ವಕವಾಗಿ ಶಿವಚರಣವನ್ನು ಪ್ರೀತಿಸುವದೇ ನನ್ನ ಸತ್ಯವ್ರತವಾಗಿದ್ದರೆ, ಎಲೈ ಸಮದರ್ಶಿಯಾದ ಪ್ರಭೂ ರಾಮಚಂದ್ರಾ, ಕೇಳು. ದುಸ್ಸಹವಾದ ಈ ವಿಪತ್ತಿನಿಂದ ನನ್ನ ಬಿಡುಗಡೆಯಾಗಿ ನನಗೆ ಅನಾಯಾಸವಾಗಿ ಮೃತ್ಯುವು ಒದಗುವಂತೆ ಮಾಡು

ಹೀಗೆ ದಕ್ಷಕನ್ಯೆಯಾದ ಸತಿಯು ನುಡಿಯುತ್ತಿರುವಾಗ ಆಕೆಯ ಭಯಂಕರ ದುಃಖವು ಅವರ್ಣನೀಯವಾಯಿತು. ೮೭೦೦೦ವರ್ಷಗಳಮೇಲೆ ಅವಿನಾಶಿಯಾದ ಶಂಭುವು ಸಮಾಧಿಯ ವಿಸರ್ಜನ ಮಾಡಿ ರಾಮನಾಮವನ್ನು ಸ್ಮರಿಸ ಹತ್ತಿದನು. ಶಂಕರನು ಜಾಗ್ರತನಾದದ್ದು ಸತಿಗೆ ಗೊತ್ತಾಯಿತು. ಆಕೆಯು ಶಂಕರನ ಪದಕಮಲಗಳಿಗೆ ವಂದಿಸಲು, ಆತನೂ ತನ್ನ ಎದುರಿನಲ್ಲಿ ಆಕೆಗೆ ಆಸನವನ್ನು ಕೊಟ್ಟು, ಸುಂದರವಾದ ಹರಿಕಥೆಗಳನ್ನು ಹೇಳತೊಡಗಿದನು. ಆ ಕಾಲದಲ್ಲಿ ದಕ್ಷನು ಪ್ರಜಾಪತಿಯಾಗಿದ್ದನು. ದಕ್ಷನೇ ಸರ್ವಥಾ ಯೋಗ್ಯನೆಂದು ಬ್ರಹ್ಮನು ವಿಚಾರಪೂರ್ವಕವಾಗಿ ನಿರ್ಣಯಿಸಿ, ಆತನನ್ನೇ ಪ್ರಜಾಪತಿಗಳ ನಾಯಕನನ್ನಾಗಿಮಾಡಿದ್ದನು. ಶ್ರೇಷ್ಠ ಅಧಿಕಾರವು ಪ್ರಾಪ್ತವಾದ ಕೂಡಲೆ ದಕ್ಷನು ಅತ್ಯಂತ ಗರ್ವಿಷ್ಠನಾದನು. ಪ್ರಭುತ್ವವು ಪ್ರಾಪ್ತವಾದಾಗ ಸ್ವಲ್ಪವಾದರೂ ಮದವೇ

ವಿಚಾರಿಸಲೇ ಇಲ್ಲ. ಆಕೆಯನ್ನು ನೋಡಿ ಆತನ ಸರ್ವಾಂಗವು ತಪ್ತವಾಯಿತು. ಸತಿಯು ಹೋಗಿ ಯಜ್ಞವನ್ನು ನೋಡಲು, ಶಂಭುವಿನ ಭಾಗವು ಅಲ್ಲಿ ಎಲ್ಲಿಯೂ ಕಂಡು ಬರಲಿಲ್ಲ. ಆಗ ಮಾತ್ರ ಶಂಕರನ ಉಪದೇಶದ ಸ್ಮರಣವು ಸತಿಗೆ ತಟ್ಟನೆ ಆಯಿತು. ತಾನು ಪತಿಯ ಅನಾದರ ಮಾಡಿದೆನೆಂಬುದು ಮನಸ್ಸಿನಲ್ಲಿ ಬಂದ ಕೂಡಲೆ ಆಕೆಯ ಅಂತಃಕರಣದಲ್ಲಿ ದಾಹವು ಉತ್ಪನ್ನವಾಯಿತು. ಜಗತ್ತಿನಲ್ಲಿ ಸ್ವಜನರ ಅಪಮಾನದಂಥ ದಾರುಣವಾದ ದುಃಖವು ಮತ್ತೊಂದು ಇರುವದಿಲ್ಲ. ಪತಿಯ ಆ ಅಪಮಾನವನ್ನು ನೋಡಿ ಸತಿಯು ಕ್ರುದ್ಧಳಾದಳು. ಆಕೆಯು ತಾಯಿಯು ಹಲವು ರೀತಿಯಿಂದ ತಿಳಿಸಿ ಹೇಳಿದರೂ ಆದರೆ ಸತಿಗೆ ಶಿವನ ಅಪಮಾನವು ಸಹನವಾಗಲಿಲ್ಲ, ಹೃದಯದಲ್ಲಿ ಜ್ಞಾನವೂ ಪ್ರಕಟವಾಗಲಿಲ್ಲ. ಆಗ ಆಕೆಯು ಹಟಕ್ಕಿಳಿದು ಸಭೆಯನ್ನು ಕುರಿತು ಕ್ರೋಧದಿಂದ— "ಎಲೈ ಸಭಾಸದರೆ, ಸಕಲ ಮುನೀಂದ್ರರೇ, ಕೇಳಿರಿ. ಶಿವನಿಂದೆಯನ್ನು ಮಾಡಿದ ಅಥವಾ ಕೇಳಿದ ನಿಮ್ಮೆಲ್ಲರಿಗೆ ತಕ್ಕ ಫಲವು ಬೇಗನೆ ದೊರೆಯುವದು. ಸಾಧುಸಂತರು, ಶಿವನ ಅಥವಾ ವಿಷ್ಣುವಿನ ನಿಂದೆಯಾಗುತ್ತಿರುವಲ್ಲಿ ಕೇಳುತ್ತ ಕುಳಿತುಕೊಳ್ಳುವದಾದರೆ, ನಿಂದಕರ ನಾಲಿಗೆಯನ್ನು ಕೊಯ್ಯಬೇಕು. ಅವನು ಆ ದಿವ್ವರೆ ಕಿವಿಯಲ್ಲಿ ಬೆರಳು ಇಟ್ಟುಕೊಂಡು ಆ ಸ್ಥಳದಿಂದ ಹೊರಟುಹೋಗಬೇಕು, ಎಂದು ಮರ್ಯಾದೆಯಿರುವದು. ಜಗದಾತ್ಮನಾದ ಮಹೇಶ-ತ್ರಿಪುರಾರಿಯು ಜಗಜ್ಜನಕನಿದ್ದು, ಸರ್ವರ ಹಿತಕರ್ತೃವಾಗಿರುವನು. ಅಂಥ ಆತನನ್ನು ನಿಂದಿಸುವ ಈ ಮಂದಮತಿ ದಕ್ಷನು ನನ್ನ ತಂದೆಯು; ಆತನ ವೀರ್ಯದಿಂದ ಉತ್ಪನ್ನಳಾದವಳು ನಾನು! ಆದ್ದರಿಂದ ಚಂದ್ರಮೌಳಿ—ವೃಷಕೇತುವನ್ನು ಹೃದಯದಲ್ಲಿ ಧಾರಣಮಾಡಿ ಕೂಡಲೆ ಈ ದೇಹವನ್ನು ತ್ಯಜಿಸುವೆನು" ಎಂದು ನುಡಿದು ಸತಿಯು ಯೋಗಾಗ್ನಿಯಿಂದ ದೇಹವನ್ನು ದಗ್ಧಮಾಡಿಕೊಂಡಳು. ಆಗ ಯಾವತ್ತು ಯಜ್ಞದಲ್ಲಿ ಹಾ ಹಾ ಕಾರವುಂಟಾಯಿತು. ಸತಿಯ ಮರಣವನ್ನು ಕೇಳಿ ಶಂಭುಗಣವು ಯಜ್ಞವಿಧ್ವಂಸ ಮಾಡತೊಡಗಿತು; ಅದನ್ನು ನೋಡಿ ಭೃಗುಋಷಿಯು ಯಜ್ಞದ ಸಂರಕ್ಷಣಮಾಡಿದನು. ಈ ಸುದ್ದಿಯು ಶಂಕರನಿಗೆ ಮುಟ್ಟಲು, ಆತನು ಕ್ರುದ್ಧನಾಗಿ ವೀರಭದ್ರನನ್ನು ಕಳಿಸಿದನು. ವೀರಭದ್ರನು ಹೋಗಿ ಯಜ್ಞವನ್ನು ವಿಧ್ವಂಸ ಮಾಡಿ, ಯಾವತ್ತು ದೇವತೆಗಳಿಗೆ ಯಥಾ ಯೋಗ್ಯವಾದ ಪ್ರಾಯಶ್ಚಿತ್ತವನ್ನು ಕೊಟ್ಟನು. ಶಂಕರನೊಡನೆ ವಿರೋಧಬಳಿಸುವವರಿಗೆ ಆಗತಕ್ಕ ಗತಿಯು ದಕ್ಷನಿಗೆ ಆಯಿತು. ಇದೆಲ್ಲ ಜಗತ್ತಿಗೆ ವಿದಿತವಾಗಿರುವದರಿಂದ ಅದನ್ನು ನಾನು ಸಂಕ್ಷೇಪದಿಂದ ಹೇಳಿರುವೆನು.

**ಹಿಮವಂತನಿಗೆ ನಾರದರ ಉಪದೇಶ:-** ಸತಿಯು ಮರಣ ಕಾಲದಲ್ಲಿ ಶ್ರೀಪತಿಯನ್ನು ಕುರಿತು—"ಜನ್ಮಜನ್ಮಾಂತರದಲ್ಲಿ ಶಿವಪದದಲ್ಲಿಯೇ ನನ್ನ ಪ್ರೀತಿಯಿರಬೇಕೆಂ"ದು ವರವು ಬೇಡಿಕೊಂಡದ್ದರಿಂದ, ಆಕೆಯು ಪಾರ್ವತಿಯು ದೇಹವನ್ನು ಹೊಂದಿ ಹಿಮಾಲಯನ ಮನೆಯಲ್ಲಿ ಹುಟ್ಟಿದಳು. ಅಂದಿನಿಂದ ಸರ್ವಸಂಪತ್ತುಗಳೂ, ಸಿದ್ಧಿ

ಗಳೂ ಹಿಮವಂತನಲ್ಲಿಗುಪ್ತರೂಪವಾಗಿಇರಹತ್ತಿದವು. ಅಲ್ಲಲ್ಲಿಮುನಿಜನರು ಪವಿತ್ರ ಆಶ್ರಮಗಳನ್ನು ಕಟ್ಟಿಕೊಂಡರು- ಹಿಮಾಲಯನು ಅವರಿಗೆ ಯೋಗ್ಯಸ್ಥಳಗಳನ್ನು ಕೊಟ್ಟನು. ಆ ಸುಂದರ ಪರ್ವತದಲ್ಲಿ ಯಾವಾಗಲೂ ಫಲ-ಪುಷ್ಪಯುಕ್ತಗಳಾದ ನಾನಾ ಪ್ರಕಾರದ ನೂತನ ವೃಕ್ಷಗಳು ಹುಟ್ಟಿದವು. ಅನೇಕ ಪ್ರಕಾರದ ರತ್ನದ ಖನಿಗಳು ಪ್ರಕಟವಾದವು- ಯಾವತ್ತು ನದಿಗಳು ಪುಣ್ಯಜಲದೊಡನೆ ಹರಿಯಹತ್ತಿದವು- ಪಕ್ಷಿಗಳೂ, ಮೃಗಗಳೂ, ಭ್ರಮರಗಳೂ ಸುಖದಿಂದ ನಲಿದಾಡಹತ್ತಿದವು. ಯಾವತ್ತು ಜೀವಗಳು ಪರಸ್ಪರ ವೈರಭಾವವನ್ನು ಮರೆತು ಎಲ್ಲವೂ ಹಿಮಾಲಯನನ್ನು ಪ್ರೀತಿಸ ತೊಡಗಿದವು- ತನ್ನ ಮನೆಯಲ್ಲಿ ಗಿರಿಜೆಯು ಹುಟ್ಟಿದ್ದರಿಂದ, ರಾಮಭಕ್ತಿಯಿಂದ ಮನುಷ್ಯನು ಶೋಭಿಸುವಂತೆ ಹಿಮಾಲಯನು ಶೋಭಿಸಹತ್ತಿದನು. ಆತನ ಮನೆಯೊಳಗೆ ನಿತ್ಯದಲ್ಲಿ ಹೊಸ ಹೊಸ ಮಂಗಲ ಕೃತ್ಯಗಳು ಆಗ ಹತ್ತಿದವು. ಬ್ರಹ್ಮಾದಿದೇವತೆಗಳೂ ಆತನ ಯಶಸ್ಸನ್ನು ಗಾಯನ ಮಾಡತೊಡಗಿದರು. ಇದೆಲ್ಲವನ್ನು ಕೇಳಿ ನಾರದ ಮುನಿಯು ಕೌತುಕದಿಂದ ಹಿಮಾಲಯನ ಮನೆಗೆ ಬಂದನು. ಆಗ ಹಿಮಾಲಯನು ಆ ಮುನಿಯನ್ನು ಬಹಳವಾಗಿ ಸನ್ಮಾನಿಸಿ, ಆತನನ್ನು ಶ್ರೇಷ್ಠವಾದ ಆಸನದಮೇಲೆ ಕುಳ್ಳಿರಿಸಿ ಹೆಂಡತಿಯೊಡನೆ ಆತನ ಪಾದ ಪ್ರಕ್ಷಾಲನ ಮಾಡಿ ಚರಣತೀರ್ಥವನ್ನು ಮನೆತುಂಬ ಪ್ರೋಕ್ಷಿಸಿದನು. ಹಿಮಾಲಯನು ತನ್ನ ಉಚ್ಚತರ ಭಾಗ್ಯವನ್ನು ಹೇಳಿಕೊಳ್ಳುತ್ತ, ಮಗಳನ್ನು ಕರೆದುಮುನಿಯಚರಣಗಳಮೇಲೆ ಹಾಕಿದನು- ಆಗಹಿಮಾಲಯನುಮುನಿಯನ್ನು ಕುರಿತು— "ತಾವುತ್ರಿಕಾಲಜ್ಞರಿದ್ದು ಸರ್ವಜ್ಞರಿರುವಿರಿ. ಇದಲ್ಲದೆ ತಮ್ಮ ಸಂಚಾರವು ಸರ್ವತ್ರದಲ್ಲಿರುವದು; ಆದ್ದರಿಂದ ಮುನಿಶ್ರೇಷ್ಠರೇ, ಈ ಕನ್ಯೆಯ ಗುಣದೋಷಗಳನ್ನು ತಾವು ವಿಚಾರಪೂರ್ವಕವಾಗಿ ನನಗೆ ಹೇಳಬೇಕು" ಎಂದು ಪ್ರಾರ್ಥಿಸಿದನು.

ಹಿಮವಂತನ ಈ ಪ್ರಾರ್ಥನೆಯನ್ನು ಕೇಳಿ ನಾರದನು ನಕ್ಕು ಮೃದುವೂ, ಗೂಢವೂ, ಆದ ಮಾತುಗಳಿಂದ—"ಹಿಮವಂತನೇ, ಈನಿನ್ನ ಮಗಳು ಸರ್ವ ಸದ್ಗುಣಗಳ ಖನಿಯಾಗಿರುವಳು. ಈಕೆಯು ಸುಂದರಿಯೂ, ಜಾತ್ಯಾ ಸುಶೀಲೆಯೂ, ಸುಜ್ಞಳೂ ಆಗಿರುವಳು. ಈಕೆಯು ಅಂಬಿಕಾ, ಭವಾನಿ, ಉಮಾ ಎಂಬ ಹೆಸರುಗಳಿಂದ ಪ್ರಖ್ಯಾತಳಾಗುವಳು. ಸರ್ವತೋಪರಿ ಸುಲಕ್ಷಣವಾಗಿರುವ ಈ ನಿನ್ನ ಕನ್ಯೆಯು ಪತಿಗೆ ಸರ್ವದಾ ಪ್ರಿಯಕರಳಾಗುವಳು. ಈಕೆಯ ಸೌಭಾಗ್ಯವು ಯಾವಾಗಲೂ ಅಖಂಡವಾಗಿ ಉಳಿಯುವದು- ಈಕೆಯ ಯೋಗದಿಂದ ಈಕೆಯ ತಾಯಿತಂದೆಗಳಿಗೆ ಯಶಃಪ್ರಾಪ್ತಿಯಾಗುವದು. ಈಕೆಯು ತ್ರೈಲೋಕ್ಯಕ್ಕೂ ಪೂಜ್ಯಳಾಗುವಳು. ಈಕೆಯ ಸೇವೆಯಿಂದ ಯಾವದೂ ದುರ್ಲಭವಾಗಲಿಕ್ಕಿಲ್ಲ. ಬ್ರಹ್ಮಾಂಡದೊಳಗಿನ ಸರ್ವಸ್ತ್ರೀಯರು ಈಕೆಯ ನಾಮಸ್ಮರಣದಿಂದಲೇ ಪಾತಿವ್ರತ್ಯರೂಪ ಖಡ್ಗಧಾರೆಯನ್ನು ಆರೋಹಿಸುವರು. ಹಿಮವಂತಾ, ನಿನ್ನ ಕನ್ಯೆಯು ಹೀಗೆ ಸುಲಕ್ಷಣಸಂಪನ್ನೆಯಾಗಿದ್ದರೂ, ಈಕೆಯಬಂದರಡು

ಕುಲಕ್ಷಣಗಳನ್ನು ಹೇಳುವೆನು ಕೇಳು. ನಿರ್ಗುಣನೂ, ಮಾನರಹಿತನೂ, ಮಾತಾಪಿತೃಹೀನನೂ, ಉದಾಸೀನನೂ, ನಿಶ್ಚಿಂತನೂ, ಯೋಗಿಯೂ, ಜಟಾಧಾರಿಯೂ, ನಿಷ್ಕಾಮನೂ, ನಗ್ನನೂ, ಅಮಂಗಲವೇಷಧಾರಿಯೂ ಆದ ಪತಿಯು ಈಕೆಗೆ ದೊರೆಯಬೇಕೆಂದು ಈಕೆಯ ಹಸ್ತರೇಷೆಯಿಂದ ಗೊತ್ತಾಗುವದು " ಎಂದು ಹೇಳಿದನು. ನಾರದನ ಈಮಾತುಗಳು ಪ್ರತ್ಯಕ್ಷವಾಗಿಸಂಭವಿಸಲಿದೆಯೆಂದು ತಿಳಿದು, ಗಿರಿರಾಜನೂ, ಮೇನೆಯೂ ದುಃಖಿತರಾದರು. ಅವರ ಕಣ್ಣೊಳಗಿಂದ ದುಃಖಾಶ್ರುಗಳು ಉದುರಿದವು; ಆದರೆ ಗಿರಿಜೆಗೆ ಪರಮಾನಂದವಾಗಿ ಆಕೆಯ ಕಣ್ಣೊಳಗಿಂದ ಆನಂದಾಶ್ರುಗಳು ಉದುರಿದವು. ಈ ಮೂವರ ಕಣ್ಣೀರುಗಳ ಇಂಗಿತವು ನಾರದನಿಗೂ ಗೊತ್ತಾಗಲಿಲ್ಲ. ಗಿರಿರಾಜನು ಧೈರ್ಯದಿಂದ ನಾರದನನ್ನು ಕುರಿತು—ಹೇ ನಾಥನೇ, ಇದಕ್ಕೆ ಉಪಾಯವೇನು ಮಾಡಬೇಕೆಂಬದನ್ನು ಹೇಳಬೇಕು, ಎಂದು ಕೇಳಿಕೊಳ್ಳಲು, ನಾರದನು—ಹಿಮಾಚಲಾ, ವಿಧಿಲಿಖಿತವು ಯಾರಿಂದಲೂ ತಪ್ಪಿಸಲಾಗದು. ನಾನು ಹೇಳಿದಂತೆ ಪತಿಯು ಇವಳಿಗೆ ನಿಸ್ಸಂಶಯವಾಗಿ ದೊರಕುವನು; ಆದರೆ ಇದಕ್ಕೊಂದು ಉಪಾಯವನ್ನು ಹೇಳುವೆನು ಕೇಳು. ನಾನು ಹೇಳಿದ ವರನದೋಷಗಳೆಲ್ಲಶಿವನಲ್ಲಿರುವಹಾಗೆಅನುಮಾನವಾಗುತ್ತದೆ. ಆ ಶಂಕರನೊಡನೆ ಈಕೆಯ ವಿವಾಹವಾದರೆ ಸರ್ವರೂ ದೋಷಗಳನ್ನೇ ಗುಣಗಳಾಗಿ ಎಣಿಸುವರು. ಶ್ರೀಪತಿಯು ಶೇಷನ ಮಂಚದ ಮೇಲೆ ಮಲಗಿಕೊಳ್ಳುವನು; ಆದರೆ ಪಂಡಿತರು ಕೂಡ ಅದನ್ನು ದೋಷವಾಗಿ ಎಣಿಸುವದಿಲ್ಲ. ಅಗ್ನಿಯೂ ಸೂರ್ಯನೂ ಯಾವತ್ತು ರಸಗಳ ಶೋಷಣ ಮಾಡುವರು; ಆದರೆ ಅವರನ್ನು ಯಾರೂ ಮೂರ್ಖರೆಂದುಎಣಿಸುವದಿಲ್ಲ. ಗಂಗೆಯು ಪವಿತ್ರವಾಗಿಯೂ ಅಪವಿತ್ರವಾಗಿಯೂ ಇರುವ ಜಲವನ್ನು ಸ್ವೀಕರಿಸುವಳು; ಆದರೆ ಆಕೆಯನ್ನು ಅಪವಿತ್ರಳೆಂದು ಯಾರೂ ಅನ್ನುವದಿಲ್ಲ. ಹೀಗಿರಲು,ಅಗ್ನಿ—ಸೂರ್ಯ—ಗಂಗೆಯರಂತೆ ಸಮರ್ಥರಿಗಾದರೂ ದೋಷವಿಲ್ಲ. ಮೂರ್ಖಮನುಷ್ಯರು ಜ್ಞಾನದ ಅಭಿಮಾನದಿಂದ ತಾವೂ ಸಮರ್ಥರಂತೆ ಮಾಡುವ ಹವ್ಯಾಸಕ್ಕೆ ಹೋದರೆ, ಕಲ್ಪಪರ್ಯಂತವಾಗಿಅವರುನರಕದಲ್ಲಿ ಬೀಳುವರು.ಜೀವನು ಪರಮೇಶ್ವರನಿಗೆ ಸರಿಯಾಗುವನೋ?ಗಂಗಾಜಲದಿಂದ ಮಾಡಿದ ಹಲವು ವಿಧದ ಮದ್ಯಗಳಿದ್ದರೂ,ಸಂತರು ಎಂದೂ ಅವನ್ನು ಕುಡಿಯಲಾರರು. ಅದರಂತೆಯೇ ಜೀವನು ಈಶ್ವರಾಂಶನಿದ್ದರೂ ಅಜ್ಞಾನ ಮೂಲಕ ದೇಹಾಶ್ರಯ ಮಾಡಿದವನಾಗಿರುವದರಿಂದ ಆತನಿಗೆ ಈಶ್ವರತ್ವವು ಇರುವದಿಲ್ಲ. ಅದೇ ಮದ್ಯಗಳ ಪುನಃ ಗಂಗೆಯನ್ನು ಕೂಡಿದರೆ ಪವಿತ್ರವಾದ ಗಂಗಾ ಜಲವೇ ಆಗುವಂತೆ, ಈಶ್ವರಕೃಪೆಯಿಂದ ಜೀವನ ಅಜ್ಞಾನವು ನಷ್ಟವಾಗಿ ಜ್ಞಾನದಿಂದ ಸಚ್ಚಿದಾನಂದಾನುಭವವಾಯಿತೆಂದರೆ ಜೀವನಿಗೂ ಈಶತ್ವವುಪ್ರಾಪ್ತವಾಗುವದು.ಗಿರಿರಾಜಾ, ಭಗವಾನ್ ಶಂಭುವು ಸ್ವಾಭಾವಿಕವಾಗಿಯೇ ಸಾಮರ್ಥ್ಯವಂತನಾಗಿವರುವದರಿಂದ, ಆತನೊಡನೆ ನಿನ್ನ ಮಗಳ ವಿವಾಹವಾಗುವದು ಎಲ್ಲ ಬಗೆಯಿಂದಲೂ ಕಲ್ಯಾಣಪ್ರದವಾಗುವದು; ಆದರೆ ಶಂಭುವು

ಬಹು ಕಷ್ಟದಿಂದ ಪ್ರಸನ್ನನಾಗುವವನಿರುವನು. ನಿನ್ನ ಈ ಮಗಳು ತಪಶ್ಚರ್ಯವಮಾಡಿದರೆ ಬೇರೆ ವರಗಳ ಯೋಗವಿದ್ದರೂ ಅದನ್ನು ತಪ್ಪಿಸಿ ತಾನೇ ಈಕೆಯನ್ನು ಲಗ್ನವಾಗಲು ಶಂಕರನು ಸಮರ್ಥನಾಗಿರುವನು. ಶಿವಾರಾಧನೆಯ ಹೊರತು ಕೋಟ್ಯವಧಿ ಯೋಗ ವನ್ನಾಗಲಿ, ಜಪವನ್ನಾಗಲಿ ಮಾಡಿದರೂ ಇಚ್ಛಿತ ಫಲವು ಪ್ರಾಪ್ತವಾಗಲಾರದು. ಶಂಕರನ ಹೊರತು ಈಕೆಗೆ ಅನುರೂಪನಾದ ಬೇರೆವರನಿಲ್ಲವು.

**ಪಾರ್ವತಿಯ ತಪಶ್ಚರ್ಯೆ**--ಈ ಮೇರೆಗೆ ನುಡಿದು ನಾರದರು ಹರಿಸ್ಮರಣ ಮಾಡುತ್ತ, ಗಿರಿಜೆಯನ್ನು ಆಶೀರ್ವದಿಸುತ್ತ, "ಹೇ ಗಿರೀಶಾ, ಸಂಶಯಪಡಬೇಡ, ಇನ್ನು ಈಕೆಯ ಕಲ್ಯಾಣವಾಗುವದು," ಎಂದು ಹೇಳಿ ಸತ್ಯಲೋಕಕ್ಕೆ ಹೊರಟು ಹೋದರು. ನಾರದರ ಭವಿಷ್ಯವಾಣಿಯಿಂದ ಮೇನೆಗೆ ಅಸಮಾಧಾನವಾದರೂ ಗಿರಿರಾಜನು ಆಕೆಯನ್ನು ಸಮಾಧಾನಪಡಿಸಲು, ಆಕೆಯು ಪಾರ್ವತಿಯ ಬಳಿಗೆ ಹೋದಳು. ಮಗಳು ಕಣ್ಣಿಗೆ ಬಿದ್ದಕೂಡಲೆ ಮೇನೆಯ ಕಣ್ಣುಗಳು ಅಶ್ರುಪೂರ್ಣವಾದವು. ಆಕೆಯು ಮಮತೆಯಿಂದ ಮಗಳನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಮೇಲಿಂದ ಮೇಲೆ ಆಕೆಯನ್ನು ಅಪ್ಪಿಕೊಂಡಳು. ಕಂಠವು ಬಿಗಿದು ಬಂದದ್ದರಿಂದ ಆಕೆಯಿಂದ ಮಾತುಗಳು ಹೊರಡದಾದವು. ಆಗ ಜಗನ್ಮಾತೆಯಾದ ಸರ್ವಜ್ಞೆ-ಭವಾನಿಯು ತಾಯಿಗೆ ಸುಖವನ್ನುಂಟುಮಾಡುವದಕ್ಕಾಗಿ ಮೃದುವಾಣಿಯಿಂದ ಆಕೆಯನ್ನು ಕುರಿತು—ಅವ್ವಾ ನಾನು ಒಂದು ಸ್ವಪ್ನವನ್ನು ಕಂಡೆನು, ಅದನ್ನು ನಿನಗೆ ಹೇಳುವೆನು ಕೇಳು. ಒಬ್ಬ ಸುಂದರ ಗೌರವರ್ಣದ ಬ್ರಾಹ್ಮಣಶ್ರೇಷ್ಠನು ಸ್ವಪ್ನದಲ್ಲಿ ನನ್ನನ್ನು ಕುರಿತು—ಎಲೈ ಗಿರಿಜೆ, ತಪಸ್ಸನ್ನಾಚರಿಸುವದಕ್ಕೆ ಹೋಗು. ನಾರದನು ವಿಚಾರಪೂರ್ವಕವಾಗಿ ಹೇಳಿರುವನು. ಅವನ ಮಾತು ಸತ್ಯವಿರುತ್ತದೆ, ಇದಲ್ಲದೆ ತಪವು ಸುಖಪ್ರದವೂ, ದುಃಖದೋಷನಾಶಕವೂ ಆಗುವದೆಂದು ನಿನ್ನ ತಾಯಿತಂದೆಗಳೂ ಅಭಿಪ್ರಾಯಪಡುವರು. ಬ್ರಹ್ಮ-ವಿಷ್ಣು-ಮಹೇಶ್ವರರು ತಪಸ್ಸಿನಿಂದಲೇ ತಮ್ಮ ಸೃಷ್ಟಿ-ಸ್ಥಿತಿ-ಲಯರೂಪಕಾರ್ಯಗಳನ್ನು ಮಾಡುವರು. ಹೀಗೆ ಸಮಸ್ತ ಸೃಷ್ಟಿಗೆ ತಪಸ್ಸಿನ ಆಧಾರವೇ ಇರುತ್ತದೆಂಬ ನಿರ್ಧಾರದಿಂದ ನೀನು ತಪಸ್ಸನ್ನಾಚರಿಸುವದಕ್ಕೆ ಹೋಗು, ಎಂದು ಹೇಳಿದನು.

ಮಗಳ ಮಾತನ್ನು ಕೇಳಿ ಮೇನೆಗೆ ಆಶ್ಚರ್ಯವಾಯಿತು. ಆಕೆಯು ಪತಿಗೆ ಎಲ್ಲ ವೃತ್ತಾಂತವನ್ನು ತಿಳಿಸಲು, ಅವರು ಮಗಳನ್ನು ತಪಸ್ಸನ್ನಾಚರಿಸುವದಕ್ಕಾಗಿ ಕಳುಹಿದರು. ಆಗ ಅವರಿಗೂ ಗಿರಿಜೆಯ ಸಖಿಯರಿಗೂ ಬಹಳ ದುಃಖವಾಯಿತು. ಅಷ್ಟರಲ್ಲಿ ವೇದಗಿರಾಮುನಿಗಳು ಬಂದು ಅವರಿಗೆ ಪಾರ್ವತಿಯ ಮಹಿಮೆಯನ್ನು ಹೇಳಲು, ಎಲ್ಲರೂ ಸಮಾಧಾನಪಟ್ಟರು. ಉಮೆಯು ಪ್ರಾಣಪತಿಯ ಚರಣಗಳನ್ನು ಹೃದಯದಲ್ಲಿ ಧರಿಸಿ ಅರಣ್ಯಕ್ಕೆ ತಪಸ್ಸನ್ನಾಚರಿಸುವದಕ್ಕಾಗಿ ಹೊರಟಳು. ಆಕೆಯ ಅತ್ಯಂತ ಸುಕುಮಾರ ದೇಹವು ತಪಸ್ಸಿಗೆ ಯೋಗ್ಯವಾದದಿದ್ದಿಲ್ಲ. ಆದರೂ ಪತಿಯ ಚರಣಗ

ಳನ್ನು ಸ್ಮರಿಸಿ ಆಕೆಯು ಭೋಗದತ್ಯಾಗವಮಾಡಿದಳು. ಶಿವಚರಣದಲ್ಲಿ ದಿನದಿನಕ್ಕೆ ಹೊಸ ಹೊಸ ಪ್ರೇಮವು ಉತ್ಪನ್ನವಾಗಹತ್ತಿದ್ದರಿಂದ, ಆಕೆಯ ಮನಸ್ಸು ಶಿವಚರಣದಲ್ಲಿ ಮಗ್ನವಾಗಿ ಆಕೆಗೆ ದೇಹದ ವಿಸ್ಮೃತಿಯಾಯಿತು. ಆಕೆಯು ಸಾವಿರ ವರ್ಷಗಳ ವರೆಗೆ ಫಲ-ಮೂಲ ಗಳನ್ನು ಭಕ್ಷಿಸಿದಳು. ನೂರು ವರ್ಷಗಳನ್ನು ವನಸ್ಪತಿ ಭಕ್ಷಣದಿಂದ ಕಳೆದಳು. ಕೆಲವು ದಿನಗಳನ್ನು ಜಲಪಾನದಿಂದಲೂ, ವಾಯುಭಕ್ಷಣದಿಂದಲೂ ಆಕೆಯು ಕಳೆದಳು. ಕೆಲವು ದಿನಗಳಂತೂ ಆಕೆಯು ನಿರಾಹಾರದಿಂದಲೇ ಇದ್ದಳು. ಭೂಮಿಯಲ್ಲಿ ಬಿದ್ದು ಒಣಗಿ ಹೋಗುತ್ತಿರುವ ಎಲೆಗಳನ್ನು ತಿಂದು ಮೂರು ಸಾವಿರ ವರ್ಷಗಳನ್ನು ಕಳೆದಳು. ತಿರುಗಿ ಆ ಶುಷ್ಕಪರ್ಣಗಳನ್ನೂ ಬಿಟ್ಟುಕೊಟ್ಟಳು. ಅಂದಿನಿಂದ ಆಕೆಗೆ "ಅಪರ್ಣಾ" ಎಂಬ ಹೆಸರುಂಟಾಯಿತು. ಹೀಗೆ ತಪಸ್ಸಿನಿಂದ ಉಮೆಯು ಅತ್ಯಂತ ಕೃಶವಾದದ್ದನ್ನು ನೋಡಿ ಆಕಾಶದಲ್ಲಿ ಗಂಭೀರವಾದ ದೇವವಾಣಿಯು ಗಿರಿಜೆಯನ್ನು ಕುರಿತು—"ಎಲೈ ಗಿರಿ ರಾಜಕುಮಾರೀ, ಕೇಳು. ನಿನ್ನ ಮನೋರಥವು ಸಫಲವಾಯಿತು. ಯಾವತ್ತು ಅಸಹ್ಯವಾದ ಕ್ಲೇಶಗಳನ್ನು ಇನ್ನು ಬಿಟ್ಟುಬಿಡು. ಇನ್ನು ನಿಶ್ಚಯವಾಗಿ ತ್ರಿಪುರಾರಿಯು ನಿನಗೆ ಪ್ರಾಪ್ತನಾಗುವನೆಂದು ನಂಬು. ನಿನ್ನ ಹಾಗೆ ಕಠಿಣ ತಪಸ್ಸನ್ನು ಈವರೆಗೆ ಯಾರೂ ಮಾಡಲಿಲ್ಲ. ಈ ಬ್ರಹ್ಮಪ್ರಸಾದವಾಣಿಯು ಸದಾ ಸತ್ಯವೂ, ಪವಿತ್ರವೂ ಆದ್ದರಿಂದ ವಿಶ್ವಾಸವು ಹೃದಯದಲ್ಲಿರಲಿ. ತಂದೆಯು ಕರೆಯಬಂದಾಗ ಹಟಹಿಡಿಯದೆ ಮನೆಗೆ ಹೋಗು. ನಿನಗೆ ಸಪ್ತಋಷಿಗಳ ದರ್ಶನವಾದಾಗ ಈ ದೇವವಾಣಿಯು ಪ್ರಮಾಣಭೂತವೆಂದು ನಂಬು" ಎಂದು ಬೋಧಿಸಲು, ಅದನ್ನು ಕೇಳಿ ಗಿರಿಜೆಯು ಹರ್ಷದಿಂದ ರೋಮಾಂಚಿತಳಾದಳು!

**ಪಾರ್ವತಿಯು ದೃಢತರ ಶಿವಭಕ್ತಿ:**— ಇತ್ತ ಸತಿಯು ಪ್ರಾಣತ್ಯಾಗ ಮಾಡಲು, ಆ ಶಿವನ ಮನಸ್ಸು ವಿರಕ್ತವಾಯಿತು. ಆತನು ಯಾವಾಗಲೂ ರಾಮನಾಮವನ್ನು ಜಪಿಸುತ್ತ, ಅಲ್ಲಲ್ಲಿ ರಾಮನ ಕಥೆಯನ್ನು ಕೇಳುತ್ತ ಪೃಥ್ವಿಯ ಮೇಲೆ ಸ್ವಚ್ಛಂದದಿಂದ ಸಂಚಾರ ಮಾಡತೊಡಗಿದನು. ಆತನು ಒಮ್ಮೊಮ್ಮೆ ಮುನಿಗಳಿಗೆ ಜ್ಞಾನೋಪದೇಶವನ್ನು ಮಾಡುತ್ತಿದ್ದನು; ಒಮ್ಮೊಮ್ಮೆ ರಾಮಕಥೆಯನ್ನು ವರ್ಣಿಸುತ್ತಿದ್ದನು. ಆತನು ಸ್ವತಃ ನಿಷ್ಕಾಮನಾಗಿದ್ದರೂ, ಆ ಸರ್ವಜ್ಞಪ್ರಭು-ಭಗವಂತನು ಭಕ್ತವಿರಹ ದುಃಖದಿಂದ ದುಃಖಿತನಾಗುತ್ತಿದ್ದನು. ಹೀಗೆ ಬಹುಕಾಲ ಕಳೆದು ಹೋಗುತ್ತಿರಲು, ಆತನ ಪ್ರೀತಿಯು ನಿತ್ಯರಾಮರೂಪದಲ್ಲಿ ಹೊಸ ಹೊಸದಾಗಿ ಬೆಳೆಯಹತ್ತಿತು. ಇತ್ತ ಶಂಕರನ ಹೃದಯದೊಳಗಿನ ನಿಶ್ಚಲ ಭಕ್ತಿಯ ಮರ್ಯಾದೆಯನ್ನೂ, ಅಂದರೆ ಸತಿಯೇ ಪಾರ್ವತಿಯ ರೂಪದಿಂದ ಅವತರಿಸಿದ್ದರೂ ಆಕೆಯು ತನಗೆ ಮದುವೆಯಾಗಲಿಕ್ಕೆ ಯೋಗ್ಯಳಲ್ಲವೆಂಬ ಮರ್ಯಾದೆಯನ್ನು ನೋಡಿ, ಕೃತಜ್ಞನೂ, ದಯಾಳುವೂ, ರೂಪಶೀಲನಿಧಾನನೂ, ಅಮಿತ ತೇಜಸ್ವಿಯೂ, ಆದ ಶ್ರೀ ರಾಮಚಂದ್ರನು ಪ್ರಕಟನಾಗಿ ಶಂಕರ

ನನ್ನು ಹಲವು ಪ್ರಕಾರದಿಂದ ಪ್ರಶಂಸೆ ಮಾಡಿ ಅತನನ್ನು ಕುರಿತು—"ನಿಮ್ಮ ಹೊರತು ಇಂಥವ್ರತವನ್ನು ಕೊನೆಗಾಣಿಸುವ ಸಮರ್ಥರುಯಾರಿರುವರು? ಈಗ ನನ್ನ ವಿನಂತಿಯನ್ನು ಲಾಲಿಸಬೇಕು. ನನ್ನ ಮೇಲೆ ತಮ್ಮ ಪ್ರೇಮವಿದ್ದದ್ದು ನಿಜವಾಗಿದ್ದರೆ,ತಾವುಹೋಗಿ ಪಾರ್ವತಿಯನ್ನು ಲಗ್ನವಾಗಬೇಕೆಂಬದಿಷ್ಟೇ ನನ್ನ ಬೇಡಿಕೆಯು, ಅನ್ನಲು, ಶಿವನು-"ಇದು ಅನುಚಿತವಾಗಿದ್ದರೂ ಸ್ವಾಮಿಯ ಅಪ್ಪಣೆಯನ್ನು ಮೀರುವದು ಶಕ್ಯವಿಲ್ಲ ಸ್ವಾಮಿನ್, ತಮ್ಮ ಆಜ್ಞೆಯನ್ನು ಶಿರಸಾವಂದ್ಯವಾಗಿ ಭಾವಿಸಿ ಅದರಂತೆ ವರ್ತಿಸುವದೇ ನನ್ನ ಪರಮ ಧರ್ಮವಾಗಿರುವದು. ತಾಯಿತಂದೆಗಳು, ಗುರುಗಳು ಇವರ ಅಪ್ಪಣೆಯನ್ನು ಶ್ರೇಯಸ್ಕರವೆಂದು ತಿಳಿದು ವಿಚಾರಮಾಡದಲೆ ಪಾಲನಮಾಡಬೇಕು. ಮಹಾರಾಜ, ತಮ್ಮ ಅಪ್ಪಣೆಯು ನನಗೆ ಶಿರಸಾಮಾನ್ಯವಾಗಿರುವದು," ಎಂದು ಹೇಳಿದನು. ಶಿವನ ಮಾತುಗಳನ್ನು ಕೇಳಿ ಶ್ರೀ ರಾಮನು ಸಂತುಷ್ಟನಾಗಿ ಅಂತರ್ಧಾನ ಹೊಂದಿದನು. ಅದೇ ಮೂರ್ತಿಯನ್ನು ಶಂಕರನು ಹೃದಯದಲ್ಲಿ ಧಾರಣಮಾಡಿದನು. ಅದೇ ಕಾಲದಲ್ಲಿ ಸಪ್ತರ್ಷಿಗಳು ಶಿವನ ದರ್ಶನಕ್ಕಾಗಿ ಬರಲು, ಶಂಕರನು ಅವರನ್ನು ಕುರಿತು ಸುಂದರವಾಣಿಯಿಂದ— ಎಲೈ ಋಷಿಗಳಿರಾ, ನೀವು ಪಾರ್ವತಿಯ ಬಳಿಗೆ ಹೋಗಿ ಆಕೆಯ ಪ್ರೇಮದ ಪರೀಕ್ಷೆಯನ್ನು ಮಾಡಿರಿ; ಆ ಮೇಲೆ ಹಿಮಾಲಯನಿಗೆ ಹೇಳಿ,ಆಕೆಯನ್ನು ಮನೆಗೆ ಕಳಿಸಿ, ಆಕೆಯ ಸಂಶಯವನ್ನು ದೂರಮಾಡಿರಿ, ಎಂದು ಹೇಳಿದನು.

ಸಪ್ತಋಷಿಗಳು ಪಾರ್ವತಿಯ ಬಳಿಗೆ ಹೋದರು. ಪಾರ್ವತಿಯ ಸ್ಥಿತಿಯನ್ನು ನೋಡಿ ಅವರಿಗೆ ಬಹಳ ಆಶ್ಚರ್ಯವಾಯಿತು. ಆ ಲೋಕಮಾತೆಯು ಅವರಿಗೆ ಮೂರ್ತಿಮಂತ ತಪಶ್ಚರ್ಯವಾಗಿಯೇ ತೋರಿದಳು. ಆಗ ಋಷಿಗಳು ಉಮೆಯನ್ನು ಕುರಿತು— ಎಲೈ ಗಿರಿಕನ್ಯೇ, ಕೇಳು. ನೀನು ಈ ಉಗ್ರತಪಶ್ಚರ್ಯವನ್ನು ಯಾವ ಉದ್ದೇಶದಿಂದ ಮಾಡುವೆ? ನೀನು ಯಾರನ್ನು ಆರಾಧಿಸುತ್ತಿರುವೆ! ನಿನಗೆ ಬೇಕಾಗಿರುವದಾದರೂ ಏನು? ನಮಗೆ ನಿನ್ನ ಮನಸ್ಸಿನೊಳಗಿನ ಹಿತದ ಮಾತನ್ನು ಯಾಕೆ ತಿಳಿಸುವದಿಲ್ಲ! ಎಂದು ಕೇಳಲು, ಗಿರಿಜೆಯು— ನನ್ನ ಮನಸ್ಸಿನೊಳಗಿದ್ದದ್ದನ್ನು ಆಡಿತೋರಿಸಲಿಕ್ಕೆ ನನಗೆ ಬಹಳ ಸಂಕೋಚವಾಗುವದು. ನನ್ನ ಮೂರ್ಖತನವನ್ನು ಕೇಳಿಯೇ ನಿಮಗೆ ನಗೆ ಬಂದೀತು. ನನ್ನ ಮನಸ್ಸು ಹಟಮಾರಿಯಾಗಿರುವದು; ಇದು ಎರಡನೆಯವರ ಉಪದೇಶವನ್ನು ಕೇಳದ ಹಾಗಾಗಿರುವದು; ಅದು ನೀರಿನ ಮೇಲೆ ಗೋಡೆಯನ್ನು ಕಟ್ಟತೊಡಗಿರುವದು; ಎಲೈ ಮುನಿಗಳಿರಾ, ನಾನು ನಾರದರ ಮಾತಿನ ಮೇಲೆ ವಿಶ್ವಾಸವಿಟ್ಟು ರೆಕ್ಕೆಗಳಿಲ್ಲದೆಯೇ ಹಾರಲಿಕ್ಕೆ ಯತ್ನಿಸುತ್ತಿರುವೆನು. ನನ್ನ ಅವಿಚಾರವನ್ನು ನೋಡಿರಿ. ಶಂಕರನು ನನ್ನ ಪತಿಯಾಗಬೇಕೆಂದು ನಾನು ಯಾವಾಗಲೂ ಇಚ್ಛಿಸುತ್ತಿರುವೆನು, ಎಂದು ಹೇಳಿದಳು. ಗಿರಿಜೆಯ ಈ ಮಾತುಗಳನ್ನು ಕೇಳಿ ಋಷಿಗಳು ನಕ್ಕು ಆಕೆಯನ್ನು ಕುರಿತು—ಅಪರ್ಣೇ, ನಿನ್ನ ದೇಹವು ಪರ್ವತದಿಂದ ಉತ್ಪನ್ನವಾಗಿರುವದರಿಂದ, ನೀನೂ ಜಡಳೇ ಆಗಿರುವೆ! ನಾರದನ ಉಪದೇಶವನ್ನು ಕೇಳಿ ಯಾವನಿಗೆ

ಯಾರಾದರೂ ಮನೆತನಮಾಡಿಕೊಂಡು ಸುಖದಿಂದ ಇರುವರೇನು? ದಕ್ಷಪುತ್ರರನ್ನು ಕುರಿತು ಆತನು ಬೋಧಮಾಡಲು, ಅವರು ವಿರಕ್ತರಾಗಿ ತಿರುಗಿ ಮನೆಯ ಮಾರ್ಗವನ್ನೇ ಕಾಣಲಿಲ್ಲ; ಚಿತ್ರಕೇತುರಾಜನ ಮನೆಯನ್ನೂ ನಾರದನೇ ಬಟ್ಟಬಯಲು ಮಾಡಿದನು; ಹಿರಣ್ಯಕಶಿಪುವಿನ ಗತಿಯಾದರೂ ಹೀಗೆಯೇ ಆಯಿತು. ಗಂಡಸಾಗಲೀ ಹೆಂಗಸಾಗಲಿ ನಾರದನ ಉಪದೇಶವನ್ನು ಕೇಳಿದರೆ ಅವರು ಮನೆಮಾರು ಬಿಟ್ಟು ಭಿಕ್ಷುಕರಾಗಲೇಬೇಕು. ನಾರದನು ಮನಸ್ಸಿನಿಂದ ಕಪಟಿಯಾಗಿದ್ದು, ವೇಷದಿಂದ ಸಾಧುವಾಗಿರುವನು. ನಾವು ಅವನ ನೆಲೆಯನ್ನು ಪೂರಾ ಬಲ್ಲೆವು. ಎಲ್ಲರನ್ನೂ ತನ್ನಂತೆಯೇ ಮಾಡಿಕೊಳ್ಳುವದೊಂದು ಉತ್ಸಾಹವು ಆವನಿಗೆ ಬಹಳವಾಗಿ ಇರುತ್ತದೆ. ನೀನು ಅಂಥವನ ಮಾತಿನಮೇಲೆ ವಿಶ್ವಾಸವಿಟ್ಟು, ನಿತ್ಯಉದಾಸೀನನೂ, ನಿರ್ಗುಣನೂ, ನಿಶ್ಶಂಕನೂ, ಕುತ್ಸಿತವೇಷಧಾರಿಯೂ, ನರಕಪಾಲಧರಿಸುವವನೂ, ಕುಲಹೀನನೂ, ವಸ್ತ್ರಹೀನನೂ, ಸರ್ಪಗಳನ್ನು ಧರಿಸುವವನೂ ಆದ ಪತಿಯನ್ನು ಇಚ್ಛಿಸುವದೇನು? ಅಂಥ ಪತಿಯು ಪ್ರಾಪ್ತವಾದರೆ ಸುಖಿನಿಯಾಗುವದೆಂಬುದನ್ನು ನೀನೇ ಹೇಳು. ಆ ಠಕ್ಕ ಶಿವನ ಮಾತುಗಳಿಗೆ ನೀನು ಒಳ್ಳೇ ಮರುಳಾದೆ! ಶಿವನು ಸತಿಯ ಲಗ್ನ ಮಾಡಿಕೊಂಡು ತಿರುಗಿ ಆಕೆಯನ್ನು ಹೊಂಗೆ ಯಲಕ ಆಕೆಯ ವಧ ಮಾಡಿಸಿದ್ದು ಜಗತ್ತಿಗೇ ಗೊತ್ತಿರುವದು. ಈಗಂತೂ ಶಂಭುವು ಸುಖದಿಂದ ನಿದ್ರೆ ಮಾಡುತ್ತಿರುವನು; ಯಾಕಂದರೆ ಆತನ ಮನಸ್ಸಿಗೆ ಯಾತರ ಉದ್ವೇಗವು ಉಳಿದಿರುವದಿಲ್ಲ. ಭಿಕ್ಷೆ ಬೇಡುವನು, ಹೊಟ್ಟೆ ತುಂಬಿಕೊಳ್ಳುವನು. ಮೂಲ ಸ್ವಭಾವದಿಂದಲೇ ಬರಿಗೈಬಂಟನಾಗಿರುವ ಆತನಿಗೆ ಮನೆಯಲ್ಲಿ ಹೆಂಡತಿಯಿರುವದು ಎಂದಾದರೂ ತಡೆಯಬಹುದೇ? ಇನ್ನಾದರೂ ನಾವು ಹೇಳುವದನ್ನು ಕೇಳು. ನಾವು ನಿನ್ನ ಸಲುವಾಗಿ ಉತ್ತಮ ವರವನ್ನು ನೋಡಿ ಇಟ್ಟಿದ್ದೇವೆ. ಅತಿ ಸುಸ್ವರೂಪನೂ, ಪವಿತ್ರನೂ, ಸುಖಕರನೂ, ಸುಶೀಲನೂ, ಸದಾಸತ್ಯನೂ, ನಿರ್ದೋಷನೂ, ಸಕಲ ಸದ್ಗುಣಗಳ ಖನಿಯೂ, ವೈಕುಂಠಪುರನಿವಾಸಿಯೂ, ಲಕ್ಷ್ಮೀಕಾಂತನೂ ಆದ ಪತಿಯನ್ನು ತಂದುಕೊಂಡು ಬಂದು ನಿನಗೆ ಭೆಟ್ಟಿಮಾಡಿಸುವೆವು, ಎಂದು ಹೇಳಿದರು.

ಋಷಿಗಳ ಈ ಮಾತುಗಳನ್ನು ಕೇಳಿ ಭವಾನಿಯು ನಕ್ಕು—ಮುನಿವರ್ಯರೇ, ಈ ದೇಹವು ಗಿರಿಸಂಭೂತವೆಂದು ನೀವು ಹೇಳಿದ್ದು ಯಥಾರ್ಥವೇ ಸರಿ. ಪ್ರಾಣಹೋದರೂ ಚಿಂತೆಯಿಲ್ಲ, ನನ್ನ ನಿಗ್ರಹವು ಮಾತ್ರ ಪರ್ವತದಂತೆ ಚಲಿಸದೆ ಇರಲಿ. ನಾರದರ ಅಪ್ಪಣೆಯನ್ನು ನಾನು ಎಂದೂ ಮೀರುವದಿಲ್ಲ. ನನ್ನ ಮನೆತನವು ಛಂದಕ್ಕೆ ಬರಲಿ, ಅಥವಾ ಅದು ಹಾಳಾಗಿ ಹೋಗಲಿ. ನನ್ನ ನಿರ್ಧಾರವನ್ನು ಮಾತ್ರ ಬಿಡಲಾರೆನು. ಗುರುವಾಕ್ಯದಲ್ಲಿ ವಿಶ್ವಾಸವಿಲ್ಲದವರಿಗೆ ಸ್ವಪ್ನದಲ್ಲಿಯೂ ಸುಖ ಅಥವಾ ಸಿದ್ಧಿಯು ಪ್ರಾಪ್ತವಾಗುತ್ತಿರುವದಿಲ್ಲ. ಮಹಾದೇವನು ಸರ್ವ ದುರ್ಗುಣಗಳ ಖನಿಯಾಗಿರಬಹುದು, ವಿಷ್ಣುವು ಸರ್ವಸದ್ಗುಣಗಳ ಭಾಂಡಾರವಾಗಿರಬಹುದು; ಆದರೆ ಯಾರ

ಯಜ್ಞದಲ್ಲಿ ದೇಹವಿಸರ್ಜನ ಮಾಡಿದ ಸತಿಯೇ ಈಗ ಹಿಮಾಲಯನ ಮನೆಯಲ್ಲಿ ಹುಟ್ಟಿರುವಳು. ಶಂಭು ಪತಿಯಾಗಬೇಕೆಂದು ಆಕೆಯು ತಪಸ್ಸನ್ನು ಮಾಡಿರುವಳು; ಆದರೆ ಶಿವನು ಸರ್ವಸಂಗಪರಿತ್ಯಾಗಮಾಡಿ ಸಮಾಧಿಯಲ್ಲಿರುವದರಿಂದ, ಈ ಪ್ರಸಂಗದಲ್ಲಿ ಬಹಳ ಅಯೋಗವಿದ್ದಾಗ್ಯೂ ನನ್ನದೊಂದು ಮಾತನ್ನು ನೀವು ಕೇಳಿರಿ. ನೀವು ಹೋಗಿ ಕಾಮನನ್ನು ಶಿವನಕಡೆಗೆ ಕಳಿಸಿರಿ. ಆತನು ಶಂಕರನ ಮನಸ್ಸನ್ನು ಕ್ಷೋಭಿಸುವನು. ಆ ಮೇಲೆ ನಾವು ಹೋಗಿ ಶಿವನಿಗೆ ನಮಸ್ಕಾರಮಾಡಿ ಒತ್ತಾಯದಿಂದ ಲಗ್ನ ಮಾಡಿಕೊಳ್ಳುವಂತೆ ಮಾಡುವೆವು. ಇದರಿಂದ ದೇವತೆಗಳೆಲ್ಲರ ಕಲ್ಯಾಣವಾಗುವದು, ಎಂದು ಹೇಳಲು, ಎಲ್ಲರಿಗೂ ಈ ಆಲೋಚನೆಯು ಸಮ್ಮತವಾಯಿತು. ದೇವತೆಗಳು ತಮ್ಮ ಕಾರ್ಯಕ್ಕಾಗಿ ಕಾಮದೇವನನ್ನು ಒಳ್ಳೆವಾಗಿ ಸ್ತುತಿಸಲು, ಆ ವಿಷಮಬಾಣಧಾರಿ-ಮೀನಧ್ವಜ– ಕಾಮದೇವನು ಪ್ರಕಟವಾದನು. ಆಗ ದೇವತೆಗಳು ಆತನಿಗೆ ತಮ್ಮ ಸಂಕಟವನ್ನು ನಿವೇದಿಸಿದರು. ಅದನ್ನು ಕೇಳಿ ಮದನನು ಮನಸ್ಸಿನಲ್ಲಿ ವಿಚಾರಮಾಡಿ ನಕ್ಕು ದೇವತೆಗಳನ್ನು ಕುರಿತು— ಶಂಕರನೊಡನೆ ವಿರೋಧ ಬೆಳಿಸುವ ನನ್ನ ಕಲ್ಯಾಣವಾಗಲಾರದು; ಆದರೂ ನಾನು ನಿಮ್ಮ ಕಾರ್ಯಮಾಡುವೆನು. ಶ್ರುತಿಯಲ್ಲಿ ಪರೋಪಕಾರವು ಶ್ರೇಷ್ಠವಾದ ಧರ್ಮವೆಂದು ಹೇಳಿರುವದು. ಪರೋಪಕಾರಕ್ಕಾಗಿ ದೇಹತ್ಯಾಗಮಾಡುವವರನ್ನು ಸಂತರು ಕೂಡ ಶ್ಲಾಘಿಸುವರು.

ಹೀಗೆ ನುಡಿದು ಕಾಮದೇವನು ಎಲ್ಲರನ್ನು ವಂದಿಸಿ ಕೈಯಲ್ಲಿ ಪುಷ್ಪಬಾಣವನ್ನು ಸಜ್ಜುಮಾಡಿ ಸೈನ್ಯದೊಡನೆ ಹೊರಟನು. ಹಾದಿಯಲ್ಲಿ ಹೋಗುತ್ತಿರುವಾಗ ಮದನನು ತನ್ನೊಳಗೆ– "ಶಿವನೊಡನೆ ಶತ್ರುತ್ವ ಬೆಳಿಸುವದರಿಂದ ನನಗೆ ಮರಣವು ನಿಶ್ಚಯವಾಗಿ ಕಟ್ಟಿಟ್ಟದ್ದಿರಿ" ಎಂದು ಆಲೋಚಿಸಿ ತನ್ನ ಶಕ್ತಿಯನ್ನು ವಿಸ್ತರಿಸಿ ಸಮಸ್ತ ಜಗತ್ತನ್ನು ಸ್ವಾಧೀನಪಡಿಸಿಕೊಂಡನು. ಮೀನಕೇತು–ಮದನನು ಕೋಪಿಸಲು, ಕ್ಷಣಾರ್ಧದಲ್ಲಿ ಯಾವತ್ತು ವೇದಮರ್ಯಾದೆಯು ಲೋಪವಾಯಿತು. ಬ್ರಹ್ಮಚರ್ಯವ್ರತ, ನಾನಾಪ್ರಕಾರದ ಸಂಯಮ, ಧೃತಿ, ಧರ್ಮ, ಜ್ಞಾನ, ವಿಜ್ಞಾನ ಸದಾಚಾರ, ಜಪ, ಯೋಗ, ವೈರಾಗ್ಯ ಮೊದಲಾದ ಯಾವತ್ತು ವಿವೇಕನ ಸೈನ್ಯವು ಭಯಭೀತವಾಗಿ ಓಡಹತ್ತಿತು. ಸೇನಾಪತಿಯಾದ ವಿವೇಕನೂ ಓಡಹತ್ತಿದನು. ಸ್ತ್ರೀಪುರುಷನಾಮಮಾತ್ರದಾದ ಜೀವಧಾರಿಗಳೆಲ್ಲರ. ತಮ್ಮ ತಮ್ಮ ಮರ್ಯಾದೆಯನ್ನು ಬಿಟ್ಟು ಕಾಮವಶರಾದರು. ಎಲ್ಲರ ಹೃದಯದಲ್ಲಿಯೂ ಕಾಮವಾಸನೆಯು ಉತ್ಪನ್ನವಾಯಿತು. ಬಳ್ಳಿಗಳನ್ನು ನೋಡಿ ಗಿಡಗಳು ತಮ್ಮ ಹರೆಗಳನ್ನು ಬಾಗಿಸಹತ್ತಿದವು. ನದಿಗಳು ಸ್ವೇಚ್ಛವಾಗಿ ಸಮುದ್ರದ ಕಡೆಗೆ ವೇಗದಿಂದ ಸಾಗಹತ್ತಿದವು. ಕೆರೆ– ಹೊಂಡಗಳು ಕೂಡಿಕೊಳ್ಳುತ್ತಿದ್ದವು. ಜಡಜೀವಗಳ ಅವಸ್ಥೆಯೇ ಹೀಗಾಗಿರುವಾಗ ಸಚೇತನಗಳ ಸ್ಥಿತಿಯನ್ನು ವರ್ಣಿಸಲು ಯಾರು ಶಕ್ತರಾದಾರು! ಆಕಾಶದಲ್ಲಿ, ನೀರಿನಲ್ಲಿ, ಭೂಮಿಯಲ್ಲಿ ಸಂಚರಿಸುವ ಪಕ್ಷಿ–ಮತ್ಸ್ಯ-

ಚರ-ಪಶುಮೊದಲಾದ ಪ್ರಾಣಿಗಳು ಹೊತ್ತು ವೇಳೆ ಮರೆತುಹೋಗಿ ಕಾಮಾತುರವಾದವು. ತ್ರೈಲೋಕ್ಯವು ಮದಾಂಧವೂ, ವ್ಯಾಕುಲವೂ ಆಯಿತು. ಅವುಗಳಿಗೆ ದಿವಸ ರಾತ್ರಿಗಳ ಭೇದ ಉಳಿಯದೆ, ಅವು ಕೋಕಶಾಸ್ತ್ರವನ್ನು ಅವಲೋಕಿಸಹತ್ತಿದವು. ದೇವ, ದೈತ್ಯ, ನರ, ಕಿನ್ನರ, ಸರ್ಪ, ಪ್ರೇತ ಪಿಶಾಚ ಭೂತ, ವೇತಾಳ ಇವಂತು ಕಾಮನ ಗುಲಾಮರಾದವು. ಯೋಗೀಂದ್ರರೂ, ತಪಸ್ವಿಗಳೂ ಕೂಡ ಕಾಮವಶರಾದರು. ಅಂದಬಳಿಕ ಉಳಿದ ಪಾಮರರ ಪಾಡೇನು! ಚರಾಚರ ಜಗತ್ತನ್ನು ಬ್ರಹ್ಮಮಯವಾಗಿ ನೋಡುವವರು ಕೂಡ ಜಗತ್ತನ್ನು ನಾರಿಮಯವಾಗಿ ನೋಡಹತ್ತಿದರು! ಅದರಂತೆ ಸ್ತ್ರೀಯರು ಜಗತ್ತನ್ನು ಪುರುಷಮಯವಾಗಿಯೂ ಪುರುಷರು ಜಗತ್ತನ್ನು ಸ್ತ್ರೀಮಯವಾಗಿಯೂ ನೋಡಹತ್ತಿದರು! ಕಾಮನಿಂದ ಮಾಡಲ್ಪಟ್ಟ ಈ ಚಮತ್ಕಾರವು ಎರಡು ಗಳಿಗೆಯವರೆಗೆ ಬ್ರಹ್ಮಾಂಡವನ್ನು ವ್ಯಾಪಿಸಿ ಉಳಿಯಿತು. ಒಟ್ಟಿಗೆ ಮದನನು ಎಲ್ಲರ ಮನಸ್ಸನ್ನು ಹರಣಮಾಡಿದನು. ಯಾರಿಗೂ ಧೈರ್ಯವು ಉಳಿಯಲಿಲ್ಲ. ರಘುವೀರನ ಉಳಿಸಿದವರು ಮಾತ್ರ ಆ ಪ್ರಸಂಗದಲ್ಲಿ ಉಳಿದರು!

ಮದನನು ಶಂಕರನ ಬಳಿಗೆ ಹೋಗುವತನಕ ಎರಡು ಗಳಿಗೆ ಈ ಲೀಲೆಯು ನಡೆಯಿತು. ಮಹಾದೇವನನ್ನು ನೋಡಿದಕೂಡಲೆ ಮದನನು ಹೆದರಿದನು. ಯಾವತ್ತು ಜಗತ್ತು ಯಥಾಸ್ಥಿತವಾಯಿತು. ಮದವಿಳಿದಬಳಿಕ ಮದಾಂಧರು ಶಾಂತರಾಗುವಂತೆ ಜಗತ್ತಿನೊಳಗಿನ ಯಾವತ್ತು ಜನರು ಕೂಡಲೆ ಶಾಂತರಾದರು. ದುರ್ಧರ್ಷನೂ, ಅಜಿಂಕ್ಯನೂ ಆದ ಭಗವಾನ್ ರುದ್ರನಕಡೆಗೆ ನೋಡಿದಕೂಡಲೆ ಮದನನಿಗೆ ನಡುಗು ಹುಟ್ಟಿತು. ಆತನು ತಿರುಗಿ ಹೋಗಲಿಕ್ಕೆ ಬಹಳವಾಗಿ ನಾಚಿ ನಿಲ್ಲಲಿಕ್ಕೆ ಸಿದ್ಧನಾಗಿ ಮನಸ್ಸಿನಲ್ಲಿ ಒಂದು ಯುಕ್ತಿಯನ್ನು ಯೋಚಿಸಿದನು. ಕೂಡಲೆ ಸುಂದರ ವಸಂತಋತುವು ಪ್ರಾಪ್ತವಾಯಿತು. ಸುಪುಷ್ಪಿತವಾದ ನೂತನ ವೃಕ್ಷ ರಾಜಿಗಳು ಶೋಭಿಸಹತ್ತಿದವು. ವನ, ಉಪವನ, ವಾಪಿ, ತಡಾಗ ಇವುಗಳಿಂದ ಸುತ್ತುಮುತ್ತಲಿನ ಪ್ರದೇಶವು ಅತ್ಯಂತ ರಮಣೀಯವಾಗಿತೋರಹತ್ತಿತು. ಅದನ್ನು ನೋಡಿ ಮರಣೋನ್ಮುಖರೂ ಕಾಮೋದ್ದೀಪಿತರಾದರು. ಹೀಗೆ ಎಷ್ಟು ಪ್ರಯತ್ನಮಾಡಿದರೂ, ಶಂಕರನ ಮುಂದೆ ಅದು ವ್ಯರ್ಥವಾಯಿತು. ಕಾಮದೇವನು ಪರಾಭೂತನಾದನು. ಶಂಕರನ ಸಮಾಧಿಯು ಚಲಿಸಲಿಲ್ಲ. ಅದನ್ನು ನೋಡಿ ಮದನನು ಕ್ರುದ್ಧನಾದನು. ಆತನು ಒಂದು ವಿಶಾಲವಾದ ಆಮ್ರವೃಕ್ಷವನ್ನೇರಿ, ತನ್ನ ಪುಷ್ಪಧನುಸ್ಸಿನಲ್ಲಿ ಪಂಚಬಾಣಗಳನ್ನು ಹೂಡಿ ಹೆದೆಯನ್ನು ಕಿವಿಯವರೆಗೆ ಜಗ್ಗಿ ಅತ್ಯಂತ ಕ್ರೋಧದಿಂದ ಗುರಿನೋಡಿ ಬಾಣಗಳನ್ನು ಶಿವನ ಮೇಲೆ ಬಿಟ್ಟನು. ಆ ಮನ್ಮಥನ ಬಾಣಗಳು ಹೃದಯಕ್ಕೆ ತಗಲಿದಕೂಡಲೆ ಶಂಭುವಿನ ಸಮಾಧಿಯು ಭಂಗವಾಗಿ, ಆತನು ಜಾಗೃತನಾದನು. ಪ್ರಭುವಿನ ಮನಸ್ಸು ಅತ್ಯಂತ ಕ್ಷುಬ್ಧವಾಯಿತು. ಕಣ್ಣುತೆಗೆದು ಆತನು ಎಲ್ಲಕಡೆಗೆ ನೋಡಿದನು. ಆತನ ದೃಷ್ಟಿಯು

ಆ ವೃಕ್ಷದ ಕಡೆಗೆ ಹೋಗಲು, ಮದನನು ಆತನ ಕಣ್ಣಿಗೆ ಬಿದ್ದನು. ಆಗ ಶಂಭುವು ಕ್ರೋಧ ಸಂತಪ್ತನಾಗಲು, ತ್ರೈಲೋಕ್ಯವು ಅಲ್ಲಾಡಹತ್ತಿತು. ಶಿವನು ತನ್ನ ಮೂರನೆಯ ಕಣ್ಣನ್ನು ತೆರೆದು ಮದನನನ್ನು ನೋಡಿದಕೂಡಲೆ ಆ ಪುಷ್ಪಧನ್ವನು ಸುಟ್ಟು ಬೂದಿಯಾದನು. ಜಗತ್ತಿನಲ್ಲಿ ಹಾ ಹಾ ಕಾರವುಂಟಾಯಿತು; ದೇವತೆಗಳು ಭಯಭೀತರಾದರು; ದೈತ್ಯರಿಗೆ ಆನಂದವಾಯಿತು. ವಿಷಯಿಜನರಿಗೆ ಕಾಮಸುಖದ ನೆನಪಾಗಿ, ಅವರು ಶೋಕಮಾಡಹತ್ತಿದರು; ಆದರೆ ಸಾಧಕರೂ, ಯೋಗಿಗಳೂ ನಿಷ್ಕಂಟಕರಾದರು; ಯೋಗಿಗಳು ನಿರ್ಭಯರಾದರು. ರತಿಯು ಪತಿಯ ಮರಣವನ್ನು ಕೇಳಿ ಮೂರ್ಛಿತಳಾದಳು. ಆಕೆಯು ಶೋಕಚೇಷ್ಟೆಗಳನ್ನು ಮಾಡುತ್ತ ಮೊರೆಯಿಡುತ್ತ ಶಂಕರನಕಡೆಗೆ ಹೋದಳು. ಆಕೆಯು ಶಿವನಿಗೆ ಸಮ್ಮುಖಳಾಗಿ ಕೈಜೋಡಿಸಿ, ಹಲವು ಪ್ರಕಾರದಿಂದ ಅತ್ಯಂತ ಪ್ರೇಮಪೂರ್ವಕವಾಗಿ ಬೇಡಿಕೊಂಡಳು. ಆಕೆಯು ಅಬಲೆಯೆಂಬುದನ್ನರಿತು ಶೀಘ್ರಸಂತೋಷಿಯಾದ ದಯಾಳು ಭಗವಾನ್ ಶಿವನು ಆಕೆಯನ್ನು ಕುರಿತು—ಹೇ ರತೀ! ಇಂದಿನಿಂದ ನಿನ್ನ ಪತಿಯ ಹೆಸರು "ಅನಂಗ" ಎಂದು ಆಗಿ, ದೇಹವಿಲ್ಲದೆ ಆತನು ಸರ್ವ ಜಗತ್ತನ್ನು ವ್ಯಾಪಿಸುವನು. ಪುನಃ ನಿನ್ನ ಅವನ ಸಂಬಂಧವಾಗುವ ಪ್ರಸಂಗವನ್ನು ಹೇಳುವೆನು ಕೇಳು. ಕೃಷ್ಣನು ಯದುವಂಶದಲ್ಲಿ ಅವತಾರ ಮಾಡಿ ಮಹಾನ್ ಪೃಥ್ವಿಯ ಭಾರವನ್ನು ಹರಣಮಾಡುವನು. ಆಗ ನಿನ್ನ ಪತಿಯು ಕೃಷ್ಣಪುತ್ರನಾಗಿ ಹುಟ್ಟಿ, ನಿನ್ನ ಪಾಣಿಗ್ರಹಣ ಮಾಡುವನು. ನನ್ನ ಈ ಮಾತು ಅಸತ್ಯವಾಗಲಾರದು; ಎಂದು ನುಡಿಯಲು, ರತಿಯು ಶಂಭುವನ್ನು ನಮಸ್ಕರಿಸಿ ಹೊರಟು ಹೋದಳು.

ಮದನನಿಧನದ ವರ್ತಮಾನವನ್ನು ಕೇಳಿ ಬ್ರಹ್ಮಾದಿ ದೇವತೆಗಳು ವೈಕುಂಠಕ್ಕೆ ಹೋದರು; ತರುವಾಯ ಅಲ್ಲಿಂದ ಆ ಎಲ್ಲ ದೇವತೆಗಳು ಬ್ರಹ್ಮ–ವಿಷ್ಣುಗಳೊಡನೆ ಕೃಪಾನಿಧಿ ಶಂಕರನಿದ್ದಲ್ಲಿಗೆ ಹೋದರು. ಆಗ ಪ್ರತಿಯೊಬ್ಬರು ಬೇರೆ ಬೇರೆ ವಿಧದಿಂದ ಶಂಕರನ ಸ್ತೋತ್ರಮಾಡಲು, ಚಂದ್ರಮೌಳಿಯು ಪ್ರಸನ್ನನಾದನು. ಕೃಪಾಸಾಗರನಾದ ವೃಷಕೇತುವು ದೇವತೆಗಳನ್ನು ಕುರಿತು—ದೇವತೆಗಳಿರಾ, ನೀವು ಯಾವ ಉದ್ದೇಶದಿಂದ ಬಂದಿರೆಂಬುದನ್ನು ಕಥನಮಾಡಿರಿ, ಎಂದು ಹೇಳಲು, ದೇವತೆಗಳು— ಹೇ ಪ್ರಭೋ, ತಾವು ಸರ್ವಾಂತರ್ಯಾಮಿಗಳಿರುವಿರಿ; ಆದರೂ ಭಕ್ತರ ಅಧೀನರಿರುವದರಿಂದ ನಾವು ವಿಜ್ಞಾಪನೆ ಮಾಡಿಕೊಳ್ಳುವೆವು. ನಾಥನೇ, ನಿನ್ನ ವಿವಾಹವನ್ನು ಕಣ್ಣು ತುಂಬ ನೋಡಬೇಕೆಂದು ಯಾವತ್ತು ದೇವತೆಗಳ ಇಚ್ಛೆಯಿರುವದು, ಅದನ್ನು ಪೂರ್ಣಮಾಡಬೇಕು. ಮದನನ ಗರ್ವಹರಣ ಮಾಡಿ, ಕಾಮನನ್ನು ಸುಟ್ಟು ರತಿಗೆ ವರದಾನಮಾಡಿದ್ದು ಒಳ್ಳೆ ನೆಟ್ಟಗಾಯಿತು. ಶಾಸನಮಾಡಿ ಪುನಃ ಅನುಗ್ರಹ ಮಾಡುವದು ಹೇ ಪ್ರಭೋ, ಸಮರ್ಥರ ಸಹಜ ಸ್ವಭಾವವಾಗಿರುವದು. ಪಾರ್ವತಿಯು ಅಪಾರವಾದ ತಪಸ್ಸನ್ನು ಮಾಡಿರು

ವಳು, ಇನ್ನು ತಾವು ಆಕೆಯನ್ನು ಅಂಗೀಕರಿಸಬೇಕು, ಎಂದು ಬೇಡಿಕೊಳ್ಳಲು, ಬ್ರಹ್ಮದೇವನ ವಿಜ್ಞಾಪನೆಯನ್ನು ಕೇಳಿ ಪ್ರಭುರಾಮಚಂದ್ರನ ಅಪ್ಪಣೆಯನ್ನು ಮನಸ್ಸಿನಲ್ಲಿ ತಂದ ಶಂಕರನು "ತಥಾಸ್ತು" ಎಂದು ಸಮ್ಮತಿಸಿದನು. ಆಗ ದೇವತೆಗಳ ದುಂದುಭಿಗಳನ್ನು ಬಾರಿಸಿದರು. ಪುಷ್ಪವೃಷ್ಟಿಪೂರ್ವಕವಾಗಿ ಆ ಸುರಸ್ವಾಮಿಯ ಜಯಜಯಕಾರವನ್ನು ಮಾಡಿದರು. ಈ ಅವಸರದಲ್ಲಿ ಸಪ್ತರ್ಷಿಗಳು ಅಲ್ಲಿಗೆ ಬರಲು, ಬ್ರಹ್ಮದೇವನು ಅವರನ್ನು ಹಿಮವಂತನ ಬಳಿಗೆ ಕಳಿಸಿದನು. ಋಷಿಗಳು ಮೊದಲು ಭವಾನಿಯಿದ್ದಲ್ಲಿಗೆ ಹೋಗಿ ಆಕೆಯೊಡನೆ ಸಪ್ರೇಮ, ಕಪಟಪ್ರೇಮ ಇವೆ ಭಾಷಣ [illegible] ತೊಡಗಿದರು. ಅವರು—"ಭವಾನಿ! ಅಗಸ್ತ್ಯನ ಮಾತು ಕೇಳದೆ ನಾರದನ ಮಾತನ್ನೇ ನಂಬಿಕೊಂಡು ಕುಳಿತೆ. ಈಗ ನಾರದನ ಪ್ರತಿಜ್ಞೆಯು ಸುಳ್ಳಾಯಿತು, ಯಾಕಂದರೆ ಮಹೇಶ್ವರನು ಕಾಮನನ್ನು ಸುಟ್ಟುಬಿಟ್ಟನು! ಅಲ್ಲಾ, ಋಷಿಗಳ ಈ ಮಾತುಗಳನ್ನು ಕೇಳಿ ಭವಾನಿಯು—ಎಲೈ ಜ್ಞಾನವಂತರಾದ ಮುನಿಶ್ರೇಷ್ಠರೇ, ನೀವು ಯಥಾರ್ಥ [illegible] ದಿರಿ. [illegible] ದವನ ಶಂಭುವು ಈಗ ಕಾಮನನ್ನು ಸುಟ್ಟನು. ಅಂದ [illegible] ಈ ವರೆಗೆ [illegible] ಇದ್ದನೆಂದಾಗಿದೆಯೇನು! ನನ್ನ ದೃಷ್ಟಿ [illegible] ಶಿವನು [illegible] ತಪಸ್ವಿಯೂ, ನಿರ್ದೋಷನು, [illegible] ಭೋಗರಹಿತ [illegible] ಸ್ವಯಂ [illegible] ಸಾನುತ್ರಿಕ [illegible] ಪುರಸ್ಸರ [illegible] ಮುನೀಶ್ವರರೇ, [illegible] ಪ್ರಭು [illegible] ಮಾಡುವ [illegible] ಜ್ಞಾನವನ್ನು ವ್ಯಕ್ತಪಡಿಸುವದು. [illegible], ಅಗ್ನಿಯು ಸಹಜ ಗುಣದ ಯೋಗದಿಂದ ಶೀತವು ಅದರ ಹತ್ತರ ಹೋಗಲಾರದು; ಒಂದು ಪಕ್ಷದಲ್ಲಿ ಹೋದರೆ ಅವಶ್ಯವಾಗಿ ಶೀತವು ನಾಶವಾಗುವದು. ಇದೇ ಮಾತು ಮದನ-ಮಹೇಶ್ವರರಿಗೆ ಸತ್ಯವದು, ಎಂದು ಹೇಳಿದಳು.

ಪಾರ್ವತೀಪರಿಣಯ—ಭವಾನಿಯ ಮಾತುಗಳನ್ನು ಕೇಳಿ ಆಕೆಯ ಪ್ರೀತಿ—ನಿರ್ಧಾರಗಳನ್ನು ನೋಡಿ ಋಷಿಗಳು ಮನಸ್ಸಿನಲ್ಲಿ ಹರ್ಷಿತರಾದರು. ಅವರು ಭವಾನಿಯನ್ನು ವಂದಿಸಿ ಹಿಮಾಚಲನ ಕಡೆಗೆ ಹೋಗಿ ಆತನಿಗೆ ಎಲ್ಲ ವೃತ್ತಾಂತವನ್ನು ಹೇಳಿದರು. ಕಾಮದಹನವನ್ನು ಕೇಳಿ ಹಿಮರಾಜನು ಬಹಳ ದುಃಖಿತನಾದನು; ಆದರೆ ಪುನಃ ರತಿಗೆ ವರಪ್ರದಾನವಾದದ್ದನ್ನು ಹೇಳಲು, ಆತನಿಗೆ ಬಹಳ ಸಂತೋಷವಾಯಿತು. ಶಂಕರನ ಪ್ರಭುತ್ವದ ವಿಚಾರಮಾಡಿ ಗಿರಿರಾಜನು ಬೇರೆ ಮುನೀಶ್ವರರನ್ನೂ ಆದರಪೂರ್ವಕವಾಗಿ ಕರಿಸಿಕೊಂಡು ಶುಭದಿನ, ಶುಭನಕ್ಷತ್ರ, ಶುಭಘಟಿಕಾದಿಗಳನ್ನು ನೋಡಿ ಕೂಡಲೆ ವೇದವಿಧಿಯಿಂದ ಲಗ್ನ ನಿಶ್ಚಯವನ್ನು ಮಾಡಿದನು. ಬಳಿಕ ಅದೇ ಲಗ್ನಪತ್ರಿಕೆ

ಯನ್ನೇ ಸಪ್ತಋಷಿಗಳ ಕೈಯಲ್ಲಿ ಕೊಟ್ಟು ಅವರ ಚರಣಕ್ಕೆ ನಮಿಸಿ ಬೇಡಿಕೊಳ್ಳಲು, ಅದರಂತೆ ಸಪ್ತಋಷಿಗಳು ಲಗ್ನಪತ್ರಿಕೆಯನ್ನು ಒಯ್ದು ಬ್ರಹ್ಮದೇವನಕೈಯಲ್ಲಿ ಕೊಟ್ಟರು. ಅದನ್ನು ಓದುವಾಗ ಬ್ರಹ್ಮದೇವನ ಹೃದಯದಲ್ಲಿ ಆನಂದವು ಹಿಡಿಸಲೊಲ್ಲದು. ಬ್ರಹ್ಮದೇವನು ಲಗ್ನಪತ್ರಿಕೆಯನ್ನು ಓದಿತೋರಿಸಲು, ಯಾವತ್ತು ದೇವತೆಗಳಿಗೆ ಸಂತೋಷವಾಯಿತು. ಆಕಾಶದಲ್ಲಿ ಪುಷ್ಪವೃಷ್ಟಿಯಾಗಹತ್ತಿ ಮಂಗಲವಾದ್ಯಗಳು ಬಾರಿಸಹತ್ತಿದವು. ದಶದಿಕ್ಕುಗಳಲ್ಲಿಯೂ ಮಂಗಲ ಕಲಶಗಳನ್ನು ಸ್ಥಾಪಿಸಿದರು. ಯಾವತ್ತು ದೇವತೆಗಳು ನಾನಾಪ್ರಕಾರದ ವಾಹನಗಳನ್ನೂ, ವಿಮಾನಗಳನ್ನೂ ಸಿದ್ಧಮಾಡತೊಡಗಿದರು. ಶುಭಕಾರಕ ಮಂಗಲ ಶಕುನಗಳು ಆಗಹತ್ತಿದವು. ಅಪ್ಸರೆಯರು ಗಾಯನ ಮಾಡಹತ್ತಿದರು. ಶಂಭುಗಣಗಳು ಶಂಕರನನ್ನು ಶೃಂಗರಿಸಿದರು. ಯಾವತ್ತು ದೇವತೆಗಳು ತಮ್ಮ ತಮ್ಮ ಪರಿವಾರಸಹಿತವಾಗಿ ಭಗವಾನ್‌ಶಂಕರನೊಡನೆ ವಿವಾಹಾರ್ಥವಾಗಿ ಗಿರಿರಾಜನಲ್ಲಿಗೆ ಹೊರಟರು.

ಹಿಮವಂತನು ಬಂದಬೀಗರನ್ನು ಮಹೋತ್ಸವದಿಂದ ಎದುರುಗೊಂಡು ಸಮಾರಂಭದಿಂದ ಕರೆದೊಯ್ದನು. ದೇವತೆಗಳ ಸಮಾಜವನ್ನು ನೋಡಿ ಜನರಿಗೆ ಆನಂದವಾಯಿತು. ಶಂಭುವಿನ ವಿಚಿತ್ರವರ್ಣದ, ವಿಚಿತ್ರ ಆಕಾರದ ಭಯಂಕರ ಗಣಗಳನ್ನು ನೋಡಿ ಎಲ್ಲಾ ಮಕ್ಕಳು ಬೆದರುತ್ತ ಸುಮ್ಮಗ ಚಿಟ್ಟನೆ ಚೀರಹತ್ತಿದರು. ಹೆಂಗಸರು ಅಂಜಿ ಹಿಂದೆ ಹಿಂದೆ ಸರಿಯಹತ್ತಿದರು. ಹಿಮವಂತನು ಎದುರುಗೊಂಡು ಬೀಗರನ್ನು ಸುಂದರವಾದ ಸುಖಕರ ಬಿಡಾರದಲ್ಲಿ ಇಳಿಸಿದನು. ಮೇನಾದೇವಿಯು ಶಂಕರನ ಉಗ್ರರೂಪವನ್ನು ನೋಡಿ, ಈತನು ಸೌಂದರ್ಯದ ಖನಿಯಾದ ಪಾರ್ವತಿಗೆ ತಕ್ಕ ವರನಲ್ಲೆಂದು ಭಾವಿಸಿ, ಇಂಥ ವರವನ್ನು ಗಂಟುಹಾಕಿಕೊಟ್ಟದ್ದಕ್ಕಾಗಿ ನಾರದನಿಗೆ ದೋಷವಿಡಹತ್ತಿದಳು. ಏನು ಮಾಡಿದರೂ ತನ್ನ ಪಾರ್ವತಿಯನ್ನು ಈತನಿಗೆ ಕೊಡಲಿಕ್ಕಿಲ್ಲವೆಂದಲೂ, ಅಂಥ ಪ್ರಸಂಗಬಂದರೆ ಗುಡ್ಡದ ಮೇಲಿಂದ ಮಗಳೊಡನೆ ಹಾರಿಕೊಳ್ಳುವೆನೆಂತಲೂ ಹಟಹಿಡಿದಳು. ಅದಕ್ಕೆ ಪಾರ್ವತಿಯು—"ವಿಧಿಲಿಖಿತವನ್ನು ತಪ್ಪಿಸುವದು ನಿನಗೆ ಶಕ್ಯವಲ್ಲದ್ದರಿಂದ ಶೋಕಮಾಡಬೇಡವೆಂ"ದು ತಾಯಿಗೆ ಸಮಾಧಾನ ಹೇಳಿದಳು. ಅಷ್ಟರಲ್ಲಿ ನಾರದರು ವಿವಾಹಮಹೋತ್ಸವಕ್ಕಾಗಿ ಬಂದು ಮೇನಾದೇವಿಯನ್ನು ಕುರಿತು—ಮೇನಾದೇವಿಯೇ, ನನ್ನ ಸತ್ಯವಾದ ಮಾತುಗಳನ್ನು ಕೇಳು. ಅನಾದಿಯೂ, ಸ್ವಯಂಭುವೂ, ಶಕ್ತಿರೂಪಳೂ, ಅನಂತಳೂ, ಸದಾಶಂಕರನ ಅರ್ಧಾಂಗದಲ್ಲಿ ವಾಸಮಾಡುವವಳೂ, ಜಗತ್ತಿನ ಉತ್ಪತ್ತಿ–ಸ್ಥಿತಿ–ಲಯಗಳಿಗೆ ಕಾರಣಳಾದವಳೂ, ಸ್ವೇಚ್ಛೆಯಿಂದ ಲೀಲಾವಪುಗಳನ್ನು ಧರಿಸುವವಳೂ, ಆದ ಈ ನಿನ್ನ ಮಗಳು ಜಗಜ್ಜನನಿಯಾದ ಭವಾನಿಯಿರುವಳು. ಪ್ರಥಮದಲ್ಲಿ ಈಕೆಯು ದಕ್ಷಗೃಹದಲ್ಲಿ ಜನ್ಮ ತಾಳಿದ್ದು, ಆಗಿನ

ಈಕೆಯು ಸುಂದರದೇಹಕ್ಕೆ "ಸತಿ" ಎಂಬ ಹೆಸರು ಪ್ರಾಪ್ತವಾಗಿತ್ತು. ಆಗೂ ಈಕೆಯು ಶಂಕರನನ್ನೇ ಮದುವೆಯಾಗಿದ್ದಳೆಂಬ ಕಥೆಯು ಜಗತ್ಪ್ರಸಿದ್ಧವಾದದ್ದು, ಎಂದು ಹೇಳಿದ್ದಲ್ಲದೆ, ಸತಿಯು ಶಿವನ ಮಾತನ್ನು ಕೇಳದೆ, ಶ್ರೀ ರಾಮನನ್ನು ಪರೀಕ್ಷಿಸಲು ಸೀತೆಯ ರೂಪ ಧಾರಣಮಾಡಿದ್ದನ್ನೂ, ಅದಕ್ಕಾಗಿ ಶಂಭುವು ಸತಿಯ ತ್ಯಾಗಮಾಡಿದ್ದನ್ನೂ, ಮುಂದೆ ಸತಿಯು ದಕ್ಷಯಜ್ಞದಲ್ಲಿ ದೇಹತ್ಯಾಗಮಾಡಿ ಗಿರಿರಾಜನಲ್ಲಿ ಹುಟ್ಟಿದ್ದನ್ನೂ ಸವಿಸ್ತಾರವಾಗಿ ಹೇಳಿ, ಈ ಪಾರ್ವತಿಯು ಸದಾಶಂಕರಪ್ರಿಯಳೇ ಇರುವಳು, ಎಂದು ಹೇಳಿದನು. ನಾರದನ ಈ ಮಾತುಗಳನ್ನು ಕೇಳಿ ಸರ್ವರದುಃಖಗಳು ನಷ್ಟವಾಗಿ, ಕ್ಷಣದಲ್ಲಿ ಈ ವರ್ತಮಾನವು ಪಟ್ಟಣದ ತುಂಬ ಹಬ್ಬಿತು.

ನಾರದರ ವಚನವನು ಕೇಳಿದ ಮೇಲೆ ಮೇನೆಯೂ, ಹಿಮವಂತನೂ ಮೇಲೆ ಮೇಲೆ ಪಾರ್ವತಿಯ ಚರಣಕ್ಕೆ ಎರಗಹತ್ತಿದರು. ಸ್ತ್ರೀಯರು, ಪುರುಷರು, ಹುಡುಗರು, ತರುಣರು, ವೃದ್ಧರು, ನಾಗರಿಕರು ಎಲ್ಲರೂ ಹರ್ಷಿತರಾದರು. ಲಗ್ನಸಮಾರಂಭದ ಒಂದೊಂದೇ ಮಂಗಲಕಾರ್ಯಗಳು ಆಗಹತ್ತಿದವು. ದೇವತೆಗಳ, ಬ್ರಾಹ್ಮಣರ, ಬೀಗರು ಬಿಜ್ಜರ ಭೋಜನಸಮಾರಂಭಗಳು ನಡೆದವು. ಭೋಜನಮಾಡುತ್ತಿರುವಾಗ ಎರಡೂ ಪಕ್ಷದ ಸ್ತ್ರೀಯರು ಪರಸ್ಪರರಮೇಲೆ ಕೋಟಿಗಳನ್ನು ಮಾಡಿ ಭೂಮದ ಹಾಡು ಹಾಡಹತ್ತಿದರು. ಆ ಭೋಜನ ಸಮಾರಂಭದಲ್ಲಿ ಉಂಟಾದ ಆನಂದವನ್ನು ಕೋಟಿಮುಖದಿಂದ ವರ್ಣಿಸುವದೂ ಶಕ್ಯವಲ್ಲ. ಆ ಮೇಲೆ ಮುನಿಜನರು ಹಿಮವಂತನಿಗೆ ಸುಮುಹೂರ್ತವನ್ನು ಹೇಳುವದಕ್ಕಾಗಿ ಬಂದರು ವಿವಾಹಕಾಲವನ್ನು ನೋಡಿ ಹಿಮವಂತನು ದೇವತೆಗಳನ್ನು ಕರೆಕಳುಹಿದನು. ಯಾವತ್ತೂ ದೇವತೆಗಳನ್ನು ಆದರಪೂರ್ವಕವಾಗಿ ಕರಕೊಂಡುಬಂದು ಯಥಾಯೋಗ್ಯವಾದ ಆಸನಗಳಲ್ಲಿ ಕುಳ್ಳರಿಸಿದರು. ವೇದವಿಧ್ಯುಕ್ತವಾಗಿ ವೇದಿಯನ್ನು ಸಿದ್ಧಮಾಡಿದ್ದರು. ಸ್ತ್ರೀಯರು ಸುಂದರ ಮಂಗಲಗೀತಗಳನ್ನು ಹಾಡುತ್ತಲಿದ್ದರು. ಮಹಾದೇವನು ಬ್ರಾಹ್ಮಣರನ್ನು ವಂದಿಸಿ, ಇಷ್ಟದೇವತೆಯಾದ ಶ್ರೀರಾಮ ಚಂದ್ರನನ್ನು ಹೃದಯ-ದಲ್ಲಿ ಸ್ಮರಿಸಿ ಅತ್ಯಂತ ದಿವ್ಯವಾದ ಸಿಂಹಾಸನವನ್ನು ಏರಿದನು. ಆಮೇಲೆ ಮುನಿವರರು ಉಮೆಯನ್ನು ಕರೆಯ- ಕಳುಹಿದರು. ಆ ಲೋಕಮಾತೆಯು ಸಖಿಯರು ಆಕೆಯನ್ನು ಶೃಂಗರಿಸಿ ಕರೆತಂದರು. ಆಕೆಯ ಸೌಂದರ್ಯವನ್ನು ನೋಡಿ ದೇವತೆಗಳು ಮೋಹಿತರಾದರು. ಪಾರ್ವತಿಯ ಸೌಂದರ್ಯವನ್ನು ವರ್ಣಿಸಲು ಶಕ್ತನಾದ ಕವಿಯು ಜಗತ್ತಿನಲ್ಲಿ ಯಾವನಿರುವನು? ಶಿವನ ಅರ್ಧಾಂಗಿಯೂ, ವಿಶ್ವದ ಜನನಿಯೂ ಎಂದು ತಿಳಿದುದೇವತೆಗಳು ಮನಸಾ ಆಕೆಯನ್ನು ವಂದಿಸಿದರು. ಲೋಕಮಾತೆಯ ಸೌಂದರ್ಯವನ್ನು ವರ್ಣಿಸುವಾಗ ಶ್ರುತಿ-ಶೇಷ-ನಾರದರಿಗೂ ಸಂಕೋಚವಾಗುತ್ತಿರಲು, ಮುಂದಮತಿ ತುಳಸೀದಾಸನಂಥವರ ಪಾಡೇನು? ಸೌಂದರ್ಯ-ಖಣಿಯಾದ ಲೋಕಮಾತೆ-ಭವಾನಿಯು ಶಿವನಿರುವ ಮಂಟಪಕ್ಕೆ ಹೋದಳು. ಆಕೆಯು

ಲಜ್ಜೆಯಿಂದ ಪತಿಯ ಪದಕಮಲಗಳನ್ನು ನೋಡಲು ಅಸಮರ್ಥಳಾದಳು. ಮುನಿಗಳ ಅಪ್ಪಣೆಯಂತೆ ಶಂಭು-ಭವಾನಿಯರು ಗಣಪತಿಯ ಪೂಜೆಯನ್ನು ಮಾಡಿದರು. ದೇವತೆಗಳು ಅನಾದಿಯಿರುವದರಿಂದ ಗಣಪತಿಯ ಪೂಜೆಯನ್ನು ಕೇಳಿ ಯಾರೂ ಶಂಕಿಸಬಾರದು. ವೇದದಲ್ಲಿ ಹೇಳಿದಂತೆ ಮಹಾಮುನಿಗಳು ಯಾವತ್ತೂ ವಿವಾಹ ವಿಧಿಯನ್ನು ತೀರಿಸಿದರು. ಹಿಮಾಲಯನು ಕೈಯಲ್ಲಿ ಕುಶವನ್ನು ಧರಿಸಿ ಕನ್ಯೆಯ ಹಸ್ತವನ್ನು ಹಿಡಿದು, ಆಕೆಯು ಭವಾನಿಯಿರುವಳೆಂದು ತಿಳಿದು ಶಂಕರನಿಗೆ ಅರ್ಪಿಸಿದನು. ಶಂಕರನು ಪಾರ್ವತಿಯ ಪಾಣಿಗ್ರಹಣಮಾಡಿದಾಗ ದೇವತೆಗಳಿಗೆ ಪರಮಸಂತೋಷವಾಯಿತು.

ಮುನಿಗಳು ವೇದಮಂತ್ರೋಚ್ಚಾರ ಮಾಡತೊಡಗಿದ್ದರು. ದೇವತೆಗಳು ಶಂಕರನ ಜಯ ಜಯ ಕಾರಮಾಡಿದರು. ಅನೇಕಪ್ರಕಾರದ ವಾದ್ಯಗಳು ಬಾರಿಸಹತ್ತಿದವು. ಆಕಾಶದಿಂದ ನಾನಾವಿಧ ಪುಷ್ಪಗಳವೃಷ್ಟಿಯಾಗತೊಡಗಿತು. ಈ ಮೇರೆಗೆ ಶಿವ-ಪಾರ್ವತಿಯವರ ವಿವಾಹವಾಗಿ ತ್ರೈಲೋಕ್ಯಗಳು ಆನಂದಭರಿತವಾದವು. ದಾಸರು, ದಾಸಿಯರು, ಅಶ್ವಗಳು, ರಥಗಳು, ಆನೆಗಳು, ಆಕಳುಗಳು, ವಸ್ತ್ರಗಳು, ರತ್ನಗಳು, ಜೇರೆವಸ್ತುಗಳು, ಭೂಮಿ-ಭಾಗ, ಬಂಗಾರಪಾತ್ರೆಗಳಲ್ಲಿ ತುಂಬಿದ ಅನ್ನ, ವಾಹನಗಳು ಇತ್ಯಾದಿ ಅವರ್ಣನೀಯ ವಸ್ತುಗಳನ್ನು ಗಿರಿರಾಜನು ವರಕ್ಕೆ ಕೊಟ್ಟನು. ಆಮೇಲೆ ಆತನು ಕೈಜೋಡಿಸಿ—"ಈ ಪೂರ್ಣಕಾಮನಾದ ಶಂಕರನಿಗೆನಾನು ಏನುಕೊಡಬೇಕ ?" ಎಂದು ನುಡಿದು ಶಂಕರನ ಚರಣಕಮಲಗಳನ್ನು ಹಿಡಿದು ಕುಳಿತುಕೊಂಡನು. ಕೃಪಾಸಾಗರನಾದ ಶಂಕರನು ಎಲ್ಲಬಗೆಯಿಂದಲೂ ಮಾವನಿಗೆ ಸಂತೋಷವನ್ನುಂಟುಮಾಡಿದನು. ಆ ಮೇಲೆ ಪ್ರೇಮಪೂರ್ಣವಾದ ಅಂತಃಕರಣದಿಂದ ಮೇನೆಯು ಶಿವಚರಣಕ್ಕೆರಗಿದಳು. ಆಕೆಯು ಶಂಕರನನ್ನು ಕುರಿತು—ಪ್ರಭುವೇ, ಈ ಉಮೆಯು ನನ್ನ ಪ್ರಾಣಕ್ಕೆ ಸಮಾನವಾಗಿರುವಳು. ಈಕೆಯನ್ನು ತಾವು ಗೃಹಕಿಂಕರಿಯಾಗಿ ಮಾಡಿಕೊಳ್ಳಬೇಕು. ನನ್ನ ಸರ್ವಾಪರಾಧಗಳನ್ನು ಕ್ಷಮಿಸಿ ಪ್ರಸನ್ನರಾಗಿ ವರ ಪ್ರದಾನಮಾಡಬೇಕು, ಎಂದು ಪ್ರಾರ್ಥಿಸಲು, ಶಂಕರನು ಹಲವುಬಗೆಯಿಂದ ಅತ್ತೆಗೆ ತಿಳಿಯಹೇಳಿದನು. ಆಗ ಮೇನೆಯು ಶಿವಚರಣಕ್ಕೆರಗಿ ಮನೆಗೆ ಹೋದಳು. ಆಕೆಯು ಪಾರ್ವತಿಯನ್ನು ಕರೆದು ತೊಡೆಯಮೇಲೆ ಕುಳ್ಳಿರಿಸಿಕೊಂಡು—"ತಂಗೀ, ನೀನು ಯಾವಾಗಲೂ ಶಂಕರ ಪದಸೇವೆಯನ್ನು ಮಾಡುತ್ತಲಿರು. ಪತಿಯನ್ನು ದೇವರೆಂದು ತಿಳಿಯುವದು ಸ್ತ್ರೀಧರ್ಮವಾಗಿರುವದು. ಸ್ತ್ರೀಗೆ ಪತಿಯಿಂದ ಹೊರತಾದ ಅನ್ಯದೈವತವಿಲ್ಲವು." ಎಂದು ಯೋಗ್ಯಉಪದೇಶ ಮಾಡುತ್ತಿರುವಾಗ ಆಕೆಯ ಕಣ್ಣುಗಳಿಂದ ಅಶ್ರುಗಳು ಬಂದವು. ಆಕೆಯು ಮಗಳನ್ನು ಅಪ್ಪಿಕೊಂಡು—ಬ್ರಹ್ಮದೇವನು ಜಗತ್ತಿನಲ್ಲಿ ಸ್ತ್ರೀಜಾತಿಯನ್ನು ಯಾಕೆ ಉತ್ಪನ್ನ ಮಾಡಿದನೋ ತಿಳಿಯದು! ಪರತಂತ್ರರಿಗೆ ಸ್ವಪ್ನದಲ್ಲಿಯೂ ಎಂದೂ ಸುಖದೊರೆಯುವದಿಲ್ಲ; ಎಂದು ನುಡಿದು, "ಇದು ದುಃಖಿಸುವ ಪ್ರಸಂಗವಲ್ಲ" ಎಂದು ಅಶ್ರುಗಳನ್ನು

ಹೆತ್ತ ಮಗಳನ್ನು ಪುನಃ ಪುನಃ ಅಪ್ಪಿಕೊಂಡಳು. ಪಾರ್ವತಿಯು ಸಖಿಯರನ್ನು ಅಪ್ಪಿಕೊಂಡು ಎಲ್ಲರನ್ನು ಆಶೀರ್ವದಿಸುತ್ತಿರಲು, ಸಖಿಯರು ಆಕೆಯನ್ನು ಶಿವನ ಬಳಿಗೆ ಕರಕೊಂಡುಬಂದರು. ಶಂಕರನು ಯಾವತ್ತು ಯಾಚಕರನ್ನು ಸಂತೋಷಪಡಿಸಿ ಉಮೆಯಿಂದ ಸಹಿತನಾಗಿ ಸ್ವಗೃಹಕ್ಕೆ ಹೋಗಲು ಹೊರಟನು. ಆಗ ಎಲ್ಲ ದೇವತೆಗಳು ಹರ್ಷಿತರಾಗಿ ಪುಷ್ಪವೃಷ್ಟಿಗಳನ್ನು ಸುರಿಸಹತ್ತಿದರು. ಆಕಾಶದಲ್ಲಿ ದುಂದುಭಿಯನಾದವು ದಿವಿಗುಟ್ಟಹತ್ತಿತು. ಹಿಮವಾನನು ಪಾರ್ವತೀಪರಮೇಶ್ವರರನ್ನು ಕಳಿಸುವದಕ್ಕಾಗಿ ಆಗತ್ಯಪೂರ್ವಕವಾಗಿ ಹೋಗಿ, ಅನೇಕ ಪ್ರಕಾರದಿಂದ ಅವರನ್ನು ಸಂತೋಷಪಡಿಸಿ ಕೈಲಾಸಕ್ಕೆ ಕಳಿಸಿಕೊಟ್ಟನು. ಶಂಕರನು ಕೈಲಾಸಕ್ಕೆ ಹೋದಬಳಿಕ ಯಾವತ್ತು ದೇವತೆಗಳು ತಮ್ಮ ತಮ್ಮ ಸ್ಥಾನಗಳಿಗೆ ಹೋದರು. ಪಾರ್ವತೀಪರಮೇಶ್ವರರು ತ್ರೈಲೋಕ್ಯದ ಜನಕ-ಜನನಿಯರಾದದ್ದರಿಂದ ಅವರ ಶೃಂಗಾರವನ್ನು ನಾನು ವಿಸ್ತರಿಸುವದಿಲ್ಲ. ಅವರು ನಾನಾ ಪ್ರಕಾರದ ಭೋಗವಿಲಾಸಗಳನ್ನು ಭೋಗಿಸುತ್ತ ಕೈಲಾಸದಲ್ಲಿ ಗಣಸಹಿತವಾಗಿ ವಾಸಿಸಹತ್ತಿದರು. ಅವರು ನಿತ್ಯದಲ್ಲಿ ಹೊಸಹೊಸ ಪ್ರಕಾರದಿಂದ ವಿಹರಿಸುತ್ತಿರಲು, ಬಹುಕಾಲವು ಕ್ರಮಿಸಿತು. ಆಮೇಲೆ ಷಣ್ಮುಖನು ಹುಟ್ಟಿದನು. ಆತನಿಂದ ತಾರಕಾಸುರನ ಸಂಹಾರವಾಯಿತು. ಈ ಎಲ್ಲ ಕಥೆಯು ಪುರಾಣಪ್ರಸಿದ್ಧವಾಗಿರುವದರಿಂದ ಅದನ್ನು ಇಲ್ಲಿ ವಿಸ್ತರಿಸುವದಿಲ್ಲ. ಶಂಕರ-ಪಾರ್ವತಿಯರ ವಿವಾಹದ ಕಥೆಯನ್ನು ಕೇಳಿದ ಸ್ತ್ರೀ ಪುರುಷರ ಮನೋರಥಗಳು ಪರಿಪೂರ್ಣವಾಗುವವು; ಅವರಲ್ಲಿ ವಿವಾಹಾದಿ ಮಂಗಲಕಾರ್ಯಗಳಾಗುವವು; ಅವರು ಸುಖಿಗಳಾಗುವರು. ಗಿರಿಜಾರಮಣನು ಚರಿತ್ರಸಾಗರನಾಗಿದ್ದು ವೇದಗಳಿಗೂ ಆತನ ಚರಿತ್ರದ ಅಂತವು ಹತ್ತಿರುವದಿಲ್ಲವು. ಅಂದಬಳಿಕ ಅತ್ಯಂತ ಮತಿಮಂದನೂ, ಗ್ರಾಮ್ಯನೂ ಆದ ಈ ತುಳಸೀದಾಸನು ಅದನ್ನು ವರ್ಣಿಸಲು ಹೇಗೆ ಸಮರ್ಥನಾಗುವನು?

ರಾಮಾವತಾರದ ಕಾರಣಗಳು—ಈ ಮೇರೆಗೆ ಸುಂದರವೂ, ರಸಭರಿತವೂ ಆದ ಶಂಭುಚರಿತ್ರವನ್ನು ಕೇಳಿ ಭರದ್ವಾಜನು ಅತ್ಯಂತ ಹರ್ಷಿತನಾದನು. ಆತನ ನೇತ್ರಗಳು ಆನಂದಬಾಷ್ಪಪೂರ್ಣವಾಗಿ ಶಿವಕಥೆಯಮೇಲೆ ಆ ಮುನಿಯ ಪ್ರೇಮವು ಹೆಚ್ಚುತ್ತಹೋಯಿತು. ಆತನ ಆ ಸ್ಥಿತಿಯನ್ನು ನೋಡಿ ಯಾಜ್ಞವಲ್ಕ್ಯಮುನಿಗೆ ಆನಂದವಾಯಿತು. ಆತನು ಭರದ್ವಾಜನನ್ನು ಕುರಿತು—ಎಲೈ ಮುನಿವರಾ, ಪಾರ್ವತೀರಮಣನು ಪ್ರಾಣದಂತೆ ನಿನಗೆ ಪ್ರಿಯನಾಗಿರುವದರಿಂದ ನಿನ್ನ ಜನ್ಮವು ಧನ್ಯವಾದದ್ದು. ಶಂಕರ ಚರಣಾರವಿಂದದಲ್ಲಿ ಪ್ರೇಮವಿಲ್ಲದವರು ರಾಮನಿಗೆ ಸ್ವಪ್ನದಲ್ಲಿಯೂ ಪ್ರಿಯರಾಗಲಾರರು. ಶಂಕರಚರಣದಲ್ಲಿ ನಿಷ್ಕಪಟ ಪ್ರೇಮವಿರುವದು ರಾಮಭಕ್ತರ ಲಕ್ಷಣವಾಗಿರುವದು. ನಾನು ಮೊದಲು ಶಿವಚರಿತ್ರವನ್ನು ಹೇಳಿ ನಿನ್ನ ಮರ್ಮವನ್ನು ಪರೀಕ್ಷಿಸಿ

ಹೆನು- ನೀನು ಸರ್ವವಿಕಾರರಹಿತನಾದ ರಾಮನ ಪ್ರಿಯಭಕ್ತನಿರುತ್ತೀ. ಇನು ನಾನು ಶ್ರೀರಾಮನ ಸ್ಮರಣಮಾಡಿ ರಾಮಲೀಲೆಯ ವರ್ಣನಮಾಡುವೆನು ಕೇಳು. ಕೈಲಾಸ ಗಿರಿಯಲ್ಲಿ ಶಂಕರನು ಸರ್ವಸೇವ್ಯನಾಗಿ ಗಿರಿಜೆಯೊಡನೆ ವಾಸಿಸುತ್ತಿದ್ದನು. ಆತನು ಅಲ್ಲಿ ಒಮ್ಮೆ ಅಕ್ಷಯ ವಟವೃಕ್ಷದ ಬುಡದಲ್ಲಿ ಪಾರ್ವತಿಯೊಡನೆ ಕುಳಿತಾಗ ಪಾರ್ವತಿಗೆ ಪೂರ್ವ ಜನ್ಮದ ಸ್ಮರಣವಾಯಿತು. ಆಗ ಆಕೆಯು ಆ ಪ್ರಭುವನ್ನು ಕುರಿತು ಹಾಸ್ಯಪೂರ್ವಕ ಮಧುರವಾಣಿಯಿಂದ—ಎಲೈ ಸುಖನಿಧಾನನೇ, ತಾವು ನನ್ನ ಮೇಲೆ ಪ್ರಸನ್ನರಿದ್ದು ನನ್ನನ್ನು ತಮ್ಮದಾಸಿಯೆಂದು ತಿಳಿಯುತ್ತಿದ್ದರೆ, ನಾನಾವಿಧದ ರಘುಪತಿಯ ಚರಿತ್ರೆಗಳನ್ನು ಹೇಳಿ ನನ್ನ ಅಜ್ಞಾನವನ್ನು ದೂರ ಮಾಡಬೇಕು. ಪೂರ್ವಜನ್ಮದಲ್ಲಿ ನನಗೆ ಅರಣ್ಯದಲ್ಲಿ ರಾಮನ ಪ್ರಭುತ್ವವು ಕಂಡುಬಂದಿತ್ತು; ಆದರೆ ನಾನು ಭಯಭೀತಳಾದ್ದರಿಂದ ಆಗ ತಮ್ಮ ಮುಂದೆ ಅದನ್ನು ಹೇಳಲಿಲ್ಲ. ನನ್ನ ಚಿತ್ತವು ಮಲಿನವಾಗಿದ್ದದ್ದರಿಂದ ನನಗೆ ಅದರ ಜ್ಞಾನವೂ ಆಗ ಆಗಲಿಲ್ಲ. ಅದರ ಫಲವನ್ನು ನಾನು ಚನ್ನಾಗಿ ಭೋಗಿಸಿದೆನು. ಈಗಾದರೂ ನನ್ನ ಮನಸ್ಸಿನಲ್ಲಿ ಸ್ವಲ್ಪ ಸಂಶಯವು ಉಳಿದೇ ಇರುವದು. ಅದನ್ನು ದೂರ ಮಾಡುವದಕ್ಕಾಗಿ ಪವಿತ್ರ ರಾಮಚರಿತ್ರವನ್ನು ಹೇಳಬೇಕು. ಪ್ರಭೋ, ರಾಮನು ನಿರ್ಗುಣನಿದ್ದು, ಸಗುಣನಾದ ಕಾರಣವೇನು ದಯಮಾಡಿ ಹೇಳಬೇಕು.

ಪಾರ್ವತಿಯ ಈ ಸರಳವೂ, ಸುಂದರವೂ, ನಿಷ್ಕಪಟವೂ ಆದ ಪ್ರಶ್ನವು ಪರಮೇಶ್ವರನಿಗೆ ಬಹಳವಾಗಿ ಸೇರಿತು. ಆತನು ಗಿರಿಜೆಯನ್ನು ಕುರಿತು—ಗಿರಿಜೆ, ಬಹಳ ಯೋಗ್ಯ ಪ್ರಶ್ನ ಮಾಡಿದೆ. ವೇದಗಳು ರಾಮನ ಸುಂದರ ನಾಮಗಳನ್ನೂ, ಗುಣಗಳನ್ನೂ, ಚರಿತ್ರಗಳನ್ನೂ, ಜನ್ಮಗಳನ್ನೂ, ಕರ್ಮಗಳನ್ನೂ ಅಪಾರವಾಗಿ ವರ್ಣಿಸಿರುವವು. ಶ್ರೀ ರಾಮರು ಅನಂತವಾಗಿರುವಂತೆ ಅವರ ಗುಣ, ಯಶಸ್ಸು, ಚರಿತ್ರ ಇವೂ ಅನಂತವಾಗಿರುವವು; ಅದರೂ ನಿನ್ನ ಅತ್ಯಂತ ಪ್ರೇಮವನ್ನು ನೋಡಿ ನಾನು ಕೇಳಿದಮಟ್ಟಿಗೆ ಹಾಗು ನನಗೆ ತಿಳಿದಮಟ್ಟಿಗೆ ನಿನಗೆ ರಾಮಚರಿತ್ರವನ್ನು ಹೇಳುವೆನು. ಪಾರ್ವತೀ, ಸಗುಣದಲ್ಲಿಯೂ, ನಿರ್ಗುಣದಲ್ಲಿಯೂ ಏನೂ ಭೇದವಿಲ್ಲ; ನಿರ್ಗುಣವು ನೀರಿನಂತೆಯೂ, ಸಗುಣವು ಬರ್ಫದಂತೆಯೂ (ಆಣೆಯಕಲ್ಲಿನಂತೆ) ಇರುವವು. ನಿರ್ಗುಣನಾದ ರಾಮನೇ ಈಗ ದಶರಥಪುತ್ರನಾಗಿ ಸಗುಣತ್ವೇನ ಅವತಾರ ಮಾಡಿರುವನೆಂಬದು ನಿಶ್ಚಯವಾಗಿಯೇ ತಿಳಿ. ಆತನೇ ನನ್ನ ಸ್ವಾಮಿಯು. ಆತನ ನಾಮಜಪವನ್ನೇ ನಾನು ಯಾವಾಗಲೂ ಮಾಡುವೆನು; ಆತನ ನಾಮವನ್ನೇ ಕಾಶಿಯಲ್ಲಿ ಮರಣಕಾಲದಲ್ಲಿ ಪ್ರಾಣಿಗಳಿಗೆ ನಾನು ಬೋಧಿಸುವೆನು. ರಾಮನ ಆದ್ಯಂತಗಳು ಯಾರಿಗೂ ಗೊತ್ತಾಗಿರುವದಿಲ್ಲ. ವೇದಗಳು ಕೂಡ ಯಥಾಮತಿ ಅನುಮಾನಮಾಡಿ ಆತನನ್ನು ಕುರಿತು ಪ್ರತಿಪಾದಿಸುವದೇನೆಂದರೆ—"ಆತನು ಕಾಲಿಲ್ಲದೆ ನಡೆಯುವನು; ಕಿವಿಗಳಿಲ್ಲದೆ ಕೇಳುವನು; ಕೈಗಳಿಲ್ಲದೆ ಅನೇಕ ವಿಧ ಕರ್ಮಗಳನ್ನು ಮಾಡುವನು; ಮುಖವಿಲ್ಲದೆ ಊಟಕ್ಕೆ ರಸ

ಗಳ ರುಚಿ ನೋಡುವನು; ವಾಣಿಯಿಲ್ಲದೆ ವಕ್ತೃತ್ವ ನಡಿಸುವನು ಹಾಗು ಮಹಾನ್ ಯೋಗಿಯಾಗುವನು; ದೇಹವಿಲ್ಲದೆ ಸ್ಪರ್ಶಮಾಡುವನು; ಕಣ್ಣುಗಳಿಲ್ಲದೆ ನೋಡುವನು; ಮೂಗು ಇಲ್ಲದೆ ಸರ್ವ ಗಂಧಗ್ರಹಣಮಾಡುವನು." ಪಾರ್ವತೀ, ಹೀಗೆ ರಾಮನ ಎಲ್ಲ ಕೃತಿಗಳು ಅಲೌಕಿಕವಾಗಿದ್ದು, ಆತನ ಮಹಿಮೆಯು ಅವರ್ಣನೀಯವಾಗಿರುವದು. ಅಂಥ ರಾಮನೇ ಭಕ್ತಹಿತಾರ್ಥವಾಗಿ ದಶರಥಪುತ್ರ-ಅಯೋಧ್ಯಾಧೀಶನಾಗಿ ಅವತರಿಸಿರುವನೆಂದು ತಿಳಿ.

ಶಂಕರನ ಈ ಭಾಷಣವನ್ನು ಕೇಳಿ ಪಾರ್ವತಿಯು ಮೋಹವು ನಷ್ಟವಾಯಿತು. ಆಗ ಆಕೆಯು ಪತಿಯನ್ನು ಕುರಿತು-ಪ್ರಭೋ, ನಿಮ್ಮ ಕೃಪೆಯಿಂದ ನನ್ನ ಮೋಹವು ನಷ್ಟವಾಯಿತು. ದಶರಥ ಪುತ್ರ ರಾಮನೇ ಪರಬ್ರಹ್ಮನೆಂದು ತಿಳಿದೆನು; ಆದರೆ ನಾನು ಆಗಲೆ ಕೇಳಿದಂತೆ ಆತನು ಸಗುಣತ್ವೇನ ಅವತಾರವನ್ನು ಯಾಕೆ ಮಾಡುವನೆಂಬದನ್ನು ಹೇಳುವ ಕೃಪೆ ಮಾಡಬೇಕು, ಎಂದು ಪ್ರಾರ್ಥಿಸಲು, ಶಂಕರನು--ಸುಮುಖಿಯೇ, ಹರಿಯು ಅವತಾರದ ಹೇತುವು ಇಂತಹದೇ ಎಂದು ಗುರಿಯಿಟ್ಟು ಹೇಳುವದು ಶಕ್ಯವಲ್ಲ. ನೀನು ಸುಜ್ಞಳೇ ಇರುತ್ತೀ; ಆದರೆ ನನ್ನ ಮತದಿಂದ ರಾಮನು ಬುದ್ಧಿಯಿಂದ, ಮನಸ್ಸಿನಿಂದ, ವಾಣಿಯಿಂದ ಅತರ್ಕ್ಯನಾಗಿರುವನು; ಆದರೂ ಸ್ವಬುದ್ಧಿಯನ್ನನುಸರಿಸಿ ಸಂತರು, ಮುನಿಗಳು, ವೇದಗಳು, ಪುರಾಣಗಳು ಹೇಗೆ ವರ್ಣಿಸಿರುವವೋ, ಮತ್ತು ನನಗೆ ಹೇಗೆ ತಿಳಿದಿರುವದೋ ಹಾಗೆ ರಾಮಾವತಾರದ ಕಾರಣಗಳನ್ನು ನಿನಗೆ ನಾನು ಹೇಳುವೆನು ಕೇಳು. ಯಾವ ಯಾವ ಕಾಲದಲ್ಲಿ ಧರ್ಮಗ್ಲಾನಿಯಾಗುವದೋ, ದುಷ್ಟರೂ, ಉನ್ಮತ್ತರೂ ಆದ ರಾಕ್ಷಸರ ಉದಯವಾಗಿ ಅವರು ಹೇಳಲಿಕ್ಕೆ ಬಾರದಷ್ಟು ನೀತಿಬಾಹ್ಯರಾಗಿ ಆಚರಿಸುವರೋ, ಬ್ರಾಹ್ಮಣರೂ, ಗೋಗಳೂ, ದೇವತೆಗಳೂ, ಪೃಥ್ವಿಯೂ ಸಂತ್ರಸ್ತವಾಗುವವೋ ಆ ಆ ಕಾಲದಲ್ಲಿ ದಯಾಸಾಗರ ಪ್ರಭುವು ನಾನಾವಿಧ ಶರೀರಗಳನ್ನು ಧಾರಣಮಾಡಿ ಸಜ್ಜನರ ಪೀಡೆಯು ಹರಣ ಮಾಡುವನು. ಅಸುರರ ವಧ ಮಾಡಿ ದೇವತೆಗಳ ಸ್ಥಾಪನೆ ಮಾಡುವದೂ, ತನ್ನ ವೇದರೂಪ ಸೇತುವನ್ನು ರಕ್ಷಿಸಿ, ತನ್ನ ಸೋಜ್ವಲ ಯಶಸ್ಸಿನ ಪ್ರಸಾರವನ್ನು ಜಗತ್ತಿನಲ್ಲಿ ಮಾಡುವದೂ ರಾಮಜನ್ಮದ ಹೇತುವಾಗಿರುವದು. ಭಕ್ತಜನರು ಆತನ ಯಶಸ್ಸಿನ ಗಾಯನ ಮಾಡಿ ಭವಸಾಗರವನ್ನು ದಾಟುವದರಿಂದ, ಕೃಪಾಸಾಗರ ಪ್ರಭುವು ಜನರ ಕಲ್ಯಾಣಕ್ಕಾಗಿಯೇ ದೇಹಧಾರಣ ಮಾಡುವನೆಂಬದು ಸ್ಪಷ್ಟವಾಗುತ್ತದೆ. ರಾಮಜನ್ಮದ ಕಾರಣಗಳು ಅನೇಕವಾಗಿದ್ದು, ಅವು ಒಂದಕ್ಕಿಂತ ಒಂದು ವಿಚಿತ್ರವಾಗಿರುವವು. ಅವುಗಳಲ್ಲಿ ಒಂದೆರಡು ಜನ್ಮಗಳನ್ನು ಸವಿಸ್ತಾರವಾಗಿ ಹೇಳುವೆನು, ಸಾವಧಾನಚಿತ್ತದಿಂದ ಕೇಳು.

**(೧) ಜಯವಿಜಯರ ಶಾಪವಿಮೋಚನಕ್ಕಾಗಿ ಭಗವಂತನು ಅವತರಿಸಿದ್ದು**—ಜಯವಿಜಯರೆಂಬವರು ಶ್ರೀ ಹರಿಯ ದ್ವಾರಪಾಲಕರೆಂಬದು ಲೋಕ

ಪ್ರಸಿದ್ಧವಾಗಿರುವದು. ಅವರು, ಶ್ರೀ ವಿಷ್ಣುವಿನ ದರ್ಶನಕ್ಕಾಗಿ ಹೋಗುವ ಸನಕ ಸನಂದನಾದಿಗಳನ್ನು ತಡೆದು ಆ ಬ್ರಾಹ್ಮಣರಿಂದ ಮೂರು ಜನ್ಮ ರಾಕ್ಷಸರಾಗಿರೆಂದು ಶಾಪಹೊಂದಿದರು. ಅದರಂತೆ ಆ ಜಯವಿಜಯರು ಒಂದನೇ ಜನ್ಮದಲ್ಲಿ ಹಿರಣ್ಯಾಕ್ಷ ಹಿರಣ್ಯಕಶಿಪು ಎಂಬ ಹೆಸರಿನ ರಾಕ್ಷಸರಾದರು. ಅವರು ಇಂದ್ರಾದಿ ಲೋಕಪಾಲಕರನ್ನು ಜಯಿಸಿ, ಸರ್ವದಾ ವಿಜಯಿಗಳಾಗುತ್ತಿದ್ದರು. ಭಗವಂತನು ಅವರಲ್ಲಿ ಹಿರಣ್ಯಾಕ್ಷನನ್ನು ವರಾಹರೂಪದಿಂದಲೂ, ಹಿರಣ್ಯಕಶಿಪುವನ್ನು ನೃಸಿಂಹರೂಪದಿಂದಲೂ ಸಂಹರಿಸಿದನು. ಭಕ್ತಪ್ರಲ್ಹಾದನ ಕೀರ್ತಿಯು ಜಗತ್ತಿನಲ್ಲಿ ಪ್ರಸಿದ್ಧವಾಯಿತು. ಅದೇ ರಾಕ್ಷಸರೇ ಎರಡನೆಯ ಜನ್ಮದಲ್ಲಿ ಪ್ರಸಿದ್ಧರಾವಣ-ಕುಂಭಕರ್ಣ ಎಂಬ ರಾಕ್ಷಸರಾದರು. ರಾವಣ-ಕುಂಭಕರ್ಣರು ಮಹಾವೀರರೂ, ಬಲಾಢ್ಯರೂ, ಜಗತ್ಪ್ರಸಿದ್ಧರೂ, ಸುರವಿಜಯಿಗಳೂ, ಯುದ್ಧಕುಶಲರೂ ಆಗಿದ್ದರು. ಪುನಃ ಭಗವಂತನು ಅವರ ಹಿತಕ್ಕಾಗಿ ಅವರನ್ನು ಸಂಹರಿಸಬೇಕೆಂದು, ದಶರಥ-ಕೌಸಲ್ಯೆಯರ ಹೊಟ್ಟೆಯಲ್ಲಿ ರಾಮರೂಪದಿಂದ ಅವತರಿಸಿದನು. ಆಗ ಕಶ್ಯಪ-ಅದಿತಿಗಳೇ ದಶರಥ ಕೌಸಲ್ಯೆಯರಾಗಿ ಹುಟ್ಟಿದ್ದರು. ಎಲೈ ಪಾರ್ವತೀ, ಒಂದು ಕಲ್ಪದಲ್ಲಿ ಹೀಗೆ ಭಗವದವತಾರವಾಯಿತು.

(೨) ವೃಂದೆಯ ಶಾಪದಿಂದ ಭಗವಂತನು ಅವತರಿಸಿದ್ದು—ಒಂದು ಕಲ್ಪದಲ್ಲಿ ಯಾವತ್ತು ದೇವತೆಗಳು ಜಾಲಂದರ ದೈತ್ಯನ ಸಂಗಡ ಯುದ್ಧ ಮಾಡುತ್ತಿರಲು ಸೋತರು. ದೇವತೆಗಳ ಆಗಿನ ದುಃಖವನ್ನು ನೋಡಿ ಮಹಾದೇವನೂ ಜಾಲಂದರನ ಸಂಗಡ ಯುದ್ಧ ಮಾಡಿದನು. ಆ ಮಹಾಬಲಾಢ್ಯ ದೈತ್ಯನು ಏನು ಮಾಡಿದರೂ ಸಾಯಲೊಲ್ಲನು; ಯಾಕಂದರೆ ಆ ದೈತ್ಯರಾಜನ ಹೆಂಡತಿಯಾದ ವೃಂದೆಯು ಮಹಾಪತಿವ್ರತೆಯಾಗಿದ್ದಳು. ಆಕೆಯ ತಪೋಬಲದಿಂದ ಮಹಾದೇವನಿಗೂ ಜಾಲಂದರನನ್ನು ಗೆಲ್ಲಲಿಕ್ಕೆ ಬರಲೊಲ್ಲದು. ಆಗ ವಿಷ್ಣುವಿನ ಮಾಯೆಯಿಂದ ಜಾಲಂದರನ ಹಸ್ತಪಾದ ಅವಯವಗಳು ವೃಂದೆಯ ಮಂದಿರ ಬಿದ್ದವು. ಅವನ್ನು ಆಕೆಯು ನೋಡಿದಾಗ ತನ್ನ ಪತಿಯ ಅವಯವಗಳೇ ಎಂದು ತಿಳಿದು ದುಃಖಿಸತೊಡಗಿದಳು. ಆಗ ವಿಷ್ಣುವು ಆಕೆಯನ್ನು ಕುರಿತು—"ಯಾಕೆ ಅಳುತ್ತೀ? ನೀನು ಪತಿವ್ರತೆಯಾದ್ದರಿಂದ ಅವಯವಗಳನ್ನು ಕೂಡಿಸಿ ಸಜೀವವಾಗಿ ಮಾಡು" ಎಂದು ಹೇಳಲು ಅವರಂತೆ ವೃಂದೆಯು ಮಾಡಿ, ಆತನನ್ನು ಸೇವಿಸತೊಡಗಿದಳು. ಹೀಗೆ ವೃಂದೆಗೆ ಪರಪುರುಷಸೇವೆ ಘಟಿಸಿದ್ದರಿಂದ ಪಾತಿವ್ರತ್ಯದ ಭಂಗವಾಗಲು, ಅತ್ತ ಜಾಲಂದರನನ್ನು ಶತ್ರುಗಳು ಕೊಂದರು. ಈ ಕಪಟವು ವೃಂದೆಗೆ ಬೇಗನೆ ತಿಳಿದದ್ದರಿಂದ ಆಕೆಯು ವಿಷ್ಣುವನ್ನು ಕುರಿತು—ನೀನು ಮನುಷ್ಯಜನ್ಮಧಾರಣಮಾಡು, ನಿನ್ನ ಹೆಂಡತಿಯನ್ನು ನನ್ನ ಪತಿಯು ಹರಿಸುವನು, ನೀನು ಸ್ತ್ರೀವಿರಹದಿಂದ ದುಃಖಿತನಾಗುವೆ, ಎಂದು ಶಾಪಕೊಟ್ಟಳು. ಆಗ ಕೌತುಕನಿಧಾನನಾದ ದಯಾಳು ಭಗವಂತನು ಆಕೆಯ ಶಾಪವನ್ನು ಅಂಗೀಕರಿಸಿದನು.

ಪಾರ್ವತೀ, ಆ ಕಲ್ಪದಲ್ಲಿ ಜಾಲಂಧರನು ರಾವಣನಾದನು. ನರರೂಪಧಾರಣಮಾಡಿದ ರಾಮನು ರಣದಲ್ಲಿ ಆತನನ್ನು ಕೊಂದು ಆತನಿಗೆ ಕೈವಲ್ಯವಿತ್ತನು.

(೩) ನಾರದನ ಶಾಪದಿಂದ ಭಗವಂತನು ಅವತರಿಸಿದ್ದು—ಪಾರ್ವತೀ, ಒಂದು ಕಲ್ಪದಲ್ಲಿ ನಾರದನ ಶಾಪದಿಂದ ರಾಮಾವತಾರವಾಯಿತು, ಎಂದು ಹೇಳಲು, ಪಾರ್ವತಿಯು ಆಶ್ಚರ್ಯದಿಂದ—ಪ್ರಾಣನಾಥ, ನಾರದಮುನಿಯಂತು ಮಹಾಜ್ಞಾನಿಯೂ, ವಿಷ್ಣುಭಕ್ತನೂ ಇರುವನು. ಆತನು ಶಾಪಕೊಡಲಿಕ್ಕೆ ಕಾರಣವೇನು? ರಮಾಪತಿಯು ಅಂಥ ಅಪರಾಧವೇನು ಮಾಡಿದ್ದಾನು? ಎಲೈ ಪುರಾರಿಯೇ, ಈ ಪ್ರಸಂಗವನ್ನು ವಿಸ್ತರಿಸಿ ಹೇಳಬೇಕು. ಮುನಿಯ ಚಿತ್ತಕ್ಕೆ ಮೋಹವಾದದ್ದು ಆಶ್ಚರ್ಯವು ಎಂದು ಕೇಳಲು, ಶಂಕರನು ನಕ್ಕು—ಗಿರಿಜೇ, ಈ ಜಗತ್ತಿನಲ್ಲಿ ಯಾವನೂ ಜ್ಞಾನಿಯೂ ಇರುವದಿಲ್ಲ, ಮೂಢನೂ ಇರುವದಿಲ್ಲ, ರಘುಪತಿಯು ಯಾವ ರೀತಿಯಿಂದ ಯಾವ ಸಂಗತಿಯನ್ನು, ಯಾವ ಕಾಲಕ್ಕೆ ಮಾಡುವನೋ ಅದು ಅದರಂತೆ ಅದೇ ಕ್ಷಣದಲ್ಲಿ ಆಗುತ್ತಿರುವದು, ಎಂದು ಹೇಳಿದನು. ಭಾರದ್ವಾಜಾ, ಶ್ರೀ ಶಂಕರನು ಪಾರ್ವತಿಯನ್ನು ಕುರಿತು ಹೇಳುವ ಕಥಾಪ್ರಸಂಗವನ್ನು ಚಿತ್ತಗೊಟ್ಟು ಕೇಳು. ಒಂದಾನೊಂದು ಕಾಲದಲ್ಲಿ ನಾರದನು ಹಿಮಾಲಯದೊಳಗಿನದೊಂದು ರಮ್ಯ ಗುಹಾಪ್ರದೇಶವನ್ನು ನೋಡಿ, ಅಲ್ಲಿ ಹರಿಗುಣಸ್ಮರಣಮಾಡುತ್ತ ಕುಳಿತುಕೊಳ್ಳಲು, ಸ್ವಭಾವತಃ ಆತನ ಮನಸ್ಸು ಶುದ್ಧವಿದ್ದದ್ದರಿಂದ ಆತನ ಶ್ವಾಸಗತಿಯು ರುದ್ಧವಾಗಿ ಆತನಿಗೆ ಸಮಾಧಿಯು ಹತ್ತಿತು! ನಾರದನ ಈ ಸ್ಥಿತಿಯನ್ನು ನೋಡಿ ಇಂದ್ರನಿಗೆ—"ಆತನು ತನ್ನ ಪದವನ್ನು ಹರಣ ಮಾಡುವನೆಂಬ ಭಯವು ಉತ್ಪನ್ನವಾಯಿತು. ಈ ಜಗತ್ತಿನಲ್ಲಿ ಕಾಮಿಗಳೂ, ಲೋಭಿಗಳೂ ಆದವರು ಕುಟಿಲಸ್ವಭಾವದ ಕಾಗೆಗಳಂತೆ ಎಲ್ಲರಿಗೂ ಅಂಜುತ್ತಿರುತ್ತಾರೆ. ಸಿಂಹವನ್ನು ನೋಡಿದಕೂಡಲೆ ತನ್ನ ಬಾಯೊಳಗಿನ ಒಣ ಎಲುವನ್ನು ಇದು ಕಸುಕೊಳ್ಳುವದೆಂದು ನಾಯಿಯು ಓಡುತ್ತಿರುವಂತೆ, ಇಂದ್ರನ ಸ್ಥಿತಿಯಾಯಿತು. ಇಂದ್ರನು ನಾರದನ ಚಿತ್ತವನ್ನು ಚಂಚಲ ಮಾಡುವದಕ್ಕಾಗಿ ಮದನನನ್ನು ಪ್ರಾರ್ಥಿಸಿದನು. ಅದಕ್ಕೆ ಮದನನು ನಾರದನ ಸಮಾಧಿಭಂಗವಾಗುವಂತೆ ಬೇಕಾದಷ್ಟು ನೆಗದಾಡಿದನು; ಆದರೆ ಪ್ರಯೋಜನವೇನೂ ಆಗಲಿಲ್ಲ ಆಗ ಮದನನು ಅಂಜಿ ತನ್ನ ಸೋಲನ್ನು ಒಪ್ಪಿಕೊಂಡು ನಾರದನ ಬಳಿಗೆ ಹೋಗಿ ಆತನ ಚರಣಕ್ಕೆರಗಿ ಕ್ಷಮೆಯನ್ನು ಬೇಡಿಕೊಂಡನು. ನಾರದನ ಮನಸ್ಸಿನಲ್ಲಿ ಮೂಲತಃ ಕ್ರೋಧವೇ ಇಲ್ಲದ್ದರಿಂದ, ಆತನು ಪ್ರಿಯವಚನಗಳನ್ನಾಡಿ, ಕಾಮದೇವನನ್ನು ಸಮಾಧಾನಗೊಳಿಸಿದನು. ಕಾಮದೇವನು ಮುನಿಯ ಚರಣಕ್ಕೆರಗಿ ಪರಿವಾರದೊಡನೆ ಹೊರಟುಹೋದನು.

ನಾರದನಿಗೆ ತಾನು ಮದನನನ್ನು ಜಯಿಸಿದೆನೆಂಬ ಗರ್ವವು ಉತ್ಪನ್ನವಾಗಿ ತನ್ನ ಪ್ರತಾಪವನ್ನು ಇಂದ್ರ ಸಭೆಯಲ್ಲಿ ವರ್ಣನಮಾಡಿದನು. ಅದರಂತೆ ಆತನು ಮಹಾದೇವನ

ಷ್ಟುಂದೆಯೂ, ಅಧ್ಯತೆಯಿಂದ ಹೇಳಲು, ಶಂಕರನು—ಮುನಿಯೇ, ನಾನು ನಿನಗೆ ಪುನಃ ಪುನ: ಹೇಳಿಕೊಳ್ಳುವೆನೇನಂದರೆ, ನನ್ನ ಮುಂದೆ ಹೇಳಿದಂತೆ ಶ್ರೀಹರಿಯ ಮುಂದೆ ಮಾತ್ರ ಈ ಸಂಗತಿಯನ್ನು ಹೇಳಬೇಡ; ಪ್ರಸಂಗಬಂದರೂ ಅದನ್ನು ಗುಪ್ತವಾಗಿಯೇ ಇಡು, ಎಂದು ಹೇಳಿದನು; ಆದರೆ ಶಂಕರನ ಉಪದೇಶವು ನಾರದನ ಮನಸ್ಸಿಗೆ ಬರಲಿಲ್ಲ. ಭರದ್ವಾಜಾ, ಹರಿಯ ಇಚ್ಛೆಯು ಪ್ರಬಲವಾಗಿರುವದರಿಂದ ಮುಂದಿನ ಮೋಜನ್ನು ಕೇಳು. ನಾರದನು ಬ್ರಹ್ಮಲೋಕಕ್ಕೆ ಹೋಗಿ, ಅಲ್ಲಿಂದ ವೀಣಾನಾದದೊಡನೆ ಹರಿನಾಮಸಂಕೀರ್ತನ ಮಾಡುತ್ತ, ವೇದಶೀರ್ಷನಾದ ಶ್ರೀ ಹರಿಯು ವಾಸಿಸುತ್ತಿರುವ ಕ್ಷೀರಸಾಗರವನ್ನು ಕುರಿತು ಗಮನ ಮಾಡಿದನು. ನಾರದನಿಗೆ ಶ್ರೀ ಹರಿಯು ಎದ್ದು ನಿಂತು ಸತ್ಕಾರಮಾಡಿ ಆಸನವನ್ನಿತ್ತನು. ಚರಾಚರಸ್ವಾಮಿಯಾದ ಶ್ರೀಪತಿಯು ಮುಗುಳು ನಗೆಯಿಂದ ನಾರದನನ್ನು ಕುರಿತು—"ಮುನಿಗಳು ಬಹುದಿವಸಗಳಲ್ಲಿ ಇಂದು ನನ್ನಮೇಲೆ ಅನುಗ್ರಹ ಮಾಡಿದಿರಿ!" ಎಂದು ಕೇಳಲು, ಶ್ರೀ ಶಂಕರನು ಹೇಳಿದ ಮಾತನ್ನು ಮರೆತು ತಾನು ಕಾಮನನ್ನು ಜಯಿಸಿದ ವೃತ್ತಾಂತವನ್ನೆಲ್ಲ ನಾರದನು ಹೇಳಿದನು. ರಘುಪತಿಯ ಪ್ರಚಂಡಮಾಯೆಯು ಯಾರಿಗೆ ಮೋಹವನ್ನುಂಟುಮಾಡದೆಯಿದ್ದೀತು! ಭಗವಂತನು ಬಾಡಿದ ಮೋರೆಯಿಂದ ನಾರದನನ್ನು ಕುರಿತು ಮೃದುವಾಣಿಯಿಂದ—ನಿಮ್ಮ ನಾಮಸ್ಮರಣಮಾತ್ರದಿಂದ ಮೋಹ, ಕಾಮ, ಮದ, ಅಭಿಮಾನ ಇವು ನಷ್ಟವಾಗುತ್ತಿರಲು, ನಿಮ್ಮ ಕಾಮವು ನಷ್ಟವಾದದ್ದೇನಾಶ್ಚರ್ಯವು? ಮುನೇ, ಯಾರ ಹೃದಯದಲ್ಲಿ ಜ್ಞಾನ—ವೈರಾಗ್ಯಗಳಿಗೆ ಆಸ್ಪದವಿರುವದಿಲ್ಲವೋ ಅವರ ಹೃದಯದಲ್ಲಿ ಮಾತ್ರ ಮೋಹಕ್ಕೆ ಆಸ್ಪದವು ದೊರೆಯುವದು. ನೀವಂತು ನೈಷ್ಠಿಕ ಬ್ರಹ್ಮಚರ್ಯ ವ್ರತದಿಂದಿರುವವರಿದ್ದು ಸ್ಥಿತಪ್ರಜ್ಞರಿರುವಿರಿ; ಅಂದ ಬಳಿಕ ನಿಮಗೆ ಮದನನು ಏನು ಪೀಡೆ ಮಾಡುವನು? ಅನ್ನಲು, ನಾರದನು ಅಭಿಮಾನದಿಂದ—ಭಗವನ್, ಇದೆಲ್ಲ ತಮ್ಮ ಕೃಪೆಯು, ಅನ್ನಲು, ಕರುಣಾಸಿಂಧು ಹರಿಯು ಮನಸ್ಸಿನಲ್ಲಿ ವಿಚಾರಮಾಡಿ ನೋಡಿ,—"ನಾರದನ ಹೃದಯದಲ್ಲಿ ವಿಶಾಲವಾದ ಗರ್ವತರುವು ಅಂಕುರಿತವಾಗಿರುವದರಿಂದ ಅದನ್ನು ನಾನು ಬೇಗನೆ ಕಿತ್ತು ತಕ್ಕದ್ದು; ಯಾಕಂದರೆ, ಸೇವಕನ ಹಿತಮಾಡುವದು ನನ್ನ ಬಿರುದಾಗಿರುವದು; ಆದ್ದರಿಂದ ಇನ್ನು ಹೀಗೆಯೇ ಮಾಡಬೇಕು" ಎಂದು ನಿಶ್ಚಯಮಾಡುತ್ತಿರಲು, ನಾರದನು ಹರಿಚರಣಕ್ಕೆರಗಿ, ಮನಸ್ಸಿನಲ್ಲಿ ಅಹಂಕಾರದಿಂದ ಬಹಳವಾಗಿ ಉಬ್ಬಿ, ಹೊರಟು ಹೋದನು.

ನಾರದನು ಹೋಗುವ ಹಾದಿಯಲ್ಲಿ ಶ್ರೀ ಹರಿಯು ಮಾಯೆಯಿಂದ ಒಂದು ನಗರವು ಉತ್ಪನ್ನವಾಗಿ, ಅಲ್ಲಿಯ ರಾಜನಾದ ಶೀಲನಿಧಿಯು ತನ್ನ ಮಗಳಾದ ವಿಶ್ವಮೋಹಿನಿಯ ಸ್ವಯಂವರವನ್ನು ನಡಿಸಿದ್ದನು. ವಿಶ್ವಮೋಹಿನಿಯು ವಿಷ್ಣುಮಾಯೆಯಾದದ್ದರಿಂದ ಆಕೆಯ ಸೌಂದರ್ಯವನ್ನು ವರ್ಣಿಸುವದು ಯಾರಿಗೆ ಶಕ್ಯವು? ನಾರದನು ಶೀಲ

ನಾಥಿಯ ಬಳಿಗೆ ಹೋಗಲು, ರಾಜನು ಅವರನ್ನು ಪೂಜಿಸಿ, ತನ್ನ ಮಗಳನ್ನು ತೋರಿಸಿ ಈಕೆಯ ಲಕ್ಷಣವನ್ನು ಹೇಳಬೇಕೆಂದು ಬೇಡಿಕೊಂಡನು. ಆಗ ನಾರದರು ರಾಜಪುತ್ರಿಯ ರೂಪವನ್ನು ನೋಡಿ ಮೋಹಿತರಾಗಿ ಆಕೆಯ ಲಕ್ಷಣವನ್ನು ನೋಡಿ ರಾಜನಿಗೆ—ಶೀಲನಿಧಿಯೇ, ಈಕೆಯನ್ನು ಲಗ್ನವಾದವನು ಅಮರನಾಗುವನು. ಸಮರಭೂಮಿಯಲ್ಲಿ ಯಾರೂ ಆತನನ್ನು ಗೆಲ್ಲಲಾರರು; ಈಕೆಯ ಪಾಣಿಗ್ರಹಣ ಮಾಡುವವನಿಗೆ ಸರ್ವಚರಾಚರ ವಿಶ್ವವು ಅಂಕಿತವಾಗುವದು, ಎಂದು ಹೇಳಿ, ಆ ಕನ್ಯೆಯ ಉಳಿದ ಗುಣಗಳನ್ನು ಗುಪ್ತವಾಗಿ ಇಟ್ಟು, ಈಕೆಯನ್ನು ತಾನೇ ಲಗ್ನಮಾಡಿಕೊಳ್ಳಬೇಕೆಂದು ಯೋಚಿಸಿ, ಸುಂದರರೂಪ ಲಾವಣ್ಯಗಳನ್ನು ವಿಷ್ಣುವಿನಿಂದ ಕೈಗಡ ಇಸುಕೊಳ್ಳುವದಕ್ಕಾಗಿ ಆತನ ಸ್ತೋತ್ರಮಾಡಿದನು. ಆಗ ಶ್ರೀ ವಿಷ್ಣುವು ನಾರದನಿಗೆ ಪ್ರತ್ಯಕ್ಷವಾಗಲು, ಇನ್ನು ತನ್ನ ಕಾರ್ಯವಾಯಿತೆಂಬ ಉಬ್ಬಿನಿಂದ ನಾರದನು ಎಲ್ಲ ವೃತ್ತಾಂತವನ್ನು ಭಗವಂತನಿಗೆ ಹೇಳಿ ದೈನ್ಯದಿಂದ—ಪ್ರಭೋ, ನನ್ನ ಮೇಲೆ ದಯವಿಟ್ಟು ನನ್ನ ಮರ್ಯಾದೆಯನ್ನು ಕಾಯುವದಕ್ಕಾಗಿ ನಿಮ್ಮ ರೂಪವನ್ನು ನನಗೆ ಕಡ ಕೊಡಬೇಕು. ಅದರ ಹೊರತು ಅನ್ಯಮಾರ್ಗದಿಂದ ಆಕೆಯು ನನ್ನನ್ನು ಲಗ್ನವಾಗಲಾರಳು. ನಾಥನೇ, ನಾನು ತಮ್ಮ ದಾಸನಿರುವದರಿಂದ ನನ್ನ ಹಿತವಾಗುವಂತೆ ಮಾಡಬೇಕು, ಎಂದು ಹೇಳಲು, ದೀನದಯಾಲು ಭಗವಂತನು ತನ್ನ ಮಾಯೆಯ ವಿಶಾಲಬಲವನ್ನು ನೋಡಿ ಮನಸ್ಸಿನಲ್ಲಿ ನಕ್ಕು—ನಾರದಾ, ಕೇಳು. ನಿನ್ನ ಹಿತಸಾಧಿಸುವಂತೆಯೇ ನಾನು ಮಾಡುವೆನು. ವ್ಯಾಧಿಗ್ರಸ್ತ ರೋಗಿಯು ಕುಪಥ್ಯವನ್ನು ಕೇಳಿದರೂ, ವೈದ್ಯನು ಕೊಡುವದಿಲ್ಲೆಂಬದು ನೆನಪಿನಲ್ಲಿರಲಿ, ಅದರಂತೆಯೇ ನಾನು ನಿನ್ನ ಹಿತಮಾಡುವೆನು, ಎಂದು ಹೇಳಿ ಪ್ರಭುವು ಅಂತರ್ಧಾನ ಹೊಂದಿದನು.

ವಿಷಯಾಗ್ರಸ್ತನಾದ ನಾರದನು ಮೂಢನಾದದ್ದರಿಂದ ಪ್ರಭುವಿನ ಗೂಢವಚನವನ್ನು ತಿಳಿಯಲಾರದೆ ಸ್ವಯಂವರಕ್ಕೆ ಹೋಗಿ, ತಾನು ಮಹಾರೂಪಸಂಪನ್ನನಾದ್ದರಿಂದ ವಿಶ್ವಮೋಹಿನಿಯು ನನಗೇ ಮಾಲೆಹಾಕುವಳೆಂದು ತಿಳಿದು ಡೌಲಿನಿಂದ ಕುಳಿತುಕೊಂಡನು. ಪಾಪ! ಶ್ರೀ ಹರಿಯ ಮಾಯೆಯಿಂದ ಆತನಿಗೆ ಮಂಗನರೂಪವು ಪ್ರಾಪ್ತವಾದದ್ದೇನು ಗೊತ್ತು? ನಾರದನ ಈ ಮರುಳುತನವನ್ನು ನೋಡಿ ಅಲ್ಲಿ ಬ್ರಾಹ್ಮಣವೇಷದಿಂದ ತಿರುಗುತ್ತಿದ್ದ ಇಬ್ಬರು ರುದ್ರಗಣಗಳು ನಗತೊಡಗಿದರು, ನಾರದನು ಸೆಟಗೊಂಡು ಆತುರದಿಂದ ಕುಳಿತಿರಲು, ರಾಜಪುತ್ರಿಯು ಆತನಕಡೆಗೆ ಹಣಕಿಸಹ ನೋಡದೆ ಮುಂದಕ್ಕೆ ಸಾಗಿ ಹೋಗಿ, ಸುಂದರ ಮನುಷ್ಯರೂಪಧಾರಣಮಾಡಿ ಕುಳಿತಿರುವ ಶ್ರೀ ಹರಿಯ ಕೊರಳಿಗೆ ಮಾಲೆಯನ್ನು ಹಾಕಿದಳು. ಅದನ್ನು ನೋಡಿ ನಾರದನ ಬುದ್ಧಿ ಪೂರ್ಣ ನಷ್ಟವಾಯಿತು. ಆಗ ಆ ಇಬ್ಬರು ರುದ್ರಗಣಗಳು ನಗುತ್ತ ನಾರದನಿಗೆ—ನಿಮ್ಮ ರೂಪವನ್ನು ಕನ್ನಡಿಯಲ್ಲಿಯಾದರೂ ನೋಡಿಕೊಳ್ಳಿರಿ, ಎಂದು ಹೇಳಿ ನಾರದನಿಗೆ ಅಂಜಿ ಓಡಿಹೋ

ದರು. ನಾರದನು ತನ್ನ ಮುಖವನ್ನು ನೀರಿನಲ್ಲಿ ನೋಡಲು, ತನ್ನ ಕಪಿರೂಪಕ್ಕಾಗಿ ಆತನಿಗೆ ಭಯಂಕರವಾದ ಸಿಟ್ಟು ಬಂದಿತು. ಆತನು ಸಿಟ್ಟಿನ ಭರದಲ್ಲಿ ಆ ರುದ್ರಗಣಗಳಿಗೆ— "ಕಪಟಿಗಳೂ, ಪಾಪಿಗಳೂ ಆದ ನೀವ್ವಿಬ್ಬರೂ ನಿಶಾಚರರಾಗಿರಿ, ನನ್ನನ್ನು ನೋಡಿ ನಕ್ಕುದ್ದರ ಫಲವನ್ನು ನೀವು ಉಣ್ಣಿರಿ, ಎಂದು ಶಾಪವನ್ನು ಕೊಟ್ಟನು. ಪುನಃ ನಾರದನು ನೀರಿನಲ್ಲಿ ಮೋರೆನೋಡಿಕೊಳ್ಳಲು, ಮೊದಲಿನಂತೆಯೇ ತನ್ನ ರೂಪವು ಇದ್ದಿತು; ಆದರೂ ಆತನಿಗೆ ಸಮಾಧಾನವಾಗದೆ ಸಿಟ್ಟಿನಿಂದ ಶ್ರೀಪತಿಯ ಕಡೆಗೆ ಹೋಗಬೇಕೆಂದು ಹೊರಟನು. ಆದರೆ ಹಾದಿಯಲ್ಲಿಯೇ ಶ್ರೀಪತಿಯು ಲಕ್ಷ್ಮಿಯನ್ನೂ, ವಿಶ್ವಮೋಹಿನಿಯನ್ನೂ ಕರಕೊಂಡು ಹೋಗುತ್ತ, ನಾರದನನ್ನು ಕುರಿತು—ಅಹೋ ಮುನಿವರ, ಎತ್ತ ಕಡೆಗೆ ಹೊರಟಿರಿ? ಎಂದು ಮಾತಾಡಿಸಲು, ನಾರದನು ಸಿಟ್ಟಿನಿಂದ ಮೈಮರೆತು ಮಾಯಾ ಮೋಹಿತನಾಗಿ ಭಗವಂತನಿಗೆ—ಎರಡನೆಯವರ ಐಶ್ವರ್ಯವನ್ನು ನೋಡಿ ನಿನಗೆ ಸಹನವಾಗುವದಿಲ್ಲ. ಈರ್ಷೆಯೂ, ಕಪಟವೂ ವಿಶೇಷವಾಗಿ ನಿನ್ನಲ್ಲಿ ತುಂಬಿರುವವು. ಸಮುದ್ರ ಮಥನಕಾಲದಲ್ಲಿ ಭಗವಾನ್ ಶಂಕರನನ್ನು ನೀನು ಮೊಸಗೊಳಿಸಿ, ದೇವತೆಗಳಿಗೆ ಹೇಳಿ ಆತನಿಂದ ವಿಷಪಾನ ಮಾಡಿಸಿದೆ. ದೈತ್ಯರಿಗೆ ಮದ್ಯವು, ಶಂಕರನಿಗೆ ವಿಷವು, ನಿನಗೆ ಮಾತ್ರ ಲಕ್ಷ್ಮಿಯೂ, ಕೌಸ್ತುಭರತ್ನವೂ! ಶಾಬಾಸ! ನೀನು ಸ್ವಾರ್ಥಸಾಧವೂ, ಕುಟಿಲನೂ ಇದ್ದು, ನಿನ್ನ ವ್ಯವಹಾರವು ಯಾವಾಗಲೂ ಕಪಟದ್ದಾಗಿರುವದು. ನೀನು ಪೂರ್ಣ ಸ್ವತಂತ್ರನು, ನಿನ್ನನ್ನು ಕೇಳುವವರು ಯಾರೂ ಇಲ್ಲವು. ಮನಸ್ಸಿಗೆ ಬಂದಂತೆ ನೀನು ನಡೆಯುವವನು. ಅಸತ್ಯವನ್ನು ಸತ್ಯವಾಗಿಯೂ, ಸತ್ಯವನ್ನು ಅಸತ್ಯವಾಗಿಯೂ ಮಾಡುವೆ. ನಿನ್ನ ಮನಸ್ಸಿಗೆ ಹರ್ಷವಿಷಾದಗಳೇನೂ ಆಗುವದಿಲ್ಲ. ಶುಭಾಶುಭ ಕರ್ಮಗಳಂತು ನಿನ್ನನ್ನು ಬಾಧಿಸುವದೇ ಇಲ್ಲ. ನಿನಗೆ ಈವರೆಗೆ ಯಾರೂ ಗಟ್ಟಿಗರು [illegible] ದಿಲ್ಲ. ಇಂದುವರೆಗೆ ನೀನು ಕೃತಕರ್ಮದ ಫಲವನ್ನು ಭೋಗಿಸ [illegible] ಗತಿಯಿಲ್ಲ. ಯಾವ ನರದೇಹಧಾರಣಮಾಡಿಕೊಂಡು ನೀನು ನನ್ನನ್ನು ವಂಚಿಸಿದೆಯೋ, ಅದೇ ನರದೇಹವನ್ನು ಧಾರಣಮಾಡೆಂದು ನಾನು ನಿನಗೆ ಶಾಪಕೊಡುವೆನು! [illegible] ನೀನು ವಾನರರೂಪಕೊಟ್ಟದ್ದರಿಂದ ವಾನರರೇ ನಿನಗೆ ಸಹಾಯಕರಾಗಲಿ. [illegible] ವನು [illegible] ನನಗೆ ಉಂಟುಮಾಡಿದ್ದರಿಂದ ನೀನೂ ಸ್ತ್ರೀವಿರಹ [illegible] ತಳಮಳಿಸು!

ಶ್ರೀಹರಿಯು ಪ್ರಸನ್ನಾಂತಃಕರಣದಿಂದ ನಾರದನ ಶಾಪವನ್ನು ಸ್ವೀಕರಿಸಿ [illegible] ದೇವಕಾರ್ಯವನ್ನು ಸಾಧಿಸಿದನು. ಹರಿಯು ಮಾಯೆಯು ನಿವೃತ್ತವಾಗಲು, ಅಲ್ಲಿ [illegible] ನೂ ಇಲ್ಲ, ರಾಜಕುಮಾರಿಯೂ ಇಲ್ಲ. ಆಗ ನಾರದನು ಭಯಭೀತನಾಗಿ ಹರಿಚರಣವನ್ನು ಹಿಡಿದು ಬಗೆಬಗೆಯಾಗಿ ಪ್ರಾರ್ಥಿಸಿ,— ಪ್ರಭೋ, ನನ್ನ ಅಪರಾಧವನ್ನು ಕ್ಷಮಿಸು. [illegible] ದುರುತ್ತರಕೊಟ್ಟದ್ದರಿಂದ ನಾನು ಮಹಾದೋಷಿಯಾದೆನು. ಆ ದೋಷನಿವಾರಣವು ಹೇಗೆ

ಆಗಬೇಕು!' ಎಂದು ಕೇಳಲು, ಭಗವಂತನು—ನಾರದಾ, ಆ ದೋಷನಿವಾರಣಕ್ಕಾಗಿ ನೂರುಸಾರೆ ಶಂಕರನನಾಮದ ಜಪಮಾಡು, ಅಂದರೆ ಕೂಡಲೆ ನಿನ್ನ ಮನಸ್ಸು ಶಾಂತವಾಗುವದು. ಶಿವನಷ್ಟು ನನಗೆ ಯಾರೂ ಪ್ರಿಯರಲ್ಲವು. ಶಂಕರನ ಕೃಪೆಯಿಲ್ಲದವನಿಗೆ ನನ್ನ ಭಕ್ತಿಯು ದುರ್ಲಭವಾದದ್ದು. ಮುನೇ, ಹೋಗು, ಪೃಥ್ವಿಯಮೇಲೆ ಸಂಚಾರವ ಮಾಡುತ್ತಲಿರು. ಇನ್ನುಮೇಲೆ ನನ್ನ ಮಾಯೆಯು ನಿನ್ನಮುಂದೆ ನಿಲ್ಲಲಾರದು, ಎಂದು ಹೇಳಿ, ಮುನಿಯನ್ನು ಸಮಾಧಾನಪಡಿಸಿ ಪ್ರಭುವು ಅಂತರ್ಧಾನಹೊಂದಿದನು. ನಾರದನು ರಾಮಗುಣಗಾನಮಾಡುತ್ತ ಸತ್ಯಲೋಕವನ್ನು ಕುರಿತು ತೆರಳಿದನು. ಮೋಹಮುಕ್ತರಹಿತನಾದ ನಾರದನು ಮಾರ್ಗಹಿಡಿದು ಹೋಗುತ್ತಿರುವದನ್ನು ನೋಡಿ ಆ ಶಿವಗಣಗಳಿಬ್ಬರೂ ಆತನ ಚರಣಕ್ಕೆರಗಿ ಆರ್ತಸ್ವರದಿಂದ—ಮುನಿರಾಯಾ, ನಾವು ಬ್ರಾಹ್ಮಣರಲ್ಲದೆ ಶಿವಗಣಗಳಿರುವೆವು. ನಮ್ಮಿಂದ ಅಪರಾಧವಾಯಿತು. ನಮಗೆ ಉಶ್ಶಾಪವು ದೊರೆಯಬೇಕೆಂದು ಪ್ರಾರ್ಥಿಸಲು, ನಾರದನು—ನೀವಿಬ್ಬರು ರಾಕ್ಷಸವಂಶದಲ್ಲಿ ಆಗುವಿರಿ; ಆದರೆ ವೈಭವ, ತೇಜ, ಬಲ, ಶೀಲ ಇವುಗಳಿಂದ ಸಂಪನ್ನರಾಗಿ, ಬಾಹುಬಲದಿಂದ ಸರ್ವವಿಶ್ವವನ್ನು ಗೆದ್ದಾಗ ಶ್ರೀ ಹರಿಯು ಮಾನವರೂಪಧಾರಣಮಾಡಿ ನಿಮ್ಮನ್ನು ಸಂಹರಿಸುವನು; ಆಮೇಲೆ ನೀವು ಮುಕ್ತರಾಗಿ ಪುನರಾವೃತ್ತಿರಹಿತರಾಗುವಿರಿ, ಎಂದು ಹೇಳಿದನು. ಪಾರ್ವತೀ, ಒಂದು ಕಲ್ಪದಲ್ಲಿ ಈ ಕಾರಣದಿಂದ ರಾಮಾವತಾರವಾಯಿತು.

ಆ ಸ್ವಾಯಂಭೂವಮನುವಿನ ತಪಶ್ಚರ್ಯಕ್ಕೆ ಪ್ರಸನ್ನನಾಗಿ ರಾಮನು ಅವತಾರತಾಳಿದ್ದು--ಈ ಅನುಪಮ ಸೃಷ್ಟಿಯನ್ನು ನಿರ್ಮಿಸಿದ ಸ್ವಾಯಂಭೂವಮನುವೂ ಆತನ ಹೆಂಡತಿಯಾದ ಶತರೂಪೆಯೂ ಸದ್ಧರ್ಮಾಚಾರ–ಸಂಪನ್ನರಿದ್ದರು. ಈವರೆಗೆ ವೇದವು ಅವರ ಧರ್ಮಮರ್ಯಾದೆಯ ಗಾಯನಮಾಡುತ್ತಿರುವದು. ಸ್ವಾಯಂಭೂಮನುವಿನ ಪುತ್ರನು ಉತ್ತಾನಪಾದನು. ಉತ್ತಾನಪಾದನ ಹೊಟ್ಟೆಯಲ್ಲಿ ಹರಿಭಕ್ತನಾದ ಧ್ರುವನು ಉತ್ಪನ್ನನಾದನು. ಪ್ರಿಯವ್ರತನು ಸ್ವಾಯಂಭೂಮನುವಿನ ಚಿಕ್ಕಮಗನು. ಸ್ವಾಯಂಭೂಮನುವಿನ ಮಗಳು ದೇವಹೂತಿಯು. ಆಕೆಯನ್ನು ಕರ್ದಮಋಷಿಗೆ ಕೊಟ್ಟಿತ್ತು. ದೇವಹೂತಿಯ ಹೊಟ್ಟೆಯಲ್ಲಿ ಸಾಂಖ್ಯಶಾಸ್ತ್ರದ ಉತ್ಪಾದಕನಾದ ಭಗವಾನ್ ಕಪಿಲಮುನಿಯು ಅವತಾರಮಾಡಿದನು. ಆ ಸ್ವಾಯಂಭೂಮನುವು ಬಹುಕಾಲ ಧರ್ಮದಿಂದ ರಾಜ್ಯವಾಳಿ ಸಂಸಾರಸುಖವನ್ನು ಭೋಗಿಸಿದನು; ಆದರೆ ಯಾವತ್ತು ಜನ್ಮವು ಹರಿಭಕ್ತಿಯಹೊರತಾಗಿ ಹೋದದ್ದರಿಂದ ಆತನಿಗೆ ಬಹಳ ಪಶ್ಚಾತ್ತಾಪವಾಯಿತು. ಆಗ ಆತನು ಮಗನಿಗೆ ಆಗ್ರಹದಿಂದ ರಾಜ್ಯವನ್ನು ಕೊಟ್ಟು ಹೆಂಡತಿಯೊಡನೆ ನೈಮಿಷಾರಣ್ಯವನ್ನು ಕುರಿತು ಪ್ರಯಾಣಮಾಡಿದನು. ಅವರು ಅಲ್ಲಿ ಸಹಸ್ರಾವಧಿವರುಷ ತಪಶ್ಚರ್ಯಮಾಡಲು, ಭಗವಾನ್ ಶ್ರೀಹರಿಯು ವರವನ್ನು ಬೇಡಲಿಕ್ಕೆ

ಹೇಳಿದನು. ಆಗ ಸ್ವಯಂಭೂಮನುವು—“ಪ್ರಭೋ, ನನ್ನ ಮನಸ್ಸಿನ ಇಚ್ಛೆಯನ್ನು ಹೇಳಲಿಕ್ಕೆ ಸಂಕೋಚವಾದರೂ ಹೇಳಿಬಿಡುವೆನು. ನಿನ್ನಂಥವ ಮಗನು ನನ್ನ ಹೊಟ್ಟೆಯಲ್ಲಿ ಹುಟ್ಟಬೇಕು. ಅಕೃತ್ರಿಮ ಪ್ರೇಮವು ನನ್ನಲ್ಲಿ ಉತ್ಪನ್ನವಾಗಿ ನಿನ್ನನ್ನೇ ನನ್ನ ಪ್ರಾಣಗಳು ಅನುಸರಿಸಬೇಕು.” ಎಂದು ಬೇಡಿಕೊಳ್ಳಲು, ಭಗವಂತನು-“ಮನುಶ್ರೇಷ್ಠನೇ, ನನ್ನಂತಹ ಮಗನನ್ನು ಹುಡುಕಲಿಕ್ಕೆ ನಾನೆಲ್ಲಿ ಹೋಗಲಿ? ನಾನೇ ನಿನ್ನ ಮಗನಾಗಿ ಹುಟ್ಟುವೆನು” ಎಂದು ಹೇಳಿ, ಶತರೂಪೆಗೆ—ನೀನು ವರವನ್ನು ಬೇಡು, ಎಂದು ಹೇಳಲು, ಶತರೂಪೆಯು—ದಯಾಘನಾ, ನನ್ನ ಪತಿಯು ಕೇಳಿಕೊಂಡ ವರವೇ ನನಗೆ ಅತ್ಯಂತ ಪ್ರಿಯಕರವಾಗಿರುವದು; ಆದರೆ ಪ್ರಭುವಿನ ಅಪ್ಪಣೆಯಾಗುವದರಿಂದ ಕೇಳಿಕೊಳ್ಳುವ ಸಾಹಸಮಾಡುವೆನು. ನಿನ್ನ ಅನನ್ಯಭಕ್ತರಿಗೆ ದೊರೆಯುವ ಸುಖವೂ, ಗತಿಯೂ, ಅವರ ಭಕ್ತಿಯೂ, ಅವರ ಪ್ರಭುಚರಣದ ಮೇಲಿನ ಪ್ರೀತಿಯೂ, ವಿವೇಕವೂ, ರೀತಿಯೂ ನನಗೆ ಪ್ರಾಪ್ತವಾಗಬೇಕು, ಎಂದು ಬೇಡಿಕೊಳ್ಳಲು, ಕೃಪಾಸಾಗರನು—ಮಾತೇ, ನಿನ್ನ ಮನಸ್ಸಿನ ಬಯಕೆಗಳೆಲ್ಲ ಪೂರ್ಣವಾಗುವವು. ನನ್ನ ಅನುಗ್ರಹದಿಂದ ನಿನಗೆ ಅಲೌಕಿಕ ಜ್ಞಾನವು ಉತ್ಪನ್ನವಾಗಿ, ಅದು ಎಂದೂ ನಷ್ಟವಾಗಲಿಕ್ಕಿಲ್ಲವು, ಎಂದು ಹೇಳಿ ಮನುವಿಗೆ—ತಾತ, ನೀನು ಇನ್ನು ಇಂದ್ರಲೋಕಕ್ಕೆ ಹೋಗಿ ಅಲ್ಲಿ ವೈಭವವನ್ನು ಭೋಗಿಸಿ ಕೆಲಕಾಲದಮೇಲೆ ಅಯೋಧ್ಯೆಯಲ್ಲಿ ಭೂಪಾಲನಾಗಿ ಹುಟ್ಟುವೆ. ಆಗ ನಾನು ನರರೂಪದಿಂದ ನಿನ್ನಲ್ಲಿ ಅವತರಿಸಿ ಲೀಲೆಯನ್ನು ಮಾಡುವೆನು. ಆ ಲೀಲೆಯ ಶ್ರವಣಮಾಡಿ ಜನರು ಕೃತಾರ್ಥರಾಗುವರು. ನನ್ನ ಈ ಪ್ರತಿಜ್ಞೆಯು ತ್ರಿವಾರ ಸತ್ಯವಾಗಿರುವದು, ಎಂದು ಹೇಳಿ ಅಂತರ್ಧಾನಹೊಂದಿದನು. ಪಾರ್ವತೀ, ಒಂದು ಕಲ್ಪದಲ್ಲಿ ಈ ಕಾರಣದಿಂದ ಪ್ರಭುವು ಅವತರಿಸಿದನು.

(೫) ಎಲೈ ಭರದ್ವಾಜನೇ, ಶ್ರೀರಾಮನು ಅವತರಿಸಿದ ಇನ್ನೊಂದು ಕಾರಣವನ್ನು ಹೇಳುವೆನು ಕೇಳು: ಜಗತ್ಪ್ರಸಿದ್ಧವಾದ ಕಾಶ್ಮೀರದೇಶದಲ್ಲಿ ಸತ್ಯಕೇತುವೆಂಬ ಪ್ರತಾಪಿಯಾದ ರಾಜನು ರಾಜ್ಯವಾಳುತ್ತಿದ್ದನು. ಆತನಿಗೆ ಸರ್ವಗುಣಸಂಪನ್ನರೂ, ಮಹಾವೀರರೂ-ಧೀರರೂ ಆದ ಇಬ್ಬರು ಮಕ್ಕಳಿದ್ದರು. ಅವರಲ್ಲಿ ರಾಜ್ಯಾಧಿಕಾರಿಯಾದ ಹಿರಿಯ ಮಗನ ಹೆಸರು ಪ್ರತಾಪಭಾನುವು, ಚಿಕ್ಕವನ ಹೆಸರು ಅರಿಮರ್ದನನು. ಅವರಿಬ್ಬರು ಅಣ್ಣತಮ್ಮಂದಿರು ಪರಸ್ಪರ ನಿಷ್ಕಪಟವಾದ ಪ್ರೇಮವುಳ್ಳವರಾಗಿದ್ದರು. ಪ್ರತಾಪಭಾನುವು ಧರ್ಮದಿಂದ ರಾಜ್ಯಪರಿಪಾಲನಮಾಡುತ್ತಿದ್ದದ್ದರಿಂದ, ಆತನ ರಾಜ್ಯದಲ್ಲಿ ಪಾಪವು ಲವಲೇಶವಾದರೂ ಇದ್ದಿಲ್ಲ. ಪ್ರತಾಪಭಾನುವಿನ ಮಂತ್ರಿಯ ಹೆಸರು ಧರ್ಮರುಚಿಯು. ಆತನು ಅತ್ಯಂತ ಸುಜ್ಞನಾಗಿದ್ದು, ಶುಕ್ರಾಚಾರ್ಯನಂತೆ ಅತ್ಯಂತ ಹಿತೈಷಿಯಾಗಿದ್ದನು ಹಿಗೆ ಸುಜ್ಞಮಂತ್ರಿಯು; ಬಲಿಷ್ಠನೂ-ವೀರನೂ ಆದ ತಮ್ಮನು; ಸ್ವತಃ ಪ್ರತಾಪಭಾನುವು ಪ್ರತಾಪಿಯೂ ರಣಶೂರನೂ! ಹೀಗೆ ಅಪೂರ್ವಯೋಗವು ಒದ

ಸಿದ್ದರಿಂದ ಪ್ರತಾಪಭಾನುವು ತನ್ನ ಪ್ರಚಂಡವಾದ ಸೈನ್ಯದಿಂದ ದಿಗ್ವಿಜಯಮಾಡಿ ಸಾರ್ವಭೌಮಪದವಿಯನ್ನು ಪಡೆದನು. ಆತನು ಗುರುಗಳನ್ನೂ, ದೇವತೆಗಳನ್ನೂ, ಸಂತರನ್ನೂ, ಪಿತರರನ್ನೂ, ಬ್ರಾಹ್ಮಣರನ್ನೂ ಸರ್ವದಾ ಸೇವಿಸುತ್ತಿದ್ದನು ವೇದದಲ್ಲಿ ಹೇಳಿದ ಯಾವತ್ತೂ ಯಜ್ಞಗಳನ್ನು ಪ್ರತಾಪಭಾನುವು ಸಾವಿರ ಸಾವಿರ ಸಾರೆ ಕೃಷ್ಣಾರ್ಪಣಬುದ್ಧಿಯಿಂದ ಮಾಡಿದನು. ಒಂದಾನೊಂದುದಿನ ಆ ಪ್ರತಾಪಿಯು ಬೇಟೆಯಾಡುವದಕ್ಕಾಗಿ ವಿಂಧ್ಯಾಚಲದ ಅಡವಿಗೆ ಹೋಗಿ, ಒಂದು ಭಯಂಕರವಾದ ಕಾಡ ಹಂದಿಯ ಬೆನ್ನುಹತ್ತಿ ಬಹುದೂರ ಹೋದನು. ಆದರೆ ಆ ಹಂದಿಯು ರಾಜನಬಾಣಕ್ಕೆ ಗುರಿಯಾಗದೆ, ಒಂದು ಕೊಳ್ಳವನ್ನು ಪ್ರವೇಶಿಸಿ ರಾಜನಿಗೆ ಕಾಣದಾಯಿತು. ಕಡೆಗೆ ಪ್ರತಾಪಭಾನುವು ದಾರಿಯತಪ್ಪಿ ಹಸಿವೆನೀರಡಿಕೆಗಳಿಂದ ಕಂಗಾಲಾದನು. ಆತನು ಅರಣ್ಯದಲ್ಲಿ ಅತ್ತಿತ್ತ ಅಲೆದಾಡುತ್ತಿರಲು, ಒಂದು ಆಶ್ರಮವು ಆತನ ಕಣ್ಣಿಗೆ ಬಿದ್ದಿತು. ಅಲ್ಲಿ ಕಪಟಮುನಿವೇಷದಿಂದ ಪ್ರತಾಪಭಾನುವಿನ ಒಬ್ಬ ಶತ್ರುರಾಜನು ವಾಸಿಸುತ್ತಿದ್ದನು. ಪ್ರತಾಪಭಾನುವು ಆ ರಾಜನನ್ನು ಸೋಲಿಸಿದ್ದರಿಂದ ಆತನು ತನ್ನ ರಾಜಧಾನಿಯನ್ನು ಪ್ರವೇಶಿಸದೆ, ತನಗೆ ಈಗ ಅನುಕೂಲಕಾಲವಿರುವದಿಲ್ಲೆಂದು ತಿಳಿದು ಕಾಲನಿರೀಕ್ಷಣಮಾಡುತ್ತ ಆ ಆಶ್ರಮದಲ್ಲಿ ತಾಪಸವೇಷದಿಂದ ವಾಸಿಸುತ್ತಿದ್ದನು. ಪ್ರತಾಪಭಾನುವು ಆ ಕಪಟಮುನಿಯ ಬಳಿಗೆ ಹೋಗಲು, ಆತನು ಪ್ರತಾಪಭಾನುವಿನ ಗುರುತು ಹಿಡಿದನು; ಆದರೆ ಹಸಿವೆನೀರಡಿಕೆಗಳಿಂದ ಕಂಗಾಲಾದ ಪ್ರತಾಪಭಾನುವಿಗೆ ಆತನ ಗುರುತು ಹತ್ತಲಿಲ್ಲ. ಯಾವನೋ ಒಬ್ಬ ಮಹರ್ಷಿಯೆಂದು ತಿಳಿದು ಪ್ರತಾಪಭಾನುವು ಕುದುರೆಯಿಂದ ಇಳಿದು ಆತನನ್ನು ನಮಸ್ಕರಿಸಿದನು. ಆಗ ಕಪಟಮುನಿಯು ಪ್ರತಾಪಭಾನುವಿಗೆ ಒಂದು ಸರೋವರವನ್ನು ತೋರಿಸಲು, ಪ್ರತಾಪಭಾನುವು ಅಲ್ಲಿ ಕುದುರೆಯ ಮೈತೊಳೆದು ಸ್ನಾನಮಾಡಿ ವಿಶ್ರಾಂತಿಯನ್ನು ಹೊಂದಿದನು. ಅಷ್ಟರಲ್ಲಿ ಸಂಜೆಯಾಗಲು, ಆ ಮುನಿಯು ಆಗ್ರಹಿಸಿದ ರಾಜನು ಆ ರಾತ್ರಿ ಆಶ್ರಮದಲ್ಲಿಯೇ ಉಳಿದನು. ಭವಿತವ್ಯತೆಯಂತೆ ಬುದ್ಧಿಯು ಒದಗುತ್ತಿರುತ್ತದೆ. ಭವಿತವ್ಯತೆಯು ತಾನಾಗಿಯೇ ವ್ಯಕ್ತಿ ಮಾತ್ರನ ಕಡೆಗೆ ಹೋಗದೆ, ಆ ವ್ಯಕ್ತಿಯನ್ನೇ ತನ್ನಕಡೆಗೆ ಎಳೆದುಕೊಳ್ಳುತ್ತಿರುತ್ತದೆ. ಪ್ರತಾಪಭಾನುವು ಆ ಆಶ್ರಮದಲ್ಲಿ ನಿಂತದ್ದೇ ಅನರ್ಥಕ್ಕೆ ಕಾರಣವಾಯಿತು. ಪ್ರತಾಪಭಾನುವು ಮುನಿಯನ್ನು ನಮಸ್ಕರಿಸಿ ಪರಿಪರಿಯಾಗಿ ಸ್ತೋತ್ರಮಾಡಿ ತಮ್ಮ ಹೆಸರು ಹೇಳುವ ಕೃಪೆಯಾಗಬೇಕೆಂದು ಬೇಡಿಕೊಳ್ಳಲು, ಆ ಮುನಿಯು—ರಾಜಾ, ನನ್ನ ಹೆಸರು ಭಿಕಾರಿಯು! ನನಗೆ ಮನೆಯಿಲ್ಲ ಮಾರಿಲ್ಲ! ಈ ವರೆಗೆ ನಾನು ಯಾರಕಣ್ಣಿಗೂ ಬಿದ್ದಿರುವದಿಲ್ಲ; ಲೋಕಮಾನ್ಯತೆಯು ತಪೋರೂಪವಾದ ಕಾನನವನ್ನು ಅಗ್ನಿಯಂತೆ ದಹನಮಾಡುವದರಿಂದ, ಅನ್ಯರು ಆದರಿಸದಂತೆ ನಾನು ಗುಪ್ತವಾಗಿಯೂ, ಕಂಗಾಲನಾಗಿಯೂ ಇಲ್ಲಿ ವಾಸಿಸುವೆನು. ಶ್ರೀಹರಿಯು ಹೊರತು ನನಗೆ ಯಾರಹಂಗೂ ಇರುವ

ದಿಲ್ಲ; ನೀನೇ ಕೇಳು; ಲೋಕರಂಜನಮಾಡಿ ನಾನೇನು ಗಳಿಸಬೇಕಾಗಿದೆ? ಆದರೆ ನೀನು ನನ್ನಲ್ಲಿ ಕೇವಲ ವಿಶ್ವಾಸವಿಟ್ಟಿರುವದರಿಂದ ನಿನಗೆ ನನ್ನ ಹೆಸರನ್ನು ಹೇಳುವೆನು ಕೇಳು_ ನನ್ನ ಹೆಸರು "ಏಕತನು." ಆದಿ ಸೃಷ್ಟಿಯ ಸಂಗಡಲೇ ನನ್ನ ಉತ್ಪತ್ತಿಯು ಆಯಿತ್ತು ಅಂದಿನಿಂದ ನಾನು ಎರಡನೆಯ ದೇಹವನ್ನು ಧರಿಸದ್ದರಿಂದ ನನಗೆ "ಏಕತನುವೆ" ಂಬ ಈ ಹೆಸರು ಬಂದಿರುತ್ತದೆ. ತಮ್ಮಾ, ನನ್ನ ಮಾತಿಗೆ ನೀನು ಆಶ್ಚರ್ಯಪಡಬೇಡ. ತಪಸ್ಸಿನಿಂದ ಬೇಕಾದದ್ದು ಆಗುವದು. ತಪಸ್ಸಿನಿಂದಲೇ ಬ್ರಹ್ಮ-ವಿಷ್ಣು-ಮಹೇಶ್ವರರು ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವರು; ನಿನ್ನ ಭಕ್ತಿ ವಿಶ್ವಾಸಗಳಿಗೆ ಪ್ರಸನ್ನನಾಗಿರುವ ನನ್ನನ್ನು ಕುರಿತು ನೀನು ಬೇಕಾದವರವನ್ನು ಬೇಡಿಕೋ, ಅನ್ನಲು, ರಾಜನು ಅತ್ಯಂತವಾದ ಭಕ್ತಿಯಿಂದ ವಂದಿಸಿ ತನ್ನ ನಿಜವಾದ ಹೆಸರು ಹೇಳಿ—ಎಲೈ ಕೃಪಾಸಾಗರ ಮುನಿಯೇ, ನನ್ನ ದೇಹವು ಜರಾಮರಣದುಃಖರಹಿತವಾಗಬೇಕು; ರಣದಲ್ಲಿ ನಾನು ಅಜಿಂಕ್ಯನಾಗಬೇಕು; ಪೃಥ್ವಿಯಲ್ಲಿ ನನ್ನ ರಾಜ್ಯವು ಏಕಛತ್ರವಾಗಿಯೂ, ನಿಷ್ಕಂಟಕವಾಗಿಯೂ, ನೂರು ಕಲ್ಪಗಳ ವರೆಗೆ ನಡೆಯುವಂತಹದಾಗಿಯೂ ಇರಬೇಕು, ಎಂದು ಬೇಡಿಕೊಳ್ಳಲು, ಮುನಿಯು—ರಾಜಾ, ಹಾಗೆಯೇ ಆಗುವದು; ಆದರೆ [illegible] ಕುಲ ಒಂದನ್ನು ಬಿಟ್ಟು ಪ್ರತ್ಯಕ್ಷ ಕಾಲನು ಕೂಡ ನಿನ್ನ ಪಾದಗಳ ಮೇಲೆ ಮಸ್ತಕವಿಡುವನು_ ಬ್ರಾಹ್ಮಣರು ತಪೋಬಲದಿಂದ ಯಾವಾಗಲೂ ಬಲಿಷ್ಠರೇ ಆಗಿರುವರು. ಅವರ ಕೋಪದಿಂದ ರಕ್ಷಿಸಲಿಕ್ಕೆ ಯಾರೂ ಸಮರ್ಥರಲ್ಲವು. ರಾಜಾ, ಅಂಥ ಬ್ರಾಹ್ಮಣರನ್ನು ಸ್ವಾಧೀನಪಡಿಸಿಕೊಂಡರೆ ಬ್ರಹ್ಮ-ವಿಷ್ಣು-ಮಹೇಶ್ವರರೂ ನಿನಗೆ ವಶವಾಗುವರೆಂದು ತಿಳಿ. ಬ್ರಹ್ಮಶಾಪ ಒಂದನ್ನು ಬಿಟ್ಟು ನಿನಗೆ ಯಾತರ ಭಯವೂ ಇಲ್ಲ, ಎಂದು ಹೇಳಿದನು. ಅದಕ್ಕೆ ರಾಜನು—ಮುನಿವರ್ಯರೇ, ಬ್ರಾಹ್ಮಣರನ್ನು ವಶಮಾಡಿಕೊಳ್ಳುವ ಉಪಾಯವೇನಾದರೂ ಇದ್ದರೆ ದಯಮಾಡಿ ಹೇಳಬೇಕು, ಎಂದು ಪುನಃ ಪ್ರಾರ್ಥಿಸಲು, ಮುನಿಯು-ರಾಜಾ, ಬ್ರಾಹ್ಮಣರನ್ನು ಸ್ವಾಧೀನಪಡಿಸಿಕೊಳ್ಳುವ ಉಪಾಯಗಳು ಹಲವು ಇದ್ದರೂ, ಅವು ಕಷ್ಟಸಾಧ್ಯವೂ, ಅನಿಶ್ಚಿತವೂ ಆಗಿರುವವು, ಬ್ರಾಹ್ಮಣರು ಭೋಜನಪ್ರಿಯರಾದದ್ದರಿಂದ ಅವರನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ಭೋಜನವು ಶ್ರೇಷ್ಠ ಉಪಾಯವಾಗಿರುವದು; ಅದರೆ ಅದರಲ್ಲಿಯೂ ಹಲವು ತೊಂದರೆಗಳಿರುತ್ತವೆ; ಆದ್ದರಿಂದ ಬ್ರಾಹ್ಮಣಭೋಜನಕ್ಕಾಗಿ ನಾನು ಅಡಿಗೆಮಾಡಬೇಕು, ನೀನು ಬಡಿಸಬೇಕು, ಅಂದರೆ ಊಟಮಾಡಿದ ಬ್ರಾಹ್ಮಣರೆಲ್ಲ ನಿನಗೆವಶವಾಗುವರು; ಮತ್ತು ಅವರ ಮನೆಯಲ್ಲಿ ಭೋಜನಮಾಡಿದ ಬ್ರಾಹ್ಮಣರೂ ನಿನಗೆ ವಶವಾಗುವರು. ಆದರೆ ಎಂದೂ ಯಾರಮನೆಗೂ ಹೋಗದ ನಾನು ನಿನ್ನ ರಾಜಧಾನಿಗೆ ಬರುವದೊಂದು ಕಷ್ಟದಕೆಲಸವಾಗಿದೆ.

ಮುನಿಯ ಈ ಮಾತುಗಳನ್ನು ಸತ್ಯವೆಂದು ತಿಳಿದು ರಾಜನು ಅತ್ಯಂತ ವಿನಯದಿಂದ—ಮಹಾರಾಜ, ದೊಡ್ಡವರು ಸಣ್ಣವರ ಮೇಲೆ ಕೃಪೆಯನ್ನೇ ಮಾಡುವರೆಂದು

ಶಾಸ್ತ್ರವು ಹೇಳುತ್ತಿರುವದು. ಪರ್ವತವು ಯಾವಾಗಲೂ ತನ್ನ ತಲೆಯ ಮೇಲೆ ತೃಣವನ್ನು ಧರಿಸುತ್ತಿರುವದು; ಅಗಾಧವಾದ ಸಮುದ್ರವು ತನ್ನ ಮೇಲ್ಭಾಗದಲ್ಲಿ ನೊರೆಯನ್ನು ಯಾವಾಗಲೂ ಧರಿಸುವದು; ಈ ಪೃಥ್ವಿಯು ಯಾವಾಗಲೂ ಧೂಳಿಯನ್ನು ತಲೆಯ ಮೇಲೆ ಧರಿಸುವದು; ಆದ್ದರಿಂದ ತಾವು ನನ್ನನ್ನು ಅನುಗ್ರಹಿಸಿ ನನ್ನ ಕಲ್ಯಾಣ ಮಾಡಬೇಕು, ಎಂದು ಬೇಡಿಕೊಳ್ಳಲು, ಮುನಿಯು—ರಾಜಾ, ನಿನ್ನ ಭಕ್ತಿಗೆ ಮೆಚ್ಚಿದ ನಾನು ಏನಾದರೂ ಮಾಡಬೇಕಾಗಿರುವದು. ನೀನು ದಿನಾಲು ಹೊಸಹೊಸ ಒಂದು ಲಕ್ಷ ಬ್ರಾಹ್ಮಣರನ್ನು ಸಪರಿವಾರ ಊಟಕ್ಕೆ ಕರೆಯುತ್ತಿರು. ಹೀಗೆ ಒಂದು ವರ್ಷ ಬ್ರಾಹ್ಮಣಭೋಜನ ಮಾಡಿಸುವಂತೆ ಸಂಕಲ್ಪವಿಡು. ನಿನ್ನ ಸಂಕಲ್ಪವು ಮುಗಿಯುವವರೆಗೆ ನಾನು ನಿನ್ನಲ್ಲಿ ಅಡಿಗೆ ಮಾಡುವೆನು; ಆದರೆ ನಾನು ಈ ವೇಷದಿಂದ ಮಾತ್ರ ನಿನ್ನ ರಾಜಧಾನಿಗೆ ಬರಲಾರೆನು. ನಿನ್ನ ಪುರೋಹಿತನನ್ನು ನನ್ನ ಮಾಯೆಯಿಂದ ಇಲ್ಲಿಗೆ ತಂದು, ಆತನನ್ನು ನನ್ನ ಹಾಗೆ ಮಾಡಿ ಇಲ್ಲಿ ಇಡುವೆನು; ನಾನು ನಿನ್ನ ಪುರೋಹಿತನ ಹಾಗೆ ಆಗಿ ನಿನ್ನಲ್ಲಿ ಅಡಿಗೆ ಮಾಡುವೆನು. ಬ್ರಾಹ್ಮಣರು ಹೋಮಹವನಗಳಿಂದ ಯಜ್ಞ ಸೇವೆಯನ್ನು ಮಾಡುವದರಿಂದ ದೇವತೆಗಳು ಸಹಜವಾಗಿ ಅವರಿಗೆ ಪ್ರಸನ್ನರಾಗಿರುವರು; ಆದರೆ ರಾಜಾ, ಈಗ ರಾತ್ರಿಯು ಬಹಳವಾಯಿತು. ಇನ್ನು ಮಲಗಿಕೊಂಡು ನಿದ್ರೆಮಾಡು. ನನ್ನ ನಿನ್ನ ಭೆಟ್ಟಿಯು ಇನ್ನು ಮೂರುದಿವಸಗಳ ಮೇಲೆ ಆಗುವದು. ನನ್ನ ತಪಃ ಸಾಮರ್ಥ್ಯದಿಂದ ಕುದುರೆಸಹಿತವಾಗಿ ನಿನ್ನನ್ನು ನಾನು ನಿನ್ನ ಮನೆಗೆ ಮುಟ್ಟಿಸುವೆನು. ನಾನು ನಿನ್ನ ಪುರೋಹಿತನ ವೇಷದಿಂದ ಬಂದು ಏಕಾಂತದಲ್ಲಿ ನಿನಗೆ ಈ ಸಂಗತಿ ತಿಳಿಸಿದಾಗ ನನ್ನ ಮಾತಿನ ಗುರುತು ಹಿಡಿ, ಎಂದು ಹೇಳಿದನು. ಮುನಿಯ ಅಪ್ಪಣೆಯಂತೆ ಪ್ರತಾಪ ಭಾನುವು ಮಲಗಿಕೊಳ್ಳಲು, ದಣಿದು ಬಂದಿದ್ದ ಆತನಿಗೆ ಗಾಢವಾದ ನಿದ್ದೆಯು ಹತ್ತಿತು; ಆದರೆ ಸೇಡು ತೀರಿಕೊಳ್ಳಲು ಆತುರನಾಗಿದ್ದ ಕಪಟ ಮುನಿಗೆ ನಿದ್ರೆಯು ಬರಲೊಲ್ಲದು. ಅಷ್ಟರಲ್ಲಿ ಹಂದಿಯ ವೇಷವನ್ನು ಧರಿಸಿದ ಕಾಲಕೇತುವೆಂಬ ರಾಕ್ಷಸನು ಆತನ ಬಳಿಗೆ ಬಂದನು. ಆ ರಾಕ್ಷಸನು ತಾಪಸಿಯಾದ ರಾಜನ ಜೀವದ ಗೆಳೆಯನಾಗಿದ್ದು, ಕಪಟ ವಿದ್ಯೆಯಲ್ಲಿ ಅತ್ಯಂತ ಪ್ರವೀಣನಾಗಿದ್ದನು. ಆ ರಾಕ್ಷಸನಿಗಿದ್ದ ನೂರುಜನ ಮಕ್ಕಳನ್ನೂ ಹತ್ತುಜನ ಬಂಧುಗಳನ್ನೂ ಅವರು ಲೋಕಕಂಟಕರಿದ್ದದ್ದರಿಂದ ಪ್ರತಾಪಭಾನುವು ಸಂಹರಿಸಿದ್ದನು; ಆದ್ದರಿಂದ ಆ ದುಷ್ಟ ರಾಕ್ಷಸ ಕಾಲಕೇತುವು ಅದರ ಸೇಡು ತೀರಿಸಿಕೊಳ್ಳುವದಕ್ಕಾಗಿ ಮುನಿಯೊಡನೆ ಆಲೋಚಿಸಿ, "ಇನ್ನು ನಾಲ್ಕು ದಿವಸಗಳಲ್ಲಿ ಪ್ರತಾಪ ಭಾನುವಿನ ಕುಲವನ್ನು ಸಮೂಲ ನಾಶಮಾಡಿ ನಿನ್ನನ್ನು ಕಾಣುವೆನೆ"ಂದು ಹೇಳಿ, ಕುದುರೆ ಸಹಿತವಾಗಿ ಪ್ರತಾಪ ಭಾನುವನ್ನು ಅವನ ರಾಜಧಾನಿಗೆ ಒಯ್ದು, ಆತನನ್ನು ಅವನ ಅಂತಃಪುರದಲ್ಲಿ ಮಲಗಿಸಿ ಅವನ ಕುದುರೆಯನ್ನು ಅವನ ಲಾಯದಲ್ಲಿ ಕಟ್ಟಿದನು. ಬಳಿಕ ಪುರೋಹಿತನನ್ನು ತನ್ನ ಮಾಯೆಯಿಂದ ವಿಶ್ಲೇಷಿತನಾಗಮಾಡಿ, ಅವನನ್ನು ಒಂದು ಕಂದರದಲ್ಲಿಟ್ಟು, ತಾನು ಪುರೋಹಿತನಾಗಿ ಅರಸನಲ್ಲಿ ಅಡಿಗೆ ಮಾಡಲು ನಿಂತನು.

ಬೆಳಗಾದಬಳಿಕ ಎದ್ದು ನೋಡಲು, ತನ್ನ ಅಂತಃಪುರದಲ್ಲಿ ತಾನು ಇದ್ದದ್ದಕ್ಕಾಗಿ ರಾಜನಿಗೆ ಪರಮಾಶ್ಚರ್ಯವಾಗಿ ತಾಪಸಿಯ ಪ್ರಭಾವಕ್ಕಾಗಿ, ಅವನಲ್ಲಿ ಆ ರಾಜನ ವಿಶ್ವಾಸವು ಹೆಚ್ಚಿತು. ಗೊತ್ತಾದಂತೆ ಮೂರನೆಯ ದಿವಸ ಪುರೋಹಿತವೇಷಧಾರಿಯಾದ ರಾಕ್ಷಸನು ಏಕಾಂತದಲ್ಲಿ ರಾಜನನ್ನು ಕಂಡು ಗುರುತುಕೊಡಲು, ರಾಜನು ಬ್ರಾಹ್ಮಣಭೋಜನಕ್ಕಾಗಿ ಸಂಕಲ್ಪ ಮಾಡಿದನು. ಪ್ರತಿನಿತ್ಯ ಲಕ್ಷಾನಧಿ ಬ್ರಾಹ್ಮಣರ ಭೋಜನವಾಗತೊಡಗಿತು. ತನ್ನ ಮಾಯೆಯ ಯೋಗದಿಂದ ರಾಕ್ಷಸನು ಉತ್ತಮ ಅಡಿಗೆಯನ್ನು ಮಾಡತೊಡಗಿದನು. ಅನೇಕಪ್ರಕಾರದ ಮೃಗಗಳ ಮಾಂಸವ ಅಡಿಗೆಯಾಗುತ್ತಿತ್ತು. ಅದರಲ್ಲಿಯೇ ಆಪಾಪಿಯಾದ ರಾಕ್ಷಸನು ಬ್ರಾಹ್ಮಣನ ಮಾಂಸವನ್ನು ಕೂಡಿಸಿದನು. ಪ್ರತಾಪಭಾನುವು ಬ್ರಾಹ್ಮಣರ ಪಾದಪ್ರಕ್ಷಾಲನ ಮಾಡಿ ವಿವಿಧ ಪಕ್ವಾನ್ನಗಳನ್ನು ಬಡಿಸಿದನು. ಇನ್ನು ಬ್ರಾಹ್ಮಣರು ಊಟಕ್ಕೆ ಕುಳಿತುಕೊಳ್ಳತಕ್ಕವರು; ಅಷ್ಟರಲ್ಲಿ—"ಬ್ರಾಹ್ಮಣರುಗಳಿರಾ, ಕೂಡಲೆ ಎದ್ದು ನಿಮ್ಮ ನಿಮ್ಮ ಆಶ್ರಮಗಳಿಗೆ ಹೊರಟುಹೋಗಿರಿ; ಯಾಕಂದರೆ ಬ್ರಾಹ್ಮಣನ ಮಾಂಸದಿಂದ ಪಾಕಮಾಡಿರುವರು." ಎಂದು ಆಕಾಶವಾಣಿ ಆಯಿತು. ಆದನ್ನು ನಂಬಿ ಯಾವತ್ತು ಬ್ರಾಹ್ಮಣರು ಎದ್ದರು. ಅರಸನು ದುಃಖಿತನಾದನು. ಮೋಹದಿಂದ ಆತನ ಮತಿಯು ಮೂಢವಾಯಿತು. ಭವಿತವ್ಯತೆಗೆ ಆಧೀನನಾದದ್ದರಿಂದ ಅವನ ಮುಖದಿಂದ ಶಬ್ದಗಳು ಹೊರಡಲಿಲ್ಲವು! ಆಗ ಬ್ರಾಹ್ಮಣರು ಸಿಟ್ಟಿನಿಂದ—ಎಲೈ ರಾಜನೇ, ನೀನು ಏನೂ ವಿಚಾರಮಾಡಲಿಲ್ಲವಲ್ಲ! ಮೂಢಾ, ನೀನು ಯಾವತ್ತು ಪರಿವಾರದೊಡನೆ ರಾಕ್ಷಸನಾಗು. ಕ್ಷತ್ರಿಯಾಧಮಾ, ಒಂದು ವರ್ಷದಲ್ಲಿ ನಿನ್ನ ನಿರ್ವಂಶವಾಗಿ ನಿನ್ನ ಪಿತೃಗಳಿಗೆ ಪಿಂಡೋದಕ ಕೊಡಲು ನಿನ್ನ ವಂಶದಲ್ಲಿ ಯಾರೂ ಉಳಿಯಲಾರರು, ಎಂದು ಶಾಪಕೊಟ್ಟರು! ಅರಸನು ಅತ್ಯಂತ ಶೋಕವಿಹ್ವಲನಾದನು.

ಈ ಮೇರೆಗೆ ಬ್ರಾಹ್ಮಣರು ಶಾಪಕೊಡಲು, ಪುನಃ ಆಕಾಶವಾಣಿಯು ಗಾಂಭೀರ್ಯದಿಂದ—"ಬ್ರಾಹ್ಮಣರೇ, ನೀವು ವಿಚಾರಪೂರ್ವಕವಾಗಿ ಶಾಪಕೊಡಲಿಲ್ಲವು; ಯಾಕಂದರೆ ಇವರಲ್ಲಿ ಅರಸನ ಅಪರಾಧವೇನೂ ಇಲ್ಲವು" ಎಂದು ಸೂಚಿಸಲು ಬ್ರಾಹ್ಮಣರು ಬೆರಗಾದರು. ಅರಸನು ಪಾಕಶಾಲೆಗೆ ಹೋಗಿ ನೋಡಲು, ಅಲ್ಲಿ ಪಾಕವಿಲ್ಲ, ಪುರೋಹಿತನೂ ಇಲ್ಲ! ರಾಜನು ತಿರುಗಿ ಬಂದು ಬ್ರಾಹ್ಮಣರಿಗೆ ಎಲ್ಲ ವೃತ್ತಾಂತವನ್ನು ಹೇಳಿ ದುಃಖದಿಂದ ಭೂಮಿಯಮೇಲೆ ಬಿದ್ದನು. ಆಗ ಬ್ರಾಹ್ಮಣರು—ರಾಜಾ, ಆಗುವದು ತಪ್ಪುವದಿಲ್ಲ. ಇವರಲ್ಲಿ ನಿನ್ನ ದೋಷವಿಲ್ಲದಿದ್ದರೂ, ವಿಪ್ರ ಶಾಪವು ಅತಿ ದಾರುಣವಾದದ್ದರಿಂದ ತಪ್ಪಿಸಹೋದರೂ ಅದು ತಪ್ಪಲಾರದು." ಎಂದು ಹೇಳಿ ಯಾವತ್ತು ಬ್ರಾಹ್ಮಣರು ಹಾದಿಯಹಿಡಿದರು. ಈ ವರ್ತಮಾನವು ಎಲ್ಲ ಕಡೆಗೆ ಹಬ್ಬಲು, ಯಾವತ್ತು ಜನರು ದುಃಖಿತರಾಗಿ ದುರ್ದೈವಕ್ಕೆ ಹೆಸರಿಡಹತ್ತಿದರು. ರಾಕ್ಷಸನು ಪುರೋಹಿತನನ್ನು ಮನೆಗೆ ಕಳಿಸಿ ತಾಪಸರಾಜನಿಗೆ ತಿಳಿಸಲು, ಆತನು ಯಾವತ್ತು ಅರಸರಿಗೆ

ಶತ್ರುಬರೆದು ಸೈನ್ಯಗಳನ್ನು ಕೂಡಿಸಿಕೊಂಡು ಪ್ರತಾಪಭಾನುವಿನೊಡನೆ ಯುದ್ಧ ಹೂಡಿದನು. ಆ ಯುದ್ಧದಲ್ಲಿ ಸತ್ಯಕೇತುವಿನ ವಂಶವು ನಷ್ಟವಾಯಿತು. ಪ್ರತಾಪಭಾನುವು ಪರಿವಾರಸಹಿತನಾಗಿ ಸಮರಭೂಮಿಯಲ್ಲಿ ಶಯನಮಾಡಿದನು. ವಿಪ್ರಶಾಪವು ಹೇಗೆ ಸುಳ್ಳಾಗುವದು? ಯಾವತು ರಾಜರು ಜಯಶೀಲರಾಗಿ ತಮ್ಮ ತಮ್ಮ ರಾಜಧಾನಿಗಳಿಗೆ ಹೋದರು. ಎಲೈ ಭರದ್ವಾಜನೇ, ಕೇಳು. ಯಾವನೊಬ್ಬನಿಗೆ ದೈವವು ಪ್ರತಿಕೂಲವಾಯಿತೆಂದರೆ, ಅವನಿಗೆ ಧೂಲಿಯು ಮೇರು ಸಮಾನವಾಗುವದು; ತಂದೆಯು ಯಮನಿಗೆ ಸರಿಯಾಗುವನು; ಪುಷ್ಪಮಾಲೆಯು ಸರ್ಪಕ್ಕೆ ಸಮಾನವಾಗುವದು! ಕಾಲವು ಒದಗಿದಕೂಡಲೆ ಅದೇ ಪ್ರತಾಪಭಾನುವು ಪರಿವಾರ ಸಹಿತ ರಾಕ್ಷಸನಾದನು. ಆತನಿಗೆ ಹತ್ತು ತಲೆಗಳೂ, ಇಪ್ಪತ್ತು ಭುಜಗಳೂ ಇದ್ದವು. ಆತನ ಹೆಸರು ರಾವಣನೆಂದು ಇದ್ದು ಆತನು ಪ್ರಚಂಡವೀರನಾಗಿದ್ದನು. ಪ್ರತಾಪಭಾನುವಿನ ತಮ್ಮನಾದ ಅರಿಮರ್ದನನೆಂಬುವನು ಬಲಾಢ್ಯ ಕುಂಭಕರ್ಣನಾದನು. ಧರ್ಮರುಚಿಯೆಂಬ ಹೆಸರಿನ ಸಚಿವನು ವಿಭೀಷಣನೆಂಬ ಹೆಸರಿನಿಂದ ಪ್ರತಾಪಭಾನುವಿನ ಕನಿಷ್ಠ ಬಂಧುವಾದನು. ಅದರಂತೆ ಪ್ರತಾಪಭಾನುವಿನ ಮಕ್ಕಳೂ, ಸೇವಕರೂ ಭಯಂಕರ ರಾಕ್ಷಸರಾದರು. ಅವರೆಲ್ಲರೂ ಕಪಟಿಗಳೂ, ನಿರ್ದಯರೂ, ಅವಿಚಾರಿಗಳೂ, ಪಾಪಬುದ್ಧಿಯುಳ್ಳ ಹಿಂಸಕರೂ ಆಗಿದ್ದರು ಅವರಜನ್ಮವು ಅನುಪಮವೂ, ಪಾವನವೂ, ಶುದ್ಧವೂ ಆದ ಪುಲಸ್ತ್ಯವಂಶದಲ್ಲಿ ಆಗಿದ್ದರೂ, ಬ್ರಾಹ್ಮಣರಶಾಪವಶದಿಂದ ಅವರೆಲ್ಲರೂ ಪಾಪರೂಪಿಗಳಾಗಿ ಹುಟ್ಟಿದರು.

ಮೂವರು ಬಂಧುಗಳೂ ಅವರ್ಣನೀಯಗಳಾದ ಹಲವುವಿಧಉಗ್ರ ತಪಸ್ಸುಗಳನ್ನು ಮಾಡಿದರು. ಅವರ ತಪಸ್ಸಿಗೆ ಪ್ರಸನ್ನನಾಗಿ ಬ್ರಹ್ಮದೇವನು ಅವರಬಳಿಗೆ ಹೋಗಿ—ಅಪ್ಪಗಳಿರಾ, ನಾನು ಪ್ರಸನ್ನನಾಗಿದ್ದೇನೆ, ಬೇಕಾದ ವರಗಳನ್ನು ಬೇಡಿರಿ, ಎಂದು ಹೇಳಿದನು. ಆಗ ರಾವಣನು ಆತನ ಚರಣಗಳನ್ನು ಹಿಡಿದು ಅತ್ಯಂತ ವಿನಯದಿಂದ— ಹೇ ಜಗದೀಶಾ, ಕೇಳು. ವಾನರರು, ಮನುಷ್ಯರು ಇವೆರಡು ಯೋನಿಗಳ ಹೊರತು ಯಾರಿಂದಲೂ ನಾನು ಸಾಯಬಾರದು, ಎಂದು ಕೇಳಲು, ಬ್ರಹ್ಮದೇವನು ಹಾಗೇ ಆಗಲಿ, ಎಂದು ಹೇಳಿ ಕುಂಭಕರ್ಣನ ಕಡೆಗೆ ಹೋದನು. ಆತನನ್ನು ನೋಡಿ ಬ್ರಹ್ಮದೇವನು ಚಕಿತನಾದನು. ಈ ಖಲನು ದಿನಾಲು ಊಟಮಾಡಹತ್ತಿದರೆ, ಜಗತ್ತು ಬಯಲಾದೀತು! ಎಂದು ಯೋಚಿಸಿ ಸರಸ್ವತಿಯು ಯೋಗದಿಂದ ಅವನ ಬುದ್ಧಿ ಭ್ರಂಶಮಾಡಿಸಲು, ಕುಂಭಕರ್ಣನು ಆರು ತಿಂಗಳು ನಿದ್ರೆಯ ವರವ ಬೇಡಿಕೊಂಡನು. ಆ ಮೇಲೆ ಬ್ರಹ್ಮದೇವನು ವಿಭೀಷಣನ ಕಡೆಗೆ ಹೋಗಿ—ವತ್ಸಾ, ವರವನ್ನು ಕೇಳಿಕೋ, ಎಂದು ಹೇಳಲು, ವಿಭೀಷಣನು ಹರಿಪದಕಮಲದಲ್ಲಿ ವಿಮಲಭಕ್ತಿಯನ್ನು ಬೇಡಿಕೊಂಡನು. ಈ ಮೇರೆಗೆ ಮೂವರಿಗೂ ವರಗಳನ್ನು ಕೊಟ್ಟು ಬ್ರಹ್ಮದೇವನು ಸತ್ಯಲೋಕಕ್ಕೆ ಹೋದನು. ಮಯರಾಕ್ಷಸನಿಗೆ ಮಂಡೋದರಿಯೆಂಬ ಅತ್ಯಂತ ಸುಂದರಳಾದ ಕನ್ಯೆಯಿದ್ದಳು. ಆಕೆಯನ್ನು ಮಯನು

ರಾವಣನಿಗೆ ಒಪ್ಪಿಸಿದನು. ಆಕೆಯೇ ಮುಂದೆ ರಾವಣನ ಪಟ್ಟ ರಾಣಿಯಾದಳು. ಉತ್ತಮಸ್ತ್ರೀಯು ಪ್ರಾಪ್ತಳಾದದ್ದರಿಂದ ರಾವಣನು ಸಂತುಷ್ಟನಾದನು. ಆಮೇಲೆ ಹೋಗಿ ರಾವಣನು ಇಬ್ಬರು ತಮ್ಮಂದಿರ ಲಗ್ನವನ್ನು ಮಾಡಿದನು.

ರಾವಣನ ದಿಗ್ವಿಜಯ—ಸಮುದ್ರದಲ್ಲಿ ವಿಧಿನಿರ್ಮಿತವಾದ ಅತ್ಯಂತ ದುರ್ಗವು ತ್ರಿಕೂಟವೆಂಬ ಹೆಸರಿನಪರ್ವತವಿರುವದು. ಅದನ್ನುಮಯ ರಾಕ್ಷಸನು ಸುವರ್ಣರಚಿತಗಳಾದ ಅನೇಕ ರತ್ನದ ಮನೆಗಳಿಂದ ಪುನಃ ಶೃಂಗರಿಸಿದನು. ಇಂದ್ರನ ಅಮರಾವತಿಗೆ ಸಮಾನವಾದ ಆ ತ್ರಿಕೂಟನಿವಾಸದ ಜಗತ್ಪ್ರಸಿದ್ಧ ಹೆಸರು ಲಂಕೆಯು. ನಾಲ್ಕು ಮಗ್ಗಲುಗಳಿಂದ ಸುತ್ತುಹಾಕಿರುವ ಸಮುದ್ರದ ಕಂದಕವೂ, ಬಂಗಾರದ ಕೋಟೆಯೂ ಉಳ್ಳ ಆ ಅಭೇದ್ಯ ಲಂಕೆಯ ಕಟ್ಟಡವನ್ನು ವರ್ಣಿಸುವದು ಅಶಕ್ಯವೇ ಸರಿ! ಕಲ್ಪಕಲ್ಪಗಳಲ್ಲಿ ಶೂರನೂ, ಪ್ರತಾಪಿಯೂ, ಅತುಲಬಲಶಾಲಿಯೂ ಆದ ರಾಕ್ಷಸೇಶ್ವರನೇ ಲಂಕೆಯಲ್ಲಿ ಸೈನ್ಯಸಹಿತವಾಗಿ ವಾಸಮಾಡುತ್ತ ಹೋಗಬೇಕೆಂದು ಪ್ರಭು ಶ್ರೀ ಹರಿಯ ಅಪ್ಪಣೆಯಿರುವದು. ಪೂರ್ವದಲ್ಲಿ ಅಲ್ಲಿ ರಾಕ್ಷಸವೀರರ ಸಮುದಾಯವು ಇರುತ್ತಿತ್ತು. ದೇವತೆಗಳು ಯುದ್ಧದಲ್ಲಿ ಅವರೆಲ್ಲರ ನಿಃಪಾತ ಮಾಡಿದರು. ಈ ಕಾಲದಲ್ಲಿ ಇಂದ್ರನ ಅಪ್ಪಣೆಯಿಂದ ಅಲ್ಲಿ ಕುಬೇರನ ಕೋಟ್ಯವಧಿ ರಕ್ಷಕರು ಇರುತ್ತಿದ್ದರು. ಒಮ್ಮೆ ರಾವಣನಿಗೆ ಈ ಸುದ್ದಿಯು ತಿಳಿಯಲು, ಆತನು ಸೈನ್ಯವನ್ನು ಸಜ್ಜುಗೊಳಿಸಿ ಲಂಕೆಯ ಕೋಟೆಯನ್ನು ಮುತ್ತಿದನು. ಆ ಪ್ರಚಂಡ ಸೈನ್ಯವನ್ನೂ, ಅದರೊಳಗಿನ ಅಕ್ರಾಳವಿಕ್ರಾಳ ವೀರರನ್ನೂ ನೋಡಿಯೇ ಯಕ್ಷರು ಜೀವ ಉಳಿಸಿಕೊಳ್ಳುವದಕ್ಕಾಗಿ ಓಡಿಹೋದರು. ರಾವಣನು ಯಾವತ್ತು ನಗರವನ್ನು ಸುತ್ತಿ ನೋಡಿ ಆನಂದಪಟ್ಟನು. ಅವನ ಚಿಂತೆಯು ದೂರವಾಯಿತು. ಸುಂದರವಾದ ಕೋಟೆಯು ಸ್ವಾಭಾವಿಕವಾಗಿಯೇ ದುರ್ಗಮವಾಗಿರುವದನ್ನು ನೋಡಿ ರಾವಣನು ಆ ಲಂಕಾಪಟ್ಟಣವನ್ನೇ ತನ್ನ ರಾಜಧಾನಿಯಾಗಿ ಮಾಡಿಕೊಂಡನು. ಅವನು ಅವರವರ ಯೋಗ್ಯತೆಯಂತೆ ಅಲ್ಲಿಯ ಮನೆಗಳನ್ನು ರಾಕ್ಷಸರಿಗೆ ಹಂಚಿಕೊಟ್ಟು, ಅವರನ್ನುಸುಖಿಗಳಾಗಮಾಡಿದನು. ಒಮ್ಮೆ ಆತನು ಕುಬೇರನಮೇಲೆ ದಂಡೆತ್ತಿಹೋಗಿ ಆತನ ಪುಷ್ಪಕವಿಮಾನವನ್ನು ಅಪಹರಿಸಿ ತಂದನು. ಅದರಂತೆ ಒಮ್ಮೆ ಆತನು ಚಕ್ಕಂದದಿಂದ ಹೋಗಿ ಕೈಲಾಸಪರ್ವತವನ್ನು ಎತ್ತಿ ತನ್ನ ಮುಂಗೈ ಕಸುವನ್ನು ಮನಸ್ಸಿನಲ್ಲಿ ತೂಗಿ ನೋಡಿ ಹರ್ಷಿತನಾಗಿ ಹೊರಟುಹೋದನು. ರಾವಣನ ಮನೆಯಲ್ಲಿ ಸುಖ, ಸಂಪತ್ತಿ, ಪುತ್ರರು, ಮಿತ್ರರು, ಸೈನ್ಯ, ಜಯ, ಪ್ರತಾಪ, ಬಲ, ಬುದ್ಧಿ, ಮಹತ್ವ ಇವೆಲ್ಲ ಪ್ರತಿಒಂದು "ಲಾಭದಿಂದ ಲೋಭವು ಹೆಚ್ಚುವಂತೆ" ದಿನ ದಿನ ಹೊಸಹೊಸವಾಗಿ ಹೆಚ್ಚುತ್ತಲಿದ್ದವು.

ಜಗತ್ತಿನಲ್ಲಿ ಅದ್ವಿತೀಯವೀರನಾದ ತಮ್ಮ ಕುಂಭಕರ್ಣನು ಮದ್ಯಪಾನಮಾಡಿ ಆರು ತಿಂಗಳು ಗೊರಕೆಹೊಡೆಯುತ್ತ ಮಲಗಿಕೊಳ್ಳುತ್ತಿದ್ದನು. ಆತನು ಎಚ್ಚತ್ತರೆ

ಮಾತ್ರ ತ್ರೈಲೋಕ್ಯಗಳಿಗೆ ಉಪದ್ರವವಾಗುತ್ತಿತ್ತು. ಅವನು ನಿತ್ಯದಲ್ಲಿ ಆಹಾರಗ್ರಹಣಮಾಡುತ್ತಿದ್ದರೆ ಬ್ರಹ್ಮಾಂಡವು ಬೇಗನೆ ನಾಮಶೇಷವಾಗುತ್ತಿತ್ತು. ರಣದಲ್ಲಿಯು ಅತನ ಪರಾಕ್ರಮವನ್ನು ವರ್ಣಿಸುವದು ಶಕ್ಯವಲ್ಲ. ಲಂಕೆಯಲ್ಲಿ ಅವನಂಥ ಬಲಾಢ್ಯ ವೀರರು ಹಲವರಿದ್ದರು. ರಾವಣನ ಹಿರಿಯ ಮಗನ ಹೆಸರು ಮೇಘನಾದನು. ಜಗತ್ತ್ರಯದೊಳಗಿನ ವೀರರಲ್ಲಿ ಅವನ ಎಣಿಕೆಯು ಮೊದಲನೆಯದಾಗಿತ್ತು. ಸಮರಾಂಗಣದಲ್ಲಿ ಅವನೆದುರಿಗೆ ಯಾರೂ ತಡೆಯುತ್ತಿದ್ದಿಲ್ಲ. ಅವನ ಯೋಗದಿಂದ ದೇವಲೋಕದಲ್ಲಿ ಯಾವಾಗಲೂ ಸೋಲು-ಓಟಗಳ ಸುದ್ದಿಯೇ ಸುಳಿದಾಡುತ್ತಲಿತ್ತು. ಕುಮುಖ, ಅಕಂಪನ, ವಜ್ರದಂತ, ಧೂಮ್ರಕೇತು, ಅತಿಕಾಯ ಮೊದಲಾದ ಒಬ್ಬೊಬ್ಬರೇ ಯಾವತ್ತು ಜಗತ್ತನ್ನು ಗೆಲ್ಲುವಂತಹ ಬಲಾಢ್ಯವೀರರು ರಾವಣನ ಬಳಿಯಲ್ಲಿ ಹಲವು ಜನರಿದ್ದರು. ಅವರು ಇಚ್ಛಾರೂಪಿಗಳೂ, ಅತ್ಯಂತ ಮಾಯಾವಿಗಳೂ, ಮಹಾಕಾಯರೂ ಆಗಿದ್ದರು. ಒಮ್ಮೆ ರಾವಣನು ಸಭೆಯಲ್ಲಿ ಕುಳಿತಿರುವಾಗ ಪುತ್ರ-ಪೌತ್ರರನ್ನೂ, ಸೇವಕರೇ ಮೊದಲಾದ ಅಪರಿಮಿತ ಪರಿವಾರವನ್ನೂ, ಅಗಣಿತ ರಾಕ್ಷಸಸೇನೆಯನ್ನೂ ನೋಡಿ, ಬಹಳ ಅಭಿಮಾನಿಯಾಗಿರುವ ಆತನು ಸಿಟ್ಟಿನ ಉನ್ಮತ್ತತನದಿಂದ ಎಲ್ಲರನ್ನು ಕರೆದು—ಎಲೈ ಯಾವತ್ತೂ ರಾಕ್ಷಸರೇ, ಕೇಳಿರಿ; ದೇವಗಣವು ನಮಗೆ ವೈರಿಯಾಗಿರುವದು. ಅದು ಎದುರಿಗೆ ನಿಂತು ಎಂದೂ ಕಾದುವದಿಲ್ಲ. ಶತ್ರುವು ಬಲಾಢ್ಯನೆಂದು ತಿಳಿದು ಓಡಿಹೋಗುತ್ತಿರುವದು. ಆ ದೇವತೆಗಳ ಮರಣವಿರುವ ಸಂಗತಿಯೊಂದನ್ನು ನಿಮಗೆ ತಿಳಿಸಿ ಹೇಳುವೆನು ಕೇಳಿರಿ. ನೀವು ಹೋಗಿ ಬ್ರಾಹ್ಮಣಭೋಜನ, ಯಜ್ಞ, ಹೋಮ, ಶ್ರಾದ್ಧ ಮೊದಲಾದವುಗಳೆಲ್ಲವುಗಳ ವಿಧ್ವಂಸ ಮಾಡುತ್ತ ಸಾಗಿರಿ; ಆವರೆ ಕ್ಷುಧಾಪೀಡಿತರಾದ ದೇವತೆಗಳು ಬಲಹೀನರಾಗಿ ತಾವಾಗಿಯೇ ಶರಣುಬರುವರು. ಆಮೇಲೆ ಅವರನ್ನು ಕೊಂದಾದರೂ ಬಿಡೋಣ, ಬಹಳವಾಗಿ ಅಂಗಲಾಚಿ ಬೇಡಿಕೊಂಡರೆ ಬಿಟ್ಟಾದರೂ ಬಿಡೋಣ. ಎಂದು ಹೇಳಿ ಮೇಘನಾದನನ್ನು ಕರೆದು—ನೀನು ರಣಶೂರರೂ, ಬಲಾಢ್ಯರೂ ಆದ ದೇವತೆಗಳನ್ನೆಲ್ಲ ಯುದ್ಧದಲ್ಲಿ ಗೆದ್ದು ಮುಸುಗಿ ಬಿಗಿದುಕೊಂಡು ಬಾ. ಮಗನೇ, ಏಳು, ನಿನ್ನ ತಂದೆಯಾದಿಷ್ಟು ಅಪ್ಪಣೆಯನ್ನು ಮನ್ನಿಸು.

ಈ ಮೇರೆಗೆ ಎಲ್ಲರನ್ನೂ ಆಜ್ಞಾಪಿಸಿ ರಾವಣನು ಸ್ವತಃ ಗದೆಯನ್ನು ತಕ್ಕೊಂಡು ಹೊರಟನು. ಅವನು ನಡೆಯುತ್ತಿರುವಾಗ ಪೃಥ್ವಿಯು ಅಲ್ಲಾಡತೊಡಗಿತು; ಅವನ ಗರ್ಜನೆಯಿಂದ ದೇವಸ್ತ್ರೀಯರ ಗರ್ಭಪಾತವಾಗತೊಡಗಿತು. ರಾವಣನು ಸಿಟ್ಟಾಗಿ ಬರುತ್ತಿರುವನೆಂಬ ಸುದ್ದಿಯನ್ನು ಕೇಳಿ ದೇವತೆಗಳು ಮೇರುಪರ್ವತದೊಳಗಿನ ಗವಿಗಳಲ್ಲಿ ಸೇರಿಕೊಂಡರು. ದಿಕ್ಪಾಲಕರ ಲೋಕಗಳಿಗೆ ರಾವಣನು ಹೋಗಲು, ದಿಕ್ಕುಗಳೆಲ್ಲ ಶೂನ್ಯಗಳಾಗಿ ತೋರಹತ್ತಿದವು. ಅವನು ಭಯಂಕರ ಸಿಂಹನಾದಮಾಡಿ ಹೆಸರುಗೊಂಡು ಬಯ್ಯುತ್ತಲಿದ್ದನು. ರಣಮದದಿಂದ ಉನ್ಮತ್ತನಾದ

ಆ ರಾವಣನು ಜಗತ್ತಿನಲ್ಲೆಲ್ಲ ಅಟ್ಟಹಾಸದಿಂದ ಅಲೆದಾಡುತ್ತ, ತನಗೆ ಸಮಸ್ಕಂಧರಾದ ವೀರರನ್ನು ಹುಡುಕುತ್ತಲಿದ್ದನು; ಆದರೆ ಅವನಿಗೆ ಅಂಥವೀರನು ಒಬ್ಬನೂ ಸಿಗದಾದನು! ಸೂರ್ಯ, ಚಂದ್ರ, ವಾಯು, ವರುಣ, ಕುಬೇರ, ಅಗ್ನಿ, ಕಾಲ, ಯಮಾದಿ ದಿಕ್ಪಾಲರೇ ಮೊದಲಾದ ಯಾವತ್ತೂ ಅಧಿಕಾರಿಗಳನ್ನು, ಕಿನ್ನರ, ಸಿದ್ಧ, ಮಾನವ, ದೇವತಾ ಇತ್ಯಾದಿಕರನ್ನು ಒತ್ತಾಯದಿಂದ ತಡೆಯುತ್ತಿದ್ದನು. ಸ್ತ್ರೀಪುರುಷಾತ್ಮಕ ದೇಹಧಾರಿಯಾದ ಬ್ರಹ್ಮಸೃಷ್ಟಿಯನ್ನೆಲ್ಲ ರಾವಣನು ಪಾದಾಕ್ರಾಂತವಾಗಿ ಮಾಡಿಕೊಂಡನು. ಎಲ್ಲರೂ ಭಯಭೀತರಾಗಿ ರಾವಣನಿಗೆ ಅಂಕಿತರಾಗಿ ನಡೆಯುತ್ತಿದ್ದರು; ಮತ್ತು ಪ್ರತಿನಿತ್ಯ ನಿಯಮದಿಂದ ಬಂದು ಅವನ ಚರಣಗಳಿಗೆ ಸಾಷ್ಟಾಂಗವಾಗಿ ಎರಗುತ್ತಿದ್ದರು. ತನ್ನ ಭುಜಬಲದಿಂದ ವಿಶ್ವವನ್ನೆಲ್ಲ ಅಧೀನವನ್ನಾಗಿ ಮಾಡಿಕೊಂಡು, ಸ್ವತಂತ್ರನೆಂಬುವವನನ್ನು ಯಾವನನ್ನೂ ಉಳಿಸದೆ ಚಕ್ರವರ್ತಿಯಾಗಿ ಸ್ವೇಚ್ಛೆಯಿಂದ ರಾಜ್ಯಭಾರ ಮಾಡತೊಡಗಿದನು. ದೇವ, ಯಕ್ಷ, ಗಂಧರ್ವ, ನರ, ಕಿನ್ನರ, ನಾಗ ಇವರ ಅತ್ಯಂತ ಸುಂದರ ಕನ್ಯೆಯರನ್ನು ತನ್ನ ಬಾಹುಬಲದಿಂದ ರಾವಣನು ಗೆದ್ದು ತಂದು ಲಗ್ನವಾಗಿದ್ದನು. ಇಂದ್ರಜಿತುವಂತು ತಂದೆಯ ಅಪ್ಪಣೆಯಂತೆ ಲೋಕವಿಜಯದ ಕೆಲಸವನ್ನು ಪೂರ್ಣ ಮಾಡಿದನು. ಉಳಿದ ರಾಕ್ಷಸರು, ಧರ್ಮವು ನಿರ್ಮೂಲವಾಗುವಂತೆ ಯಾವತ್ತೂ ವೇದಬಾಹ್ಯ ವ್ಯಾಪಾರಗಳನ್ನು ನಡಿಸುತ್ತಾ ಸಾಗಿದರು. ಆಕಳು, ಬ್ರಾಹ್ಮಣರು ಕಣ್ಣಿಗೆ ಬೀಳುವ ಪ್ರದೇಶದೊಳಗಿನ ನಗರಗಳನ್ನೂ, ಗ್ರಾಮಗಳನ್ನೂ, ಪುರಗಳನ್ನೂ ಸುಟ್ಟು ಬೂದಿಮಾಡುತ್ತಿದ್ದರು. ಸದಾಚಾರಕ್ಕೆ ಎಲ್ಲಿಯೂ ಆಸ್ಪದವು ದೊರೆಯದಾಯಿತು. ದೇವತೆಗಳು, ಬ್ರಾಹ್ಮಣರು, ಗುರುಗಳು ಇವರನ್ನು ಯಾರೂ ಮನ್ನಿಸದಾದರು. ಹರಿಭಕ್ತಿ, ಯಜ್ಞ, ಜಪ, ದಾನ ಇವು ಎಲ್ಲಿಯೂ ಉಳಿಯಲಿಲ್ಲ. ವೇದಗಳೂ, ಪುರಾಣಗಳೂ ಕನಸಿನಲ್ಲಿಯೂ ಕಿವಿಗೆ ಬೀಳದಾದವು. ಹೀಗೆ ಜಗತ್ತಿನ ತುಂಬ ಭ್ರಷ್ಟಾಕಾರವಾಗಿ ಧರ್ಮದ ಹೆಸರು ಕಿವಿಗೆ ಬೀಳದಾಯಿತು! ದುಷ್ಟ ರಾಕ್ಷಸರ ಭಯಂಕರ ಅನೀತಿಯ ಕೃತಿಗಳನ್ನು ವರ್ಣಿಸಲು ಶಕ್ಯವಲ್ಲ. ಹಿಂಸೆಯು ಅತ್ಯಂತ ಪ್ರಿಯವಾಗಿರುವವರ ಪಾಪಕ್ಕೆ ಮಿತಿ ಇರುವದೇ! ದುಷ್ಟರು, ಕಳ್ಳರು, ಜೂಜುಗಾರರು, ಪರಧನ–ಪರಸ್ತ್ರೀಲಂಪಟರು ಇವರ ಸಂಖ್ಯೆಯು ಹೆಚ್ಚುತ್ತ ಹೋಯಿತು. ತಾಯಿತಂದೆಗಳ, ದೇವಬ್ರಾಹ್ಮಣರ ಪ್ರತಿಷ್ಠೆಯು ಉಳಿಯಲಿಲ್ಲ. ಸಾಧುಗಳಿಂದ ಸೇವೆಯನ್ನು ಮಾಡಿಸಿಕೊಳ್ಳಹತ್ತಿದರು. ಇಂಥ ಪ್ರವರ್ತಿಯ, ಆಚರಣೆಗಳುಳ್ಳ ಪ್ರಾಣಿಗಳನ್ನು ನೀನು ರಾಕ್ಷಸರೆಂದೇ ತಿಳಿದುಕೋ!

ಭಗವದವತಾರ—ಹೀಗೆ ಧರ್ಮವು ಅತ್ಯಂತ ಗ್ಲಾನಿಹೊಂದಿದ್ದನ್ನು ನೋಡಿ ಪೃಥ್ವಿಯು ಭಯಭೀತಳೂ, ದುಃಖಿತಳೂ ಆದಳು. ಒಬ್ಬಾನೊಬ್ಬ ಪರಪೀಡಕನು ತನಗೆ ಭಾರವಾಗುವಂತೆ ಪರ್ವತಗಳು, ನದಿಗಳು, ಸಮುದ್ರಗಳು ಭಾರವಾಗುವದಿಲ್ಲವೆಂದು

ಆಕೆಯು ಅನ್ನುತ್ತಿದ್ದಳು. ಯಾವತ್ತು ಆಚಾರಗಳು ಆಕೆಗೆ ವಿಪರೀತವಾಗಿ ತೋರು ತ್ತಿದ್ದವು; ಆದರೆ ರಾವಣನ ಭಯದಿಂದ ಆಕೆಯು ಏನೂ ಮಾತಾಡದಾಗಿದ್ದಳು. ಆಕೆಯು ಮನಸ್ಸಿನಲ್ಲಿ ವಿಚಾರಮಾಡಿ ಗೋರೂಪವನ್ನು ಧರಿಸಿ ದೇವತೆಗಳೂ, ಋಷಿಗಳೂ ಇದ್ದಲ್ಲಿಗೆ ಹೋಗಿ ತನ್ನ ದುಃಖವನ್ನು ತೋಡಿಕೊಂಡು ಅಳತೊಡಗಿದಳು; ಆದರೆ ಅವ ರಿಂದ ದುಃಖಪರಿಹಾರವಾಗಲೊಲ್ಲದು. ಅವರೆಲ್ಲರೂ ಗೋರೂಪಪೃಥ್ವಿಯೊಡನೆ ಸತ್ಯ ಲೋಕಕ್ಕೆ ಹೋಗಿ ಬ್ರಹ್ಮದೇವನಿಗೆ ಮೊರೆಬಿದ್ದರು. ಬ್ರಹ್ಮನು ಇದನ್ನೆಲ್ಲ ತಿಳಿದು ಮನಸ್ಸಿನಲ್ಲಿ ವಿಚಾರಮಾಡಿ ಹರಿಪದವನ್ನು ಸ್ಮರಿಸಿ ಪೃಥ್ವಿಯನ್ನು ಕುರಿತು—"ನನ್ನ ಸ್ವಾಧೀನದಲ್ಲಂತು ಏನೂ ಇಲ್ಲವು. ನೀನು ಯಾವನ ದಾಸಿಯಾಗಿರುವೆಯೋ ಆ ಅನಂತನೇ ನನ್ನ ನಿನ್ನ ರಕ್ಷಕನಾಗಿರುವನು. ಭೂದೇವಿ, ಧೈರ್ಯತಾಳು. ಪ್ರಭುವು ತನ್ನ ಭಕ್ತರ ದುಃಖವನ್ನು ತಿಳಿಯುತ್ತಲೇ ಇರುವನು. ಆತನೇ ನಮ್ಮ ವಿಪತ್ತನ್ನು ಪರಿಹರಿಸುವನು" ಅನ್ನಲು, ಯಾವತ್ತು ದೇವತೆಗಳುಕೂಡಿ ವಿಚಾರಮಾಡುತ್ತ—"ಪ್ರಭುವಿನ ದರ್ಶನವು ಎಲ್ಲಿ ಆಗಬಹುದು? ಆತನನ್ನು ಕೂಗಿ ಕರೆಯುವದಾದರೂ ಎಲ್ಲಿ? ಭಗವಂತನ ವೈಕುಂಠಪುರವು ಪ್ರಸಿದ್ಧವಾಗಿರುವದರಿಂದ ಅಲ್ಲಿಗಾದರೂ ಹೋಗೋಣವೇ? ಆತನು ಕ್ಷೀರ ಸಮುದ್ರದಲ್ಲಿ ಇರಬಹುದೇ? ಅವರವರ ಅಂತಃಕರಣದಲ್ಲಿ ಪ್ರೀತಿ-[illegible] ಇದ್ದರೆ ಪ್ರಭುವು ಪ್ರಕಟವಾಗುವನೆಂಬ ನಿಯಮವು ಅಬಾಧಿತವಾಗಿ ಇರುವದಲ್ಲವೇ?" ಹೀಗೆ ಒಬ್ಬೊಬ್ಬರು ಒಂದೊಂದು ವಿಧವಾಗಿ ವಿಚಾರ ಮಾಡುತ್ತಿರುವಾಗ, ಪಾರ್ವತೀ, ನಾನೂ ಆ ಸಭೆಯಲ್ಲಿ ಇದ್ದೆನು, ಪ್ರಸಂಗನೋಡಿ ನಾನೂ ಒಂದು ಮಾತಾಡಿದೆನು, ಏನಂದರೆ— "ಪ್ರಭುವು ಸರ್ವತ್ರ ಸಮನಾಗಿ ವ್ಯಾಪಿಸಿದ್ದು, ಆತನು ಪ್ರೇಮದಿಂದ ಪ್ರಕಟವಾಗುವನೆಂಬ ಅನುಭವವು ನನಗೆ ಒಂದಿರುವದು ದೇಶ, ಕಾಲ, ದಿಶಾ, ಉಪದಿಶಾ ಇವುಗಳಲ್ಲಿ ಪ್ರಭು ವಿಲ್ಲದ ಸ್ಥಳವು ಇಲ್ಲವೇ ಇಲ್ಲ. ಚರಾಚರಮಯನೂ, ಸರ್ವರಹಿತನೂ, ಉದಾಸೀನನೂ ಆದ ಪ್ರಭುವು ಕಟ್ಟಿಗೆಯೊಳಗಿನ ಅಗ್ನಿಯಂತೆ ಭಕ್ತಿಯಿಂದ ಪ್ರಕಟನಾಗುವನು." ಪಾರ್ವತೀ, ನನ್ನ ಈ ಮಾತು ಸರ್ವರಿಗೂ ಮಾನ್ಯವಾಯಿತು. ಬ್ರಹ್ಮದೇವನು ಅದನ್ನು "ಉತ್ತಮೋತ್ತಮ"ವೆಂದು ಶ್ಲಾಘಿಸಿದನು. ಅದನ್ನು ಕೇಳಿ ಆತನ ಮನಸ್ಸಿಗೆ ಹರ್ಷವಾಗಿ ಆತನ ಶರೀರವು ರೋಮಾಂಚಿತವಾಯಿತು. ಆತನ ಕಣ್ಣುಗಳಿಂದ ಬಾಷ್ಪಗಳು ಸುರಿಯ ಹತ್ತಿದವು, ತಿರುಗಿ ಆ ಮತಿ ಧೀರಬ್ರಹ್ಮದೇವನು ಎಚ್ಚತ್ತು ಕೈ ಜೋಡಿಸಿ ಭಗವಂತನ ಸ್ತೋತ್ರಮಾಡತೊಡಗಿದನು.

ಹೇ ಸುರನಾಯಕಾ, ಜನಸುಖದಾಯಕಾ, ಪ್ರಣತಪಾಲಕಾ ಭಗವಂತಾ! ನಿನ್ನ ಜಯ ಜಯಕಾರವಿರಲಿ. ಹೇ ಗೋದ್ವಿಜಹಿತಕರಾ, ಅಸುರಾರೇ, ಲಕ್ಷ್ಮೀಪತೇ, ಹೇ ದೇವಧರ್ಮ ಪಾಲಕಾ, ನಿನ್ನ ಕರಣಿಯು ಅದ್ಭುತವಾಗಿದ್ದು, ಅದರೊಳಗಿನ ಮರ್ಮವು ಯಾರಿಗೂ ತಿಳಿಯುವದಿಲ್ಲವು. ಯಾವನು ಸಹಜಕೃಪಾಲುವೂ, ದೀನರ ದಯಾಳುವೂ ಆಗಿರುವನೋ

ಅವನೇ ನಮ್ಮಮೇಲೆ ಅನುಗ್ರಹ ಮಾಡಲಿ. ಭಗವನ್, ನೀನು ಅವಿನಾಶಿಯಿದ್ದು, ಸರ್ವಘಟವಾಸಿಯಾಗಿರುವೆ; ನೀನು ಸರ್ವ ವ್ಯಾಪಕನಿದ್ದು, ಪರಮಾನಂದ ಸ್ವರೂಪನಾಗಿರುವೆ; ನೀನು ಅಗಮ್ಯನಾಗಿದ್ದು ಇಂದ್ರಿಯಾತೀತನಾಗಿರುವೆ; ನೀನು ಪುಣ್ಯಚರಿತ್ರನಿದ್ದು ಮಾಯಾರಹಿತನಾಗಿರುವೆ. ಎಲೈ ಮುಕುಂದನೇ, ನಿನ್ನ ಜಯಜಯಕಾರವಿರಲಿ. ವಿರಕ್ತರೂ, ಮೋಹರಹಿತರೂ ಆದ ಮುನಿವೃಂದವು ಅತ್ಯಂತ ಅನುರಾಗದಿಂದ ಅಹೋರಾತ್ರಿ ಯಾವನ ಧ್ಯಾನಮಾಡುತ್ತಿರುವದೋ, ಯಾವನ ಗುಣಗಣಗಾಯನ ಮಾಡುತ್ತಿರುವದೋ, ಆ ಸಚ್ಚಿದಾನಂದನ ವಿಜಯವಿರಲಿ. ಬೇರೆ ಸಹಾಯವಿಲ್ಲವೆ ತ್ರಿಗುಣಾತ್ಮಕ ಸೃಷ್ಟಿಯನ್ನು ನಿರ್ಮಿಸಿದ ಅಘನಾಶಕನು ನಮ್ಮ ಚಿಂತೆಯನ್ನು ದೂರಮಾಡಲಿ. ನಾವು ಭಕ್ತಿಯನ್ನು ಅಥವಾ ಉಪಾಸನೆಯನ್ನು ಏನೂ ತಿಳಿಯುವದಿಲ್ಲವು. ಯಾವನು ಭವಭಯವನ್ನು ಭಂಜಿಸುವನೋ, ಜನಮನವನ್ನು ರಂಜಿಸುವನೋ, ವಿಪತ್ತುಗಳ ಸಮೂಹವನ್ನು ಹಿಂಗಿಸುವನೋ ಆತನಿಗೆ ಸರ್ವ ದೇವಸಮಾಜವು ತ್ರಿಕರಣಪೂರ್ವಕ ಅಭಿಮಾನವನ್ನು ಪರಿತ್ಯಜಿಸಿ ಶರಣಾಗತವಾಗಿರುವದು. ಶಾರದಾ, ವೇದ, ಶೇಷ, ಋಷಿ ಮೊದಲಾದವರೊಳಗಿಂದಲೂ ಯಾವನನ್ನು ಯಾರೂ ತಿಳಿದಿಲ್ಲವೊ, ಯಾವನ ದೀನವಾತ್ಸಲ್ಯವನ್ನು ವೇದವು ಗರ್ಜಿಸುತ್ತಿರುವದೋ ಆ ಶ್ರೀಭಗವಾನನಿಗೆ ನಮ್ಮ ವಿಷಯವಾಗಿ ದ್ರವವು ಉತ್ಪನ್ನವಾಗಲಿ! ಹೇ ಭವಸಾಗರಮಂದರನೇ, ಸರ್ವಸುಂದರನೇ, ಗುಣಮಂದಿರನೇ, ಸುಖಸಾಧಾನಪ್ರಭುವೇ. ಈ ಯಾವತ್ತು ಮುನಿಗಳೂ, ಸಿದ್ಧರೂ, ದೇವತೆಗಳೂ ಅತ್ಯಂತ ಭಯಾಕುಲರಾಗಿ ನಿನ್ನ ಪದಪಂಕಜವನ್ನು ವಂದಿಸುತ್ತಿರುವರು.

ಈ ಮೇರೆಗೆ ಮೊರೆಯಿಡುತ್ತಿರಲು, ದುಃಖ-ಸಂಶಯಗಳನ್ನು ಪರಿಹರಿಸುವ ಗಂಭೀರವಾದ ಆಕಾಶವಾಣಿಯು ಆಯಿತು. "ಮುನಿ-ಸಿದ್ಧ-ದೇವೇಂದ್ರರೇ, ನಿರ್ಭಯರಾಗಿರಿ. ನಿಮ್ಮ ಸಲುವಾಗಿ ನಾನು ಮನುಷ್ಯಾವತಾರವನ್ನು ಧರಿಸುವೆನು. ದೊಡ್ಡದಾದ ಸೂರ್ಯವಂಶದಲ್ಲಿ ನಾನು ನನ್ನ ಅಂಶದೊಡನೆ ಮನುಷ್ಯಾವತಾರವನ್ನು ಧರಿಸುವೆನು. ಕಶ್ಯಪ ಅದಿತಿಯರು ಪೂರ್ವದಲ್ಲಿ ಮಹಾತಪಸ್ಸನ್ನು ಮಾಡಿದ್ದರು. ಆಗ ನಾನು ಅವರಿಗೆ ವರವನ್ನು ಕೊಟ್ಟಿರುವೆನು. ಅವರು ಈಗ ಅಯೋಧ್ಯೆಯಲ್ಲಿ ದಶರಥ-ಕೌಶಲ್ಯೆಯರ ರೂಪದಿಂದ ರಾಜ್ಯವಾಳುತ್ತಿರುವರು. ಅವರ ಮನೆಯಲ್ಲಿ ಹೋಗಿ ರಘುಕುಲತಿಲಕರಾದ ನಾವು ನಾಲ್ವರು ಬಂಧುಗಳು ಜನ್ಮ ತಾಳುವೆವು. ನಾನು ನಾರದನ ವಚನವನ್ನು ಸತ್ಯವಾಗಿ ಮಾಡುವೆನು. ಪರಮಶಕ್ತಿಯೊಡನೆ ಅವತರಿಸಿ ಸರ್ವಭೂಭಾರವನ್ನು ಹರಣಮಾಡುವೆನು; ಆದ್ದರಿಂದ ದೇವತೆಗಳೇ, ನೀವು ನಿಶ್ಚಿಂತರಾಗಿರಿ." ಈ ಆಕಾಶವಾಣಿಯು ಕಿವಿಗೆಬಿದ್ದ ಕೂಡಲೆ ದೇವತೆಗಳ ಅಂತಃಕರಣವು ಶಾಂತವಾಗಿ ಅವರು ಹಿಂದಿರುಗಿದರು. ಆಮೇಲೆ ಬ್ರಹ್ಮದೇವನು ಪೃಥ್ವಿಗೆ ತಿಳಿಯ ಹೇಳಲು, ಆಕೆಯು ನಿರ್ಭಯಳಾಗಿ ಆಕೆಯ ಜೀವದಲ್ಲಿ ಜೀವವು ಬಂದಿತು. "ಪೃಥ್ವಿಯಲ್ಲಿ ವಾನರ ದೇಹಗಳನ್ನು ಧರಿಸಿಪ್ರಭುಪದ ಸೇವೆಯನ್ನು

ಮಾಡುವದಕ್ಕಾಗಿ ನೀವುಹೋಗಿರೆಂದುದೇವತೆಗಳನ್ನು ಆಜ್ಞಾಪಿಸಿ, ಬ್ರಹ್ಮದೇವನು ಸತ್ಯ ಲೋಕಕ್ಕೆ ಹೋದನು. ಬಳಿಕ ಪೃಥ್ವಿಯೇ ಮೊದಲಾದವರು ತಮ್ಮ ತಮ್ಮ ಸ್ಥಳಗಳಿಗೆ ಹೋದರು. ದೇವತೆಗಳು ಬ್ರಹ್ಮದೇವನ ಅಪ್ಪಣೆಯಂತೆ ವನಚರದೇಹವನ್ನು ಧರಿಸಿದರು- ಅವರ ಬಲಪ್ರತಾಪಗಳು ಅತುಲವಾಗಿದ್ದವು. ಗುಂಡುಗಳೂ, ಗಿಡಗಳೂ, ಉಗುರುಗಳೂ ಇವೇ ಅವರ ಆಯುಧಗಳಾಗಿದ್ದು, ಅವರೆಲ್ಲರೂ ವೀರರಾಗಿದ್ದರು. ಆ ಮಹಾವೀರರು ಪರ್ವತಗಳ ಮೇಲೆಯೂ ಅರಣ್ಯಗಳಲ್ಲಿಯೂ ಅಲ್ಲಲ್ಲಿ ತಮ್ಮ ತಮ್ಮ ಸೈನ್ಯಗಳನ್ನು ಸಜ್ಜು ಗೊಳಿಸಿ ವ್ಯವಸ್ಥೆಯಿಂದ ಭಗವಂತನ ಹಾದಿಯ ನೋಡುತ್ತಿದ್ದರು.

ಇತ್ತ ಅಯೋಧ್ಯಾ ನಗರದಲ್ಲಿ ವೀರವಿಖ್ಯಾತನಾದ ರಘುಕುಲಮುಕುಟಮಣಿ ದಶರಥನೆಂಬ ಹೆಸರಿನ ರಾಜನಿದ್ದನು. ಆ ಧರ್ಮಾತ್ಮನು ಗುಣನಿಧಿಯೂ, ಜ್ಞಾನವಂತನೂ ಆಗಿದ್ದು, ಅಂತಃಕರಣದಿಂದ ಹರಿಭಕ್ತಿಪರಾಯಣನಾಗಿದ್ದನು. ಕೌಸಲ್ಯಾದಿ ದಶರಥನ ಪ್ರಿಯರಾಣಿಯರು ಶುಭಾಚಾರಸಂಪನ್ನರೂ; ಪತಿಗೆ ಅನುಕೂಲರಾದವರೂ, ನಮ್ರರೂ ಆಗಿದ್ದು, ಹರಿಪದಕಮಲದಲ್ಲಿ ದೃಢಭಕ್ತಿಯುಳ್ಳವರಾಗಿದ್ದರು. ಒಂದಾನೊಂದುದಿನ ದಶರಥನು ತನಗೆ ಪುತ್ರಸಂತಾನವಿಲ್ಲೆಂದು ಮನಸ್ಸಿನಲ್ಲಿ ನೊಂದುಕೊಂಡು, ಕೂಡಲೆ ಗುರುಗೃಹಕ್ಕೆ ಹೋಗಿ ವಿನಯದಿಂದ ಗುರುಗಳನ್ನು ವಂದಿಸಿ ತನ್ನ ದುಃಖವನ್ನು ನಿವೇದಿಸಿದನು. ಆಗ ವಸಿಷ್ಠ ಗುರುಗಳು ಹಲವು ಬಗೆಗಳಿಂದ ದಶರಥನಿಗೆ ತಿಳಿಯಹೇಳಿ ಆತನನ್ನು ಕುರಿತು— ರಾಜಾ, ಧೈರ್ಯವಿರಲಿ. ತ್ರಿಭುವನ ವಿಖ್ಯಾತರೂ, ಭಕ್ತಭಯನಿವಾರಕರೂ ಆದ ನಾಲ್ವರು ಜನ ಮಕ್ಕಳು ನಿನಗೆ ಆಗುವರು, ಎಂದು ಹೇಳಿ, ಶೃಂಗಿಋಷಿಗಳನ್ನು ಕರೆಸಿ ಅವರಿಂದ ಪುತ್ರಕಾಮೇಷ್ಟಿಯನ್ನು ಮಾಡಿಸಿದರು. ಋಷಿಗಳು ಭಕ್ತಿಪೂರ್ವಕವಾಗಿ ಆಹುತಿಯನ್ನು ಕೊಟ್ಟ ಕೂಡಲೆ, ಕೈಯಲ್ಲಿ ಚರುವನ್ನು ಹಿಡಿದುಕೊಂಡು ಅಗ್ನಿನಾರಾಯಣನು ಪ್ರಕಟನಾದನು. ಆ ಭಗವಂತನು ದಶರಥನನ್ನು ಕುರಿತು— ರಾಜನೆ, ವಸಿಷ್ಠರು ಮನಸ್ಸಿನಲ್ಲಿ ಆಲೋಚಿಸಿದಂತೆ ನಿನ್ನ ಸರ್ವಕಾರ್ಯಗಳು ಸಿದ್ಧಿಸಿದವು. ನೀನು ಈ ಹವಿಸ್ಸನ್ನು ಯಥಾ ಯೋಗ್ಯವಾಗಿ ಹಂಚಿ ನಿನ್ನ ರಾಣಿಯರಿಗೆ ಕೊಡು, ಎಂದು ಹೇಳಿ ಆ ಸಭೆಯ ಸಮಕ್ಷ ಇಷು ಮಾತಾಡಿ ಅದೃಶ್ಯನಾದನು. ಆಗ ದಶರಥರಾಜನಿಗಾದ ಆನಂದವು ಅವನ ಹೊಟ್ಟೆಯಲ್ಲಿ ಹಿಡಿಸದಾಯಿತು. ಆತನು ತನ್ನ ಪತ್ನಿಯರನ್ನು ಕರೆದು, ಹವಿಸ್ಸಿನ ಅರ್ಧ ಭಾಗವನ್ನು ಕೌಸಲ್ಯೆಗೆ ಕೊಟ್ಟು, ಉಳಿದ ಅರ್ಧ ಭಾಗದಲ್ಲಿ ಮತ್ತೆ ಎರಡು ಭಾಗಮಾಡಿ ಒಂದು ಭಾಗವನ್ನು ಕೈಕೇಯಿಗೆ ಕೊಟ್ಟನು. ಉಳಿದ ಅರ್ಧಭಾಗದಲ್ಲಿ ಮತ್ತೆ ಎರಡು ಭಾಗಗಳನ್ನು ಮಾಡಿ ಒಂದೊಂದನ್ನು ಕೌಸಲ್ಯೆ-ಕೈಕೇಯಿಯರ ಕೈಯಲ್ಲಿ ಕೊಡಲು, ಅವರು ಪ್ರಸನ್ನಾಂತಃಕರಣರಾಗಿ ಅವೆರಡನ್ನು ಸುಮಿತ್ರೆಗೆ ಕೊಟ್ಟರು. ಇದರಿಂದ ಮೂವರೂ ರಾಣಿಯರು ಗರ್ಭವತಿಯರಾದರು! ಪ್ರಭುವು ಉದರದಲ್ಲಿ ವಾಸಮಾಡಿದಂದಿನಿಂದ ಮೂವತ್ತು ಲೋಕ

ಗಳಲ್ಲಿ ಸಂಪತ್ತಿ-ಸುಖಗಳು ಪೂರ್ಣ ವ್ಯಾಪಿಸಿ ಉಳಿದವು. ಮೂವತ್ತೂ ರಾಣಿಯರು ತಮ್ಮ ತಮ್ಮ ಮಂದಿರಗಳಲ್ಲಿ ಶೋಭೆಯು, ಶೀಲದ, ತೇಜಸ್ಸಿನ ಖನಿಗಳಂತೆ ಶೋಭಿಸ ತೊಡಗಿದರು! ಹೀಗೆ ಸುಖದಲ್ಲಿ ಕೆಲಕಾಲವು ಕ್ರಮಿಸಲು, ಪರಮಾತ್ಮನು ಪ್ರಕಟವಾಗುವ ಕಾಲವು ಪ್ರಾಪ್ತವಾಯಿತು!

ಪ್ರಭುಜನ್ಮೋತ್ಸವ:—ಆಕಾಲದಲ್ಲಿಯೋಗ ಲಗ್ನ, ಗ್ರಹ, ವಾರ, ತಿಥಿ ಮೊದಲಾದವುಗಳೆಲ್ಲ ಅನುಕೂಲವಾದವು. ಚರಾಚರ ವಿಶ್ವವು ಹರ್ಷಯುಕ್ತವಾಯಿತು: ಶ್ರೀರಾಮಚಂದ್ರನ ಜನ್ಮವೇ ಸುಖಮೂಲವಲ್ಲವೇ? ನವಮಿ ತಿಥಿಯು, ಪಾವನ ಚೈತ್ರಮಾಸವು, ಶುಕ್ಲಪಕ್ಷವು ಹರಿಪ್ರಿಯ ಅಭಿಜಿತಯೋಗವು, ಮಧ್ಯಾಹ್ನದ ಸಮಶೀತೋಷ್ಣ ಕಾಲವು. ಹೀಗೆ ಲೋಕಕ್ಕೆವಿಶ್ರಾಮಕಾರಕವಾದ ಪುಣ್ಯಕಾಲವು ಪ್ರಾಪ್ತವಾಯಿತು. ಶೀತಲವೂ, ಮಂದವೂ, ಸುಗಂಧಿತವೂ ಆದವಾಯುವು ಬೀಸಹತ್ತಿತು. ದೇವತೆಗಳು ಆನಂದಿತರೂ, ಸಂತರು ಉಲ್ಲಸಿತರೂ ಆದರು. ವನಗಳು ಪ್ರಫುಲ್ಲಿತವಾದವು. ಪರ್ವತಸಮುದಾಯಗಳು ರತ್ನಗಳಿಂದ ಪ್ರಕಾಶಿಸತೊಡಗಿದವು. ಮೂವತ್ತು ನದಿಗಳೊಳಗಿಂದ ಅಮೃತದಂಥ ಜಲಪ್ರವಾಹಗಳು ಹರಿಯಹತ್ತಿದವು. ಬ್ರಹ್ಮದೇವನು ರಾಮಜನ್ಮದ ಆ ಕಾಲವನ್ನು ತಿಳಿದಮೇಲೆ ಮೂವತ್ತು ದೇವತೆಗಳು ತಮ್ಮ ತಮ್ಮ ವಿಮಾನಗಳನ್ನು ಸಜ್ಜುಗೊಳಿಸಹತ್ತಿದರು. ಆಕಾಶವು ನಿರಭ್ರವಾಗಿ ದೇವಗಣದಿಂದ ದಟ್ಟವಾಗಿ ತುಂಬಿಹೋಯಿತು. ಗಂಧರ್ವರು ಹರಿಗುಣ ಗಾಯನ ಮಾಡತೊಡಗಿದರು. ದೇವತೆಗಳು ಬೊಗಸೆಗಳನ್ನು ತುಂಬಿ ತುಂಬಿ ಹೂಗಳನ್ನು ಸುರಿಸತೊಡಗಿದರು. ಆಕಾಶದಲ್ಲಿ ದುಂದುಭಿಯನಾದವು ದಿಮಿಗುಟ್ಟಹತ್ತಿತು. ನಾಗರೂ, ಮುನಿಗಳೂ, ದೇವತೆಗಳೂ ಅನೇಕಪ್ರಕಾರದಿಂದ ಭಗವಂತನಸ್ತೋತ್ರಮಾಡಿ ತಮ್ಮ ತಮ್ಮ ರೀತಿಯಿಂದ ಆತನನ್ನು ಸೇವಿಸತೊಡಗಿದರು. ಆಗ ಜಗನ್ನಿವಾಸನೂ, ಅಖಿಲಲೋಕವಿರಾಮನೂ ಆದ ಪ್ರಭುವು ಪ್ರಕಟನಾದನು. ನಯನಾಭಿರಾಮನೂ, ಘನಶ್ಯಾಮತನುವೂ, ಚತುರ್ಭುಜನೂ, ಸಾಯುಧನೂ, ವನಮಾಲಾವಿಭೂಷಿತನೂ ವಿಶಾಲಾಕ್ಷನೂ, ಶೋಭಾಸಾಗರನೂ, ಮುನಿಮನಹಾರಿಯೂ, ಅದ್ಭುತರೂಪಧಾರಿಯೂ ಆದ ಖರಶತ್ರುವನ್ನು ನೋಡಿ ಕೌಸಲ್ಯೆಯು ಆನಂದವು ಉಕ್ಕಿ ಹೊರಸೂಸಹತ್ತಿತು. ಆಗ ಕೌಸಲ್ಯೆಯು ಎರಡೂ ಕರಗಳನ್ನು ಜೋಡಿಸಿ—"ಎಲೈ ಅನಂತನೇ, ನಿನ್ನ ಸ್ತುತಿಯನ್ನು ನಾನು ಹೇಗೆ ಮಾಡಬೇಕು? ವೇದ-ಪುರಾಣಗಳಂತು ನಿನ್ನನ್ನು ಪ್ರಮಾಣರಹಿತನೆಂತಲೂ, ಮಾಯಾ-ಗುಣ-ಜ್ಞಾನಗಳಿಂದ ಪರನೆಂತಲೂ ಅನ್ನುತ್ತಿರುವವು. ಎಲೈ ಕರುಣಾಸಾಗರ-ಅಖಿಲಗುಣನಿಧಾನನೇ, ಶ್ರುತಿಗಳೂ, ಸಂತರೂ ಗಾಯನ ಮಾಡುವ ಭಕ್ತವತ್ಸಲ ಲಕ್ಷ್ಮೀಕಾಂತನು ನೀನು ನನ್ನ ಕಲ್ಯಾಣಕ್ಕಾಗಿ ಪ್ರಕಟನಾಗಿರುವೆ. ವೇದವಾದದಂತೆ ಪ್ರತ್ಯೇಕ ರೋಮರಂಧ್ರದಲ್ಲಿ ಮಾಯಾನಿರ್ಮಿತವಾದ ಅನೇಕ ಬ್ರಹ್ಮಾಂಡಗಳು ವಾಸಿಸುವ ನೀನು ನನ್ನ ಹೊಟ್ಟೆಯಲ್ಲಿ ವಾಸಿಸಿದೆಯೆಂಬು

ಮಾತು ಉಪಹಾಸಾಸ್ಪದವಾಗಿರುವದು. ಆ ಉಪಹಾಸವನ್ನು ಕೇಳಿ ವಿವೇಕವಂತರಮನಸ್ಸು ಸ್ಥಿರವಾಗಲಾರದು.„ ಎಂದು ಸ್ತೋತ್ರಮಾಡಲು, ಕೌಸಲ್ಯೆಗೆ ಜ್ಞಾನವಾದದ್ದನ್ನು ನೋಡಿ ಪ್ರಭುವು ನಕ್ಕನು. ಅನೇಕ ಪ್ರಕಾರದ ಚರಿತ್ರೆಗಳನ್ನು ಮಾಡುವದು ತನ್ನ ಕರ್ತವ್ಯವಾದದ್ದರಿಂದ, ತಾಯಿಯಲ್ಲಿ ಪುತ್ರಪ್ರೇಮವು ಉತ್ಪನ್ನವಾಗುವದಕ್ಕಾಗಿ ಭಗವಂತನು ಆಕೆಗೆ ಪೂರ್ವಜನ್ಮವೃತ್ತವನ್ನು ತಿಳಿಸಿ ಹೇಳಿದನು. ಆಗ ಕೌಸಲ್ಯೆಯು ಮತಿಯು ಮೋಹಿತವಾಗಿ ಆಕೆಯು ಪುನಃ ಭಗವಂತನನ್ನು ಕುರಿತು— ಹೇ ತಾತ, ಈ ಸ್ವರೂಪವನ್ನು ಗುಪ್ತ ಮಾಡಿ ಅತ್ಯಂತಪ್ರೇಮಲವಾದ ಬಾಲಲೀಲೆಯನ್ನು ಮಾಡು; ಯಾಕಂದರೆ ಅದೇ ಸುಖವು ಪರಮ ಅನುಪಮವಾಗಿರುವದು, ಎಂದು ಬೇಡಿಕೊಳ್ಳಲು, ಆ ಸುಜ್ಞನಾದ ಸುರಶ್ರೇಷ್ಠನು ತಾಯಿಯ ವಚನವನ್ನು ಕೇಳಿದಕೂಡಲೆ ಬಾಲರೂಪವನ್ನು ಧರಿಸಿ ಅಳತೊಡಗಿದನು. ಈ ಚರಿತ್ರಗಾಯನಮಾಡಿದವರು ಭವಕೂಪದಲ್ಲಿ ಪತನಹೊಂದದೆ ಹರಿಪದವನ್ನು ಹೊಂದುವರು!

ಹೀಗೆ ಮಾಯಾಗುಣ-ಇಂದ್ರಿಯಾತೀತನಾದ ಪ್ರಭುವು ಸ್ವೇಚ್ಛೆಯಿಂದ ಗೋಬ್ರಾಹ್ಮಣರ, ಹಾಗು ದೇವತೆಗಳ-ಸಂತರ ಕಲ್ಯಾಣಕ್ಕಾಗಿ ಮನುಷ್ಯಾವತಾರವನ್ನು ಧರಿಸಿದನು. ಕೂಸು ಅಳಹತ್ತಿದ ಪರಮಪ್ರಿಯವಾರ್ತೆಯನ್ನು ಕೇಳಿದಕೂಡಲೆ ಯಾವತ್ತು ರಾಣಿಯರು ಲಗಬಗೆಯಿಂದ ಬಂದರು. ದಾಸಿಯರು ಅತ್ಯಾನಂದದಿಂದ ಓಡಾಡಹತ್ತಿದರು. ಯಾವತ್ತು ನಗರವಾಸಿಗಳು ಆನಂದದಲ್ಲಿ ಮುಳುಗಿದರು. ಪುತ್ರೋತ್ಸವದ ವರ್ತಮಾನವನ್ನು ಕೇಳಿ ದಶರಥನಿಗೆ ಬ್ರಹ್ಮಾನಂದದ ಸೌಖ್ಯವು ಉತ್ಪನ್ನವಾಯಿತು. ಆತನ ಹೃದಯದಲ್ಲಿ ಅತ್ಯಂತವಾದ ಪ್ರೇಮವು ಉಕ್ಕಿಬಂದು, ಆತನ ಶರೀರವು ರೋಮಾಂಚಿತವಾಯಿತು. ಆ ಪ್ರೇಮವು ಆಗಾಗ್ಗೆ ಉಕ್ಕೇರಿ ಹೊರಸೂಸುತ್ತಲಿದ್ದರೂ ಅರಸನು ತನ್ನ ಮನಸ್ಸಿನಲ್ಲಿ ವಿವೇಕವನ್ನು ತಾಳಿದನು. ಯಾವನ ನಾಮಸ್ಮರಣಮಾತ್ರದಿಂದ ಕಲ್ಯಾಣವಾಗುವದೋ, ಆ ಪರಮಾತ್ಮನೇ ನನ್ನ ಮನೆಯಲ್ಲಿ ಬಂದನೆಂಬ ವಿಚಾರದಿಂದ ಅರಸನ ಮನಸ್ಸಿನಲ್ಲಿ ಪರಮಾನಂದದ ಪ್ರವಾಹವು ಹರಿಯಹತ್ತಿತು. ಆತನು ಬಜಂತ್ರಿಗಳನ್ನು ಕರೆಸಿ ಮಂಗಲವಾದ್ಯಗಳನ್ನು ಬಾರಿಸಲು ಆಜ್ಞಾಪಿಸಿದನು. ಗುರುಗಳಾದ ವಸಿಷ್ಠರಿಗೆ ನಿಮಂತ್ರಣಕಳಿಸಿದನು. ಅವರು ಬ್ರಾಹ್ಮವೃಂದದೊಡನೆ ರಾಜದ್ವಾರಕ್ಕೆ ಬಂದರು. ಆ ಅನುಪಮ ಬಾಲಕನಲ್ಲಿ ಅವರ ವೃತ್ತಿಗಳು ಸ್ಥಿರವಾಗಲಿಲ್ಲವು; ಮತ್ತು ಆ ಸೌಂದರ್ಯನಿಧಾನನ ಗುಣಗಳನ್ನು ಅವರು ವರ್ಣಿಸುತ್ತಿರಲು ಅದು ಮುಗಿಯಲೇ ಒಲ್ಲದು! ಆಮೇಲೆ ನಾಂದೀಶ್ರಾದ್ಧವನ್ನು ಮಾಡಿ ಯಾವತ್ತು ಜಾತಕರ್ಮವಿಧಿಯನ್ನು ಮುಗಿಸಿದರು. ಅರಸನು ಸುವರ್ಣ, ವಸ್ತ್ರ, ಹೇಮ, ಅಲಂಕಾರ ಇತ್ಯಾದಿಗಳ ದಾನವನ್ನು ಬ್ರಾಹ್ಮಣರಿಗೆ ಸಮರ್ಪಿಸಿದನು. ಧ್ವಜಪತಾಕಾದಿಗಳಿಂದ ಪಟ್ಟಣವನ್ನೆಲ್ಲ ಶೃಂಗರಿಸಿದರು. ಆಕಾಶದಿಂದ ಪುಷ್ಪವೃಷ್ಟಿಯಾಗತೊಡಗಿತು. ಯಾವತ್ತುಜನರು ಬ್ರಹ್ಮಾನಂದದಲ್ಲಿ ಮಗ್ನರಾದರು. ಸ್ತ್ರೀಯರು ತಬಕಗಳಲ್ಲಿ ಬಂಗಾರದ ಕಲಶಗಳನ್ನಿಟ್ಟುಕೊಂಡು

ಹಾಡುತ್ತ ಹಾಡುತ್ತ ಅರಮನೆಯನ್ನು ಪ್ರವೇಶಿಸಿದರು. ಅವರು ಮಂಗಲಾರತಿಯನ್ನು ಮಾಡಿ ಕೂಸಿನಮೇಲಿಂದ ವಸ್ತುಗಳನ್ನು ನಿವಾಳಿಸಿಚಲ್ಲಿ, ಮೇಲಿಮೇಲೆ ಕೂಸನ್ನು ನಮಸ್ಕರಿಸುತ್ತಿದ್ದರು. ಮಾಗಧರು, ಸೂತರು, ಬಂದೀಜನರು ಮೊದಲಾದವರು ರಘುನಾಯಕನ ಪಾವನ ಯಶಸ್ಸನ್ನು ಗಾಯನಮಾಡತೊಡಗಿದರು. ಮನೆಮನೆಗಳಲ್ಲಿ ಮಂಗಲವಾದ್ಯಗಳು ಬಾರಿಸಹತ್ತಿದವು- ಅತ್ತ ಕೈಕೇಯಿ-ಸುಮಿತ್ರೆಯರೂ, ಸುಂದರ ಪುತ್ರರನ್ನು ಹೆತ್ತರು. ಆಗಿನ ಕಾಲದ ಸುಖದ ಹಾಗು ಐಶ್ವರ್ಯದ ಶೋಭೆಯನ್ನು ವರ್ಣಿಸುವದು ಸರಸ್ವತೀ-ಶೇಷರಿಗೂ ಅಶಕ್ಯವು. ಎಲೈ ಪಾರ್ವತಿಯೇ, ನೀನು ಶ್ರದ್ಧಾವಂತಳಾದದ್ದರಿಂದ ನಿನಗೊಂದು ಹಿತದ ಕಿವಿಮಾತನ್ನು ಹೇಳುವೆನು ಕೇಳು. ಆಗ ನಾನೂ, ಕಾಕಭುಶುಂಡಿಯೂ ಮನುಷ್ಯವೇಷದಿಂದ ಅಲ್ಲಿಗೆ ಹೋಗಿದ್ದೆವು- ಆಗ ನಮ್ಮನ್ನು ಯಾರೂ ಗುರುತಿಸದ್ದರಿಂದ ಪರಮಾನಂದ-ಪ್ರೇಮಸುಖದಿಂದ ಪ್ರಫುಲ್ಲಿತರಾಗಿ ನಾವಿಬ್ಬರೂ ಮೈಮರೆತು ಬೀದಿಬೀದಿ ಹಿಡಿದು ತಿರುಗುತ್ತಿದ್ದೆವು- ಇವೆಲ್ಲ ಸಂಗತಿಗಳನ್ನು ರಾಮನ ಕೃಪೆಯುಳ್ಳವರೇ ತಿಳಿಯುವರು. ಆ ಕಾಲದಲ್ಲಿ ಅರಸನು ಬಂದವರಿಗೆ ಇಚ್ಛಿತದಾನಗಳನ್ನು ಕೊಟ್ಟನು. ಎಲ್ಲರ ಮನಸ್ಸು ಸಂತುಷ್ಟವಾಗಿ ಎಲ್ಲರೂ—"ತುಲಸೀದಾಸನ ದೈವತವಾದ ಯಾವತ್ತು ರಾಜಪುತ್ರರು ಚಿರಂಜೀವಿಗಳಾಗಲಿ" ಎಂದು ಆಶೀರ್ವದಿಸುತ್ತಿದ್ದರು.

ಈ ಮೇರೆಗೆ ಕೆಲವು ದಿನಗಳು ಕ್ರಮಿಸುತ್ತಿರಲು, ನಾಮಕರಣದ ಕಾಲವು ಪ್ರಾಪ್ತವಾಯಿತು. ಆಗ ದಶರಥನು ಜ್ಞಾನವಂತರಾದ ವಸಿಷ್ಠಗುರುಗಳನ್ನು ಕರೆದು ಅವರನ್ನು ಪೂಜಿಸಿ—"ಮುನಿಗಳು ಗೊತ್ತುಮಾಡಿರುವ ಹೆಸರುಗಳನ್ನೇ ಬಾಲಕರಿಗೆ ಇಡಬೇಕೆಂದು" ಪ್ರಾರ್ಥಿಸಿದನು. ಆಗ ವಸಿಷ್ಠರು—"ರಾಜಾ, ಇವರ ಹೆಸರುಗಳು ಅನೇಕವಾಗಿದ್ದು, ಅನುಪಮವಾಗಿರುವವು. ಆದರೂ ನಾನು ಯಥಾಮತಿಯಾಗಿ ಹೇಳುವೆನು- ಆನಂದಸಾಗರನೂ, ಸುಖದನಿಧಾನನೂ, ಅಣುವಿನಿಂದ ಬ್ರಹ್ಮಾಂಡದವರೆಗೆ ಎಲ್ಲರನ್ನು ರಕ್ಷಿಸುವವನೂ, ಸೌಖ್ಯದ ತವರಮನೆಯೂ ಆದ ಈ ನಿನ್ನ ಹಿರಿಯಮಗನಿಗೆ "ರಾಮ" ನೆಂದು ಹೆಸರಿಡು. ಅಖಿಲಲೋಕಗಳಿಗೆ ವಿಶ್ರಾಮವನ್ನುಂಟುಮಾಡಿಕೊಡುವ ಈತನಿಗೆ ರಾಮನೆಂಬ ಹೆಸರೇ ಒಪ್ಪುವದು. ವಿಶ್ವದ ಪಾಲನ-ಪೋಷಣ ಮಾಡುವ ಈತನ ಹೆಸರು "ಭರತ" ಎಂದು ಪ್ರಸಿದ್ಧವಾಗುವದು. ಸ್ಮರಣಮಾತ್ರದಿಂದ ಶತ್ರುಗಳ ನಾಶವಾಗುವ ಈ ಶಿಶುವಿನ ಹೆಸರು "ಶತ್ರುಘ್ನ" ಎಂಬದು. ಸದ್ಗುಣಗಳ ಖನಿಯೂ, ರಾಮನಪ್ರಿಯಕರನೂ, ಸರ್ವಜಗತ್ತಿನ ಆಧಾರವೂ ಆದ ಆ ಶೇಷಾವತಾರನ ಹೆಸರು "ಲಕ್ಷ್ಮಣ" ಎಂಬದು," ಎಂದು ಹೇಳಿದರು. ಹೀಗೆ ಗುರುಗಳು ವಿಚಾರಪೂರ್ವಕವಾಗಿ ದಶರಥಪುತ್ರರಿಗೆ ಹೆಸರುಗಳನ್ನಿಟ್ಟರು. ಅವರು ದಶರಥನನ್ನು ಕುರಿತು—"ರಾಜಾ, ಈ ನಾಲ್ವರು ಮಕ್ಕಳು ವೇದಗಳ ತತ್ವವೇ ಆಗಿರುವರು. ಇವರು ಮುನಿಗಳ ವಿತ್ತವೂ, ಜನರ ಸರ್ವಸ್ವವೂ, ಶಿವನ ಪ್ರತ್ಯಕ್ಷಪ್ರಾಣವೂ, ಬಾಲಲೀಲೆಗಳ ಮೂರ್ತಿಮಂತ ರಸವೂ ಆಗಿರುವರು," ಎಂದು ಹೇಳಲು, ಅರಸನಿಗೆ ಪರಮಾನಂದವಾಯಿತು.

ತೊಟ್ಟಿಲಲ್ಲಿ ಮಲಗಿಸಿದಳು. ಬಳಿಕ ತನ್ನ ಕುಲದೈವತವಾದ ಮಹಾದೇವನಿಗೆ ವಿವಿಧ ಪಕ್ವಾನ್ನಗಳ ನೈವೇದ್ಯಮಾಡಿ ಅಡಿಗೆಯ ಮನೆಗೆ ಹೋಗಿ ಪುನಃ ದೇವರಮನೆಗೆ ಬರಲು, ರಾಮನು ನೈವೇದ್ಯವನ್ನು ಉಣ್ಣುತ್ತಿದ್ದನು! ಆಕೆಯು ಗಾಬರಿಯಾಗಿ ತೊಟ್ಟಿಲಲ್ಲಿ ನೋಡಲು, ಅಲ್ಲಿ ರಾಮನು ಗಡದ್ದ ನಿದ್ರೆಹತ್ತಿ ಮಲಗಿದ್ದನು. ತಿರುಗಿ ಆಕೆಯು ದೇವರ ಮನೆಗೆ ಬರಲು, ಅಲ್ಲಿ ರಾಮನು ಉಣ್ಣುತ್ತಲೇ ಇದ್ದನು! ಆಗ ಆಕೆಯ ಹೃದಯವು ಕಂಪಿಸಹತ್ತಿ ಧೈರ್ಯವು ಹಾರಿಹೋಯಿತು. ತಾಯಿಯು ಅಂಜಿರುವಳೆಂಬುದನ್ನು ನೋಡಿ ರಾಮನು [illegible]ಮಾಡಿ ಮುಗುಳುನಗೆ ನಕ್ಕು ತನ್ನ ಅದ್ಭುತವೂ, ಅಖಂಡವೂ ಆದ ವಿಶ್ವರೂಪವನ್ನು ತಾಯಿಗೆ ತೋರಿಸಿದನು. ಅಸಂಖ್ಯ ಸೂರ್ಯರು, ಚಂದ್ರರು, ಶಿವ-ಬ್ರಹ್ಮರು, ಅಗಣಿತಪರ್ವತಗಳು, ನದಿಗಳು, ಸಮುದ್ರಗಳು, ಭೂಗೋಲಗಳು, ಅರಣ್ಯಗಳು ಕಾಲ, ಕರ್ಮ, ಗುಣ, ಜ್ಞಾನ, ಸ್ವಭಾವ, ಒಟ್ಟಿಗೆ ಬೇರೆಯವರು ಎಂದೂ ನೋಡದೆ ಕೇಳದೆ ಇರುವವುಗಳನ್ನು ಕೌಸಲ್ಯೆಯು ನೋಡಿದಳು. ಅವಲ್ಲದೆ, ಎಲ್ಲ ಬಗೆಯಿಂದ ಗೂಢವಾಗಿರುವ, ಆದರೆ ಭಯಭೀತವಾಗಿ ಕೈಜೋಡಿಸಿಕೊಂಡು ನಿಂತಿದ್ದ ಮಾಯೆಯೂ ಆಕೆಯ ಕಣ್ಣಿಗೆ ಬಿದ್ದಳು. ಮಾಯೆಯು ಕಾಣಿಸುತ್ತಿರುವ ಜೀವನೂ, ಜೀವನನ್ನು ಮುಕ್ತಮಾಡುವ ಭಕ್ತಿಯೂ ಆಕೆಯ ಕಣ್ಣಿಗೆ ಬಿದ್ದರು. ಅವನ್ನೆಲ್ಲ ನೋಡಿ ಕೌಸಲ್ಯೆಯ ದೇಹವು ರೋಮಾಂಚಿತವಾಗಿ ಆಕೆಯ ಮುಖದಿಂದ ಶಬ್ದಗಳು ಹೊರಡದಾದವು. ಆಕೆಯು ಕಣ್ಣುಗಳನ್ನು ಮುಚ್ಚಿ ರಾಮಚರಣದಲ್ಲಿ ತಲೆಯನ್ನು ಬಾಗಿಸಿದಳು. ತಾಯಿಯು ಆಶ್ಚರ್ಯಚಕಿತಳಾದದ್ದನ್ನು ನೋಡಿ ಅಖಿಲರಾಕ್ಷಸಾಂತಕನು ಪುನಃ ಬಾಲರೂಪವನ್ನು ಧರಿಸಿದನು. ಭಗವಂತನನ್ನು ಸ್ತುತಿಸುವುದು ಆಕೆಯಿಂದ ಆಗಲೊಲ್ಲದು. ಜಗಜ್ಜನಕನನ್ನು ತನ್ನ ಮಗನೆಂದು ತಿಳಿದೆನಲ್ಲಾ! ಎಂದು ಆಕೆಯು ಭಯಗ್ರಸ್ತಳಾದಳು. ಆಗ ಪ್ರಭುವು ತಾಯಿಯನ್ನು ಪರಿಪರಿಯಾಗಿ ಸಮಾಧಾನಪಡಿಸಿ ಈ ಸಂಗತಿಯನ್ನು ಯಾರಮುಂದೆಯೂ ಹೇಳಬೇಡೆಂದು ಸೂಚಿಸಿದನು. ಕೌಸಲ್ಯೆಯು ಪುನಃ ಪುನಃ ಕೈಜೋಡಿಸಿ-ಪ್ರಭೋ, ಇನ್ನುಮೇಲೆ ಎಂದೂ ನಿನ್ನ ಮಾಯೆಯು ನನ್ನನ್ನು ಮೋಹಗೊಳಿಸಬಾರದು, ಎಂದು ಪ್ರಾರ್ಥಿಸಿದಳು.

ಹೀಗೆ ನಾಲ್ವರು ಬಂಧುಗಳು ಬಗೆಬಗೆಯ ಬಾಲಲೀಲೆಗಳಿಂದ ಎಲ್ಲರನ್ನು ಸಂತೋಷಪಡಿಸುತ್ತ ದೊಡ್ಡವರಾದರು. ಅವರ ಚೂಡಾಕರ್ಮವಾಯಿತು. ಬ್ರಾಹ್ಮಣರಿಗೆ ವಿಪುಲ ದಕ್ಷಿಣೆಯು ದೊರೆಯಿತು. ದಶರಥರಾಜನು ಊಟದಹೊತ್ತಿನಲ್ಲಿ ರಾಮನನ್ನು ಕರೆದರೂ ಆತನು ಗೆಳೆಯರೊಡನೆ ಓಡಿಹೋಗುವನು, ಕೌಸಲ್ಯೆಯು ಹಿಡಿಯಹೋಗಲು, ಜಿಗಿಜಿಗಿದು ಓಡುವನು. ವೇದಗಳು ಯಾವನನ್ನು "ನೇತಿನೇತಿ"ಎಂದು ಹೇಳುವವೋ, ಯಾರ ಅಂತವು ಶಂಕರನಿಗೂ ಹತ್ತಿರವಿದ್ದಿಲ್ಲವೋ ಅಂಥವನನ್ನು ಕೌಸಲ್ಯಾಮಾತೆಯು ಓಡಿಹೋಗಿ ಹಿಡಿದು ತರುವಳು. ಧೂಳಿಮಯವಾಗಿದ ಮೈಯಿಂದಲೇ ರಾಮನು ಬರಲು, ಅವನನ್ನು ದಶರಥನು ನಗಮೊಗದಿಂದ ತೊಡೆಯಮೇಲೆ ಕುಳ್ಳಿರಿಸಿಕೊಳ್ಳು

ವನು. ಉಣ್ಣಲುಣ್ಣುತ್ತ, ರಾಮನು ಎಲ್ಲರ ಕಣ್ಣು ತಪ್ಪಿಸಿ ನಡುವೇ ಎದ್ದು, ಮೊಸರೂ ಅನ್ನದ ಮುಸುರಿಯು ಬಾಯಿಗೆ ಹತ್ತಿರಲು, ಕೂಗುತ್ತ ಓಡಿಹೋಗುವನು. ಹೀಗೆ ಬಗೆಬಗೆಯಾಗಿ ಕ್ರೀಡಿಸುತ್ತ, ನಾಲ್ವರು ಬಂಧುಗಳು ಉಪನಯನಕ್ಕೆ ಬರಲು, ಅವರ ಉಪನಯನವಾಯಿತು. ರಾಮಚಂದ್ರನು ಅಧ್ಯಯನಕ್ಕಾಗಿ ಗುರುಗೃಹಕ್ಕೆ ಹೋದನು. ಅಲ್ಪಕಾಲದಲ್ಲಿಯೇ ಆತನಿಗೆ ಸರ್ವವಿದ್ಯೆಗಳು ಪ್ರಾಪ್ತವಾದವು. ನಿಶ್ವಾಸರೂಪದಿಂದ ಚತುರ್ವೇದಗಳು ಪ್ರಕಟವಾಗಿರುವ ಪ್ರಭುವು, ಅಧ್ಯಯನಮಾಡ ತೊಡಗಿದ್ದೇ ಮಹದಾಶ್ಚರ್ಯವು. ವಿದ್ಯಾವಿನಯಸಂಪನ್ನರೂ, ಗುಣಶೀಲಯುತರೂ ಆದ ಆ ಬಂಧುಗಳು ಅರಸುತನದ ಆಟಗಳನ್ನೆಲ್ಲ ಆಡತೊಡಗುವರು. ಅವರು ಧನುರ್ಬಾಣಗಳನ್ನು ಧರಿಸಿ ಬೇಟೆಗೆ ಹೋದಾಗ ಪವಿತ್ರಮೃಗಗಳನ್ನು ನೋಡಿ ಬೇಟೆಯಾಡುವರು. ರಾಮಬಾಣದಿಂದ ಹತವಾದ ಮೃಗಗಳು ದೇಹವನ್ನು ಚೆಲ್ಲಿಕೊಟ್ಟು ದೇವಲೋಕಕ್ಕೆ ಹೋಗುವವು. ಬೇಟೆಯಾಡಿದ ಮೃಗಗಳನ್ನು ತಂದು ರಾಮನು ದಶರಥನಿಗೆ ತೋರಿಸುವನು. ಬಳಿಕ ಕೃಪಾನಿಧಿಯಾದ ಶ್ರೀರಾಮನು ಬಂಧುಗಳೊಡನೆಯೂ, ಮಿತ್ರರೊಡನೆಯೂ ಊಟಮಾಡುವನು. ಪ್ರಭುವಿನ ಸದಾಚರಣೆಯನ್ನೇನು ವರ್ಣಿಸುವದು? ಆತನು ತಂದೆ ತಾಯಿಗಳ ಅಪ್ಪಣೆಯಂತೆ ನಡೆಯುವನು. ಯಾವತ್ತು ಜನರು ಸುಖಿಗಳಾಗುವ ಯೋಗವನ್ನೇ ಒದಗಿಸಿಕೊಡುವನು. ಆತನು ವೇದಪುರಾಣಗಳನ್ನು ಲಕ್ಷಪೂರ್ವಕವಾಗಿ ಕೇಳಿ, ಅವನ್ನು ಸ್ವತಃ ತನ್ನ ಬಂಧುಗಳಿಗೆ ತಿಳಿಸಿ ಹೇಳುವನು. ರಘುಪತಿಯು ಪ್ರಾತಃಕಾಲದಲ್ಲಿ ಎದ್ದು ತಾಯಿತಂದೆಗಳನ್ನೂ, ಗುರುಗಳನ್ನೂ ವಂದಿಸಿ, ಅವರ ಅಪ್ಪಣೆಯಂತೆ ಅಯೋಧ್ಯೆಯೊಳಗಿನ ಕೆಲಸಬೊಗಸೆಗಳನ್ನು ಮಾಡುತ್ತಿದ್ದನು. ಪ್ರಭುವಿನ ಈ ನಡತೆಯನ್ನು ನೋಡಿ ದಶರಥನು ಮನಸ್ಸಿನಲ್ಲಿ ಹರ್ಷಿತನಾಗುತ್ತಿದ್ದನು.

**ವಿಶ್ವಾಮಿತ್ರಾಗಮನ**—ಪಾರ್ವತೀ, ಹೀಗೆ ಶ್ರೀರಾಮನ ಬಾಲಲೀಲೆಗಳನ್ನು ನಿನಗೆ ಹೇಳಿದೆನು. ಇನ್ನು ವಿಶ್ವಮಿತ್ರನ ಯಜ್ಞದ ಸಂಗತಿಯನ್ನು ಲಕ್ಷಪೂರ್ವಕವಾಗಿ ಕೇಳು. ವಿಶ್ವಾಮಿತ ಮುನಿಯು ಮಹಾಜ್ಞಾನಿಯು. ಆತನು ಅರಣ್ಯವನ್ನೇ ಪವಿತ್ರಾಶ್ರಮವೆಂದು ತಿಳಿದು ಅಲ್ಲಿ ವಾಸಿಸುತ್ತಿದ್ದನು. ಆ ಮುನಿಯು ಜಪ-ಯಜ್ಞಗಳನ್ನು ಮಾಡುವಲ್ಲೆಲ್ಲ ಮಾರೀಚ ಸುಬಾಹು ಮೊದಲಾದ ರಾಕ್ಷಸರು ಪೀಡೆಯನ್ನುಂಟುಮಾಡುತ್ತಿದ್ದರು; ಅದರಿಂದ ಮುನಿಗೆ ಬಹಳ ದುಃಖವಾಗುತ್ತಿತ್ತು. ಚಿಂತಾತುರನಾದ ಆ ಮುನಿಯು, ಪರಮೇಶ್ವರನಿಂದಲ್ಲದೆ ಈ ದುಷ್ಟರ ಸಂಹಾರವಾಗುವದಿಲ್ಲೆಂದು ತಿಳಿದು ಮನಸ್ಸಿನಲ್ಲಿ—"ಪೃಥ್ವಿಯ ಭಾರಹರಣಮಾಡುವವಕ್ಕಾಗಿ ಹೇಗೂ ಪ್ರಭುವು ಅವತರಿಸಿಯೇ ಇರುವನು. ಈ ನೆವದಿಂದಲಾದರೂ ನನಗೆ ಪ್ರಭುಚರಣದರ್ಶನವಾದೀತು. ನಾನು ಬೇಡಿಕೊಂಡು ಅವರಿಬ್ಬರು ಬಂಧುಗಳನ್ನು ಕರೆಕೊಂಡು ಬಂದು, ಜ್ಞಾನವೈರಾಗ್ಯಾದಿ ಸರ್ವಗುಣಗಳ ಸ್ಥಾನವಾದ ಪ್ರಭುವನ್ನು ಕಣ್ಣುತುಂಬ ನೋಡುವೆನು, ಎಂದು ಹಲವು ಮನೋರಥಗಳನ್ನು ಮಾಡುತ್ತ ವಿಶ್ವಮಿತ್ರನು ಅಯೋಧ್ಯೆಗೆ ಹೊರಟನು. ಆತನಿಗೆ

ರು ಮುಟ್ಟಲಿಕ್ಕೆ ಏನೂ ತಡವಾಗಲಿಲ್ಲ. ಮುನಿಯು ಶರಯೂನದಿಯಲ್ಲಿ ಸ್ನಾನ
ಡಿ ರಾಜಸಭೆಗೆ ಹೋದನು. ವಿಶ್ವಾಮಿತ್ರನು ಬರುವನೆಂಬದನ್ನು ಕೇಳಿ ದಶರಥನು
ಹ್ಮಣಸಮೂಹದೊಡನೆ ಆತನಿಗೆ ಸಮ್ಮುಖವಾಗಿ ಹೋದನು. ಅರಸನು ಮುನಿ
ಕ್ಕೆ ಸಾಷ್ಟಾಂಗವಾಗಿ ವಂದಿಸಿ ಕರತಂದು ಸಿಂಹಾಸನದಮೇಲೆ ಕುಳ್ಳಿರಿಸಿದನು.
ಪ್ರಕ್ಷಾಲನಪೂರ್ವಕವಾಗಿ ದಶರಥನು ಮುನಿಯನ್ನು ಉತ್ಕೃಷ್ಟವಾಗಿ ಪೂಜಿಸಿ,
ಗೆ ಸಮಾನನಾದ ಧನ್ಯನು ಮತ್ತೊಬ್ಬನಿಲ್ಲೆಂದು ನಿವೇದಿಸಿದನು. ವಿವಿಧಪಕ್ವಾನ್ನಗಳ
ಜನದಿಂದ ಮುನಿಯು ಸಂತುಷ್ಟನಾದನು. ಬಳಿಕ ದಶರಥನು ತನ್ನ ನಾಲ್ವರು
ಕ್ಕಳನ್ನು ಮುನಿಯ ಚರಣಗಳಮೇಲೆ ಕೆಡವಲು, ರಾಮಚಂದ್ರನನ್ನು ನೋಡಿ ಮುನಿ
ನ್ಮೈಮೇಲಿನ ಎಚ್ಚರವು ತಪ್ಪಿತು.

ಹೀಗೆ ಮುನಿಯು ಸಂತುಷ್ಟನಾಗಿ ಕುಳಿತುಕೊಂಡಿರಲು, ದಶರಥನು ಪ್ರಸ
ಂತಃಕರಣದಿಂದ—ಮುನಿಗಳೇ, ಇಂದಿನಂತೆ ನನ್ನ ಮೇಲೆ ಎಂದೂ ಅನುಗ್ರಹ ಮಾಡಿ
;ಯಾವಕಾರಣದಿಂದ ಬರೋಣವಾಯಿತೆಂಬದನ್ನು ಬೇಗನೆ ತಿಳಿಸೋಣವಾಗಬೇಕು,
ಲು ಮುನಿಯು—ರಾಜಾ, ರಾಕ್ಷಸ ಸಮುದಾಯವು ನನ್ನನ್ನು ಬಹಳವಾಗಿ ಪೀಡಿ
ದುದರಿಂದ ನಿನ್ನನ್ನು ಯಾಚಿಸುವದಕ್ಕಾಗಿ ಬಂದಿರುವೆನು. ಲಕ್ಷ್ಮಣನೊಡನೆ
ಮನನ್ನು ನನಗೆ ಒಪ್ಪಿಸು; ಅಂದರೆ ರಾಕ್ಷಸರ ಸಂಹಾರವಾಗಿ ನಾನೂ
ಥನಾಗುವೆನು. ನೀನು ಮೋಹವನ್ನು, ಅಜ್ಞಾನವನ್ನೂ ಬಿಟ್ಟುಕೊಟ್ಟು, ಪ್ರಸನ್ನಮನ
ಂದ ಇಷ್ಟು ಕೆಲಸ ಮಾಡಿದರೆ ನಿನಗೆ ಧರ್ಮ-ಕೀರ್ತಿಗಳ ಪ್ರಾಪ್ತಿಯಾಗಿ, ನಿನ್ನ ಈ
ರು ಮಕ್ಕಳ ಕಲ್ಯಾಣವೂ ಆಗುವದು, ಎಂದುಹೇಳಿದನು. ಮುನಿಯ ಈ ಅತ್ಯಂತ
ಯವಾದ ಮಾತುಗಳನ್ನು ಕೇಳಿ ರಾಜನ ಹೃದಯವು ಕಂಪಿಸಿ, ಆತನ ಮೋರೆಯು
ಗಾಯಿತು. ನನಗೆ ಮುಪ್ಪಿನಕಾಲದಲ್ಲಿ ಅಪರೂಪಕ್ಕೆ ಈ ನಾಲ್ಕುಜನ ಮಕ್ಕಳಾಗಿ
ವರೆಂಬದನ್ನು ವಿಚಾರಿಸದೆ ಮುನಿಗಳು ಮಕ್ಕಳನ್ನು ಕೇಳಿಬಿಟ್ಟರು, ಎಂದು ಚಿಂತಿಸಿ
ಶ್ವಾಮಿತ್ರನನ್ನು ಕುರಿತು.—ಮುನೇ, ಭೂಮಿ, ಧೇನು, ಧನ, ಕೋಶ, ಇವುಗಳನ್ನು
ಳಿರಿ, ಈಗಲೇ ಕೊಡುವೆನು. ದೇಹಪ್ರಾಣಗಳಿಗಿಂತ ಪ್ರಿಯವಾದ ಬೇರೆವಸ್ತುಗಳು
ವಷ್ಟೇ? ಅವನ್ನು ಕೇಳಿದರೂ ಕೂಡಲೆತಮಗೆ ಒಪ್ಪಿಸುವೆನು. ಆದರೆ ಯಾವತ್ತು
ಕ್ಕಳು ನನಗೆ ಪ್ರಾಣಕ್ಕಿಂತ ಪ್ರಿಯರಾಗಿರುವರು. ಅದರಲ್ಲಿ ರಾಮನನ್ನಂತು
ನು ಸರ್ವಥಾ ಕೊಡಲಾರೆನು. ಎಲ್ಲಿಯ ಆ ಕ್ರೂರರಾದ ರಾಕ್ಷಸರು, ಎಲ್ಲಿಯ
ಂತ ಸುಕುಮಾರರಾದ ನನ್ನ ಮಕ್ಕಳು!

ಪ್ರೇಮರಸದಿಂದ ತುಂಬಿತುಳುಕುತ್ತಿರುವ ಅರಸನ ಈ ಮಾತುಗಳನ್ನು ಕೇಳಿ
ನಿಗಳಾದ ವಿಶ್ವಾಮಿತ್ರರಿಗೆ ಅತ್ಯಂತ ಹರ್ಷವೇಆಯಿತು. ಬಳಿಕ ವಸಿಷ್ಠರು ಬಗೆ
ಯಾಗಿ ಅರಸನಿಗೆ ತಿಳಿಯಹೇಳಲು, ಅರಸನ ಮನಸ್ಸಿನ ಸಂಶಯವು ದೂರವಾಯಿತು.
ನು ಅತ್ಯಂತ ಆದರದಿಂದ ಇಬ್ಬರು ಮಕ್ಕಳನ್ನು ಕರೆದು ಅವರನ್ನು ಅಪ್ಪಿಕೊಂಡು

ಬಹಳವಾಗಿ ಬೋಧಿಸಿ ವಿಶ್ವಾಮಿತ್ರನನ್ನು ಕುರಿತು—ಮುನಿಯೇ, ಈ ಇಬ್ಬರು ಮಕ್ಕಳು ನನ್ನ ಪ್ರಾಣಗಳ ಒಡೆಯರಾಗಿರುವರು. ಇನ್ನು ತಾವೇ ಇವರ ತಂದೆತಾಯಿಗಳು, ಎಂದು ಹೇಳಿ ಮಕ್ಕಳನ್ನು ಉನಂಡವಾಗಿ ಆಶೀರ್ವದಿಸಿ ಅವರನ್ನು ಋಷಿಗಳಿಗೆ ಒಪ್ಪಿಸಿದನು-ಬಳಿಕ ಪ್ರಭುವು ತಾಯಿಯ ಚರಣಕ್ಕೆರಗಿ ಮುನಿಯ ಭಯ ನಿವಾರಣಕ್ಕಾಗಿ ಲಕ್ಷ್ಮಣನೊಡನೆ ಉಲ್ಲಾಸದಿಂದ ಸಾಗಿದನು. ಮಾರ್ಗದಲ್ಲಿ ವಿಶ್ವಾಮಿತ್ರನು ರಾವಣಗೆ ತಾಟಕಿಯನ್ನು ತೋರಿಸಲು, ಆರ್ಭಟಿಸಿ ಬರುವ ಆ ರಾಕ್ಷಸಿಯನ್ನು ಪ್ರಭುವು ಒಂದೇ ಬಾಣದಿಂದ ಕೊಂದನು; ಆದರೆ ದೀನಳಿರುವಳೆಂದು ತಿಳಿದು ಆಕೆಗೆ ಮೋಕ್ಷವನ್ನು ಕೊಟ್ಟನು-ಆಗ ವಿಶ್ವಾಮಿತ್ರನು ತನ್ನ ಪ್ರಭುವಿನ ಗುರುತು ಹಿಡಿದು ಆ ವಿದ್ಯಾನಿಧಿಗೆ ಅಪೂರ್ವ ವಿದ್ಯೆಯನ್ನು ಉಪದೇಶಿಸಿದನು. ಅಂದಿನಿಂದ ಶ್ರೀ ರಾಮನ ಹಸಿವೆ ನೀರಡಿಕೆಗಳ ಹರಣವಾಗಿ, ಆತನ ಶರೀರದಲ್ಲಿ ಅಪೂರ್ವವಾದ ಬಲ-ತೇಜಗಳು ಪ್ರಕಟವಾಗಹತ್ತಿದವು. ವಿಶ್ವಾಮಿತ್ರನು ಪ್ರಭುವನ್ನು ತನ್ನ ಆಶ್ರಮಕ್ಕೆ ತಂದು, ಆತನು ಭಕ್ತವೈರಿಯೆಂದು ತಿಳಿದು ಯಾವತ್ತು ಆಯುಧಗಳನ್ನು ಆತನಿಗೆ ಅರ್ಪಿಸಿ ಆತನಿಗೆ ಕಂದಮೂಲಗಳ ಭೋಜನ ಮಾಡಿಸಿದನು. ಶ್ರೀರಾಮನ ಸೂಚನೆಯಂತೆ ವಿಶ್ವಾಮಿತ್ರನು ಯಜ್ಞವನ್ನು ಆರಂಭಿಸಲು, ಈ ಸುದ್ದಿಯನ್ನು ಕೇಳಿದ ಕೂಡಲೆ ಕ್ರೋಧಿಯೂ,ಬ್ರಹ್ಮದ್ರೋಹಿಯೂ ಆದ ಮಾರೀಚನು, ತನ್ನ ಸಂಗಡಿಗರೊಡನೆ ಯಜ್ಞಮಂಟಪದ ಮೇಲೆ ಬಿದ್ದನು. ಆಗ ಯಜ್ಞರಕ್ಷಕನಾದ ಪ್ರಭು ಶ್ರೀರಾಮಚಂದ್ರನು ಒಂದೇ ಬಾಣದಿಂದ ಮಾರೀಚನನ್ನು ಸಮುದ್ರದಾಟಿ ನೂರುಯೋಜನದ ಚೆಗೆ ಬೀಳುವಂತೆ ಹೊಡೆದು ಒಂದೇ ಅಗ್ನ್ಯಸ್ತ್ರದಿಂದ ಸುಬಾಹುವಿನ ಸಂಹಾರ ಮಾಡಿದನು. ಉಳಿದ ರಾಕ್ಷಸರನ್ನು ಲಕ್ಷ್ಮಣನು ಸಂಹರಿಸಿದನು. ಇದನ್ನು ನೋಡಿ ದೇವತೆಗಳು ರಾಮಲಕ್ಷ್ಮಣರನ್ನು ಸ್ತುತಿಸಿದರು.

ಅಹಲ್ಯೋದ್ಧಾರ—ಹೀಗೆ ಕೆಲವು ದಿನಗಳು ಕ್ರಮಿಸಿದ ಬಳಿಕ ವಿಶ್ವಾಮಿತ್ರನು ಜನಕರಾಜನಲ್ಲಿ ಆಗುವ ಧನುರ್ಯಾಗವನ್ನು ನೋಡುವದಕ್ಕಾಗಿ ಮಿಥಿಲಾಪಟ್ಟಣಕ್ಕೆ ಹೋಗಬೇಕೆಂದು ಹೇಳಲು, ಪ್ರಭುವು ಸಂತೋಷಪಟ್ಟು ಯಾವತ್ತೂ ಮುನಿವೃಂದದೊಡನೆ ಹೊರಟನು-ಹಾದಿಯಲ್ಲಿ ಆತನಿಗೊಂದು ನಿರ್ಮಾನುಷವಾದ ಆಶ್ರಮವು ಕಣ್ಣಿಗೆ ಬಿದ್ದಿತು-ಅಲ್ಲಿರುವದೊಂದು ಶಿಲೆಯನ್ನು ನೋಡಿ ಇದೇನೆಂದು ಪ್ರಭುವು ಪ್ರಶ್ನೆ ಮಾಡಲು, ವಿಶ್ವಾಮಿತ್ರನು, "ಗೌತಮಋಷಿಯ ಪತ್ನಿಯಾದ ಅಹಲ್ಯೆಯೊಡನೆ ಇಂದ್ರನು ಗೌತಮರೂಪದಿಂದ ರಮಮಾಣನಾದದ್ದರಿಂದ ಗೌತಮನು ಅಹಲ್ಯೆಗೆ ಶಿಲೆಯಾಗೆಂದು ಶಾಪಕೊಟ್ಟ ಕಥೆಯನ್ನು ಹೇಳಿ, ಶ್ರೀರಾಮನನ್ನು ಕುರಿತು—ಪ್ರಭುವೇ, ಈಕೆಯೇ ಆ ಶಿಲಾರೂಪ ಗೌತಮ ಪತ್ನಿಯು. ಈಕೆಯು ಧೈರ್ಯತಾಳಿ ನಿನ್ನ ಚರಣಧೂಳಿಯನ್ನು ಇಚ್ಛಿಸುತ್ತಿರುವಳು, ಈಕೆಯ ಮೇಲೆ ಕೃಪೆಮಾಡಬೇಕು, ಎಂದು ಹೇಳಿದರು. ಆ ಪ್ರಭುವಿನ ಶೋಕನಾಶಕ ಪವಿತ್ರ ಪಾದಗಳ ಸ್ಪರ್ಶವಾದ ಕೂಡಲೆ ತಪಃಪುಂಜಳಾದ ಅಹಲ್ಯೆಯು ಪ್ರಕಟಳಾಗಿಭಕ್ತಸುಖದಾಯಕನಾದಪ್ರಭುವಿನಎದುರಿಗೆಕೈಜೋಡಿಸಿ ನಿಂತುಕೊಂಡಳು.



ಅಹಲ್ಯೋದ್ಧಾರ.

ಆನಂದಪರವಶಳಾದ ಆಕೆಯು ಶರೀರದಲ್ಲಿ ರೋಮಾಂಚಗಳು ಉತ್ಪನ್ನವಾದವು. ಆಕೆಯ ಮುಖದಿಂದ ಶಬ್ದಗಳು ಹೊರಡದಾದವು- ನಾನು ಬಹುಭಾಗ್ಯಶಾಲಿಯೆಂಬದಿಷ್ಟೇ ಶಬ್ದಗಳನ್ನು ನುಡಿದು ಆಕೆಯು ಪ್ರಭುಚರಣಕ್ಕೆ ಸಾಷ್ಟಾಂಗವೆರಗಿದಳು! ಆಕೆಯ ಕಣ್ಣುಗಳೊಳಗಿಂದ ಅಶ್ರುಧಾರೆಗಳು ಸುರಿಯುಹತ್ತಿದವು. ಆಕೆಯು ಮನಸ್ಸನ್ನು ಸ್ಥಿರಗೊಳಿಸಿಕೊಂಡು, ಪ್ರಭುವಿನಗುರುತುಹಿಡಿದಳು. ಮತ್ತು ಶ್ರೀರಾಮ ಕೃಪೆಯಿಂದ ಆಕೆಯು ಹೃದಯದಲ್ಲಿ ಭಕ್ತಿಯು ಉತ್ಪನ್ನವಾಗಲು, ಆಕೆಯು ನಿರ್ಮಳವಾಣಿಯಿಂದ ಪ್ರಭುವನ್ನು ಕುರಿತು—ಎಲೈ ರಘುರಾಜನೇ, ನಿನ್ನ ಗುರುತು ಕೇವಲ ಜ್ಞಾನದಿಂದ ಮಾತ್ರ ಆಗತಕ್ಕದ್ದಾಗಿರುವದು; ಆದರೆ ಸ್ತ್ರೀಯಾದ ನಾನು ಅಪವಿತ್ರಳಾಗಿದ್ದು, ಪ್ರಭುವಾದ ನೀನು ಜಗತ್ಪಾವನನಾಗಿರುವೆ; ಎಲೈ ಭವಭಯವಿಮೋಚಕನೇ, ನನ್ನನ್ನು ರಕ್ಷಿಸು; ನಾನು ಶರಣಾಗತಳಾಗಿರುವೆನು! ಮುನಿಗಳು ಶಾಪಕೊಟ್ಟದ್ದು ನೆಟ್ಟಗೇ ಆಯಿತು, ಅದನ್ನು ನಾನು ಅನುಗ್ರಹವೆಂತಲೇ ತಿಳಿಯುವೆನು. ಯಾಕಂದರೆ ಆ ಶಾಪದಯೋಗದಿಂದಲೇ ನಾನು ಇಂದು ಭವಮೋಚಕ ಪ್ರಭುವನ್ನು ಕಣ್ಣು ತುಂಬ ನೋಡುತ್ತಿರುವೆನು. ಈ ಲಾಭದ ಮಹತ್ವವನ್ನು ಶ್ರೀ ಶಂಕರನೊಬ್ಬನು ಮಾತ್ರ ತಿಳಿಯುವನು. ಎಲೈ ನಾಥನೇ, ನಾನು ಮೂಢಳು, ಬೇರೆ ಯಾವ ವರವನ್ನೂ ಬೇಡಿಕೊಳ್ಳುವದಿಲ್ಲ. ನನ್ನ ಮನೋಭೃಂಗವು ನಿನ್ನ ಪದಕಮಲಪರಾಗದಲ್ಲಿ ಅನುರಕ್ತವಾಗಿದ್ದು, ಆ ಪದಕಮಲ ಮಕರಂದವನ್ನೇ ಸೇವಿಸುತ್ತಿರಬೇಕು, ಶಂಕರನು ಶಿರಸ್ಸಿನಲ್ಲಿ ಧರಿಸುತ್ತಿರುವ ಭಾಗೀರಥಿಯು ಉಗಮಸ್ಥಾನವಾದ, ಬ್ರಹ್ಮದೇವನಿಂದಲೂ ಪೂಜೆಹೊಂದುತ್ತಿರುವ ಈ ಚರಣಕಮಲಗಳನ್ನು ನೀನುನನ್ನ ತಲೆಯ ಮೇಲಿಟ್ಟೆ! ಪ್ರಭೋ, ನೀನು ಪರಮ ಕೃಪಾಲುವು; ಅಘಹಾರಕನು!" ಎಂದು ಸ್ತೋತ್ರಮಾಡಿ, ಸಾಷ್ಟಾಂಗವಾಗಿ ಪ್ರಭುಚರಣಕ್ಕೆರಗಿ ಅಭೀಷ್ಟವರವನ್ನು ಪಡೆದು ಆನಂದದಿಂದ ಪತಿಲೋಕಕ್ಕೆ ತೆರಳಿದಳು.

ಸೀತಾಸ್ವಯಂವರ—ಇತ್ತ ಮುನಿವೃಂದವು ಹಿಂಬಾಲಿಸಲು ರಾಮಲಕ್ಷ್ಮಣರು ವಿಶ್ವಾಮಿತ್ರನಸಂಗಡ ಮಿಥಿಲಾಪಟ್ಟಣಕ್ಕೆ ತೆರಳಿದರು. ಪಟ್ಟಣದ ಶೋಭೆಯನ್ನು ನೋಡಿ ಅವರಿಗೆ ಪರಮಾನಂದವಾಯಿತು. ಫಲಪುಷ್ಪಗಳಿಂದ ಸಮೃದ್ಧವಾಗಿದ್ದು, ಹಲವು ಪಕ್ಷಿಗಳು ವಾಸಿಸುತ್ತಿರಲು, ಹೂದೋಟಗಳೂ, ತೋಟಗಳೂ, ವನಗಳೂ ಪಟ್ಟಣದ ಶೋಭೆಯನ್ನು ಹೆಚ್ಚಿಸುತ್ತಿದ್ದವು. ಮನಸ್ಸು ಹೋದಸ್ಥಳದಲ್ಲಿಯೇ ಅದು ಲುಬ್ಧವಾಗುತ್ತಲಿತ್ತು. ಅಲ್ಲಿಯ ಮಂದಿರಗಳು ರತ್ನಖಚಿತವಾಗಿದ್ದು, ಅಲ್ಲಿಯ ಸಾವುಕಾರರೂ, ವ್ಯಾಪಾರಸ್ಥರೂ ಕುಬೇರನಂತೆ ಧನಾಢ್ಯರಾಗಿದ್ದರು. ಅಲ್ಲಿಯ ರಾಜಮಾರ್ಗಗಳು ಅತ್ಯಂತ ಸುಂದರವಾಗಿದ್ದವಲ್ಲದೆ ಅಡ್ಡಮಾರ್ಗಗಳೂ ಮನೋಹರವಾಗಿಯೇ ಇದ್ದವು. ಪಟ್ಟಣದೊಳಗಿನ ಸ್ತ್ರೀಪುರುಷರು ಭಾಗ್ಯವಂತರೂ, ಶುಚಿಷ್ಮಂತರೂ, ಶಿಷ್ಟರೂ, ಧರ್ಮಶೀಲರೂ, ಜ್ಞಾನಿಗಳೂ, ಸದ್ಗುಣಿಗಳೂ ಆಗಿದ್ದರು. ಅಲ್ಲಿಯ ರಾಜಮಂದಿರಗಳು ಅಪ್ರತಿಮವಾಗಿದ್ದು, ಅವುಗಳಲ್ಲಿಯ ವಿಲಾಸಗಳನ್ನು ನೋಡಿ ದೇವತೆಗಳು ಕೂಡ ಬೆರ

ಗಾಗುತ್ತಿದ್ದರು. ರಾಜಮಂದಿರದ ಬಾಗಿಲುಗಳ ಮುಂದುಗಡೆಯಲ್ಲಿ ರಾಜರು, ನಟರು, ಮಾಗಧರು, ಸ್ತುತಿಪಾಠಕರು ಮೊದಲಾದವರಸಂದಣಿಯು ಯಾವಾಗಲೂ ಇರುತ್ತಿತ್ತು. ಅಲ್ಲಿಯ ಅಶ್ವಶಾಲೆ-ಗಜಶಾಲೆಗಳು ವಿಸ್ತೀರ್ಣವಾಗಿದ್ದು, ಅವು ಯಾವಾಗಲೂ ಕುದುರೆ-ಆನೆ-ರಥಗಳಿಂದ ತುಂಬಿರುತ್ತಿದ್ದವು. ಯೋಧರು, ಮಂತ್ರಿಗಳು, ಸೇನಾಪತಿಗಳು ಹಲವರಿದ್ದು, ಅವರೆಲ್ಲರ ಮನೆಗಳು ಅರಮನೆಗಳಂತೆ ಶೋಭಾಯಮಾನಗಳಾಗಿದ್ದವು.

ಇಂಥ ಸುಂದರವಾದ ವೈಭವಸಂಪನ್ನ ರಾಜಧಾನಿಯ ಹೊರಬದಿಯಲ್ಲಿರುವ ನದಿ, ಸರೋವರಗಳ ದಂಡೆಯಮೇಲೆ ನೋಡಿದತ್ತೆಲ್ಲ ಧನುರ್ಯಾಗಕ್ಕಾಗಿ ಬಂದಿದ್ದ ಹಲವು ಜನ ರಾಜರು ಇಳಿದುಕೊಂಡಿದ್ದರು. ಎಲ್ಲಬಗೆಯಿಂದ ಅನುಕೂಲವಾದದ್ದೂ, ರಮಣೀಯವಾದದ್ದೂ ಆದ ಒಂದು ಮಾವಿನ ತೋಪನ್ನು ನೋಡಿ ವಿಶ್ವಾಮಿತ್ರರು ರಾಮನಿಗೆ—"ಈ ಸ್ಥಳವು ನನಗೆ ಬಹಳವಾಗಿ ಸೇರುವದು, ಸುಜ್ಞನಾದ ರಘುವೀರನೇ, ನಾವು ಇಲ್ಲಿಯೇ ಇಳಿದುಕೊಳ್ಳೋಣ" ಎಂದು ಹೇಳಲು, ಶ್ರೀರಾಮನು—"ಹಾಗೆಯೇ ಆಗಲಿ ಮಹಾರಾಜ" ಎಂದು ಬಿನ್ನಯಿಸಿದನು. ಆಗ ಎಲ್ಲ ಮುನಿವೃಂದದೊಡನೆ ಮಹಾಮುನಿ ವಿಶ್ವಾಮಿತ್ರನು ಅಲ್ಲಿ ಇಳಿದುಕೊಂಡನು. ಈ ವರ್ತಮಾನವನ್ನು ಕೇಳಿ ಜನಕರಾಜನು ಆನಂದಭರಿತನಾಗಿ ಮಂತ್ರಿಗಳು—ಹಲವುಜನ ಶುಚಿಷ್ಮಂತಬ್ರಾಹ್ಮಣರು—ಯೋಧರು—ಗುರುಗಳು—ಬೇರೆಪರಿವಾರವು ಇವುಗಳೊಡನೆ ಮುನಿವರ್ಯರನ್ನು ಕಾಣುವದಕ್ಕಾಗಿ ಹೊರಟನು. ರಾಜನು ವಿಶ್ವಾಮಿತ್ರನನ್ನು ವಂದಿಸಿ ಆತನ ಚರಣಗಳನ್ನು ಮಸ್ತಕದಲ್ಲಿ ಧಾರಣಮಾಡಲು, ಮುನಿಶ್ರೇಷ್ಠನು ಪ್ರಸನ್ನನಾಗಿ ಆಶೀರ್ವದಿಸಿದನು. ಆಮೇಲೆ ಜನಕರಾಜನು ಅತ್ಯಂತವಾದ ಆದರದಿಂದ ಉಳಿದ ಬ್ರಹ್ಮವೃಂದವನ್ನು ನಮಸ್ಕರಿಸಿ, ತನ್ನ ಮಹದ್ಭಾಗ್ಯವೆಂದು ತಿಳಿದು ಸಂತೋಷಪಟ್ಟನು. ವಿಶ್ವಾಮಿತ್ರನು ಮೇಲಿಂದ ಮೇಲೆ ಕುಶಲ ಪ್ರಶ್ನೆಗಳನ್ನು ಮಾಡಿ ಕುಳಿತುಕೊಳ್ಳಬೇಕೆಂದು ಅರಸನನ್ನು ಸಂಭಾವಿಸಿ ಕುಳ್ಳಿರಿಸುತ್ತಿರಲು, ಅಷ್ಟರಲ್ಲಿ ಹೂದೋಟವ ನೋಡಹೋಗಿದ್ದ ರಾಮಲಕ್ಷ್ಮಣರು ಅಲ್ಲಿಗೆ ಬಂದರು.

ರಘುಪತಿಯು ಬಂದಕೂಡಲೆ ಎಲ್ಲರು ಎದ್ದುನಿಂತರು. ವಿಶ್ವಾಮಿತ್ರನು ಆ ಉಭಯ ಬಂಧುಗಳನ್ನು ಹತ್ತರ ಕುಳ್ಳಿರಿಸಿಕೊಳ್ಳುತ್ತಿರಲು, ಅವರನ್ನು ನೋಡಿ ಎಲ್ಲರ ಕಣ್ಣುಗಳೊಳಗಿಂದ ಆನಂದಬಾಷ್ಪಗಳು ಸುರಿಯಹತ್ತಿದವು; ಎಲ್ಲರ ದೇಹಗಳು ರೋಮಾಂಚಿತಗಳಾದವು. ಶ್ರೀರಾಮನ ಮನೋಹರ ಮೂರ್ತಿಯನ್ನು ನೋಡಿ, ವಿಕಾರರಹಿತವಾದ ಜನಕನ ಮನಸ್ಸೂ ಪ್ರೇಮವಶವಾಯಿತು! ಆಗ ಆ ಬ್ರಹ್ಮನಿಷ್ಠನು ವಿವೇಕಪೂರ್ವಕವಾಗಿ ಧೈರ್ಯಶಾಲಿ ಮುನಿಚರಣಕ್ಕೆ ಶಿರಬಾಗಿ ಗಂಭೀರವೂ-ಸದ್ಗದಿತವೂ ಆದ ವಾಣಿಯಿಂದ—"ಎಲೈ ಮುನಿನಾಥನೇ, ಇವರಿಬ್ಬರು ಸುಂದರ ಬಾಲಕರು ಮುನಿಕುಲತಿಲಕರೋ, ಅಥವಾ ನೃಪಕುಲಪಾಲಕರೋ? ಎಂಬದನ್ನು ಹೇಳಬೇಕು. ವೇದಗಳು "ನೇತಿ

ನೇತಿ" ಎಂದು ಗಾಯನ ಮಾಡಿರುವ ಬ್ರಹ್ಮವೇ ಇವರಿಬ್ಬರ ರೂಪದಿಂದ ಇಲ್ಲಿ ಬಂದಿರುವದೋ ಏನು! ನನ್ನ ಮನಸ್ಸು ಸ್ವಾಭಾವಿಕವಾಗಿಯೇ ವೈರಾಗ್ಯಯುಕ್ತವಾಗಿದ್ದರೂ ಅದು ಕೂಡ ಇವರನ್ನು ನೋಡಿ ಪ್ರೇಮವಶವಾಗುತ್ತಿರುವದು! ಆದ್ದರಿಂದ ಮುನಿನಾಥ, ನಿನ್ನನ್ನು ನಾನು ಸದ್ಭಾವದಿಂದ ಕೇಳುತ್ತಿರುವೆನು, ಬಚ್ಚಿಡದೆ ಇದ್ದದ್ದನ್ನು ಬಿಚ್ಚಿ ಹೇಳೋಣವಾಗಬೇಕು! ಇವರನ್ನು ನೋಡಿ ನನ್ನಲ್ಲಿ ಪ್ರೇಮವೃದ್ಧಿಯಾಗುತ್ತಲಿದ್ದು, ಮನಸ್ಸು ಹಟದಿಂದ ಬ್ರಹ್ಮಾನಂದವಿಮುಖವಾಗುತ್ತಿರುವದು!" ಎಂದು ಕೇಳಿಕೊಳ್ಳಲು, ಮುನಿಯು ಹಾಸ್ಯಪೂರ್ವಕವಾಗಿ—ರಾಜಾ, ನೀನು ಯಥಾರ್ಥವಾಗಿ ಮಾತಾಡಿದೆ. ನಿನ್ನ ಮಾತು ಎಂದೂ ಸುಳ್ಳು ಇರಲಾರದು. ಪ್ರಾಣಿಮಾತ್ರಗಳಿಗೆಲ್ಲ ಇವರು ಪ್ರಿಯರಾಗಿರುವರು. ಈ ರಘುಕುಲಮಣಿಗಳು ದಶರಥನ ಮಕ್ಕಳಾಗಿದ್ದು, ನನ್ನ ಹಿತಕ್ಕಾಗಿ ದಶರಥನು ಇವರನ್ನು ಕಳಿಸಿರುವನು. ಈತನು ರಾಮನು, ಈತನು ಲಕ್ಷ್ಮಣನು. ಇವರಿಬ್ಬರು ಬಂಧುಶ್ರೇಷ್ಠರಾಗಿದ್ದು, ರೂಪ-ಶೀಲ-ಬಲಗಳ ಕಣಿಗಳಾಗಿರುವರು. ಇವರೇ ಯುದ್ಧದಲ್ಲಿ ರಾಕ್ಷಸರನ್ನು ಗೆದ್ದು ನನ್ನ ಯಜ್ಞವನ್ನು ರಕ್ಷಿಸಿದರೆಂಬದಕ್ಕೆ ಜಗತ್ತೇ ಸಾಕ್ಷಿಯಾಗಿರುವದು..

ವಿಶ್ವಾಮಿತ್ರನ ಈ ಮಾತುಗಳನ್ನು ಕೇಳಿ ಜನಕರಾಜನು—"ಮುನಿಯೇ, ಇವರ ಚರಣದರ್ಶನವಾದದ್ದರಿಂದ ನನ್ನ ಮಹಾಪುಣ್ಯದ ಪ್ರಭಾವವು ಅವರ್ಣನೀಯವಾಗಿರುವದೆಂದು ನಾನು ತಿಳಿಯುವೆನು. ಶ್ಯಾಮ-ಗೌರವರ್ಣದ ಈ ಸುಂದರ ಬಾಲಕರು ಆನಂದಕ್ಕೂ ಆನಂದವನ್ನುಂಟುಮಾಡುವಂತಹರಿರುವರು! ಇವರ ಪರಸ್ಪರವಾದ ಪಾವನ ಪ್ರೀತಿಯು ಅವರ್ಣನೀಯವಾಗಿದ್ದು, ಇವರ ಒಳ್ಳೆಯತನವು [ಸೌಶೀಲ್ಯವು] ಮನಸ್ಸಿಗೆ ಮಾತ್ರ ಗೋಚರವಾಗುವಂತಹದಿರುವದು! ಮುನಿವರ್ಯ, ಬ್ರಹ್ಮ-ಜೀವರಲ್ಲಿಯಂತೆ ಇವರಲ್ಲಿಯು ಪ್ರೇಮವು ಸ್ವಭಾವಸಿದ್ಧವಾಗಿಯೇ ಇರುವದು," ಎಂದು ನುಡಿದು ಮೇಲಿಂದ ಮೇಲೆ ಶ್ರೀರಾಮನನ್ನು ನೋಡುತ್ತ, ಮುನಿಗಳನ್ನು ಗೌರವಿಸುತ್ತ, ಅವರ ಚರಣದಲ್ಲಿ ಮಸ್ತಕವಿಡುತ್ತ ಅವರನ್ನು ಪಟ್ಟಣದೊಳಗೆ ಕರೆದುಕೊಂಡುಹೋಗಿ, ಸರ್ವಾನುಕೂಲವಾದ ಸುಂದರ ಮಂದಿರದಲ್ಲಿ ಪರಿವಾರದೊಡನೆ ಅವರನ್ನು ಇಳಿಸಿದನು. ಋಷಿಗಳೊಡನೆ ರಘುಕುಲಭೂಷಣನ ಭೋಜನವಾಯಿತು. ಎಲ್ಲರೂ ವಿಶ್ರಮಿಸತೊಡಗಿದರು. ಹೊರಗೆ ಮೂರು ತಾಸು ಹೊತ್ತು ಇರುವಾಗ ಪ್ರಭುವು ಲಕ್ಷ್ಮಣನೊಡನೆ ಕುಳಿತುಕೊಂಡಿದ್ದನು. ಲಕ್ಷ್ಮಣನು ಮನಸ್ಸಿನಲ್ಲಿ ಮಿಥಿಲಾಪಟ್ಟಣವನ್ನು ನೋಡಲು ಬಹಳವಾಗಿ ಇಚ್ಛಿಸುತ್ತಿದ್ದನು; ಆದರೆ ಪ್ರಭುವಾದ ಅಣ್ಣನ ಅಂಜಿಕೆಯಿಂದ, ಆದರಲ್ಲಿ ಮುನಿಯ ವಿಷಯದ ಸಂಕೋಚದಿಂದ ಅದನ್ನು ಆತನು ಬಾಯಿಬಿಚ್ಚಿ ಹೇಳಲಾರದಾಗಿದ್ದನು. ಆದರೆ ಭಕ್ತವತ್ಸಲನಾದ ಶ್ರೀರಾಮನು ತಮ್ಮನ ಈ ಮನೋದಯವನ್ನರಿತು ಉಲ್ಲಸಪಟ್ಟನು. ಅತ್ಯಂತವಾದ ವಿನಯದಿಂದ ಸಂಕೋಚಪೂರ್ವಕವಾಗಿ ಮುಗುಳು ನಗೆಯಿಂದ ಗುರುಗಳ ಅನುಜ್ಞೆ

ಪಡೆದು ಪಟ್ಟಣವನ್ನು ನೋಡಲಿಕ್ಕೆ ಲಕ್ಷ್ಮಣನೊಡನೆ ಹೊರಟನು. ಸೌಂದರ್ಯಶಾಲಿಗಳಾದ ಆ ಬಂಧುಗಳನ್ನು ನೋಡಿದಕೂಡಲೆ ಹುಡುಗರ ಹಿಂಡಿಗೆ ಹಿಂಡು ಅವರ ಬೆನ್ನು ಹತ್ತಿತು. ಅವರ ಮನೋಹರರೂಪವನ್ನು ನೋಡಿ ಪುರಜನರ ನೇತ್ರಗಳು ಸಾಫಲ್ಯವನ್ನು ಹೊಂದಿದವು. ಸ್ತ್ರೀಯರು ಮನೆಗೆಲಸಗಳನ್ನು ಬಿಟ್ಟು ಕಿಡಿಕೆಗಳಲ್ಲಿ ನಿಂತು ರಾಮರೂಪವನ್ನು ನೋಡಿ ಅನುರಕ್ತರಾಗಿ, ಆ ಉಭಯ ಬಂಧುಗಳ ಗುಣಗಳನ್ನು ಬಗೆಬಗೆಯಾಗಿ ತಮ್ಮ ತಮ್ಮೊಳಗೆ ಬಣ್ಣಿಸುತ್ತಲಿದ್ದರು. ತಮ್ಮ ಸೀತೆಗೆ ಆ ನೀಲವರ್ಣದ ಶ್ರೀರಾಮನೇ ತಕ್ಕ ವರನೆಂದು ಅವರು ಭಾವಿಸತೊಡಗಿದರು. ಮಹಾಪಾಪಿಯಾದ ಶಿಲಾರೂಪದಅಹಲ್ಯೆಯನ್ನು ಚರಣಸ್ಪರ್ಶಮಾತ್ರದಿಂದಉದ್ಧರಿಸಿದಮಹಾತ್ಮನಾದ ಶ್ರೀರಾಮನು ಸುಕುಮಾರನಾಗಿ ತೋರಿದರೂ ನಿಶ್ಚಯವಾಗಿಧನುರ್ಭಂಗಮಾಡಿ ಸೀತೆಯನ್ನು ವರಿಸುವನೆಂದು ಅವರು ನಿಶ್ಚಯಿಸತೊಡಗಿದರು. ಎಷ್ಟೋಜನರು ಶ್ರೀರಾಮನ ಸುಕುಮಾರರೂಪವನ್ನು ನೋಡಿ ಜನಕನ ಧನುರ್ಭಂಗದ ಹಟವನ್ನು ತಿರಸ್ಕರಿಸಹತ್ತಿದರು. ಶ್ರೀ ರಾಮನು ಲಕ್ಷ್ಮಣನೊಡನೆ ಧನುರ್ಯಾಗದ ಸ್ಥಳವನ್ನು ನೋಡುವದಕ್ಕಾಗಿ ಹೊರಟನು. ಆ ಭೂಮಿಯು ಅತ್ಯಂತ ವಿಸ್ತೀರ್ಣವಾದದ್ದಿದ್ದು, ಅದನ್ನು ಸುಂದರವಾದ ಕಲ್ಲಹಾಸಿಗೆಯಿಂದ ಭದ್ರವಾಗಿ ಮಾಡಿದ್ದರು. ಧನುಸ್ಸನ್ನಿಡುವದಕ್ಕಾಗಿ ಮಾಡಿರುವ ಭೂಮಿಯು ಮಧ್ಯದಲ್ಲಿರುವ ಕಟ್ಟೆಯು ಬಹು ಚಿತ್ತಾಕರ್ಷಕವಾಗಿತ್ತು. ನಾಲ್ಕು ಮಗ್ಗಲುಗಳಲ್ಲಿ ಅರಸರು ಕುಳಿತುಕೊಳ್ಳುವದಕ್ಕಾಗಿ ಬಂಗಾರದ ದೊಡ್ಡ ದೊಡ್ಡ ಮಂಚಕಗಳನ್ನು ಇಟ್ಟಿದ್ದರು. ಅವುಗಳ ಹಿಮ್ಮಗ್ಗಲುಗಳಲ್ಲಿ ಬೇರೆಯವರಿಗೆ ಕುಳಿತುಕೊಳ್ಳುವದಕ್ಕಾಗಿ ಸಾದಾಮಂಚಕಗಳನ್ನು ಇಟ್ಟಿದ್ದರು. ಪಟ್ಟಣದೊಳಗಿನ ಜನರಿಗೆಲ್ಲ ಕುಳಿತುಕೊಳ್ಳುವದಕ್ಕಾಗಿ ಎತ್ತರದ ಸ್ಥಳಗಳನ್ನು ಸುವ್ಯವಸ್ಥಿತವಾಗಿ ರಚಿಸಿದ್ದರು. ಮಾನಮರ್ಯಾದೆಗನುಸರಿಸಿ ಸ್ತ್ರೀಯರು ಕುಳಿತುಕೊಳ್ಳುವದಕ್ಕಾಗಿಯೂ ಸ್ಥಳಗಳನ್ನು ಸಿದ್ಧಪಡಿಸಿದ್ದರು. ಯಾವನ ಅನುಜ್ಞೆಯಿಂದ ಮಾಯೆಯು ನಿಮಿಷಾರ್ಧದಲ್ಲಿ ಅನೇಕ ಬ್ರಹ್ಮಾಂಡಗಳನ್ನು ರಚಿಸುವದೋ, ಆ ದೀನದಯಾಳುವಾದ ಪ್ರಭು ಶ್ರೀರಾಮನು ಭಕ್ತರ ಹೇತುವಿಗಾಗಿ ಆ ಧನುರ್ಯಾಜ್ಞಶಾಲೆಯನ್ನು ನೋಡಿ ಆಶ್ಚರ್ಯಪಡತೊಡಗಿದನು! ಯಾವನ ಭಯದಿಂದ ಭಯಕ್ಕೂ ಭಯವು ಉಂಟಾಗುವದೋ, ಆ ಲೋಕಪ್ರಭು ಶ್ರೀರಾಮನು ಬಹಳ ಹೊತ್ತಾಯಿತೆಂದು ಭಕ್ತಿಯ ಮಹಿಮೆಯಿಂದ ಗುರುಗಳ ಭಯದ ಪ್ರದರ್ಶನಮಾಡತೊಡಗಿದನು. ಅವರಿಬ್ಬರು ಗುರುಗಳ ಭಯದಿಂದ ನೋಡುವದನ್ನು ಬಿಟ್ಟುಕೊಟ್ಟು ಬೇಗಬೇಗನೆ ಗುರುಗಳಬಳಿಗೆ ಸಾಗಿ ಅವರ ಚರಣಕ್ಕೆರಗಿದರು.

ಸಂಧ್ಯಾಕಾಲವಾಗಲು, ಮುನಿಗಳ ಅಪ್ಪಣೆಯಿಂದ ಎಲ್ಲರೂ ಸಂಧ್ಯಾವಂದನವನ್ನು ಮಾಡಿದರು. ಆಮೇಲೆ ಪ್ರಾಚೀನ ಕಥಾಪುರಾಣಗಳ ಶ್ರವಣದಲ್ಲಿ ಎರಡು ಪ್ರಹರ ರಾತ್ರಿಯಾಯಿತು. ಬಳಿಕ ವಿಶ್ವಾಮಿತ್ರ ಋಷಿಗಳು ಮಲಗಿಕೊಳ್ಳಲು, ರಾಮ

ಲಕ್ಷ್ಮಣರು ಅವರ ಕಾಲುಗಳನ್ನು ಒತ್ತಹತ್ತಿದರು. ಯಾರ ಚರಣಕಮಲಗಳ ಪ್ರೀತ್ಯ ರ್ಥವಾಗಿ ವೈರಾಗ್ಯಶಾಲಿಗಳಾದ ಜನರು ನಾನಾಪ್ರಕಾರದ ಜಪಗಳಲ್ಲಿಯೂ, ಯೋಗಗ ಳಲ್ಲಿಯೂ ತೊಡಗುವರೋ, ಆ ಉಭಯ ಬಂಧುಗಳು ಪ್ರೇಮಕ್ಕೆ ದಾಸರಾಗಿ ಗುರುಗಳ ಪಾದಕಮಲಗಳನ್ನು ಪ್ರೀತಿಯಿಂದ ಒತ್ತತೊಡಗಿದರು. ವಿಶ್ವಾಮಿತ್ರನು ಹಲವುಸಾರೆ ಅಜ್ಞಾಪಿಸಿದಬಳಿಕ ರಾಮನು ಹೋಗಿ ಮಲಗಿಕೊಂಡನು. ಆಗ ಲಕ್ಷ್ಮಣನು ರಾಮನ ಕಾಲುಗಳನ್ನು ಒತ್ತತೊಡಗಿದನು. ಆತನು ಅಂಜುತ್ತಂಜುತ್ತ ಅಣ್ಣನ ಪಾದಗಳನ್ನು ಹೃದಯದಲ್ಲಿ ಧರಿಸಿ ಅತ್ಯಾನಂದಪಡುವನು- "ಬಾಳಾ, ಮಲಗುಹೋಗು" ಎಂದು ಪ್ರಭುವು ಮೇಲೆ ಮೇಲೆ ಅನ್ನುತ್ತಲಿದ್ದನು. ಕಡೆಗೆ ಆ ಪ್ರಭುಚರಣಕಮಲಗಳನ್ನೇ ಧ್ಯಾನಿಸುತ್ತ ಲಕ್ಷ್ಮಣನು ನಿದ್ದೆಹೋದನು. ಮುಂದೆ ಕೋಳಿ ಕೂಗಿದಕೂಡಲೆ ಬೆಳ ಗಾಯಿತೆಂದು ತಿಳಿದು ಲಕ್ಷ್ಮಣನು ಎದ್ದನು. ಜ್ಞಾನಿಯಾದ ವಿಶ್ವಪ್ರಭು ಶ್ರೀ ರಾಮ ಚಂದ್ರನು ಗುರುಗಳು ಏಳುವದಕ್ಕಿಂತ ಮೊದಲೇ ಎದ್ದನು. ಎಲ್ಲ ಪ್ರಾತಃಕರ್ಮಗಳನ್ನು ತೀರಿಸಿ ಅವರು ಸ್ನಾನಮಾಡಿದರು- ನಿತ್ಯಕರ್ಮಗಳಾದನಂತರ ಅವರು ಗುರುಗಳನ್ನು ವಂದಿ ಸಿದರು. ಪೂಜಾಸಮಯವು ಸಮೀಪಿಸಿತೆಂದು ತಿಳಿದು ಗುರುಗಳ ಅಪ್ಪಣೆಯಿಂದ ಪುಷ್ಪ ಗಳನ್ನು ತರುವದಕ್ಕಾಗಿ ಆ ಇಬ್ಬರು ಬಂಧುಗಳೂ ಹೊರಟು, ಅರಮನೆಯ ಹೂತೋಟ ವನ್ನು ನೋಡಿ ತೋಟಿಗನನ್ನು ಕೇಳಿ ಒಳಗೆ ಹೊಕ್ಕರು. ಅವರು ಆ ಮನೋಹರವಾದ ತೋಟದಲ್ಲಿ ಸಂಚರಿಸಿ ವಿವಿಧಪತ್ರಪುಷ್ಪಗಳನ್ನು ಸಂಗ್ರಹಿಸತೊಡಗಿದರು-

ಇದೇ ಸಮಯದಲ್ಲಿ ಸೀತೆಯು ತಾಯಿಯ ಅಪ್ಪಣೆಯಿಂದ ಶ್ರೀ ದುರ್ಗಾದೇವಿಯ ಪೂಜೆಗಾಗಿ ಆ ತೋಟದೊಳಗಿನ ಸರೋವರದ ದಂಡೆಯಮೇಲಿರುವ ಸುಂದರವಾದ ದುರ್ಗಾಮಂದಿರಕ್ಕೆ ಬಂದಿದ್ದಳು. ಆಕೆಯು ಸಖಿಯರೊಡನೆ ಸರೋವರದಲ್ಲಿ ಮೈ ತೊಳಕೊಂಡು ಆನಂದದಿಂದ ಮಂದಿರವನ್ನು ಪ್ರವೇಶಿಸಿ, ಭಕ್ತಿಪೂರ್ವಕವಾಗಿ ದೇವಿ ಯನ್ನು ಪೂಜಿಸಿದನಂತರ ತನಗೆ ಅನುರೂಪನಾದ ಉತ್ಕೃಷ್ಟ ಪತಿಯು ದೊರೆಯಬೇ ಕೆಂದು ವರವನ್ನು ಬೇಡಿಕೊಂಡಳು. ಅಷ್ಟರಲ್ಲಿ ಹೂದೋಟವನ್ನು ನೋಡಲಿಕ್ಕೆ ಹೋ ಗಿದ್ದ ಸೀತೆಯ ಸಖಿಯೊಬ್ಬಳು ರಾಮಲಕ್ಷ್ಮಣರನ್ನು ನೋಡಿ ಆನಂದಭರಿತಳಾಗಿ ಸೀತೆಯ ಬಳಿಗೆ ಬಂದು ಆ ವರ್ತಮಾನವನ್ನು ಹೇಳಿದಳು. ಅದನ್ನು ಕೇಳಿ ಸೀತೆಯು ಸಖಿಯರು ಸಂತೋಷಪಟ್ಟರು- ಅವರಲ್ಲಿ ಒಬ್ಬಳು ರಾಮಲಕ್ಷ್ಮಣರ ಸೌಂದರ್ಯ-ಸದ್ಗುಣಗ ಳನ್ನೂ, ಪರಾಕ್ರಮವನ್ನೂ ಬಹಳವಾಗಿ ವರ್ಣಿಸಿದಳು. ಸಖಿಯ ಆ ಮಾತುಗಳು ಸೀತೆಗೆ ಬಹಳ ಸವಿಯಾಗಿ, ಆಕೆಯ ನೇತ್ರಗಳು ರಾಮದರ್ಶನೋತ್ಸುಕವಾದವು. ಆಕೆ ಯು ಆ ಸಖಿಯನ್ನು ಮುಂದೆ ಮಾಡಿಕೊಂಡು ಶ್ರೀರಾಮನ ದರ್ಶನಕ್ಕಾಗಿ ಹೊರಟಳು. ಆ ಜಾನಕಿಯ ಪುರಾತನಪ್ರೇಮದ ಗೊತ್ತುಹಚ್ಚಲಿಕ್ಕೆ ಯಾರಿಗೂ ಬರಲಿಲ್ಲ. ಶ್ರೀ ದುರ್ಗೆಯ ಮಂದಿರದ ತೋಟದಲ್ಲಿಯೇ ನಿನ್ನ ಪತಿಯದರ್ಶನವಾಗುವದೆಂದು ನಾರದನು

ಹೇಳಿದ ಮಾತು ಜಾನಕಿಗೆ ನೆನಪಾಗಿ, ಆಕೆಯ ಮನಸ್ಸಿನಲ್ಲಿ ಪವಿತ್ರಪ್ರೇಮವು ಉತ್ಪನ್ನವಾಯಿತು. ಆಕೆಯು ಬೆರಗಾಗಿ ಭಯಭೀತವಾದ ಚಿಗರೆಯ ಮರಿಯಂತೆ ನಾಲ್ಕೂಕಡೆಗೆ ನೋಡತೊಡಗಿದಳು. ಇತ್ತ ಶ್ರೀರಾಮನು ಸೀತೆಯ ಸೌಂದರ್ಯವನ್ನು ನೋಡಿ ಸಂತೋಷಪಟ್ಟನು. ಸೌಭಾಗ್ಯಗೃಹದ ಶೋಭೆಯನ್ನು ಹೆಚ್ಚಿಸುವಂತಹ ದೀಪಜ್ಯೋತಿಯು ಆ ಮನೆಯಲ್ಲಿ ಪ್ರಕಾಶಿಸುವಂತೆ, ಸೀತೆಯ ಸೌಂದರ್ಯವು ಸೌಂದರ್ಯಕ್ಕೂ ಸೌಂದರ್ಯವನ್ನು ಕೊಡುವಂತಹದಾಗಿತ್ತು. ಶ್ರೀರಾಮನು ಸೀತೆಯ ಲಾವಣ್ಯವನ್ನು ಮನಸ್ಸಿನಲ್ಲಿ ಶ್ಲಾಘಿಸುತ್ತ ಶುದ್ಧಾಂತಃಕರಣದಿಂದ ಲಕ್ಷ್ಮಣನನ್ನು ಕುರಿತು—"ಅಪ್ಪಾ ಲಕ್ಷ್ಮಣಾ, ಧನುರ್ಯಜ್ಞವು ಯಾವಳ ಸಲುವಾಗಿ ಆಗುತ್ತಿರುವದೋ ಆ ಜನಕ-ಸುತೆಯು ಇವಳೇ ಆಗಿರುವಳು. ಈಕೆಯ ಲೋಕೋತ್ತರ ಲಾವಣ್ಯವನ್ನು ನೋಡಿ ಸ್ವಾಭಾವಿಕವಾಗಿಯೇ ಪವಿತ್ರವಾಗಿರುವ ನನ್ನ ಮನಸ್ಸೂ ಕ್ಷೋಭಿಸತೊಡಗಿರುವದು. ಇದರ ನಿಜವಾದ ಕಾರಣವನ್ನು ವಿಧಾತ್ರನೇ ಬಲ್ಲನು. ಲಕ್ಷ್ಮಣಾ, ಕೇಳು. ನನ್ನ ಶುಭಾಂಗಗಳು ಸ್ಫುರಣ ಹೊಂದುತ್ತಿರುವವು. ರಘುವಂಶೀಯರ ಮನಸ್ಸು ಕುಮಾರ್ಗದಲ್ಲಿ ಎಂದೂ ಕಾಲಿಡದಿರುವದು ಅವರ ಪ್ರಕೃತಿಗುಣವಾಗಿರುವದು. ಸ್ವಪ್ನದಲ್ಲಿಯೂ ಪರಸ್ತ್ರೀಯನ್ನು ನೋಡದಿರುವ ನನ್ನ ಮನಸ್ಸಿನ ಪವಿತ್ರತೆಯ ನಂಬಿಗೆಯು ನನಗೂ ಇರುತ್ತದೆ. ರಣದಲ್ಲಿ ಬೆನ್ನು ತೋರಿಸದಿರುವ, ಪರಸ್ತ್ರೀಯನ್ನು ಕಣ್ಣೆತ್ತಿ ನೋಡದಿರುವ, ಯಾಚಕರನ್ನು ಬರಿಗೈಯಿಂದ ಕಳಿಸದಿರುವ ನರಶ್ರೇಷ್ಠರು ತೀರ ಅಪರೂಪವು.

ಹೀಗೆ ಶ್ರೀಮುಖದಿಂದ ಲಕ್ಷ್ಮಣನೊಡನೆ ಮಾತನಾಡುತ್ತಿದ್ದ ಶ್ರೀರಾಮನ ಮನಸ್ಸು ಸೀತೆಯಲ್ಲಿ ನಟ್ಟುಹೋಗಿರಲು, ಆತನು ಲತಾಮಂಟಪದ ಮರೆಯಿಂದ ಹೊರಹೊರಟನು. ಇತ್ತ ಸೀತೆಯು—"ಆ ರಾಜಕುಮಾರರು ಎತ್ತ ಹೋಗಿರಬಹುದು" ಎಂದು ಚಿಂತಿಸುತ್ತ ಅತ್ತಿತ್ತ ಆತುರದಿಂದ ನೋಡುತ್ತಿರುವಾಗ, ಪ್ರಭುವು ಆಕೆಯ ಕಣ್ಣಿಗೆ ಬಿದ್ದನು. ಆಗ ಆಶ್ಚರ್ಯದಿಂದ ರಘುಪತಿಯನ್ನು ನೋಡುತ್ತಿದ್ದ ಆಕೆಯ ದೇಹದ ಸ್ಮೃತಿಯು ಹಾರಿತು. ಆ ಚತುರೆಯು ನೇತ್ರಮಾರ್ಗದಿಂದ ರಾಮನನ್ನು ಹೃದಯದಲ್ಲಿ ಬರಿಸಿಕೊಂಡು, ರೆಪ್ಪೆಯ ರೂಪದ ಕದಗಳನ್ನು ಇಕ್ಕಿಕೊಂಡಳು. ಹೀಗೆ ಸೀತೆಯು ಪ್ರೇಮಮತ್ತಳಾಗಿ ಕೆಲಹೊತ್ತು ಕಣ್ಣುಮುಚ್ಚಿಕೊಂಡಿರಲು, ಆಕೆಯ ಒಬ್ಬ ಚತುರ ಸಖೀಯು ಆಕೆಯನ್ನು ಕುರಿತು—"ಜನಕನಂದಿನೀ, ಇನ್ನೂ ನೀನು ಗೌರಿಯ ಧ್ಯಾನವನ್ನೇ ಮಾಡುತ್ತಿರುವೆಯೇನು? ಈ ರಾಜಕುಮಾರರನ್ನು ಒಮ್ಮೆ ಕಣ್ಣುತುಂಬ ಯಾಕೆ ನೋಡಿಕೊಳ್ಳಲೊಲ್ಲೆ!" ಅನ್ನಲು, ಸೀತೆಯು ಲಜ್ಜೆಯಿಂದ ಕಣ್ಣುಗಳನ್ನು ತೆರೆದು ನೋಡಲು, ಇಬ್ಬರೂ ರಘುಕುಲಸಿಂಹರು ಆಕೆಯ ಎದುರಿನಲ್ಲಿ ಕಾಣಿಸಿದರು. ನಖಶಿಖಾಂತವಾಗಿ ಶ್ರೀರಾಮನ ಸೌಂದರ್ಯವನ್ನು ನೋಡುತ್ತಿರುವಾಗ ತನ್ನ ತಂದೆಯ ಧನುರ್ಭಂಗದ ಪ್ರತಿಜ್ಞೆಯ ಸ್ಮರಣವಾಗಲು, ಸೀತೆಯ ಮನಸ್ಸು ಖಿನ್ನವಾಯಿತು. ಹೀಗೆ ಸೀತೆಯು

ಕೇವಲ ಪರವಶಳಾಗಿರುವದನ್ನು ನೋಡಿದ ಕೂಡಲೆ ಸಖಿಯರು ಭಯಭೀತರಾಗಿ ಆಕೆಯನ್ನು ಕುರಿತು—"ರಾಜಕುವರೀ, ಬಂದು ಎಷ್ಟು ಹೊತ್ತಾಯಿತಲ್ಲ! ಬೇಕಾದರೆ ನಾಳೆ ಇದೇ ಹೊತ್ತಿನಲ್ಲಿ ಇಲ್ಲಿಗೆ ಬರೋಣವಂತೆ," ಎಂದು ಮರ್ಮಭೇದಕವಾಗಿ ಮಾತಾಡಲು, ಸೀತೆಯು ನಾಚಿದಳು. ತಡವಾದದ್ದಕ್ಕಾಗಿ ಆಕೆಗೆ ಅವ್ವನ ಅಂಜಿಕೆಯು ಉತ್ಪನ್ನವಾಯಿತು; ಆದರೂ ಆಕೆಯು ಮಹಾ ಧೈರ್ಯದಿಂದ ರಾಮರೂಪವನ್ನು ಹೃದಯದಲ್ಲಿ ತುಂಬಿಕೊಂಡಳು; ಆದ್ದರೆ ತಾನು ಕೇವಲ ತಂದೆಯ ಅಧೀನಳಿರುವೆನೆಂಬದರ ಸ್ಮರಣವಾಗಲು, ಆಕೆಯ ಮನಸ್ಸು ಉದಾಸವಾಯಿತು; ಶಿವಚಾಪವು ಬಹು ಕಠಿಣವಾದದ್ದೆಂಬದರ ಸ್ಮರಣವಾದದ್ದರಿಂದಂತು ಸೀತೆಯ ಮುಖಕಮಲವು ಬಾಡಿ ಸುರ್‍ರನೆ ಸುಕ್ಕುಗಟ್ಟಿತು. ಆಗ ಆಕೆಯು ಶ್ರೀರಾಮನ ಶ್ಯಾಮಲಮೂರ್ತಿಯನ್ನು ಹೃದಯದಲ್ಲಿ ಧರಿಸಿ, ಪುನಃ ದುರ್ಗೆಯ ಮಂದಿರವನ್ನು ಪ್ರವೇಶಿಸಿ ಕೈಜೋಡಿಸಿ ಆ ಲೋಕಮಾತೆಯನ್ನು ಕುರಿತು— "ಭಗವತಿ, ಗಿರಿರಾಜಕನ್ಯಕೇ, ನಿನಗೆ ಜಯಜಯಕಾರವಿರಲಿ. ಎಲೈ ಮಹೇಶನ ಮುಖಚಂದ್ರಚಕೋರೀ, ನಿನ್ನ ಉದಯವಿರಲಿ! ಎಲೈ ಗಣೇಶ-ಕಾರ್ತಿಕೇಯ ಜನನೀ, ಜಗದಂಬೇ, ವಿದ್ಯುದ್ಗಾತ್ರೇ, ನಿನಗೆ ವಿಜಯವಿರಲಿ. ನಿನಗೆ ಆದಿ-ಮಧ್ಯ-ಅಂತಗಳಿಲ್ಲವು. ನಿನ್ನ ಅಮಿತ ಪ್ರಭಾವವು ವೇದಗಳಿಗೂ ಅತರ್ಕ್ಯವಾಗಿರುವದು. ನೀನು ಸಂಸಾರದ ಉತ್ಪತ್ತಿ-ಅಭ್ಯುದಯ-ಲಯಗಳ ಕರ್ತೃವಾಗಿರುತ್ತೀ. ನೀನು ವಿಶ್ವಕ್ಕೆ ವಿಮೋಹವನ್ನುಂಟುಮಾಡುವವಳಾಗಿದ್ದು, ಸ್ವತಂತ್ರದಿಂದ ವಿಹಾರಮಾಡುವವಳಾಗಿರುತ್ತೀ. ಜಗದಂಬೇ, ಶ್ರೇಷ್ಠರಾದ ಪತಿವ್ರತಾಸ್ತ್ರೀಯರಲ್ಲಿ ನೀನೇ ಅಗ್ರಗಣ್ಯಳು. ನಿನ್ನ ಅನಂತವಾದ ಪ್ರಭಾವವನ್ನು ಉಚ್ಚರಿಸಲು ಸಹಸ್ರಾವಧಿ ಸರಸ್ವತಿಯರೂ, ಶೇಷರೂ ಅಸಮರ್ಥರಾಗಿರುವರು. ಎಲೈ ವರದಾಯಿನೀ, ತ್ರಿಪುರಾರಿಪ್ರಿಯೇ, ನಿನ್ನನ್ನು ಸೇವಿಸಿದವರಿಗೆ ಚತುರ್ವಿಧ ಪುರುಷಾರ್ಥಗಳು ಸುಲಭವಾಗಿರುವವು. ನಿನ್ನ ಪದಕಮಲದ ಉಪಾಸನೆಯಿಂದಲೇ ದೇವತೆಗಳೂ, ಮನುಷ್ಯರೂ, ಮುನಿಗಳೂ ಸುಖಿಗಳಾಗುತ್ತಿರುವರು. ದೇವೀ, ನನ್ನ ಮನೋರಥವು ನಿನಗೆ ಪೂರ್ಣಗೊತ್ತಿರುವದು; ಯಾಕಂದರೆ ನಿನ್ನ ವಾಸವು ಯಾವಾಗಲೂ ಎಲ್ಲರ ಹೃದಯದಲ್ಲಿರುವದು; ಆದ್ದರಿಂದ ನಾನು ನನ್ನ ಇಚ್ಛೆಯನ್ನು ಪ್ರಕಟಮಾಡುವದಿಲ್ಲ," ಎಂದು ಸ್ತುತಿಸಿ ದುರ್ಗೆಯ ಚರಣಗಳನ್ನು ಗಟ್ಟಿಯಾಗಿ ಹಿಡಿವುಕೊಂಡಳು.

ಸೀತೆಯ ಈ ವಿನಯಪೂರ್ವಕವಾದ ಭಕ್ತಿಯಿಂದ ಭವಾನಿಯು ಪ್ರಸನ್ನಳಾಗಿ ನಕ್ಕಳು; ಆಕೆಯ ಕೊರಳೊಳಗಿನ ಹಾರವು ಕಳಚಿ ಬಿದ್ದಿತು. ಅದನ್ನು ಸೀತೆಯು ಪ್ರಸಾದವೆಂದು ಆದರದಿಂದ ಸ್ವೀಕರಿಸಿ ಹೃದಯದಲ್ಲಿ ಧರಿಸಿದಳು. ಆಗ ಗಿರಿಜೆಯು ಹರ್ಷಭರಿತವಾದ ಅಂತಃಕರಣದಿಂದ ಸೀತೆಯನ್ನು ಕುರಿತು— "ಜನಕನಂದಿನಿಯೇ, ಕೇಳು. ನಿನ್ನ ಮನಃಕಾಮನೆಯು ಪರಿಪೂರ್ಣವಾಗುವದು; ಇದು ನನ್ನ ಸತ್ಯವಾದ ಆಶೀರ್ವಾದವೆಂದು ತಿಳಿ. ನಾರದನ ಮಾತು ಯಾವಾಗಲೂ ಸತ್ಯವೂ, ಶುಭಂಕರವೂ ಆಗಿರುವದು.

ಯಾವನಲ್ಲಿ ನಿನ್ನ ಮನಸ್ಸು ರಮಿಸಿರುವದೋ ಅವನೇ ನಿನ್ನ ಪತಿಯಾಗುವನು. ನಿನ್ನ ಚಿತ್ತ ಹರಣ ಮಾಡಿರುವ ಶ್ರೀ ರಾಮನಾದರೂ ನಿನ್ನ ಶೀಲವನ್ನೂ, ಪ್ರೇಮವನ್ನೂ ಅರಿತಿರುವನು," ಎಂದು ಹೇಳಿದಳು. ಲೋಕಜನನಿಯು ಈ ಪ್ರಸನ್ನ ವಾಣಿಯನ್ನು ಕೇಳಿ ಸೀತೆಯೂ, ಆಕೆಯ ಸಖಿಯರೂ ಹರ್ಷಭರಿತರಾದರು. ಸೀತೆಯು ಪುನಃ ಪುನಃ ದುರ್ಗೆಯನ್ನು ಪೂಜಿಸಿ, ಆ ಭಗವತಿಯು ಪ್ರಸನ್ನಳಾಗಿರುವವನ್ನು ತಿಳಿದು ಆನಂದಭರಿತಳಾದಳು. ಆಕೆಯ ಕೋಮಲವಾದ ಅಂಗಗಳು ಮಂಗಲಪ್ರದವಾಗಿ ಸ್ಫುರಣಹೊಂದತೊಡಗಿದವು. ಬಳಿಕ ಸೀತೆಯು ಸಖಿಯರೊಡನೆ ರಾಜಧಾನಿಗೆ ಹೋಗಲು, ಇತ್ತ ಶ್ರೀ ರಾಮನೂ ಸೀತೆಯ ರೂಪವನ್ನು ಮನಸ್ಸಿನಲ್ಲಿ ಶ್ಲಾಘಿಸುತ್ತ ಲಕ್ಷ್ಮಣನೊಡನೆ ಗುರುಗಳಬಳಿಗೆ ಹೋದನು. ಆ ಸರಳ ಹೃದಯದ ರಘುಪತಿಯು ಒಂದೂ ಉಳಿಯದಂತೆ ಎಲ್ಲ ವೃತ್ತಾಂತವನ್ನು ಗುರುಗಳಿಗೆ ನಿವೇದಿಸಿದನು. ಅದನ್ನು ಕೇಳಿ ವಿಶ್ವಾಮಿತ್ರಮುನಿಗಳು ಸಂತೋಷಪಟ್ಟು ರಾಮಲಕ್ಷ್ಮಣರು ತಂದ ಪುಷ್ಪಗಳಿಂದ ದೇವತಾರ್ಚನ ಮಾಡಿದರು.

ಮರುದಿನ ಬೆಳಗಾಯಿತು. ನಿತ್ಯಪವಿತ್ರನಾದ ಶ್ರೀ ರಾಮನು ಸ್ನಾನಮಾಡಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಗುರುಸನ್ನಿಧಿಗೆ ಬಂದು ಶ್ರೀ ಗುರುಚರಣಕ್ಕೆರಗಿದನು. ಇತ್ತ ಜನಕರಾಜನು ವಿಶ್ವಾಮಿತ್ರನನ್ನು ಕರೆಯುವದಕ್ಕಾಗಿ ಶತಾನಂದನನ್ನು ಕಳಿಸಲು, ಆತನು ಬಂದು ಜನಕನ ಪ್ರಾರ್ಥನೆಯನ್ನು ಮುನಿವರನಿಗೆ ನಿವೇದಿಸಿದನು. ಅದನ್ನು ಕೇಳಿ ವಿಶ್ವಾಮಿತ್ರನು ಹರ್ಷಭರಿತನಾಗಿ ಉಭಯ ಬಂಧುಗಳನ್ನು ಕರೆಸಿದನು. ರಾಮಲಕ್ಷ್ಮಣರು ಶತಾನಂದನನ್ನು ನಮಸ್ಕರಿಸಿ ಕುಳಿತುಕೊಳ್ಳಲು, ವಿಶ್ವಾಮಿತ್ರನು ಆ ಬಂಧುಗಳನ್ನು ಕುರಿತು—"ತಮ್ಮಗಳಿರಾ, ಜನಕನು ಕರೆಕಳುಹಿರುವದರಿಂದ ಹೋಗೋಣ ನಡೆಯಿರಿ; ಸೀತೆಯ ಸ್ವಯಂವರದಲ್ಲಿ ಪರಮೇಶ್ವರನು ಯಾರಿಗೆ ಮಹತ್ವ ಕೊಡುವನೋ ನೋಡುವಾ," ಅನ್ನಲು, ಲಕ್ಷ್ಮಣನು—"ನಾಥ, ತಾವು ಯಾರ ಮೇಲ ಕೃಪೆಮಾಡುವಿರೋ ಅವರೇ ಯಶಸ್ಸಿಗೆ ಪಾತ್ರರಾಗುವರು," ಎಂದು ಹೇಳಿದನು. ಲಕ್ಷ್ಮಣನ ಈ ಉತ್ಕೃಷ್ಟವಾದ ವಾಣಿಯನ್ನು ಕೇಳಿ ಯಾವತ್ತು ಋಷಿಗಳಿಗೆ ಆನಂದವಾಯಿತು. ಎಲ್ಲರೂ ಪ್ರಸನ್ನರಾಗಿ ಆತನನ್ನು ಆಶೀರ್ವದಿಸಿದರು. ಆ ಮೇಲೆ ಮುನಿವೃಂದದೊಡನೆ ದಯಾಘನನಾದ ರಾಮಚಂದ್ರನು ಧನುರ್ಯಜ್ಞ ಶಾಲೆಯನ್ನು ನೋಡುವದಕ್ಕಾಗಿ ಹೊರಟನು. ಅವರಿಬ್ಬರು ಬಂಧುಗಳು ಯಜ್ಞಮಂಟಪಕ್ಕೆ ಬಂದದ್ದನ್ನು ಕೇಳಿ ನಗರದೊಳಗಿನ ಎಲ್ಲ ಬಾಲ-ತರುಣ-ವೃದ್ಧ ಸ್ತ್ರೀ ಪುರುಷರು ತಮ್ಮ ಕೆಲಸಬೊಗಸೆಗಳನ್ನು ಮರೆತು ಯಜ್ಞಮಂಟಪಕ್ಕೆ ಬರತೊಡಗಿದರು. ಜನರ ಸಂದಣಿಯು ಹೆಚ್ಚಾಗಲು ಜನಕನ ಸುಜನರಾದ ಸೇವಕರು ಮೃದು-ನಮ್ರ-ಮಾತುಗಳಿಂದ ಉತ್ತಮ-ಮಧ್ಯಮ-ನೀಚ-ಕನಿಷ್ಠವರ್ಗದ ಸ್ತ್ರೀಪುರುಷರನ್ನು ಅವರವರಿಗೆ ಯೋಗ್ಯವಾದ ಸ್ಥಳದಲ್ಲಿ ಕುಳ್ಳಿರಿಸಿದರು. ಅಷ್ಟರಲ್ಲಿ ರಾಮಲಕ್ಷ್ಮಣರು ಸಭೆಗೆ ಬರಲು, ಅವರವರ ಭಾವನೆಯಂತೆ ಪ್ರಭುರಾಮನು

ಅವರವರಿಗೆ ತೋರಿದನು. ಆತನು ಮಹಾರಣಧೀರರಿಗೆ ವೀರರಸವೇ ಮೂರ್ತಿಗೊಂಡಂತೆ ಯೂ, ಕಪಟಿಗಳಾದ ರಾಜರಿಗೆ ಭಯಾನಕರಸದ ಪ್ರಚಂಡಮೂರ್ತಿಯಂತೆಯೂ, ರಾಜರ ವೇಷದಿಂದ ಗುಪ್ತವಾಗಿ ಕುಳಿತಿರುವ ರಾಕ್ಷಸರಿಗೆ ಪ್ರತ್ಯಕ್ಷ ಕಾಲನಂತೆಯೂ, ಸ್ತ್ರೀಯರಿಗೆ ಶೃಂಗಾರರಸವೇ ಅವತರಿಸಿದಂತೆಯೂ, ಪಂಡಿತರಿಗೆ ಹಲವು ಮುಖ, ಹಲವು ಬಾಹು, ಹಲವು ಚರಣ, ಹಲವು ನೇತ್ರ, ಹಲವು ಮಸ್ತಕಗಳುಳ್ಳ ವಿರಾಟಪುರುಷ ನಂತೆಯೂ ತೋರಿದ್ದಲ್ಲದೆ, ಜನಕನಕುಟುಂಬದವರಿಗೆ ಸ್ವಕೀಯನಾಗಿಯೂ, ರಾಣಿಯಿಂದ ಸಹಿತನಾದ ಜನಕನಿಗೆ ಅನಿರ್ವಚನೀಯ ಪುತ್ರಪ್ರೇಮವಾಗಿಯೂ, ಯೋಗಿಗಳಿಗೆ ಶಾಂತವೂ, ಶುದ್ಧವೂ, ಸಮವೂ ಸಹಜಪ್ರಕಾಶರೂಪವೂ ಆದ ಪರಮ ತತ್ವಮಯ ವಾಗಿಯೂ, ಹರಿಭಕ್ತರಿಗೆ ಉಪಾಸ್ಯ ದೈವತವಾಗಿಯೂ ತೋರಿದನು. ರಾಮನನ್ನು ನೋಡಿದಕೂಡಲೆ ಸೀತೆಗೆ ಉಂಟಾದ ಪ್ರೇಮವನ್ನು ಆಕೆಗೇ ತನ್ನ ಬಾಯಿಂದ ಒಡೆದು ಹೇಳಲಿಕ್ಕೆ ಬಾರದಿರುವಾಗ, ಅನ್ಯರಿಗೆ ಅದನ್ನು ವರ್ಣಿಸಲಿಕ್ಕೆ ಹೇಗೆ ಬಂದೀತು? ಜನಕ ರಾಜನು ಮುನಿಯೊಡನೆ ಆ ಉಭಯ ಬಂಧುಗಳನ್ನು ಎಲ್ಲಕ್ಕೂ ಉತ್ಕೃಷ್ಟವಾದ ಸಿಂಹಾ ಸನದ ಮೇಲೆ ಕುಳ್ಳಿರಿಸಿದನು.

ಚಂದ್ರೋದಯವಾಗುತ್ತಲೆ ನಕ್ಷತ್ರಗಳು ನಿಸ್ತೇಜವಾಗುವಂತೆ, ಪ್ರಭುವನ್ನು ನೋಡಿದಕೂಡಲೆ ಯಾವತ್ತು ರಾಜರು ವಿಮನಸ್ಕರಾದರು. ವಿಶಾಲವಾದ ಶಿವಧನುಸ್ಸ ವನ್ನು ಮುರಿಯದಿದ್ದರೂ ಸೀತೆಯು ರಾಮನ ಕೊರಳಿಗೇ ಮಾಲೆ ಹಾಕುವಳೆಂದು ಬಹುಜನ ಅರಸರು ಭಾವಿಸಿ, ತಾವು ಇಲ್ಲಿ ಇದ್ದು ತಮ್ಮ ಯಶಸ್ಸು, ಪ್ರತಾಪ, ಬಲ, ತೇಜಸ್ಸು ಗಳನ್ನು ಕಳೆದುಕೊಳ್ಳುವದಕ್ಕಿಂತ ಮನೆಗೆ ಹೊರಟುಹೋಗುವದೇ ಯೋಗ್ಯವೆಂದು ಮಾತಾಡಹತ್ತಿದರು. ಅದನ್ನು ಕೇಳಿ ಅವಿವೇಕತನದಿಂದ ಅಂಧರಾದ ಗರ್ವಿಷ್ಠರಾಜರು ಕೆಲವರು ನಕ್ಕು ಪ್ರತ್ಯುತ್ತರವಾಗಿ—"ಧನುರ್ಭಂಗ ಮಾಡಿಯೂ ಸೀತೆಯೊಡನೆ ವಿವಾಹವಾ ಗುವದು ಸಂಶಯವಾಗಿರಲು, ಧನುರ್ಭಂಗಮಾಡದೆ ಆಕೆಯನ್ನು ಯಾರು ಮದುವೆಯಾ ಗುವರು? ಪ್ರತ್ಯಕ್ಷ ಯಮನಿದ್ದರೂ ಸೀತೆಯಸಲುವಾಗಿ ನಾವು ಅವನೊಡನೆ ಯುದ್ಧ ಮಾಡಿ ಅವನನ್ನು ಸೋಲಿಸುವೆವು," ಎಂದು ನುಡಿದರು. ಅದನ್ನು ಕೇಳಿ ಧರ್ಮಶೀ ಲರೂ, ಹರಿಭಕ್ತರೂ, ಜ್ಞಾನಿಗಳೂ ಆದ ಉಳಿದ ರಾಜರು ನಕ್ಕು—"ಯಾವತ್ತೂ ರಾಜರ ಗರ್ವವನ್ನು ಪರಿಹರಿಸಿ ರಾಮಚಂದ್ರನು ಸೀತೆಯ ಪಾಣಿಗ್ರಹಣಮಾಡುವನು. ಈ ರಣಶೂರರಾದ ದಶರಥಪುತ್ರರನ್ನು ರಣದಲ್ಲಿ ಗೆಲ್ಲಲು ಯಾರು ಸಮರ್ಥರು? ಬಾಯಿಗೆ ಬಂದಂತೆ ಹರಟಿ ಸುಮ್ಮನೆ ಮರಣಹೊಂದಬೇಡಿರಿ. ಮನಸ್ಸಿನಲ್ಲಿ ಮೋದಕವನ್ನು ತಿಂದರೆ ಹಸಿವೆಯು ಶಾಂತವಾಗಲಾರದು. ನಮ್ಮ ಹಿತದ ಮಾತುಗಳಿಗೆ ಕಿವಿಗೊಟ್ಟು ಸೀತೆಯನ್ನು ಸಾಕ್ಷಾತ್ ಜಗದಂಬೆಯೆಂದು ತಿಳಿದು, ರಾಮಚಂದ್ರನನ್ನು ಜಗತ್ಪಿತನೆಂದು ಭಾವಿಸಿ ಅವರ ರೂಪಗಳನ್ನು ಕಣ್ಣುತುಂಬನೋಡಿ ಧನ್ಯರಾಗಿರಿ. ಸರ್ವಸದ್ಗುಣಗಳ

ಭಾಂಡಾರವಾದ ಈ ಉಭಯಬಂಧುಗಳು ಶಂಭುವಿನ ಹೃದಯದಲ್ಲಿ ವಾಸಿಸುವವರಾಗಿರುವರು. ಹತ್ತರದ ಅಮೃತದ ಸಮುದ್ರವನ್ನು ಬಿಟ್ಟು, ಮೃಗಜಲದ ಬೆನ್ನುಹತ್ತಿ ಯಾಕೆ ಸಾಯುವಿರಿ? ಹೋಗಿರಿ, ನಿಮ್ಮ ಮನಸ್ಸಿಗೆ ಬಂದಹಾಗೆ ಮಾಡಿರಿ. ನಾವಂತು ಇಂದು ನಮ್ಮ ಜನ್ಮದ ಸಾರ್ಥಕಮಾಡಿಕೊಂಡೆವು; ಎಂದು ಆ ಸದ್ಭಕ್ತರಾಜರು ರಾಮನ ಅನುಪಮ ಸ್ವರೂಪವನ್ನು ಪ್ರೀತಿಪೂರ್ವಕವಾಗಿ ನೋಡಹತ್ತಿದರು. ಅತ್ತ ದೇವತೆಗಳು ವಿಮಾನದಲ್ಲಿ ಕುಳಿತು ಆಕಾಶದಿಂದ ನೋಡುತ್ತ ಮಧುರಗಾಯನಮಾಡುತ್ತ ಹೂಮಳೆಗರೆಯಹತ್ತಿದರು.

ಹೀಗಿರುವಾಗ ಯೋಗ್ಯ ಅವಸರನೋಡಿ ಜನಕನು ಸೀತೆಯನ್ನು ಕರೆಯಕಳುಹಿದನು. ಆಗ ಸೀತೆಯ ಯಾವತ್ತು ಸುಂದರಿಯರಾದ ಚತುರಸಖಿಯರು ಆದರಪೂರ್ವಕವಾಗಿ ಸೀತೆಯನ್ನು ಕರತಂದರು. ಸೀತೆಯು ಸಾಕ್ಷಾತ್ ರೂಪಗುಣಗಳ ಖನಿಯಾದ ಜಗದಂಬೆಯಾದದ್ದರಿಂದ ಆಕೆಯ ಸೌಂದರ್ಯವನ್ನು ವರ್ಣಿಸುವದು ಶಕ್ಯವಲ್ಲವು. ಸೀತೆಯನ್ನು ಸ್ತ್ರೀಮಾತ್ರರಲ್ಲಿ ಯಾರಿಗಾದರೂ ಹೋಲಿಸಬೇಕೆಂದು ಯೋಚಿಸಿದರೆ, ಆ ಜಗನ್ಮಾತೆಯ ಸೌಂದರ್ಯವನ್ನು ಸರಿಗಟ್ಟುವ ಸ್ತ್ರೀಯರಾದರೂ ಜಗತ್ತಿನಲ್ಲಿ ಯಾರಿರುವರು? ಸರಸ್ವತಿಯನ್ನು ಹೋಲಿಸಬೇಕೆಂದರೆ ಆಕೆಯು ವಾಚಾಲೆಯು; ಪಾರ್ವತಿಯನ್ನು ಹೋಲಿಸಬೇಕೆಂದರೆ ಆಕೆಯು ಅರ್ಧತನುವು; ರತಿದೇವಿಗೆ ಹೋಲಿಸಬೇಕೆಂದರೆ, ದೇಹರಹಿತ ಪತಿಯಯೋಗದಿಂದ ಆಕೆಯು ಅತ್ಯಂತ ದುಃಖಿತಳು; ಲಕ್ಷ್ಮಿಗಾದರೂ ಹೋಲಿಸಬೇಕೆಂದರೆ ಆಕೆಯು ವಿಷ–ಮದಿರೆಗಳ ಬಾಂಧವ್ಯವುಳ್ಳವಳು. ಅಂದಬಳಿಕ ಸೀತೆಗೆ ಯಾವ ಸ್ತ್ರೀಯನ್ನು ಹೋಲಿಸಬೇಕು? ಇನ್ನು ಪ್ರತ್ಯಕ್ಷ ಕಾಮದೇವನು ಅತ್ಯಂತ ರಮಣೀಯತ್ವವೆಂಬ ಆಮೆಯಬೆನ್ನಮೇಲೆ ಶೃಂಗಾರವೆಂಬ ಮಂದರಾಚಲವನ್ನಿರಿಸಿ, ಶೋಭೆಯೆಂಬ ಹಗ್ಗದಿಂದ ಸೌಂದರ್ಯಸಮುದ್ರದ ಮಂಥನಮಾಡಿ, ಸೌಂದರ್ಯಸುಖಮೂಲವಾದ ಹೊಸ ಲಕ್ಷ್ಮಿಯನ್ನು ಉತ್ಪನ್ನಮಾಡಿದರೆ ಒಂದುಪಕ್ಷದಲ್ಲಿ ಸೀತೆಗೆ ಆಕೆಯನ್ನು ಹೋಲಿಸಬಹುದೆಂದಾದರೂ ಅಂಜುತ್ತಂಜುತ್ತ ಹೇಳಬೇಕಾಗುವದು! ಇಂಥ ಸರ್ವಾಲಂಕಾರ ವಿಭೂಷಿತೆಯಾದ ಜಗನ್ಮಾತೆ ಜಾನಕಿಯು ರಂಗಭೂಮಿಯಲ್ಲಿ ಕಾಲಿಟ್ಟಕೂಡಲೆ ಆಕೆಯ ರೂಪವನ್ನು ನೋಡಿ ಸ್ತ್ರೀಪುರುಷರು ಮೋಹಿತರಾದರು. ಆಗ ದೇವತೆಗಳು ಹರ್ಷಗೊಂಡು ದುಂದುಭಿಗಳನ್ನು ಬಾರಿಸಿದರು; ಅಪ್ಸರೆಯರು ಗಾಯನಮಾಡತೊಡಗಿದರು. ಸೀತೆಯ ಹಸ್ತಕಮಲದಲ್ಲಿ ಜಯಮಾಲೆಯು ಶೋಭಿಸುತ್ತಲಿತ್ತು. ಆಕೆಯು ಯಾವತ್ತು ರಾಜರಕಡೆಗೆ ಸುಮ್ಮನೆ ನೋಡಿದಹಾಗೆ ಮಾಡಿದಳು. ಆಕೆಯು ರಾಮನನ್ನು ನೋಡಲು ಇಚ್ಛಿಸುತ್ತಿರಲು, ಒಮ್ಮಿಂದೊಮ್ಮೆ ಆತನು ಕಾಣದ್ದರಿಂದ ಆಕೆಯು ಬೆರಗಾದಳು. ಅಷ್ಟರಲ್ಲಿ ಮುನಿಯೊಡನೆ ಕುಳಿತುಕೊಂಡಿದ್ದ ಆ ಇಬ್ಬರು ಬಂಧುಗಳು ಸೀತೆಯಕಣ್ಣಿಗೆ ಬಿದ್ದರು. ಗುರುಜನರ ಯೋಗದಿಂದಲೂ, ಮಹಾಜನಸಮೂಹದ ಯೋಗದಿಂದಲೂ

ಕೆಯಲ್ಲಿ ಸಂಕೋಚವು ಉತ್ಪನ್ನವಾಯಿತು; ಆಗ ಆಕೆಯು ಹೃದಯದಲ್ಲಿ ರಾಮರೂಪವನ್ನು ಧರಿಸಿ ತನ್ನ ಸಖಿಜನರನ್ನು ನೋಡತೊಡಗಿದಳು.

ಧನುರ್ಭಂಗ—ಇತ್ತ ಜನಕನು ಬಂದೀಜನರನ್ನು ಕರೆದು ತನ್ನ ಪ್ರತಿಜ್ಞೆಯನ್ನು ಪ್ರಸಿದ್ಧಗೊಳಿಸಿರೆಂದು ಆಜ್ಞಾಪಿಸಲು, ಅವರು ಅತ್ಯಂತ ಹರ್ಷದಿಂದ ರಾಜಸಭೆಯನ್ನು ಕುರಿತು—"ಎಲೈ ಮಹೀಪಾಲರೇ, ನಾವು ಈ ವಿಶಾಲವಾದ ಬಾಹುಗಳನ್ನು ಎತ್ತಿ ವಿದೇಹರಾಜನ ಪ್ರತಿಜ್ಞೆಯನ್ನು ಪ್ರಸಿದ್ಧಗೊಳಿಸುವೆವು, ಅದನ್ನು ನೀವು ಕೇಳಬೇಕು. ಅರಸರ ಬಾಹುಬಲರೂಪಚಂದ್ರನಿಗೆ ಈ ಶಿವಧನುವು ರಾಹುವಿನಂತೆ ಇರುವದು. ಅದು ಅತ್ಯಂತ ಜಡವೂ, ಕಠಿಣವೂ ಆಗಿರುತ್ತದೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ರಾವಣ, ಬಾಣಾಸುರ ಮೊದಲಾದ ಬಲಾಢ್ಯವೀರರು ಕೂಡ ಈ ಧನುಸ್ಸನ್ನು ನೋಡಿದ ಕೂಡಲೆ ತಮ್ಮ ತಮ್ಮ ಮನೆಗಳ ಹಾದಿಯನ್ನು ಹಿಡಿದರು. ಅಂಥ ಈ ಶಿವಧನುಸ್ಸನ್ನು ರಾಜಸಭೆಯಲ್ಲಿ ಯಾರಾದರೂ ಮುರಿದರೆ ಅವರಿಗೆ ತ್ರಿಭುವನ ವಿಜಯದಿಂದ ಸಹಿತವಾಗಿ ಈ ವೈದೇಹಿಯು ಯಾವ ವಿಚಾರವನ್ನೂ ಮಾಡದೆ ಸಂತೋಷದಿಂದ ಮಾಲೆಯನ್ನು ಹಾಕುವಳು," ಎಂದು ಹೇಳಿದರು. ಈ ಪ್ರತಿಜ್ಞೆಯನ್ನು ಕೇಳಿದ ಕೂಡಲೆ ಯಾವತ್ತು ರಾಜರಿಗೆ ಅಭಿಲಾಷೆಯು ಉತ್ಪನ್ನವಾಯಿತು; ಅವರೆ ಅವರಲ್ಲಿ ಅಭಿಮಾನಿಗಳಾಗಿದ್ದು ಪರಾಕ್ರಮದ ಡೌಲು ತೋರಿಸುವವರು ಮಾತ್ರ ಟೊಂಕಕಟ್ಟಿ ಕಸವಿಸಿಯಿಂದ ಎದ್ದು, ಇಷ್ಟದೇವತೆಯನ್ನು ನಮಸ್ಕರಿಸಿ ಮುಂದಕ್ಕೆ ಬಂದರು. ಅವರು ಆವೇಶದ ನಟನೆ ಮಾಡಿ ಧನುಸ್ಸನ್ನು ನೋಡಿ ಕೋಟ್ಯವಧಿ ಪ್ರಕಾರದಿಂದ ಶಕ್ತಿಯನ್ನು ಯೋಜಿಸಿದರೂ ಅದು ಎತ್ತದೆ ಹೋಯಿತು. ಹೀಗೆ ಹತ್ತು ಸಹಸ್ರ ಜನ ರಾಜರು ಧನುಸ್ಸು ಎತ್ತುವದಕ್ಕಾಗಿ ಯತ್ನಿಸಿದರೂ ಅದು ಅಲ್ಲಾಡದೆ ಅವರೆಲ್ಲರ ಬಾಹುಬಲವನ್ನಪಹರಿಸಿ ಹೆಚ್ಚುಹೆಚ್ಚು ಜಡವಾಗುತ್ತ ಹೋಗಲು, ಅವರು ಲಜ್ಜಿತರಾಗಿ ಹಿಂದಿರುಗಿ ಹೋದರು. ವೈರಾಗ್ಯಹೀನರಾದ ಸನ್ಯಾಸಿಗಳಂತೆ ಅವರೆಲ್ಲ ರಾಜರು ಉಪಹಾಸಾಸ್ಪದರಾದರು. ಅವರು ತಮ್ಮ ವಿಶಾಲವಾದ ಕೀರ್ತಿಯನ್ನೂ, ವಿಜಯವನ್ನೂ, ಶೌರ್ಯವನ್ನೂ ಬಲಾತ್ಕಾರದಿಂದ ಆ ಚಾಪಕ್ಕೆ ಎರೆದು ಹಿಂದಿರುಗಿದರು; ಅವರ ಮೋರೆಗಳು ಕಪ್ಪಿಟ್ಟವು. ಅವರನ್ನು ನೋಡಿ ಜನಕನು ವ್ಯಾಕುಲಪಟ್ಟು ಕ್ರೋಧಯುಕ್ತವಾಣಿಯಿಂದ—"ನಾನು ಮಾಡಿದ ಪ್ರತಿಜ್ಞೆಯನ್ನು ಕೇಳಿ ದ್ವೀಪಾಂತರದ ಅನೇಕ ರಾಜರು ಇಲ್ಲಿಗೆ ಬಂದಿರುವರು. ಅವರೊಳಗೆ ದೇವತೆಗಳೂ, ರಾಕ್ಷಸರೂ ಕೂಡ ಮನುಷ್ಯರೂಪವನ್ನು ಧರಿಸಿ ಕುಳಿತುಕೊಂಡಿರುವರು. ಅವರಲ್ಲದೆ ರಣಧೀರರೆನಿಸುವ ಹಲವು ಜನ ವೀರರೂ ನೆರೆದಿರುವರು; ಆದರೂ ಈ ಧನುಸ್ಸಿನ ಭಂಗಮಾಡಿ ಮನೋಹರಳಾದ ಕುಮಾರಿಯನ್ನೂ, ದಿಗಂತವಿಜಯವನ್ನೂ, ಅತಿ ಸಂಸ್ಪೃಹಣೀಯವಾದ ಕೀರ್ತಿಯನ್ನೂ ದೊರಕಿಸುವಂಥವರನ್ನು ಬ್ರಹ್ಮದೇವನು ನಿರ್ಮಿಸಿರುವದೇ ಇಲ್ಲವೆ? ಯಾರಿಗಾದರೂ ಈ ಲಾಭವು ಬೇಕಾಗಿರದಿದ್ದರೆ ಸ್ಪಷ್ಟವಾಗಿ

ಹೇಳಿರಿ; ಆದರೆ ಶಿವಚಾಪಕ್ಕೆ ಒಬ್ಬನೂ ಹೆದೆ ಏರಿಸಲಿಲ್ಲವಲ್ಲ! ಬಂಧುಗಳೇ, ಚಾಪಕ್ಕೆ ಹೆದೆಯೇರಿಸುವದಕ್ಕೆ, ಅದನ್ನು ಮುರಿಯುವದೂ ಒತ್ತಟ್ಟಿಗೇ ಉಳಿಯಿತು; ಅದನ್ನು ಭೂಮಿಯಿಂದ ಎಳ್ಳಷ್ಟು ಅಲ್ಲಾಡಿಸುವದೂ ನಿಮ್ಮಿಂದಾಗಲಿಲ್ಲವು. ಇನ್ನುಮೇಲೆಯಾದರೂ ನಾವು ವೀರರೆಂದು ಸ್ವತಃ ಪ್ರೌಢಿಯನ್ನು ತೋರಿಸಬೇಡಿರಿ. ಈ ಪೃಥ್ವಿಯು ನಿರ್ವೀರ್ಯವಾಯಿತೆಂಬ ನಂಬಿಗೆಯು ನನಗಾಗಿದೆ. ಇನ್ನು ನೀವು ನಿರಾಶೆಪಟ್ಟು ನಿಮ್ಮ ನಿಮ್ಮ ಮನೆಯಹಾದಿಯನ್ನು ಹಿಡಿಯಿರಿ. ಸೀತೆಯ ಹಣೆಯಲ್ಲಿ ಆಕೆಯ ವಿವಾಹವಾಗಬೇಕೆಂದು ಬರೆದಂತೆ ತೋರುವದಿಲ್ಲ. ನಾನು ನನ್ನ ಪ್ರತಿಜ್ಞೆಯಭಂಗ ಮಾಡಿದರೆ ನನ್ನ ಪುಣ್ಯವು ಕ್ಷೀಣವಾಗುವದು. ನನ್ನ ಮಗಳು ಅವಿವಾಹಿತಳಾಗಿಯೇ ಉಳಿಯುವ ಯೋಗವಿದ್ದಪಕ್ಷದಲ್ಲಿ ನನ್ನ ಉಪಾಯವಾದರೂ ಏನು? ಅಹೋ! ಈ ಪೃಥ್ವಿಯು ನಿಃಪುರುಷವಾಗಿರುವದೆಂದು ನಾನು ತಿಳಿದಿದ್ದರೆ ಪ್ರತಿಜ್ಞೆಮಾಡಿ ಹೀಗೆ ಉಪಹಾಸಾಸ್ಪದನಾಗುತ್ತಿದ್ದಿಲ್ಲ."

ಜನಕನ ಈ ಮಾತುಗಳನ್ನು ಕೇಳಿ ಯಾವತ್ತು ಸ್ತ್ರೀಪುರುಷರು ಸೀತೆಯಕಡೆಗೆ ನೋಡಿ ದುಃಖಿತರಾದರು. ಲಕ್ಷ್ಮಣನ ಹುಬ್ಬುಗಳು ಗಂಟಿಕ್ಕಿ ಆತನ ಕೆಳದುಟಿಯು ನಡುಗಹತ್ತಿತು; ಆತನ ಕಣ್ಣುಗಳು ಸಿಟ್ಟಿನಿಂದ ಕೆಂಪೇರಿದವು. ಜನಕನ ಮಾತುಗಳು ಆತನಿಗೆ ಬಾಣಗಳಂತೆ ಬಾಧಿಸಿದರೂ, ಅಣ್ಣನಾದ ರಾಮನ ಅಂಜಿಕೆಯಿಂದ ಆತನಿಗೆ ಮಾತಾಡುವ ಧೈರ್ಯವಾಗಲೊಲ್ಲದು. ಕಡೆಗೆ ಆತನು ತಡೆಯದೆ ರಾಮನ ಪದಕಮಲಗಳಿಗೆ ವಂದಿಸಿ ಸಮಯೋಚಿತವಾಗಿ ಭಾಷಣಮಾಡತೊಡಗಿದನು.—"ರಘುಕುಲಮುಕುಟಮಣಿಯಾದ ಶ್ರೀರಾಮನು ಪ್ರತ್ಯಕ್ಷವಾಗಿ ಇರುತ್ತಿರುವದನ್ನು ತಿಳಿದೂ, ಜನಕರಾಜನು ಆಡಿದಂಥ ಅಯೋಗ್ಯ ಮಾತುಗಳನ್ನು ರಘುವಂಶೀಯರಿಪ್ಪ ಸಮಾಜದಲ್ಲಿ ಯಾವನೂ ಆಡಲಿಕ್ಕಿಲ್ಲ. ಎಲೈ ಭಾನುಕುಲ ಕಮಲನಾದ ಶ್ರೀ ರಾಮನೇ, ಕೇಳು. ನಾನು ಸ್ವಾಭಾವಿಕವಾಗಿ ಮಾತನಾಡುತ್ತಿರುವೆನು, ಅದರಲ್ಲಿ ಅಭಿಮಾನದ ಲೇಶವಾದರೂ ಇರುವದಿಲ್ಲ. ತಾವು ಅಪ್ಪಣೆಯಿತ್ತರೆ ಈ ಬ್ರಹ್ಮಾಂಡವನ್ನು ಚಂಡಿನಂತೆ ಎತ್ತಿ ಅದನ್ನು ಕಾಜಿನಗುಂಡಿನಂತೆ ಒಡೆದುಬಿಟ್ಟೇನು; ಮೇರುಪರ್ವತವನ್ನು ಕೂಡ ಕಮಲದ ದೇಟಿನಂತೆ ಸೀಳಿಬಿಟ್ಟೇನು-ಭಗವನ್, ತಮ್ಮ ಪ್ರತಾಪಬಲದ ಮುಂದೆ ಈ ಜೀರ್ಣವಾದ ಶಿವಧನುಸ್ಸಿನ ಪಾಡೇನು? ಪ್ರಭೋ, ನನ್ನನ್ನು ಆಜ್ಞಾಪಿಸಬೇಕು, ಈ ಹರಧನುಸ್ಸನ್ನು ಕಮಲದ ದೇಟದಂತೆ ಹೆದೆ ಏರಿಸಿ ಧರಿಸಿ ನೂರು ಯೋಜನದವರೆಗೆ ಓಡುತ್ತ ಹೋಗುವೆನು. ಎಲೈ ಸ್ವಾಮಿಯೇ, ನಿನ್ನ ಪ್ರತಾಪಬಲದಿಂದ ಈ ಧನುಸ್ಸನ್ನು ತುಂಡುತುಂಡುಮಾಡಿ ಚಲ್ಲುವೆನು; ನಾನು ಪ್ರಭುಪದದ ಪ್ರತಿಜ್ಞೆಮಾಡಿ ಹೇಳುತ್ತೇನೆಂದರೆ, ಈ ಕೆಲಸವು ನನ್ನಿಂದಾಗದಿದ್ದರೆ ತಿರುಗಿ ಕೈಯಲ್ಲಿ ಧನುಸ್ಸನ್ನು ಹಿಡಿಯಲಿಕ್ಕಿಲ್ಲ!

ಈಮೇರೆಗೆ ಕ್ರೋಧದಿಂದ ಲಕ್ಷ್ಮಣನು ಮಾತಾಡಲು, ಪೃಥ್ವಿಯು ಅಲ್ಲಾಡಹತ್ತಿತು; ದಿಗ್ಗಜಗಳು ನಡುಗಹತ್ತಿದವು; ಯಾವತ್ತೂ ಜನರಿಗೂ ಭೂಪಾಲರಿಗೂ ಚೆಳಬಿಂದ ಹಾಗಾಯಿತು; ಜನಕನಿಗೆ ನಾಚಿಕೆಬಂದಹಾಗಾಯಿತು; ಆದರೆ ಸೀತೆಗೆ ಮಾತ್ರ ಆನಂದವಾಯಿತು. ಗುರುಗಳಾದ ವಿಶ್ವಾಮಿತ್ರರೂ, ರಾಮಚಂದ್ರನೂ, ಯಾವತ್ತು ಮುನಿಗಳೂ ಹರ್ಷಭರಿತರಾಗಿ ರೋಮಾಂಚಿತರಾದರು. ರಾಮನು ಸಂಕೇತದಿಂದಲೇ ಲಕ್ಷ್ಮಣನನ್ನು ಪ್ರತಿಬಂಧಿಸಿ ಪ್ರೀತಿಯಿಂದ ಆತನನ್ನು ಹತ್ತರ ಕುಳ್ಳಿರಿಸಿಕೊಂಡನು. ಇತ್ತ ವಿಶ್ವಾಮಿತ್ರ ಋಷಿಗಳು ಯೋಗ್ಯ ಅವಸರವನ್ನು ನೋಡಿ ಶ್ರೀರಾಮನನ್ನು ಕುರಿತು—"ಅಪ್ಪಾ ರಾಮಾ, ಏಳು, ಹರಚಾಪವನ್ನು ಭಂಗಗೊಳಿಸಿ ಜನಕರಾಜನ ಚಿಂತೆಯನ್ನು ದೂರಮಾಡು," ಎಂದು ಹೇಳಿದರು. ಗುರುಗಳ ಈ ಅಪ್ಪಣೆ ಕೇಳಿದ ಕೂಡಲೆ ರಾಮನು ಅವರ ಚರಣಕ್ಕೆ ಎರಗಿದನು. ರಾಮನ ಮನಸ್ಸಿಗೆ ಹರ್ಷವಾಗಲಿ, ವಿಷಾದವಾಗಲಿ ಉಂಟಾಗಿದ್ದಿಲ್ಲ. ಆತನು ಸ್ವಾಭಾವಿಕವಾಗಿಯೇ ಎದ್ದು ನಿಂತನು. ಆದರೂ ಆತನ ಠೀವಿಯು ಸಿಂಹದ ಮರಿಯನ್ನು ನಾಚಿಸುತ್ತಲಿತ್ತು. ಆತನನ್ನು ನೋಡಿ ರಾಜಮಂಡಲವು ನಿರಾಶೆಪಟ್ಟಿತು. ಮುನಿಗಳೂ ದೇವತೆಗಳೂ ಶೋಕರಹಿತರಾಗಿ ಹೂಮಳೆಗರೆಯಹತ್ತಿದರು; ರಾಮನು ಗುರುಪದವನ್ನು ಪ್ರೇಮದಿಂದ ವಂದಿಸಿ, ಯಾವತ್ತೂ ಮುನಿವೃಂದದ ಅಪ್ಪಣೆಯನ್ನು ಕೇಳಿಕೊಂಡನು. ಉನ್ಮತ್ತವಾದ ಸುಂದರ ಶ್ರೇಷ್ಠಗಜರಾಜನಂತೆ ಗಮನಶೀಲನಾದ ಆ ಅಖಿಲಬ್ರಹ್ಮಾಂಡದ ಸ್ವಾಮಿಯು ಸಹಜವಾಗಿ ನಡೆಯಹತ್ತಲು, ನಗರವಾಸಿಗಳಾದ ಯಾವತ್ತು ಸ್ತ್ರೀ ಪುರುಷರ ದೇಹಗಳು ರೋಮಾಂಚಿತವಾಗಿ, ಹರ್ಷಭರದಿಂದ ಅವರು—"ನಿರ್ವಿಘ್ನವಾಗಿ ರಾಮನು ಯಶಸ್ವಿಯಾಗಲೆಂ"ದು ಶ್ರೀಗಜಾನನನನ್ನು ಪ್ರಾರ್ಥಿಸತೊಡಗಿದರು; ಸೀತೆಯ ತಾಯಿಯು ಪ್ರೇಮದಿಂದ ರಾಮನ ಕಡೆಗೆ ನೋಡಿ ಸ್ನೇಹ ವಶವಾದಳು. ಆಕೆಯು ಸಖಿಯರನ್ನು ಹತ್ತರ ಕರೆದು—"ಸಖಿಯರಿರಾ, ಕೇವಲ ನಮ್ಮ ಹಿತಚಿಂತಕರೆನ್ನುವವರು ಕೂಡ ಈಗ ಹೇಗೆ ಮೋಜು ನೋಡುತ್ತಿವರು ನೋಡಿರಿ! ರಾಮನು ಸಣ್ಣ ಬಾಲಕನಿದ್ದು, ನಿಮ್ಮ ಹಟ ಮಾರಿತನವು ಯೋಗ್ಯವಲ್ಲವೆಂದು ಒಬ್ಬರೂ ಮಹಾರಾಜರಿಗೆ ಹೇಳಲೊಲ್ಲರಲ್ಲ; ರಾವಣ ಬಾಣಾಸುರರಂಥವರೂ ಧನುಷ್ಯವನ್ನು ಮುಟ್ಟಲಿಲ್ಲ; ಯಾವತ್ತು ರಾಜರು ಮಾಡಬಾರದ್ದನ್ನು ಮಾಡಿ ಸೋಂದ್ದಿರುಗಿದರು; ಹೀಗಿದ್ದು ಈ ಪ್ರಚಂಡ ಚಾಪವನ್ನು ಈ ರಾಜಕುಮಾರನ ಕೈಯಲ್ಲಿ ಕೊಡಬಹುದೇ? ಬಾಲಹಂಸದಿಂದ ಮಂದರಾಚಲವನ್ನು ಎತ್ತುವದು ಆಗಬಹುದೆ?"

ಒಬ್ಬ ಚತುರ ಸಖಿಯು ಮೃದುವಾಣಿಯಿಂದ ರಾಣಿಯನ್ನು ಕುರಿತು—ದೇವಿ, ರಾಜ್ಞೀಮಣಿಯೇ, ಸಮರ್ಥರನ್ನು ಹುಡುಗರಲ್ಲಿ ಎಣಿಸಬಾರದು. ಎಲ್ಲಿಯ ಅಗಸ್ತ್ಯ ಋಷಿಯು, ಎಲ್ಲಿಯ ಅಪಾರವಾದ ಸಮುದ್ರವು! ಆದರೆ ಆ ಸಮರ್ಥ ಋಷಿಶ್ರೇಷ್ಠನು ಸಮುದ್ರ ಪಾನಮಾಡಿ ಒಣಗಿಸಿಬಿಟ್ಟನು. ಜಗತ್ತಿನಲ್ಲಿ ಉತ್ಕೃಷ್ಟವಾದ ಕೀರ್ತಿಯನ್ನು ಪಡೆದನು. ಉದಯವಾದ ಮಾತ್ರದಿಂದ ತ್ರಿಭುವನದ ಕತ್ತಲೆಯನ್ನು ದೂರಮಾಡುವ

ಸೂರ್ಯ ಬಿಂಬವು ನೋಡಲಿಕ್ಕೆ ಸಣ್ಣದೇ ಇರುವದು; ಬ್ರಹ್ಮ-ವಿಷ್ಣು-ಮಹೇಶಾದಿ ದೇವತೆಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಮಂತ್ರವು ಸಣ್ಣದೇ ಇರುವದು; ಮದೋನ್ಮತ್ತ ಗಜರಾಜನನ್ನು ಹಣ್ಣಿಗೆ ತರುವ ಅಂಕುಶವಾದರೂ ದೊಡ್ಡದಿರುವದಿಲ್ಲ; ತ್ರಿಭುವನವನ್ನು ವಶಮಾಡಿಕೊಳ್ಳುವ ಕಾಮದೇವನ ಬಾಣಗಳು ಪುಷ್ಪಗಳಾಗಿರುವವು; ಆದ್ದರಿಂದ ದೇವಿಯವರೇ, ತಾವು ನಿಶ್ಚಿಂತರಾಗಿರಬೇಕು. ಶ್ರೀರಾಮನೇ ಧನುರ್ಭಂಗಮಾಡುವನು" ಎಂದು ಹೇಳಿದಳು. ಅದನ್ನು ಕೇಳಿ ರಾಣಿಯ ವಿಷಾದವು ನಷ್ಟವಾಗಿ ಆಕೆಯ ಹೃದಯದಲ್ಲಿ ಪ್ರೇಮವು ಉಕ್ಕೇರಿತು. ಆಗ ರಾಮನನ್ನು ನೋಡಿ ಸೀತೆಯೂ ಭಯಭೀತಳಾಗಿ ಕೈಕರದಿಂದ ತನ್ನ ಉಪಾಸ್ಯದೈವತಗಳಾದ ಮಹೇಶ-ಭವಾನಿಯರನ್ನೂ, ಗಣಪತಿಯನ್ನೂ ಸ್ತವಿಸಿ, ನಿಮ್ಮ ಸೇವೆಯನ್ನು ನಾನು ಮಾಡಿದ್ದು ನಿಜವಿದ್ದಪಕ್ಷದಲ್ಲಿ ಶ್ರೀರಾಮನಿಗೆ ಹರಧನುವು ಹೂಮಾಲೆಯ ಹಾಗೆ ಹಗುರಾಗಲೆಂದು ಪ್ರಾರ್ಥಿಸಿದಳು. ಆಕೆಯು ಮನಸ್ಸಿನಲ್ಲಿ-"ಹರಹರ, ದೇವಾ, ವಜ್ರಕ್ಕಿಂತ ಕಠಿಣವಾದ ಹರಧನುವೆತ್ತ, ಈ ಮೇಘವರ್ಣದ ಸುಕುಮಾರ ರೂಪವೆತ್ತ! ಶಿರೀಷಕುಸುಮದ ಮೊಗ್ಗೆಯು ವಜ್ರವನ್ನು ಭೇದಿಸಬಹುದೆ! ಅಪ್ಪಾ, ಶಂಭುಚಾಪವೇ, ಇನ್ನು ನನಗೆ ನಿನ್ನ ಹೊರತು ಬೇರೆಗತಿಯಿಲ್ಲವು. ರಘುಪತಿಯನ್ನು ನೋಡಿಯಾದರೂ ನಿನ್ನ ಜಡತ್ವವನ್ನು ಈ ಸಭೆಯ ಮೇಲೆ ಚಲ್ಲಿಕೊಟ್ಟು ಸೂಕ್ಷ್ಮವಾಗು; ತ್ರಿಕರಣಪೂರ್ವಕವಾಗಿ ನನ್ನ ಪ್ರೇಮವು ನಿಜವಿದ್ದದ್ದಾದರೆ, ನನ್ನ ಚಿತ್ತವು ರಘುಪತಿಯಲ್ಲಿಯೇ ರಂಜಿಸಿದ್ದು ನಿಜವಿದ್ದರೆ ಸರ್ವಾಂತರ್ಯಾಮಿಯಾದ ಪ್ರಭುವು ನನ್ನನ್ನು ರಘುಪತಿಯ ದಾಸಿಯನ್ನಾಗಿಯೇ ಮಾಡಲಿ. ಯಾರಿಗೆ ಯಾರಮೇಲೆ ಪ್ರೇಮವಿರುವದೋ, ಅವರಿಗೆ ಅವರದೇ ಪ್ರಾಪ್ತಿಯಾಗುತ್ತದೆಂಬದರಲ್ಲಿ ಸಂದೇಹವಿಲ್ಲ.

ಸೀತೆಯು ಮನಸ್ಸಿನಲ್ಲಿ ಮಾಡಿದ ಈ ಪ್ರೇಮ ಪ್ರತಿಜ್ಞೆಯು ಪ್ರಭು ಶ್ರೀರಾಮನಿಗೆ ಅರಿಕೆಯಾಯಿತು. ಆತನು ಸೀತೆಯನ್ನು ದಿಟ್ಟಿಸಿ ನೋಡಿ, ಗರುಡನು ಸರ್ಪವನ್ನು ನೋಡುವಂತೆ ಹರಧನುವನ್ನು ನೋಡಿದನು. ರಾಮನ ಈ ಸ್ಥಿತಿಯನ್ನು ನೋಡಿದ ಕೂಡಲೆ ಲಕ್ಷ್ಮಣನು ಪಾದದಿಂದ ಬ್ರಹ್ಮಾಂಡವನ್ನು ಒತ್ತಿಹಿಡಿದು ಪುಲಕಿತಗಾತ್ರನಾಗಿ— " ಎಲೆ ದಿಗ್ಗಜ ಕಚ್ಛಶೇಷ ವರಾಹಗಳಿರಾ, ಧೈರ್ಯತಾಳಿ ಪೃಥ್ವಿಯನ್ನು ತಬ್ಬಿ ಹಿಡಿಯಿರಿ, ಅಂದರೆ ಅದು ಅಲ್ಲಾಡಲಿಕ್ಕಿಲ್ಲ; ರಾಮನು ಶಂಕರಧನುಷ್ಯವನ್ನು ಮುರಿಯಲಿಚ್ಛಿಸುವದರಿಂದ ನನ್ನ ಅಪ್ಪಣೆಯಂತೆ ಸಿದ್ಧರಾಗಿರಿ,,, ಎಂದು ನುಡಿದನು. ಶ್ರೀರಾಮನು ಧನುಷ್ಯದ ಬಳಿಯಲ್ಲಿ ಬರಲು, ಎಲ್ಲರ ಸಂಶಯ-ಅಜ್ಞಾನಗಳೂ, ಬುದ್ಧಿಹೀನರಾಜರ ಅಭಿಮಾನವೂ, ಪರಶುರಾಮನ ಗರ್ವಗುರುತ್ವಗಳೂ, ದೇವತೆಗಳ ಹಾಗೂ ಮುನಿಗಳ ಚಿಂತೆಯೂ, ಸೀತೆಯ ಶೋಕವೂ, ಜನಕನ ಪಶ್ಚಾತ್ತಾಪವೂ, ರಾಣಿಯ ದಾರುಣ ದುಃಖಾಗ್ನಿಯೂ ನಷ್ಟವಾದವು. ಶ್ರೀರಾಮನು ಗುರುವನ್ನು ಮನಸ್ಸಿನಿಂದ ವಂದಿಸಿ ಹರಧನುವನ್ನು ಸಹಜವಾಗಿ ಲೀಲೆಯಿಂದ ಎತ್ತಿದನು. ಮಿಂಚು ಫಳಕ್ಕನೆ ಹೊಳೆದು ಮೇಘದಲ್ಲಿ ಲಯಹೊಂದು

ವಂತೆ, ರಾಮನು ಧನುಸ್ಸಿಗೆ ಹೆದೆಏರಿಸಿದ ಕೂಡಲೆ ಅದು ಮಂಡಲಾಕಾರವಾಯಿತು. ರಾಮನು ಧನುಸ್ಸನ್ನು ಎತ್ತುವದೂ, ಅದಕ್ಕೆ ಹೆದೆಏರಿಸುವದೂ ಯಾರ ಲಕ್ಷ್ಯದಲ್ಲಿಯೂ ಬರಲಿಲ್ಲ. ಎಲ್ಲಜನರು ಬೆರಗಾಗಿ ನೋಡುತ್ತಿರಲು, ಕ್ಷಣದಲ್ಲಿ ರಾಮನು ಧನುಸ್ಸನ್ನು ಮಧ್ಯದಲ್ಲಿ ತುಂಡರಿಸಿದನು. ಧನುರ್ಭಂಗದ ಪ್ರಚಂಡಧ್ವನಿಯು ಬ್ರಹ್ಮಾಂಡವನ್ನು ವ್ಯಾಪಿಸಿತು. ಆ ಕಠೋರ ಧ್ವನಿಯು ತ್ರಿಭುವನದಲ್ಲಿ ತುಂಬಿ ಸೂರ್ಯನ ರಥದ ಕುದುರೆಗಳೂ ಬೆದರಿ ಹಾದಿಯು ಬಿಟ್ಟು ಓಡಹತ್ತಿದವು; ದಿಗ್ಗಜಗಳು ಚೀತ್ಕರಿಸಹತ್ತಿದವು; ಪೃಥ್ವಿಯು ಅಲ್ಲಾಡಹತ್ತಿತು; ಶೇಷ, ವರಾಹ, ಕೂರ್ಮರ ಕಣ್ಣುಗಳು ಕತ್ತಲುಗುಡಿಸಿದವು. ದೇವತೆಗಳ-ದೈತ್ಯರ-ಮುನಿಗಳ ಕಿವಿಗಳು ಗಡಚಿಕ್ಕಿದವು. ಎಲ್ಲರು ಭಯಕಂಪಿತರಾಗಿ ಚಿಂತಿಸಹತ್ತಿದರು. ಪ್ರಭುವು ಕೋದಂಡವನ್ನು ಎರಡು ತುಂಡು ಮಾಡಿಚಲ್ಲಿಕೊಡಲು, ಎಲ್ಲರು ಹರ್ಷಭರಿತರಾಗಿ ಜಯ-ಧ್ವನಿಯನ್ನು ಮಾಡಹತ್ತಿದರು. ಅದನ್ನು ನೋಡಿ ವಿಶ್ವಾಮಿತ್ರನ ಹೃದಯಾನಂದವು ಉಕ್ಕೇರಿತು; ಆಕಾಶವು ದುಂದುಭಿಗಳ ನಾದದಿಂದ ದಿವಿಗುಟ್ಟಿತು; ಅಪ್ಸರೆಯರು ನೃತ್ಯಗಾಯನ ಮಾಡತೊಡಗಿದರು; ಬ್ರಹ್ಮಾದಿ ದೇವತೆಗಳೂ, ಸಿದ್ಧರೂ, ಮುನೀಶ್ವರರೂ ಪ್ರಭುವಿನ ಪ್ರಶಂಸೆಮಾಡಿ ಆಶೀರ್ವದಿಸಿದರು. ಜಯಜಯಕಾರದ ಧ್ವನಿಯು ತ್ರಿಭುವನವನ್ನು ತುಂಬಿಬಿಟ್ಟಿತು. ಆನಂದದಭರದಲ್ಲಿ ಧನುರ್ಭಂಗದ ಕಠೋರ ಧ್ವನಿಯಾದದ್ದು ಯಾರ ನೆನಪಿಗೂ ಬಾರದಾಯಿತು! ಬಂದಿಮಾಗಧರು ರಾಮನನ್ನು ಸ್ತುತಿಸತೊಡಗಿದರು- ವಿವಿಧವಾದ್ಯಗಳು ಧ್ವನಿಮಾಡತೊಡಗಿದವು. ಆಗ ಸೀತೆಯು ಶತಾನಂದರ ಅಪ್ಪಣೆಯಿಂದ ಜಯಮಾಲಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಸಖಿಯರೊಡನೆ ರಾಮನ ಬಳಿಗೆ ಬಂದಳು. ರಾಮರೂಪದಲ್ಲಿ ತಲ್ಲೀನವಾದ ಮನಸುಳ್ಳ ಆಕೆಗೆ ರಾಮನಕೊರಳಿಗೆ ಮಾಲೆಯನ್ನು ಹಾಕುವ ಎಚ್ಚರವು ಉಳಿಯಲಿಲ್ಲ. ಆಗ ಆಕೆಯ ಒಬ್ಬ ಚತುರ ಸಖಿಯು ಸೂಚಿಸಲು, ಸೀತೆಯು ಶ್ರೀರಾಮನ ಕೊರಳಿಗೆ ಮಾಲೆಯನ್ನು ಹಾಕಿದಳು. ಆಗ ಯಾವತ್ತು ಮಂಗಲವಾದ್ಯಗಳು ಬಾರಿಸತೊಡಗಿದವು; ಆಕಾಶದಿಂದ ಪುಷ್ಪವೃಷ್ಟಿಯಾಗತೊಡಗಿತು; ಪುರಂಧ್ರಿಯರು ಮಂಗಳಾರತಿಯನ್ನು ಮಾಡತೊಡಗಿದರು; ಎಲ್ಲ ಕಡೆಯಲ್ಲಿ ಬ್ರಾಹ್ಮಣರು ವೇದಘೋಷ ಮಾಡತೊಡಗಿದರು. ಸಖಿಯರು ಸೀತೆಗೆ ಶ್ರೀರಾಮನಚರಣಕ್ಕೆರಗಹೇಳಿದರು; ಆದರೆ ಅಹಲ್ಯೋದ್ಧಾರದ ಸುದ್ದಿಯನ್ನು ಕೇಳಿದ ಆ ಜನಕನಂದಿನಿಯು, ಎಲ್ಲಿಯಾದರೂ ತನ್ನ ಕರಕಂಕಣದೊಳಗಿನ ರತ್ನಗಳ ಸ್ಪರ್ಶದಿಂದ ತನ್ನ ಸವತಿಯರು ಉತ್ಪನ್ನರಾದಾರೆಂಬ ಅಂಜಿಕೆಯಿಂದ ಶ್ರೀರಾಮನ ಚರಣಕ್ಕೆ ಎರಗದಾದಳು. ಸೀತೆಯ ಈ ಅಲೌಕಿಕ ಪ್ರೇಮವನ್ನು ಸ್ಮರಿಸಿ ರಘುಪತಿಯು ಮನಸ್ಸಿನಲ್ಲಿ ನಕ್ಕನು.

**ಪರಶುರಾಮ ಗರ್ವಭಂಗ**—ಸೀತೆಯ ರೂಪವನ್ನು ನೋಡಿ ಮತ್ಸರಿಗಳೂ, ಕುಲಾಂಗಾರರೂ, ಮೂರ್ಖರೂ ಆದ ರಾಜರಿಗೆ ಅಭಿಲಾಷೆಯು ಉತ್ಪನ್ನವಾಗಿ, ಅವರು ಸಿಟ್ಟಿಗೆದ್ದರು! ಆ ಅಭಾಗಿಗಳಾದ ಅರಸರು ಎದ್ದೆದ್ದು ಕವಚಗಳನ್ನು ಹಾಕಿಕೊಂಡು

ಶಸ್ತ್ರಾಸ್ತ್ರಗಳನ್ನು ಧರಿಸಿ ಒಂದೇ ಸವನೆ ಬಡಬಡಿಸಹತ್ತಿದರು. ಅವರಲ್ಲಿ ಕೆಲವು ರಾಜರು—"ಸೀತೆಯನ್ನು ಕಸಿದುಕೊಂಡು ಈ ಇಬ್ಬರು ಬಂಧುಗಳನ್ನು ಹಟ್ಟಿಹಾಕಿರಿ. ಬರಿಯ ಧನುರ್ಭಂಗಮಾಡಿದಮಾತ್ರದಿಂದ ಶೌರ್ಯವಾದಂತಾಗಲಿಲ್ಲ. ನಾವು ಬದುಕಿರುವಾಗ ಈ ಕುಮಾರಿಯನ್ನು ಅಗ್ನವಾಗುವವರಾರು? ಜನಕರಾಜನು ಇವರಿಗೆ ಸಹಾಯಕನಾಗಿದ್ದರೂ, ಅವನಿಂದಸಹಿತವಾಗಿ ಈ ಇಬ್ಬರು ಬಂಧುಗಳನ್ನು ನಾವು ಗೆದ್ದುಬಿಡೋಣ," ಎಂದು ಗದ್ದರಿಸಹತ್ತಿದರು. ಅದನ್ನು ಕೇಳಿ ಕೆಲವು ಸಜ್ಜನರಾದ ರಾಜರು—"ಛೀ ನಿಮ್ಮ ನಾಚಿಕೆಗೇಡಿತನದಿಂದ ಯಾವತ್ತು ರಾಜಕುಲಕ್ಕೆ ನಾಚಿಕೆಯನ್ನುಂಟುಮಾಡುತ್ತಿರುವಿರಿ. ಶಿವಚಾಪದೊಡನೆಯೇ ಸ್ವರ್ಗಕ್ಕೆ ಹೋಗಿರುವ ನಿಮ್ಮ ಆ ಶೌರ್ಯವು ಈಗ ಎಲ್ಲಿಂದ ಬಂದಿತು? ನಿಮ್ಮ ಈ ದುರ್ಬುದ್ಧಿಯಿಂದ ನಿಮ್ಮ ಮೋರೆಗೆ ಕಪ್ಪು ಹತ್ತುವದು. ಈರ್ಷ್ಯೆ—ಮದ—ಮೋಹಗಳನ್ನು ತ್ಯಜಿಸಿ ಶ್ರೀರಾಮನನ್ನು ಕಣ್ಣುತುಂಬ ನೋಡಿರಿ. ಲಕ್ಷ್ಮಣನ ಧಗಧಗಿಸುವ ಕ್ರೋಧಾಗ್ನಿಯಲ್ಲಿ ಪತಂಗದ ಹುಳಗಳಂತೆ ಹಾರಿಕೊಳ್ಳಬೇಡಿರಿ. ಗರುಡಪಕ್ಷಿಯ ಬಲಿಯನ್ನು ಕಾಗೆಗಳು ಇಚ್ಛಿಸುವಂತೆಯೂ, ಸಿಂಹದ ಭಾಗವನ್ನು ನರಿಗಳು ಇಚ್ಛಿಸುವಂತೆಯೂ, ಕಾರಣವಿಲ್ಲದೆ ಸಿಟ್ಟಿಗೇಳುವ ಮನುಷ್ಯನು ತನ್ನ ಹಿತದ ಆಶೆಯನ್ನು ಹಿಡಿಯುವಂತೆಯೂ, ಶಿವದ್ವೇಷಿಯು ಸುಖ—ಸಂಪತ್ತುಗಳನ್ನು ಬಯಸುವಂತೆಯೂ, ಲೋಭಿಯೂ, ವಿಷಯಲಂಪಟನೂ ಕೀರ್ತಿಯನ್ನು ಆಶಿಸುವಂತೆಯೂ, ಶ್ರೀಹರಿಯ ಪದವಿಮುಖನು ಮೋಕ್ಷವನ್ನು ಇಚ್ಛಿಸುವಂತೆಯೂ, ಎಲೈ ರಾಜರೇ, ನಿಮ್ಮ ಆಶೆಯು ನಿರರ್ಥಕವಾದದ್ದಿರುವದು. ಕಾಮುಕರಿಗೆ ನಿಷ್ಕಲಂಕತ್ವವು ಪ್ರಾಪ್ತವಾಗಬಹುದೇ ?"

೧೬೮ ಅರಸರ ಈ ಕೋಲಾಹಲವನ್ನು ಕೇಳಿ ಸೀತೆಯು ಶಂಕಿತಳಾದಳು. ಆಕೆಯ ಸಖಿಯರು ಆಕೆಯನ್ನು ರಾಣಿಯರಬಳಿಗೆ ಕರೆದುಕೊಂಡುಹೋದರು. ಶ್ರೀರಾಮನು ತನ್ನ ಮನಸ್ಸಿನಲ್ಲಿ ಸೀತೆಯ ಪ್ರೇಮವನ್ನು ವರ್ಣಿಸುತ್ತ ಸಹಜಗತಿಯಿಂದ ತನ್ನ ಗುರುಗಳ ಕಡೆಗೆ ಹೋದನು. ರಾಣಿಯೊಡನೆ ಸೀತೆಯು ಶೋಕಾಕುಲಳಾಗಿ, ಇನ್ನು ಈ ನಮ್ಮ ದುರ್ದೈವಕ್ಕೆ ಏನು ಮಾಡಬೇಕೆಂದು ಚಿಂತಿಸತೊಡಗಿದರು. ಅರಸರ ಬಡಬಡಿಕೆಯನ್ನು ಕೇಳಿ ಲಕ್ಷ್ಮಣನು ಅತ್ತಿತ್ತ ನೋಡಹತ್ತಿದನು; ಆದರೆ ರಾಮನ ಅಂಜಿಕೆಯಿಂದ ಆತನಿಗೆ ಏನೂ ಮಾತಾಡಲಿಕ್ಕೆ ಬರಲೊಲ್ಲದು. ಆತನ ಕಣ್ಣುಗಳು ಕೆಂಪಾಗಿ ಹುಬ್ಬುಗಳು ಗಂಟಿಕ್ಕಿದವು. ಆ ಕ್ರೋಧಸಂತಪ್ತನಾದ ಲಕ್ಷ್ಮಣನು ಅರಸರ ಹಿಂದಿನಕಡೆಗೆ ನೋಡುತ್ತಿರಲು, ಮದೋನ್ಮತ್ತಗಳಾದ ಆನೆಗಳ ಹಿಂಡನ್ನು ನೋಡಿ, ಆವೇಶಗೊಳ್ಳುವ ಸಿಂಹದ ಮರಿಯಂತೆ ಆತನು ತೋರಹತ್ತಿದನು. ಅರಸರ ಈ ಗೊಂದಲವನ್ನು ನೋಡಿ ಸ್ತ್ರೀಪುರುಷರು ವಿಹ್ವಲರಾಗಿ ಎಲ್ಲರೂ ಏಕಕಂಠದಿಂದ ಅರಸರನ್ನು ಬಯ್ಯಹತ್ತಿದರು. ಅಷ್ಟರಲ್ಲಿ ಶಿವಧನುರ್ಭಂಗದ ಸುದ್ದಿಯನ್ನು ಕೇಳಿ ಭೃಗುಕುಲಕಮಲಕ್ಕೆ ಸೂರ್ಯನಂತೆ

ಇದ್ದ ಪರಶುರಾಮನು ಅಲ್ಲಿಗೆ ಬಂದನು. ಗಿಡಗವನ್ನು ನೋಡಿ ಲಾವಕ್ಕಿಗಳಹಿಂಡು ಅಡಗಿಕೊಳ್ಳುವಂತೆ, ಪರಶುರಾಮನನ್ನು ನೋಡಿ ಯಾವತ್ತು ಅರಸರು ಕೈಕಾಲುಗೆಟ್ಟು ಮರೆಯಾಗಹತ್ತಿದರು. ಪರಶುರಾಮನ ಗೌರಕಾಯದಲ್ಲಿ ಶುಭ್ರವಾದ ವಿಭೂತಿಯು ಒಪ್ಪುತ್ತಿದ್ದು, ಆತನ ವಿಶಾಲವಾದ ಹಣೆಯಲ್ಲಿ ತ್ರಿಪುಂಡ್ರವು ಶೋಭಿಸುತ್ತಿತ್ತು. ಆತನ ಮಸ್ತಕದಲ್ಲಿ ಜಟಾಭಾರವು ಶೋಭೆಯನ್ನುಂಟುಮಾಡುತ್ತಿರಲು, ಮುಖಶ್ರೀಯು ಚಂದ್ರನಂತೆ ಸುಂದರವಾಗಿದ್ದರೂ ಸಿಟ್ಟಿನ ಮೂಲಕ ನಸುಗೆಂಪಾಗಿ ತೋರುತ್ತಿತ್ತು. ಹುಬ್ಬುಗಳು ವಕ್ರವಾಗಿದ್ದು, ಕಣ್ಣುಗಳು ಸಿಟ್ಟಿನಿಂದ ಕೆಂಡದಂತಾಗಿದ್ದವು. ದೃಷ್ಟಿಯು ಸ್ವಾಭಾವಿಕವಾಗಿಯೇ ಸಿಟ್ಟಿನದಾಗಿದ್ದು ಹೆಗಲುಗಳುವೃಷಭದ ಹೆಗಲಿನಂತೆ ಪರಿಪುಷ್ಟವಾಗಿದ್ದವು. ಮಹಾತೇಜೋವಂತನಾದ ಆ ವಿಪ್ರಶ್ರೇಷ್ಠನ ವಕ್ಷಸ್ಥಳವೂ, ಬಾಹುಗಳೂ ವಿಶಾಲವಾಗಿದ್ದವು. ಆತನ ಕೊರಳಲ್ಲಿ ಸುಂದರವಾದ ಯಜ್ಞೋಪವೀತವೂ, ರುದ್ರಾಕ್ಷಮಾಲೆಯೂ ಒಪ್ಪುತ್ತಿದ್ದವು. ಬಗಲಲ್ಲಿ ವ್ಯಾಘ್ರಚರ್ಮವಿದ್ದು, ಟೊಂಕಕ್ಕೆ ಮುನಿವಲ್ಕಲವೂ, ಬಾಣಗಳಿಂದ ತುಂಬಿದ ಎರಡು ಬತ್ತಳಿಕೆಗಳೂ ಒಪ್ಪುತ್ತಿದ್ದವು. ಆತನ ಕೈಯೊಳಗಿನ ಧನುಷ್ಯವನ್ನೂ, ಹೆಗಲಮೇಲಿನ ಕೊಡಲಿಯನ್ನೂ ನೋಡಿ ವೀರರ ಎದೆಗಳು ಬಿಚ್ಚಿಬೀಳುತ್ತಿದ್ದವು!

ಈ ಮೇರೆಗೆ ಸಂತವೇಷವನ್ನು ಧರಿಸಿದ್ದರೂ, ಭಯಂಕರ ಕರ್ಮಕಾರಿಯಾದ ಆ ಪರಶುರಾಮನ ಸ್ವರೂಪವೇ ಅವರ್ಣನೀಯವಾದದ್ದು. ಆಗಿನ ಪರಶುರಾಮನ ಆಗಮನವು, ಅರಸರ ಸಮೂಹದಲ್ಲಿ ಮುನಿವೇಷವನ್ನು ಧರಿಸಿ ವೀರರಸವೇ ಅವತರಿಸಿದಂತೆ ತೋರಿತು! ಭಾರ್ಗವನ ಆ ಉಗ್ರಸ್ವರೂಪವನ್ನು ನೋಡಿದ ಕೂಡಲೆ ಯಾವತ್ತು ಅರಸರು ಭಯಗ್ರಸ್ತರಾಗಿ ಎದ್ದುನಿಂತರು. ತಮ್ಮ ತಮ್ಮ ತಂದೆಯಹೆಸರಿನೊಡನೆ ತಮ್ಮತಮ್ಮ ಹೆಸರುಗಳನ್ನು ಹೇಳುತ್ತ ಯಾವತ್ತರೂ ಭೂಮಿಯಲ್ಲಿ ಸಾಷ್ಟಾಂಗವಾಗಿ ಎರಗತೊಡಗಿದರು! ಆ ಭಾರ್ಗವನು ಕಲ್ಯಾಣ ಮಾಡುವ ಇಚ್ಛೆಯಿಂದ ಅನ್ಯರನ್ನು ನೋಡುವಾಗ ಕೂಡ ಅವರಿಗೆ ತಮ್ಮ ಆಯುಷ್ಯವು ಪೂರ್ಣವಾಯಿತೆನ್ನುವಹಾಗೆ ಆಗುತ್ತಿತ್ತು! ಇಂಥ ಪರಶುರಾಮನನ್ನು ನೋಡಿ ಜನಕನು ಬಂದು ವಂದಿಸಿದನು; ಮತ್ತು ಸೀತೆಯನ್ನು ಕರೆಸಿ ಆಕೆಯ ಕೈಯಿಂದ ಆ ವಿಪ್ರಶ್ರೇಷ್ಠನಿಗೆ ನಮಸ್ಕಾರ ಮಾಡಿಸಿದನು. ಭಾರ್ಗವನು ಸೀತೆಯನ್ನು ಆಶೀರ್ವದಿಸಲು, ಆಕೆಯ ಸಖಿಯರು ಅತ್ಯಾನಂದದಿಂದ ಆಕೆಯನ್ನು ತಮ್ಮ ಪರಿವಾರದೊಳಗೆ ಕರೆದುಕೊಂಡು ಹೋದರು. ಆ ಮೇಲೆ ವಿಶ್ವಾಮಿತ್ರನು ಬಂದು ಇಬ್ಬರು ಬಂಧುಗಳನ್ನು ಪರಶುರಾಮನ ಪಾದಕಮಲಗಳ ಮೇಲೆ ಕೆಡವಿ-"ಇವರು ದಶರಥ ಪುತ್ರರಾದ ರಾಮಲಕ್ಷ್ಮಣರ." ಎಂದುಹೇಳಿದನು. ಆಇಬ್ಬರು ಸುಂದರರಾದ ಬಂಧುಗಳನ್ನುನೋಡಿ ಪರಶುರಾಮನು ಆಶೀರ್ವದಿಸಿದನು. ಮದನನ ಗರ್ವವನ್ನು ಅಪಹರಿಸುವ ಶ್ರೀರಾಮನ ಅಪಾರವಾದ ಲಾವಣ್ಯವನ್ನು ಭಾರ್ಗವರಾಮನು ಎವೆಯಿಕ್ಕದೆ ನೋಡತೊಡಗಿದನು.

ಭಾರ್ಗವನ ಶರೀರವು ಕ್ರೋಧದಿಂದ ವ್ಯಾಪ್ತವಾಗಿತ್ತು. ಆಗ ಆತನು ತಿಳಿದೂ ತಿಳಿದೂ "ಇಷ್ಟು ಗದ್ದಲವು ಯಾತರದು! " ಎಂದು ಅಜ್ಞಾನಿಯಂತೆ ಜನಕರಾಜನ ಕಡೆಗೆ ನೋಡಿ ಪ್ರಶ್ನೆ ಮಾಡಿದನು. ರಾಜರು ಕೂಡಿದ ಕಾರಣವನ್ನು ಜನಕರಾಜನು ಪರಶುರಾಮನಿಗೆ ಹೇಳಿದನು, ಜನಕರಾಜನ ಉತ್ತರವನ್ನು ಕೇಳಿ ಪರಶುರಾಮನು ಎರಡನೆಯ ಕಡೆಗೆ ನೋಡಲು, ಅಲ್ಲಿ ನೆಲದ ಮೇಲೆ ಬಿದ್ದಿರುವ ಶಿವಧನುಸ್ಸಿನ ತುಂಡುಗಳು ಆತನ ಕಣ್ಣಿಗೆ ಬಿದ್ದವು. ಕೂಡಲೆ ಭಾರ್ಗವರಾಮನು ಅತ್ಯಂತ ಕ್ರುದ್ಧನಾಗಿ ಕಠೋರವಾಣಿಯಿಂದ— ಎಲೈ ಜಡಬುದ್ಧಿಯ ಜನಕನೇ, ಧನುಸ್ಸನ್ನು ಮುರಿದವರಾರು ಹೇಳು. ಎಲೈ ಮೂಢನೇ, ಧನುರ್ಭಂಗಮಾಡಿದವನನ್ನು ಬೇಗನೆ ತೋರಿಸು; ಇಲ್ಲದಿದ್ದರೆ, ನಿನ್ನ ರಾಜ್ಯವಿರುವ ಮಟ್ಟಿಗಿನ ಪೃಥ್ವಿಯನ್ನು ಬಕ್ಕಬೋರಲು ಹಾಕುವೆನು! ಎಂದು ಕೇಳಲು, ಅತ್ಯಂತ ಭಯಗ್ರಸ್ತನಾದ ಜನಕನು ಏನೂ ಉತ್ತರ ಕೊಡದಾದನು. ಕುಟಿಲರಾದ ಅರಸರ ಮನಸ್ಸಿನಲ್ಲಿ ಹರ್ಷವು ಉತ್ಪನ್ನವಾಯಿತು. ದೇವತೆಗಳು, ಮುನಿಗಳು, ನಾಗರು, ನಗರದ ನರನಾರಿಯರು ಇವರೆಲ್ಲರ ಮನಸ್ಸಿಗೆ ಅತ್ಯಂತ ದುಃಖವಾಯಿತು. ಸೀತೆಯ ತಾಯಿಯು ಮನಸ್ಸಿನಲ್ಲಿ ತಳಮಳಿಸ ತೊಡಗಿದಳು, ದುರ್ದೈವದ ಮೂಲಕ ಎಲ್ಲ ಕೆಲಸವು ಕೆಟ್ಟಿತೆಂದು ದುಃಖಿತಳಾದಳು. ಭೃಗುಪತಿಯು ಸ್ವಭಾವವನ್ನರಿತುಕೊಂಡ ಬಳಿಕ ಸೀತೆಗೆ ಒಂದೊಂದು ನಿಮಿಷವು ಒಂದೊಂದು ಕಲ್ಪದಂತೆ ಹೋಗತೊಡಗಿತು.

ಈ ಮೇರೆಗೆ ಯಾವತ್ತು ಜನರು ಭಯಭೀತರಾದದ್ದನ್ನೂ, ಜಾನಕಿಯು ಅಂಜಿರುವದನ್ನೂ ತಿಳಿದು ಶ್ರೀ ರಘುವೀರನು ಮನಸ್ಸಿನಲ್ಲಿ ಹರ್ಷ-ವಿಷಾದಗಳನ್ನೇನು ಹೊಂದದೆ ಪರಶುರಾಮನನ್ನು ಕುರಿತು— ಎಲೈ ನಾಥನೇ, ಶಿವಚಾಪವನ್ನು ಭಂಗಗೊಳಿಸಿದವನು ಯಾವನಾದರೂ ತಮ್ಮ ಒಬ್ಬ ದಾಸನೇ ಇರಬೇಕು; ಆದರೆ ತಮ್ಮ ಅಪ್ಪಣೆಯೇನಿರುವದೆಂಬದನ್ನು ನನಗೆ ಏಕೆ ಹೇಳಲೊಲ್ಲಿರಿ? ಅನ್ನಲು, ಅದನ್ನು ಕೇಳಿದ ಕೂಡಲೆ ಆ ಶೀಘ್ರ ಕೋಪಿಯಾದ ಮುನಿಯು ಅತ್ಯಂತ ಕ್ರುದ್ಧನಾಗಿ— "ಸೇವೆಮಾಡುವವನೇ ನಿಜವಾದ ಸೇವಕನು; ಆದರೆ ಶತ್ರುವಿನಂತೆ ಕಾರ್ಯಮಾಡುವವನೊಡನೆ ಯುದ್ಧವನ್ನೇ ಮಾಡಬೇಕಾಗುವದು. ಎಲೈ ರಾಮಾ, ಕೇಳು. ಶಿವಧನುರ್ಭಂಗ ಮಾಡಿದವನನ್ನು ನಾನು ಸಹಸ್ರಬಾಹು-ಕಾರ್ತವೀರ್ಯನಂತೆ ಶತ್ರುವನ್ನಾಗಿ ತಿಳಿಯುವೆನು. ಆ ನನ್ನ ಶತ್ರುವು ಈ ರಾಜರ ಸಮೂಹವನ್ನು ಬಿಟ್ಟು ಬೇರೆ ಒತ್ತಟ್ಟಿಗೆ ಆಗಬೇಕು. ಇಲ್ಲವಿದ್ದರೆ ಎಲ್ಲ ರಾಜರ ಸಂಹಾರ ಮಾಡುವೆನು, ಎಂದು ನುಡಿದನು. ಪರಶುರಾಮನ ಈ ಮಾತುಗಳನ್ನು ಕೇಳಿ ಲಕ್ಷ್ಮಣನು ನಕ್ಕು ಪರಶುರಾಮನನ್ನು ತಿರಸ್ಕರಿಸಿ ನುಡಿಯತೊಡಗಿದ ವೇನನದರೆ—

ಲಕ್ಷ್ಮಣ— ಎಲೈ ಬ್ರಾಹ್ಮಣ ಶ್ರೇಷ್ಠನೇ, ಹಿಂದಕ್ಕೆ ನೀನು ಯಾವತ್ತು ಕ್ಷತ್ರಿಯರ ನಿಃಪಾತ ಮಾಡಿ ಅವರ ಧನಸ್ಸುಗಳನ್ನೆಲ್ಲ ಒಟ್ಟು ಗೂಡಿಸಿ ಇಟ್ಟಿದ್ದೆ; ಆದರೆ ಪೃಥ್ವಿಗೆ

ಅವುಗಳ ಭಾರವು ಸಹಸವಾಗದ್ದರಿಂದ, ನಾನು ಚಿಕ್ಕವನಿರುವಾಗ ಅವುಗಳೊಳಗಿನ ಒಂದೊಂದೇ ಧನುಸ್ಸಿನಂತೆ ಯಾವತ್ತು ಧನುಸ್ಸುಗಳನ್ನು ಮುರಿದು ಚಲ್ಲಿದೆನು; ಆದರೆ ಆಗ ಸಿಟ್ಟಿಗೇಳದಿದ್ದ ತಾವು ಇದೊಂದು ಧನುಸ್ಸನ್ನು ಮುರಿದ ಮಾತ್ರದಿಂದ ಇಷ್ಟೇಕೆ ಸಿಟ್ಟಾಗುವಿರಿ!

ಪರಶುರಾಮ(ಸಿಟ್ಟಿನಿಂದ)——ಎಲೈ ರಾಜಕುಮಾರಾ, ನಿನಗೆ ಮೃತ್ಯುವಿನ ಮುತ್ತಿಗೆ ಬಿದ್ದಿರುವದರಿಂದಲೇ ಏನು ಮಾತಾಡುತ್ತಿರುವೆನೆಂಬದರ ಎಚ್ಚರವು ನಿನಗಿರುವದಿಲ್ಲ. ಯಾವತ್ತು ಜಗತ್ತಿನಲ್ಲಿ ಪ್ರಖ್ಯಾತವಾಗಿರುವ ತ್ರಿಪುರಾರಿಯ ಧನುಷ್ಯವನ್ನು, ಬೇರೆ ಸಾಮಾನ್ಯ ಧನುಷ್ಯಗಳಂತೆಯೇ ತಿಳಿಯುವೆಯೋ ಏನು!

ಲಕ್ಷ್ಮಣ[ನಗುತ್ತನಗುತ್ತ]—ಪ್ರಭುಗಳೇ ಕೇಳಿರಿ; ಧನುಷ್ಯಗಳೆಂದರೆ ಎಲ್ಲವೂ ಒಂದೇ ಸರಿ. ಈ ಜೀರ್ಣ ಧನುಷ್ಯವನ್ನು ಮುರಿಯುವದರಲ್ಲಿ ಲಾಭಹಾನಿಗಳಾವವೋ ಏನನ್ನು ನಾನಂತು ಅರಿಯೆನು. ಶ್ರೀರಾಮನಿಗೆ ನೋಡುವಾಗ ಆ ಶಿವಚಾಪವು ಕಣ್ಣಿಗೆ ಹೊಸದು ಇದ್ದಹಾಗೆ ತೋರಿತು. ರಘುಪತಿಯ ಕರಸ್ಪರ್ಶವಾದ ಕೂಡಲೆ ಅದು ಮುರಿದಿದ್ದಾಗ ದರಲ್ಲಿ ರಘುಪತಿಯ ಅಪರಾಧವೇನು? ಮುನಿಗಳೇ, ತಾವು ಸುಮ್ಮನೆ ನಿರರ್ಥಕ ಸಿಟ್ಟಾಗಬಾರದು.

ಪರಶುರಾಮ[ತನ್ನ ಕೊಡಲಿಯ ಕಡೆಗೆ ನೋಡುತ್ತ]—ಎಲೈ ಶಠನೇ, ನನ್ನ ಸ್ವಭಾವವು ನಿನಗೆ ಗೊತ್ತಿರುವದಿಲ್ಲ. ನೀನು ಹುಡುಗನಾದದ್ದರಿಂದ ನಿನ್ನನ್ನು ನಾನು ಕೊಲ್ಲುವದಿಲ್ಲ. ನನ್ನನ್ನು ನೀನು ಬರೀ ಕೈಲಾಗದ ಮುನಿಯೆಂದು ತಿಳಿದಿರುವೆಯಲ್ಲವೆ? ಬ್ರಹ್ಮಚಾರಿಯೂ, ಅತ್ಯಂತ ಕ್ರೋಧಿಯೂ, ಜಗದ್ವಿಖ್ಯಾತನಾದ ಕ್ಷತ್ರಿಯಕುಲದ ಶತ್ರುವೂ, ಹಲವುಸಾರೆ ಭೂಮಿಯನ್ನು ಭೂಪರಹಿತವಾಗಿಮಾಡಿ ಬ್ರಾಹ್ಮಣರಿಗೆ ಅದನ್ನು ದಾನಮಾಡಿದವನೂ ಆದ ನಾನು ಸಹಸ್ರಬಾಹುವಿನ ಬಾಹುಗಳನ್ನು ತುಂಡರಿಸಿಬಿಟ್ಟವನಾಗಿರುವೆನು; ಎಲೈ ರಾಜಕುಮಾರನೇ, ಈ ಕೊಡಲಿಯನ್ನು ನೋಡಿರು. ನೀನು ನಿಷ್ಕಾರಣ ನಿನ್ನ ತಾಯಿತಂದೆಗಳನ್ನು ದುಃಖದಲ್ಲಿ ಕೆಡವಬೇಡ. ಗರ್ಭವಾಸದೊಳಗಿನ ಅರ್ಭಕರನ್ನೂ ಕಡಿದುಚೆಲ್ಲುವ ಈ ನನ್ನ ಪರಶುವು ಅತ್ಯಂತ ಭಯಾನಕವಾಗಿರುವದು.

ಲಕ್ಷ್ಮಣ[ಹಾಸ್ಯಪೂರ್ವಕವಾದ ಮೃದುವಾಣಿಯಿಂದ]——ಅಹಾ! ಮುನಿಶ್ರೇಷ್ಠನೇ, ತಾವಂತು ತಮ್ಮನ್ನು ಮಹಾಯೋಧರೆಂದು ಭಾವಿಸುವಿರಿ, ಮತ್ತು ಪದೇಪದೇ ನನಗೆ ಕೊಡಲಿಯನ್ನು ತೋರಿಸುತ್ತಿರುವಿರಿ; ಆದರೆ ಊದಿ ಪರ್ವತವನ್ನು ಹಾರಿಸಲು ಇಚ್ಛಿಸುತ್ತಿರುವಿರೇನು! ಬೆರಳುತೋರಿಸಿದ ಕೂಡಲೆ ಬಾಡುವಂಥವರಲ್ಲಿ ಇಲ್ಲಿ ಯಾರೂ ಕುಂಬಳಕಾಯಿಯಿರುವದಿಲ್ಲ! ಕೊಡಲಿ, ಧನುಷ್ಯ ಮೊದಲಾದ ತಮ್ಮ ವೇಷವನ್ನು ನೋಡಿ ನಾನು ಕೆಲಮಟ್ಟಿಗೆ ಅಭಿಮಾನಪೂರ್ವಕವಾಗಿ ಮಾತಾಡಿದೆನು.

ಈಗ ತಾವು ಭೃಗುಕುಲೋತ್ಪನ್ನರಿರುವಿರೆಂಬದನ್ನರಿತು, ತಮ್ಮ ಯಜ್ಞೋಪವೀತವನ್ನು ನೋಡಿ ತಾವು ಆಡಿದ ಮಾತುಗಳಿಂದ ನನಗೆ ಬಂದಿರುವ ಸಿಟ್ಟನ್ನು ಮನಸ್ಸಿನಲ್ಲಿಯೇ ನುಂಗಿಕೊಂಡು ಸಹನಮಾಡುವೆನು. ದೇವತೆಗಳು, ಬ್ರಾಹ್ಮಣರು, ಸಂತರು, ಆಕಳುಗಳು ಇವುಗಳಮೇಲೆ ಶೌರ್ಯತೋರಿಸುವ ರೀತಿಯು ನಮ್ಮ ವಂಶದಲ್ಲಿರುವದಿಲ್ಲ. ಇವರ ವಧೆ ಮಾಡುವದರಲ್ಲಿ ಪಾತಕವಂತು ಇದ್ದೇ ಇರುವದು; ಆದರೆ ಬರಿಯ ಇವರನ್ನು ಗೆಲ್ಲುವದ ರಿಂದಲೂ ಅಪಕೀರ್ತಿಯು ಇರುವದು! ಇನ್ನು ಮೇಲೆ ತಾವು ನನ್ನನ್ನು ಹೊಡೆದರೂ ನಾನು ತಮ್ಮ ಚರಣಕ್ಕೇ ಎರಗುವೆನು. ತಮ್ಮ ಮಾತೇ ಕೋಟಿವಜ್ರದಂತೆ ಇರುವಾಗ ಈ ಧನುಷ್ಯವನ್ನೂ, ಬಾಣಗಳನ್ನೂ. ಕೊಡಲಿಯನ್ನೂ ತಾವು ವ್ಯರ್ಥವಾಗಿ ಧರಿಸಿರುವಿ ರೆಂದು ನಾನು ತಿಳಿಯುವೆನು. ನಾನು ಏನಾದರೂ ತಮಗೆ ಅಯೋಗ್ಯಮಾತುಗಳನ್ನಾ ಡಿದ್ದರೆ, ಕೇವಲ ತಮ್ಮ ಈ ವೇಷವನ್ನು ನೋಡಿ ಆಡಿದೆನು. ಎಲೈ ಧೀರಮುನೀಶ್ವರನೇ, ನನ್ನನ್ನು ಕ್ಷಮಿಸಬೇಕು.

ಪರಶುರಾಮ [ " ಮುನಿ" ಎಂಬ ಸಂಬೋಧನವನ್ನು ಕೇಳಿದಕೂಡಲೆ ಸಂತಾಪ ಗೊಂಡು ಗಂಭೀರವಾಣಿಯಿಂದ ವಿಶ್ವಾಮಿತ್ರನನ್ನು ಕುರಿತು ]—ಎಲೈ ವಿಶ್ವಾಮಿತ್ರರೇ, ಕೇಳಿರಿ! ಮಂದನೂ, ಕುಟಿಲನೂ ಆದ ಈ ಬಾಲಕನ ಮರಣವು ತುಂಬಿಬಂದಿರುವದು! ಈ ಕುಲಘಾತಕನು ಪೂರ್ಣನಿರಂಕುಶನೂ, ಮೂಢನೂ, ನಿಃಶಂಕನೂ ಇದ್ದು, ರಘು ವಂಶರೂಪಚಂದ್ರನಿಗೆ ಕಲಂಕಪ್ರಾಯವಾಗಿರುವನು. ಒಂದುಕ್ಷಣದಲ್ಲಿ ಇವನು ಮೃತ್ಯು ವಿಗೆ ತುತ್ತಾಗುವನೆಂದು ನಾನು ಸಾರಿಸಾರಿಹೇಳುವೆನು. ಇದರಲ್ಲಿ ನನ್ನಕಡೆಗೆ ತಪ್ಪು ಇಲ್ಲ. ಇವನು ಬದುಕಬೇಕೆಂದು ನೀವು ಇಚ್ಛಿಸುತ್ತಿದ್ದರೆ, ಇವನಿಗೆ ನನ್ನ ಸಾಮರ್ಥ್ಯ ವನ್ನೂ, ಪ್ರತಾಪವನ್ನೂ, ಕ್ರೋಧವನ್ನೂ ನೀವೇತಿಳಿಸಿ ಇವನನ್ನು ಸುಮ್ಮನಿರಿಸಿರಿ.

ಲಕ್ಷ್ಮಣ——ಮುನಿಗಳೇ, ನೀವು ಪ್ರತ್ಯಕ್ಷವಾಗಿರಲು, ನಿಮ್ಮ ಸುಯಶಸ್ಸನ್ನು ಯಥಾಸಾಂಗವಾಗಿ ಯಾರು ವರ್ಣಿಸಿಯಾರು? ನಿಮ್ಮ ಮುಖದಿಂದಲೇ ನಿಮ್ಮ ಸ್ತೋತ್ರ ವನ್ನು ಎಷ್ಟುಸಾರೆ ಉದಂಡವಾಗಿಮಾಡಿಕೊಂಡಿರುವಿರಿ. ಇನ್ನೂ ನಿಮಗೆ ತೃಪ್ತಿಯಾಗಿ ರದಿದ್ದರೆ ಮತ್ತೂ ಸಾಗಿಸಿರಿ; ಸಿಟ್ಟನ್ನು ನುಂಗಿಕೊಳ್ಳುವ ಅಸಹ್ಯವಾದ ವೇದನೆಯನ್ನು ಸಹಿಸುತ್ತ ಕುಳಿತುಕೊಳ್ಳಬೇಡಿರಿ. ತಾವು ಶೌರ್ಯದ ಒಗರನ್ನು ವಹಿಸುತ್ತಿದ್ದು ಅಪಾರಧೈರ್ಯಶಾಲಿಗಳೆನಿಸುವಿರಿ. ಇಂಥವರು ಬರಿಯವಾಗ್ಬಾಣಗಳನ್ನು ಪ್ರಯೋಗಿ ಸುವದು ಸರ್ವಥಾ ಒಪ್ಪುವದಿಲ್ಲ. ಶೂರರು ಸಮರದಲ್ಲಿ ಕೃತಿಯನ್ನು ಮಾಡಿತೋರಿ ಸುವರು. ನೀವು ನಿಮ್ಮ ಪೌರುಷವನ್ನೇ ವರ್ಣಿಸುತ್ತಕುಳಿತುಕೊಂಡಿರುವಿರಲ್ಲ! ರಣಾ ಪಲ್ಲಿ ವೈರಿಯು ಎದುರಿಗಿರುವಾಗ ಅಂಜುಬುರುಕರು ಮಾತ್ರ ಬಡಬಡಿಸುತ್ತಕುಳಿತು ಕೊಳ್ಳುವರು. ನೀವಂತು ಮೃತ್ಯುವನ್ನು ಸಂಗಡ ಅಟ್ಟಿಕೊಂಡೇಬಂದಿರುವಂತೆ ತೋರು ತ್ತದೆ; ಅಂತೇ ಮೇಲಿಂದಮೇಲೆ ನನ್ನ ಸಲುವಾಗಿ ಅದನ್ನು ಕರೆಯುತ್ತಿರುವಿರಿ.

ಲಕ್ಷ್ಮಣನ ಈ ಕಠೋರಭಾಷಣವನ್ನು ಕೇಳಿದಕೂಡಲೆ ಭಾರ್ಗವನು ತನ್ನ ಭಯಂಕರವಾದ ಕೊಡಲಿಯನ್ನು ಎತ್ತಿಹಿಡಿದು—ಇನ್ನು ನನಗೆ ಜನರು ದೋಷವಿಡಲಾರರು. ಕಠೋರಭಾಷಣಗಳನ್ನಾಡುವ ಈ ಬಾಲಕನು ಕೊಲ್ಲಲು ಯೋಗ್ಯನಾಗಿರುವನು. ಹುಡುಗನೆಂದು ಈವರೆಗೆ ನಾನು ಈತನನ್ನು ಬದುಕಿಸುವಯತ್ನಮಾಡಿದೆನು. ಇನ್ನುಮೇಲೆ ಮಾತ್ರ ಈತನು ನಿಶ್ಚಯವಾಗಿ ಮರಣಹೊಂದುವನು, ಆದ್ದರಿಂದ, ವಿಶ್ವಾಮಿತ್ರನು——ಈತನ ಅಪರಾಧವನ್ನು ಕ್ಷಮಿಸಬೇಕು. ಸಜ್ಜನರು ಹುಡುಗರ ಗುಣದೋಷಣಗಳನ್ನು ಲಕ್ಷಿಸುವದಿಲ್ಲವು. ಎಂದು ಹೇಳಿದನು. ಅದಕ್ಕೆ ಪರಶುರಾಮನು——ನನ್ನಂಥ ನಿಷ್ಕರುಣಕ್ರೋಧಿಯು, ಅದರಲ್ಲಿಯೂ ಕೊಡಲಿಯು ಕೈಯೊಳಗಿರುವಾಗ ಈ ಗುರುದ್ರೋಹಿಯಾದ ಬಾಲಕನು ನನ್ನನ್ನು ತಿರಸ್ಕರಿಸಿ ನುಡಿಯುತ್ತಿರಲು, ಇವನನ್ನು ಜೀವದಿಂದ ಬಿಡುವದೆಂದರೆ, ಎಲೈ ವಿಶ್ವಾಮಿತ್ರಮುನಿಗಳೇ, ಕೇವಲ ನಿಮ್ಮ ಸೌಜನ್ಯಕ್ಕಾಗಿಯೇಸರಿ! ಇಲ್ಲದಿದ್ದರೆ ಈ ಕಠೋರಪರಶುವಿನಿಂದ ಇವನನ್ನು ತುಂಡುತುಂಡಾಗಿಕಡಿದು ಅಲ್ಪಪ್ರಯಾಸದಿಂದ ನನ್ನ ಗುರುವಾದ ಶಂಭುವಿನ ಋಣದಿಂದ ಮುಕ್ತನಾಗುತ್ತಿದ್ದೆನು- ಎಂದು ನುಡಿದನು. ಅದನ್ನು ಕೇಳಿ ವಿಶ್ವಾಮಿತ್ರನು ಮನಸ್ಸಿನಲ್ಲಿನಕ್ಕು——ಎಲಎಲಾ! ಪಿನಾಕಧನುಸ್ಸವು ಸಾಮಾನ್ಯವಾದದ್ದಲ್ಲ; ಅದು ಉಕ್ಕಿನದು, ಕಬ್ಬಿನದಲ್ಲ. ಅಂಥ ಧನುಸ್ಸನ್ನು ಮುರಿದರಾಮನು ಯಾರೆಂಬದು ಈ ಮುನಿಗೆ ಇನ್ನೂ ಗೊತ್ತಾಗಲೊಲ್ಲದು, ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಿರಲು, ಲಕ್ಷ್ಮಣನು ಪರಶುರಾಮನನ್ನು ಕುರಿತು——ಮುನಿಗಳೇ, ನಿಮ್ಮ ಶೀಲವು ಯಾರಿಗೆ ಗೊತ್ತಿಲ್ಲ? ಅದೆಲ್ಲ ಜಗತ್ತಿಗೇ ಗೊತ್ತಿರುವದು. ತಾಯಿತಂದೆಗಳ ಋಣದಿಂದ ತಾವು ಚೆನ್ನಾಗಿ ಮುಕ್ತರಾಗಿರುವಿರಿ. ಇನ್ನು ಗುರುವಿನ ಋಣದಿಂದ ಮುಕ್ತರಾಗುವದು ಉಳಿದದೆ.

ಲಕ್ಷ್ಮಣನು ಪುನಃ ಕಠೋರವಚನಗಳಾಡಿದ್ದನ್ನುಕೇಳಿ ಪರಶುರಾಮನು ಪುನಃ ಕೊಡಲಿಯನ್ನು ಎತ್ತಿದನು. ಯಾವತ್ತು ಸಭೆಯಲ್ಲಿ ಹಾಹಾಃಕಾರವುಂಟಾಯಿತು. ಆಗ ಲಕ್ಷ್ಮಣನು——ಮುನಿಶ್ರೇಷ್ಠರೇ, ನನಗೆ ನಿಮ್ಮ ಕೊಡಲಿಯನ್ನಾದರೂ ತೋರಿಸಿರಿ. ನೀವು ನೃಪದ್ರೋಹಿಗಳಾಗಿದ್ದರೂ ಬ್ರಾಹ್ಮಣರೆಂದು ತಿಳಿದು ನಾನು ನಿಮ್ಮನ್ನು ಕ್ಷಮಿಸುತ್ತಬಿಟ್ಟಿರುವೆನು. ನಿಮಗೆ ರಣದಲ್ಲಿ ಗಟ್ಟಿಗನಾದ ವೀರನು ಯಾವನೂ ಗಂಟಬಿದ್ದಿಲ್ಲವೆಂಬಂತೆ ತೋರುತ್ತದ. ಬ್ರಾಹ್ಮಣರ ಹಾಗು ದೇವತೆಗಳ ಶೌರ್ಯವು ಮನೆಯಲ್ಲಿ ಮಾತ್ರ ಇರುತ್ತದೆ, ಅನ್ನಲು, ಈಮಾತು ಅಯೋಗ್ಯವಾದದ್ದೆಂದು ಎಲ್ಲರೂ ಕೂಗಿದರು. ರಾಮನು ಲಕ್ಷ್ಮಣನನ್ನು ಸನ್ನೆಮಾಡಿ ಸುಮ್ಮನಿರಿಸಿದನು. ಲಕ್ಷ್ಮಣನ ಪ್ರತ್ಯುತ್ತರದಿಂದ ಭಾರ್ಗವನ ಕ್ರೋಧವು ಅಭಿವೃದ್ಧವಾದದ್ದನ್ನು ನೋಡಿ ಶ್ರೀರಾಮನು—ನಾಥನೇ, ಬಾಲಕನ ಮೇಲೆ ಕೃಪೆಮಾಡಬೇಕು. ಇನ್ನೂ ಆತನ ಹಾಲುಹಲ್ಲುಕೂಡಬಿದ್ದಿರುವದಿಲ್ಲ. ಆತನ ಮೇಲೆ ಸಿಟ್ಟಾಗಬಾರದು. ಪ್ರಭುಗಳ ಪ್ರಭಾವವು ಆತನಿಗೆ ಗೊತ್ತಿದ್ದದ್ದಾಗಿದ್ದರೆ ಹೀಗೆ

ಯಿಂದಾದರೂ ಆತನು ಸಂಗಟ್ಟಿ ಮಾತಾಡುತ್ತಿದ್ದನೇ? ಆತನು ಅಜ್ಞಾನಿಯಿರುವನು. ಬಾಲಕನು ಒಂದು ಪಕ್ಷದಲ್ಲಿ ಏನಾದರೂ ಅನುಚಿತವಮಾಡಿದರೂ ಗುರುಗಳ ಹಾಗು ತಾಯಿ ತಂದೆಗಳ ಮನಸ್ಸು ಹರ್ಷಿತವಾಗುವದು. ಧೀರರೂ, ಜ್ಞಾನಿಗಳೂ ಆದ ಮುನಿಗಳು ಆತನನ್ನು ತಮ್ಮ ಮಗನೆಂತಲೂ, ಸೇವಕನೆಂತಲೂ ತಿಳಿದು ಅವನ ಮೇಲೆ ಅಂತಃಕರಣ ಮಾಡಲೇಬೇಕು, ಅನ್ನಲು, ಅತ್ತ ಲಕ್ಷ್ಮಣನು ನಗುತ್ತ—ಎಲೈ ಮುನಿಶ್ರೇಷ್ಠರೇ, ಕೇಳಿರಿ; ಕ್ರೋಧವು ಪಾಪದಮೂಲವಾಗಿರುವದು, ಅದರ ಎಳತಕ್ಕೆ ಸಿಕ್ಕಮನುಷ್ಯನು ಅನುಚಿತವಾದ ಕಾರ್ಯವನ್ನು ಮಾಡತೊಡಗಿ ಜಗತ್ತಿಗೆ ವಿರುದ್ಧವಾಗಿ ನಡೆಯತೊಡಗುವನು. ಎಲೈ ಮುನಿರಾಯನೇ, ನಾನು ತಮ್ಮ ದಾಸನಿರುವೆನು. ಸಿಟ್ಟನ್ನು ನುಂಗಿ ನನ್ನ ಮೇಲೆ ದಯಮಾಡಬೇಕು. ಮುರಿದ ಧನುಸ್ಸಿನ ತುಂಡುಗಳು ಸಿಟ್ಟಿಗೆದ್ದ ಮಾತ್ರದಿಂದ ಎಂದೂ ಕೂಡಿಕೊಳ್ಳುವದಿಲ್ಲ. ತಾವು ಕುಳಿತುಕೊಂಡಾದರೂ ಕುಳಿತುಕೊಳ್ಳಬೇಕು. ನಿಂತುನಿಂತು ಕಾಲಲ್ಲಿ ಗುಳ್ಳೆಗಳು ಬಂದಾವು. ಈ ಧನುಸ್ಸು ತಮಗೆ ಅತ್ಯಂತ ಪ್ರಿಯವಾದದ್ದಿದ್ದರೆ, ಒಬ್ಬ ಒಳ್ಳೇ ಕುಶಲ ಕಮ್ಮಾರನನ್ನು ಕರತಂದು ನೆಟ್ಟಗೆ ಮಾಡಿಸಿಯೂ ಕೊಡಬಹುದು.

ಲಕ್ಷ್ಮಣನು ಹೀಗೆ ಮಾತಾಡುತ್ತಿರುವಾಗ ಜನಕನು ಭಯಭೀತನಾದನು. ಆತನು "ಇನ್ನು ಸಾಕುಮಾಡಿರಿ; ಹೀಗೆ ಯದ್ವಾತದ್ವಾ ಮಾತಾಡುವದು ನೆಟ್ಟಗಲ್ಲ" ಎಂದು ನಿಷೇಧಿಸಿದನು. ನಗರವಾಸಿಗಳಾದ ಸ್ತ್ರೀಪುರುಷರು ಥರಥರ ನಡುಗತೊಡಗಿ—ಈತನು ತೀರಾ ಚಿಕ್ಕವನು; ಆದರೆ ಈತನ ಎಟ್ಟಿತನಕ್ಕೆ ಎಣೆಯಿಲ್ಲ, ಎಂದು ನುಡಿಯಹತ್ತಿದರು. ಲಕ್ಷ್ಮಣನ ಈ ನಿರ್ಭಯವಾಣಿಯನ್ನು ಪುನಃ ಪುನಃ ಕೇಳಿ ಭಾರ್ಗವನ ದೇಹವು ಕ್ರೋಧದಿಂದ ದಹಿಸಹತ್ತಿ, ಅದರಿಂದ ಆತನ ಶಕ್ತಿಯು ಕ್ಷೀಣವಾಗತೊಡಗಿತು. ಆತನು ರಾಮನ ಕಡೆಗೆ ತಿರುಗಿ—ಇವನು ನಿನ್ನ ತಮ್ಮನಿರುವದರಿಂದಲೇ ನಾನು ಸೈರಿಸಿದ್ದೇನೆ. ಬಂಗಾರದ ಕೊಡದಲ್ಲಿ ವಿಷವಿರುವಂತೆ, ಈತನು ಒಳಗೆ ಕಪ್ಪು ಹೊರಗೆ ಕೆಂಪು ಇರುವನು ಅನ್ನಲು, ಅದನ್ನು ಕೇಳಿ ಲಕ್ಷ್ಮಣನು ಪುನಃ ನಕ್ಕನು. ಆಗ ರಾಮನು ಕಣ್ಣು ಕೆಕ್ಕರಿಸಿ ಲಕ್ಷ್ಮಣನನ್ನು ನೋಡಲು, ಆತನು ಸಂಕೋಚಪಟ್ಟು ಗುರುಗಳಾದ ವಿಶ್ವಾಮಿತ್ರರಬಳಿಗೆ ಹೋಗಿ ಕುಳಿತುಕೊಂಡನು. ಆಗ ರಾಮನು ಎರಡೂ ಕೈಗಳನ್ನು ಜೋಡಿಸಿ ವಿನಮ್ರವಾದ ವಾಣಿಯಿಂದ—ನಾಥ, ಕೇಳಬೇಕು. ತಾವು ಸ್ವಭಾವತಃ ಸುಜ್ಞರಿರುವಿರಿ; ಆದ್ದರಿಂದ ಹುಡುಗನ ಮಾತನ್ನು ಮನಸ್ಸಿನಲ್ಲಿ ಹಿಡಿಯಬಾರದು. ವಿಷವುಳ್ಳ ಪ್ರಾಣಿಗಳ ಹಾಗು ಹುಡುಗರ ಸ್ವಭಾವವು ಒಂದೇ ವಿಧವಾಗಿರುವದು. ಸಜ್ಜನರು ಎಂದೂ ಅವರನ್ನು ದೂಷಿಸುವದಿಲ್ಲವು. ಈತನಿಂದ ಯಾವ ಕೆಲಸವೂ ಕೆಟ್ಟಿರುವದಿಲ್ಲ. ಮಹಾರಾಜ, ತಮ್ಮ ಅಪರಾಧಿಯು ನಾನು! ಸ್ವಾಮಿಗಳು ನನ್ನನ್ನು ಸೇವಕನೆಂದು ತಿಳಿದು ಕೃಪಾ ಕೋಪ ವಧ ಬಂಧ ಇವುಗಳಲ್ಲಿ ಮಾಡಬೇಕಾದದ್ದನ್ನು ನನಗೆ ಮಾಡಬೇಕು. ಮುನಿ

ನಾಯಕಾ, ತಮ್ಮ ಸಿಟ್ಟು ಯಾತರಿಂದ ಶಾಂತವಾಗುವದೆಂಬದನ್ನು ಹೀಗನೆ ಹೇಳಿದರೆ ನಾನು ಕೂಡಲೆ ಅದರಂತೆ ಮಾಡುವೆನು.

ರಾಮನ ಈ ಮಾತುಗಳನ್ನು ಕೇಳಿ ಪರಶುರಾಮನು—ರಾಮಾ, ನನ್ನ ಸಿಟ್ಟು ಹೇಗೆ ಶಾಂತವಾದೀತು ನೀನೇ ನೋಡು. ಈ ನಿನ್ನ ತಮ್ಮನು ಇನ್ನೂ ನನ್ನ ಕಡೆಗೆ ಕೆಟ್ಟ ಕಣ್ಣಿನಿಂದ ನೋಡುತ್ತಲೇ ಇರುವನು. ಇಂಥವನ ಕುತ್ತಿಗೆಯ ಮೇಲೆ ನನ್ನ ಕುಠಾರವು ಬೀಳದಿದ್ದರೆ ನಾನು ಸಿಟ್ಟಾಗಿಯಾದರೂ ಏನು ಪ್ರಯೋಜನವು? ನನ್ನ ಈ ಭಯಂಕರವಾದ ಕೊಡಲಿಯ ಗತಿಯನ್ನು ಕೇಳಿದಕೂಡಲೆ ರಾಜಸ್ತ್ರೀಯರ ಗರ್ಭಗಳು ಪತನ ಹೊಂದುವವು. ಅಂಥ ಆ ನನ್ನ ಪರಶುವು ಈಗ ನನ್ನ ಕೈಯಲ್ಲಿರುತ್ತಿರಲು, ಯಶಿಕ ಸ್ತ್ರಿತನಾದ ಈ ರಾಜಕಿಶೋರನು ಜೀವದಿಂದಿರುವದನ್ನು ನಾನು ನೋಡುತ್ತಿರುವೆನು. ನನ್ನ ಹೃದಯವು ಕ್ರೋಧದಿಂದ ಸುಡುತ್ತಿದ್ದರೂ ಈ ಹುಡುಗನ ಮೇಲೆ ನನ್ನ ಕೈಗಳೇ ಏಳ ಲೊಲ್ಲವು. ಎಲೈ ನೃಪಹಿಂಸಕಾ, ಕುಠಾರಾ, ನೀನೂ ಕುಂಠಿತನಾದೆಯಾ? ಎಲೈ ದೈವವೇ, ನೀನಾದರೂ ಹೇಗೆ ವಿಪರೀತವಾದೆ? ಛೀ ಛೀ! ನನ್ನ ಸ್ವಭಾವವೇ ಬದಲಾ ಯಿತು! ನನ್ನ ಹೃದಯದಲ್ಲಿ ದಯೆಯು! ಇದು ಹೇಗೆ ಏನಾಯಿತು! ಎಲೈ ವಿಧಿಯೇ, ಇಂದು ನೀನು ನನಗೆ ದಾರುಣವಾದ ದುಃಖವನ್ನು ಸಹನಮಾಡಿಸತೊಡಗಿರುವೆ! ಅನ್ನಲು, ಅದನ್ನು ಕೇಳಿ ಲಕ್ಷ್ಮಣನು ನಕ್ಕು ನಮಸ್ಕಾರಮಾಡಿ——ಈ ವರದ ಮೂರ್ತಿ ಯು ಮಾತಾಡುವಾಗ ಹೊರಡುವ ಉದ್ಗಾರಗಳು, ಕೃಪಾರೂಪ ವಾಯುವಿನಿಂದ ಉದು ರುವ ಹೂಗಳಂತೆ ತೋರುತ್ತವೆ! ಎಲೈ ಮುನೀಶ್ವರರೇ, ದಯೆಯಿಂದ ನಿಮ್ಮ ಗಾತ್ರ ಗಳು ಸುಡುತ್ತಿದ್ದರೆ, ತಾವು ಸಿಟ್ಟಿಗೆದ್ದಾಗ ತಮ್ಮ ದೇಹದ ರಕ್ಷಣವನ್ನು ಪರಮೇಶ್ವರನೇ ಮಾಡಬೇಕಾದಿತು! ಎಂದು ವಕ್ರೋಕ್ತಿಯನ್ನಾಡಿದನು. ಅದನ್ನು ಕೇಳಿ ಪರಶುರಾ ಮನು ಜನಕನಕಡೆಗೆ ನೋಡಿ—ಜನಕಾ, ಈ ಕೆಲಸಕ್ಕೆ ಬಾರದ ಪೋರನು ಹಟದಿಂದ ಯಮಪುರಿಯನ್ನು ತನ್ನ ಮನೆ ಮಾಡಿಕೊಳ್ಳುತ್ತಿರುವದನ್ನು ನೋಡಿದೆಯಾ? ಇವನನ್ನು ತಟ್ಟನೆ ನನ್ನ ಕಣ್ಣುಮರೆ ಯಾಕೆ ಮಾಡಲೊಲ್ಲೆ! ಅನ್ನುತ್ತಿರಲು, ಲಕ್ಷ್ಮಣನು ತಟ್ಟನೆ—"ನೀವೇ ಕಣ್ಣು ಮುಚ್ಚಿರಿ, ಅಂದರೆ ಯಾರೂ ಎಲ್ಲಿಯೂ ಕಾಣಲಿಕ್ಕಿಲ್ಲ." ಎಂದು ನುಡಿದನು.

ಇದನ್ನು ಕೇಳಿ ಪರಶುರಾಮನು ಕ್ರೋಧದಿಂದ ಉರಿಯುತ್ತ ರಾಮನ ಕಡೆಗೆ ನೋಡಿ—ಶಠಾ, ಶಂಭುಚಾಪವನ್ನು ಮುರಿದ ಮೇಲೆ ನನಗೆ ಜ್ಞಾನೋಪದೇಶಮಾಡು ವೆಯಾ? ನಿನ್ನ ಪುಸಲತ್ತಿನಿಂದಲೇ ಈ ನಿನ್ನ ಬಂಧುವು ನನಗೆ ಕುಚೇಷ್ಟೆ ಮಾಡುತ್ತಿರು ವನು. ನೀನಾದರೂ ಕೈಜೋಡಿಸಿಕೊಂಡು ವಿನಂತಿ ಮಾಡಿಕೊಳ್ಳುತ್ತ ನನ್ನ ಉಪಹಾಸ ವನ್ನೇ ಮಾಡುತ್ತೀವೆ. ಇನ್ನು ನೀನು ಯುದ್ಧದಿಂದಲೇ ನನ್ನನ್ನು ಶಾಂತಗೊಳಿಸ ತಕ್ಕದ್ದು. ಇಲ್ಲದಿದ್ದರೆ "ರಾಮ" ಎಂಬ ನಿನ್ನ ಹೆಸರನ್ನೇ ಬಿಟ್ಟುಬಿಡು. ಎಲೈ ಶಿವ

ದ್ವೇಷಿಯೋ, ಈ ಎಲ್ಲ ಹುಡುಗಾಟಿಗೆ ಬಿಟ್ಟು ಯುದ್ಧಕ್ಕೆ ಸಿದ್ಧನಾಗು. ಇಲ್ಲದಿದ್ದರೆ ಬಂಧುವಿನಿಂದ ಸಹಿತವಾಗಿ ನಿನ್ನ ಪ್ರಾಣಹರಣ ಮಾಡುವೆನು, ಎಂದು ಪರಶುರಾಮನು ಕೊಡಲಿಯನ್ನೆತ್ತಿ ಮಾತಾಡುತ್ತಲಿದ್ದನು; ಆದರೆ ರಾಮನು ಮನಸ್ಸಿನಲ್ಲಿ ನಗುತ್ತ ಆತನಿಗೆ ನಮಸ್ಕಾರ ಮಾಡುತ್ತಲಿದ್ದನು. ಆತನು ಪರಶುರಾಮನನ್ನು ಕುರಿತು—ಮುನೀಂದ್ರರೇ, ತಾವು ಸಿಟ್ಟನ್ನು ಬಿಡಬೇಕು. ತಮ್ಮ ಕೈಯಲ್ಲಿ ಕೊಡಲಿಯಿರುವದು. ನನ್ನ ಶಿರಸ್ಸೂ ತಮ್ಮ ಮುಂದೆ ಇರುವದು. ಮಹಾರಾಜ, ತಮ್ಮ ಸಿಟ್ಟು ಯಾತರಿಂದ ಶಾಂತವಾಗುವದೋ ಅದರಂತೆ ಅವಶ್ಯವಾಗಿ ಮಾಡಬೇಕು. ನಾನು ತಮ್ಮ ಇಚ್ಛೆಯಂತೆ ನಡೆದುಕೊಳ್ಳುವವನೆಂಬದನ್ನು ದೃಢವಾಗಿ ನಂಬಿರಿ. ಬ್ರಾಹ್ಮಣರು ಸೇವ್ಯರಿದ್ದು, ಕ್ಷತ್ರಿಯರು ಸೇವಕರಿರುವರು; ಅಂದಬಳಿಕ ಪ್ರಭು—ಸೇವಕರಲ್ಲಿ ಯುದ್ಧವು ಹೇಗಾಗಬೇಕು? ವಿಪ್ರಶ್ರೇಷ್ಠರೇ, ತಾವು ಸಿಟ್ಟನ್ನು ಸಂಪೂರ್ಣವಾಗಿ ಬಿಡಬೇಕು. ತಮ್ಮ ವೇಷವನ್ನು ನೋಡಿ ಲಕ್ಷ್ಮಣನು ಮಾತಾಡಿದ್ದರಲ್ಲಿ ಏನೂ ದೋಷವಿರುವದಿಲ್ಲ. ತಾವು ಕೊಡಲಿ, ಬಿಲ್ಲು, ಬಾಣ ಇವುಗಳ ಧರಿಸಿದ್ದನ್ನು ನೋಡಿ ಆ ಹುಡುಗನಿಗೂ ಈರ್ಷೆಯು ಉತ್ಪನ್ನವಾಯಿತು. ಅವನಿಗೆ ತಮ್ಮ ಹೆಸರು ಮಾತ್ರ ಗೊತ್ತು; ಪ್ರತ್ಯಕ್ಷ ತಮ್ಮ ಗುರುತು ಆತನಿಗೆ ಇಲ್ಲವೇ ಇಲ್ಲವು; ಆದ್ದರಿಂದ ಆತನು ತನ್ನ ವಂಶಪರಂಪರೆಯ ಪದ್ಧತಿಯಂತೆ ನಿಮಗೆ ಉತ್ತರ ಕೊಟ್ಟನು. ಹಾಗಲ್ಲದೆ ತಾವು ಮುನಿವೇಷದಿಂದಲೇ ಇದ್ದದ್ದಾಗಿದ್ದರೆ ಆ ಹುಡುಗನು ಕೂಡ ತಮ್ಮ ಚರಣ ಧೂಲಿಯನ್ನು ಮಸ್ತಕದಲ್ಲಿ ಧರಿಸುತ್ತಿದ್ದನು. ಅಜ್ಞಾನದಿಂದಾದ ತಪ್ಪನ್ನು ಕ್ಷಮಿಸಬೇಕು. ಬ್ರಾಹ್ಮಣರ ಹೃದಯದಲ್ಲಿ ದಯೆಯು ವಿಪುಲವಾಗಿ ಇರಬೇಕಾಗುವದು. ಎಲೈ ನಾಥನೇ, ನಿಮಗೆ ನಾವು ಹೇಗೆ ಸರಿಯಾಗುವೆವು ನೀವೇ ಹೇಳಿರಿ! ಎಲ್ಲಿ ಮಸ್ತಕವು, ಎಲ್ಲಿ ಚರಣಗಳು! ನನ್ನ ಹೆಸರು ಬರಿಯ "ರಾಮ" ಎಂದು ಇರುವದು; ಆದರೆ ತಮ್ಮ ಹೆಸರು "ಪರಶುರಾಮ" ಎಂದು ಬಹು ಉದ್ದವಾಗಿರುವದು. ಅಂದಬಳಿಕ ನನ್ನ ಸಣ್ಣ ಹೆಸರಿನ ಬೇಸರವು ತಮಗೆ ಬಂದಿದ್ದರೆ, ತಮ್ಮ ದೊಡ್ಡ ಹೆಸರಿನ ಬೇಸರವು ತಮಗೆ ಬಹಳವಾಗಿರಬಹುದು. ಮಹಾರಾಜ, ನಮ್ಮಲ್ಲಿ ಗುಣವೆಂದರೆ ಧನುಷ್ಯವೆಂಬದೊಂದೇ ಇರುವದು; ಆದರೆ ತಮ್ಮಲ್ಲಿ ಶಮ, ದಮ, ತಪ, ಶಾಂತಿ, ಆರ್ಜವ, ಜ್ಞಾನ, ವಿಜ್ಞಾನ, ಆಸ್ತಿಕ್ಯ ಎಂಬ ಒಂಬತ್ತು ಗುಣಗಳಿರುವವು.

ರಾಮನು ತನಗೆ ಮೇಲಿಂದಮೇಲೆ "ಮುನಿ" "ವಿಪ್ರವರ" ಎಂದು ಕರೆಯುತ್ತಿರುವದು ಪರಶುರಾಮನಿಗೆ ಸಹನವಾಗದೆ ಆತನು ಸಿಟ್ಟಿನಿಂದ ರಾಮನಿಗೆ—ನೀನೂ ನಿನ್ನ ಬಂಧುವಿನಂತೆ ಕುಟಿಲನಾಗಿಯೇ ಇರುವೆ. ನನ್ನನ್ನು ನೀನು ಶುದ್ಧ ಬ್ರಾಹ್ಮಣನೆಂದು ತಿಳಿದಿರುವೆಯಲ್ಲವೆ? ನಾನು ಬ್ರಾಹ್ಮಣನು ಹೇಗೆಂಬದನ್ನು ನಿನಗೆ ಹೇಳುವೆನು. ಕೇಳು. ನನ್ನ ಧನುಷ್ಯವೇ "ಸ್ರುವಾ" ಎಂಬ ಯಜ್ಞಪಾತ್ರವು; ಶರಗಳು ಆಹುತಿಗಳು; ನನ್ನ ಸಿಟ್ಟು ಅತಿ ಪ್ರಬಲವಾದ ಅಗ್ನಿಯು; ಉತ್ತಮ ಚತುರಂಗದಳವು ಸಮಿಧಗಳು. ಯಜ್ಞ

ವಶವಾಗಿ ಬಂದಂಥ ದೊಡ್ಡ ದೊಡ್ಡ ರಾಜರನ್ನು ನಾನು ಇದೇ ಕೊಡಲಿಯಿಂದ ತುಂಡರಿಸಿ ಬಲಿಕೊಟ್ಟಿರುವೆನು. ಇಂಥ ಕೋಟ್ಯವಧಿ ರಣಯಜ್ಞಗಳನ್ನು ನಾನು ಜಗತ್ತಿನಲ್ಲಿ ಮಾಡಿರುವೆನು. ನನ್ನ ಪ್ರಭಾವವು ನಿನಗೆ ಗೊತ್ತಿಲ್ಲದ್ದರಿಂದ ಅನಾದರದಿಂದ "ವಿಪ್ರ" ಮೊದಲಾದ ಹೆಸರುಗಳಿಂದ ನನ್ನನ್ನು ಕರೆಯುತ್ತೀ. ಧನುರ್ಭಂಗ ಮಾಡಿದ್ದರಿಂದ ನೀನು ಮಹಾ ಗರ್ವಿಷ್ಠನಾಗಿರುತ್ತೀ. ಜಗತ್ತನ್ನು ಗೆದ್ದು ಗರ್ಜಿಸುವಂಥವನು ನೀನೊಬ್ಬನೇ ಎಂಬಹಾಗೆ ನಿನಗೆ ತೋರುತ್ತದೆ

ಪರಶುರಾಮನ ಈ ಮಾತುಗಳನ್ನು ಕೇಳಿ ರಾಮನು—ಮುನಿಗಳೇ, ವಿಚಾರಪೂರ್ವಕವಾಗಿಯಾದರೂ ಮಾತಾಡಿರಿ ನಮ್ಮ ತಪ್ಪು ಕ್ಷುದ್ರವಾಗಿದ್ದು, ತಮ್ಮ ಸಿಟ್ಟು ಮಾತ್ರ ತಡೆಯಬಾರದ್ದಾಗಿರುವದು. ಆ ಜೀರ್ಣ ಧನುಷ್ಯವಂತು ನಾನು ಮುಟ್ಟಿದ ಕೂಡಲೆ ತುಂಡಾಯಿತು; ಇಂಥಬಳಿಕ ನಾನು ಗರ್ವಪಡಲು ಕಾರಣವೇನಿರಬೇಕು? ಎಲೈ ಭೃಗುನಾಥನೇ, ನಾವು "ವಿಪ್ರ" ಮೊದಲಾದ ಉಕ್ತಿಗಳಿಂದ ನಿಮ್ಮ ಉಪಹಾಸವನ್ನೇ ಮಾಡುವೆವೆಂದು ನಿಮಗೆ ತೋರುತ್ತಿದ್ದರೆ, ನಾವು ಅಂಜಿಹೋಗಿ ತಲೆಬಾಗಿಸುವಂಥ ಮಹಾವೀರನು ಜಗತ್ತಿನಲ್ಲಿ ಯಾವನಿರುವನೆಂಬವನ್ನಾದರೂ ಹೇಳಬೇಕು! ದೇವತೆಗಳು, ದೈತ್ಯರು ಮೊದಲಾದ ವೀರರು ನಮಗೆ ಸರಿಯಾದವರಿರಲಿ, ನಮಗಿಂತ ಹೆಚ್ಚಿನವರೇ ಇರಲಿ; ಆದರೆ ಅವರಲ್ಲಿ ಯಾರಾದರೂ ನಮ್ಮನ್ನು ಯುದ್ಧಕ್ಕೆ ಕರೆದರೆ, ಅವರು ಪ್ರತ್ಯಕ್ಷ ಯಮನಿದ್ದರೂ ಸಂತೋಷದಿಂದ ನಾವು ಅವನೊಡನೆ ಯುದ್ಧಮಾಡುವೆವು. ಕ್ಷಾತ್ರದೇಹವನ್ನು ಧರಿಸಿ ಯುದ್ಧಕ್ಕೆ ಅಂಜುವದು ಕ್ಷಾತ್ರಕುಲಕ್ಕೆ ಕಲಂಕವಾಗುವದು. ಇಂಥವನನ್ನು ನೀಚ ಆತ್ಮಘಾತಕಿಯೆಂದು ತಿಳಿಯಬೇಕು. ನಾನು ಸ್ವಕುಲದ ಪ್ರಶಂಸೆಯನ್ನು ಮಾಡದೆ ಕುಲದ ಸ್ವಾಭಾವಿಕಧರ್ಮವ ಹೇಳುವೆನೇನಂದರೆ—ಒಂದು ವೇಳೆ ರಣದಲ್ಲಿ ಕಾಲನು ಹಿಂದಿರುಗಬಹುದು; ಆದರೆ ರಘುವಂಶೀಯರು ಹಿಂದಿರುಗಲಾರರು.

ರಘುವರೀಯ ಈ ಮೃದುವೂ, ಗೂಢವೂ ಆದ ಮಾತುಗಳನ್ನು ಕೇಳಿ ಪರಶುರಾಮನ ಬುದ್ಧಿಯ ಮೇಲಿನ ಪಟಲವು ದೂರವಾಯಿತು. ಆತನು ರಾಮನನ್ನು ಕುರಿತು—ರಾಮಾ, ಈ ರಮಾಪತಿಯ ಧನುಸ್ಸನ್ನು ತಕ್ಕೊಂಡು ಜಗ್ಗು, ಅಂದರೆ ನನ್ನ ಮನಸ್ಸಿನ ಸಂಶಯವು ದೂರವಾಗುವದು, ಎಂದು ಹೇಳಿ ತನ್ನ ಕೈಯೊಳಗಿನ ಹರಿಯ ಧನುಷ್ಯನ್ನು ಕೊಡಲು, ಶ್ರೀರಾಮನು ಹಿಡಿದಕೂಡಲೆ ಆ ಧನುಸ್ಸು ತನ್ನಿಂದತಾನೇ ಸಜ್ಜಾಯಿತು. ಅದನ್ನು ನೋಡಿ ಪರಶುರಾಮನು ಆಶ್ಚರ್ಯಪಟ್ಟನು. ಆಗ ಆತನಿಗೆ ರಾಮಚಂದ್ರನ ಪ್ರಭಾವವು ಗೊತ್ತಾಯಿತು. ಆತನ ದೇಹವು ರೋಮಾಂಚಗಳಿಂದ ಪ್ರಫುಲ್ಲಿತವಾಗಿ, ಆತನ ಪ್ರೇಮವು ಹೃದಯದಲ್ಲಿ ಹಿಡಿಸದಾಯಿತು. ಆಮೇಲೆ ಆ ಭಾರ್ಗವನು ಕೈಜೋಡಿಸಿ ಶ್ರೀ ರಾಮನನ್ನು ಕುರಿತು—"ಹೇ ರಘುವಂಶ ಕಮಲವನಭಾನೋ! ಹೇ ದುಷ್ಟ ದೈತ್ಯದಹನ-ಕೃಶಾನೋ, ಹೇ ಸುರವಿಪ್ರಧೇನು ಹಿತಕಾರೀ! ಹೇ ಮದ

ಮೋಹ ಕ್ರೋಧ ಭ್ರಮಹರಣಾ! ನಿನಗೆ ವಿಜಯವಿರಲಿ. ಎಲೈ ವಿನಯಶೀಲಕರುಣಾಗುಣಸಾಗರಾ! ಹೇ ವಾಗ್ವಿಲಾಸಾತಿಕುಶಲಾ! ಹೇ ಸೇವಕ ಸುಖದಾ! ಹೇ ಸರ್ವಾಂಗಮನೋಹರಾ! ಹೇ ಕೋಟ್ಯನಂಗಸುಂದರಾ! ನಿನಗೆ ಜಯಜಯಕಾರವಿರಲಿ! ನಾನು ಒಂದು ಮುಖದಿಂದ ನಿನ್ನನ್ನೇನು ಸ್ತುತಿಸಲಿ? ಹೇ ಮಹೇಶಮಾನಸಹಂಸಾ! ನೀನು ಜಯಶೀಲನಾಗು. ಅಜ್ಞಾನದಿಂದ ನಾನಾಡಿದ ಅನುಚಿತಮಾತುಗಳಿಗಾಗಿ ಎಲೈ ಕ್ಷಮಾಸಾಗರರಾದ ಬಂಧುಗಳೇ, ನನ್ನನ್ನು ಕ್ಷಮಿಸಿರಿ," ಎಂದು ರಘುಕುಲಮಣಿಯನ್ನು ಸ್ತುತಿಸಿ ಪರಶುರಾಮನು ತಪಶ್ಚರ್ಯಕ್ಕಾಗಿ ವನಕ್ಕೆ ಹೊರಟುಹೋದನು. ಆಗ ನಿರ್ಭಯರಾಗಿದ್ದ ಕುಟಿಲರಾಜರು ಬೆದರಿಬಿದ್ದರು; ಅಂಜುಬುರುಕರು ಅತ್ತಿತ್ತ ಓಡಿಹೋದರು. ದೇವತೆಗಳು ದುಂದುಭಿಯನ್ನು ಬಾರಿಸಿ ಪ್ರಭುವಿನಮೇಲೆ ಪುಷ್ಪವೃಷ್ಟಿಗರೆದರು. ನಗರವಾಸಿಗಳಾದ ಸ್ತ್ರೀಪುರುಷರು ಆನಂದಭರಿತರಾಗಲು, ಅವರ ಮೋಹವೂ ದುಃಖದ ನಿವಾರಣವಾಯಿತು. ಜನ್ಮದರಿದ್ರನಿಗೆ ಗುಪ್ತನಿಧಿಯು ದೊರೆತಂತೆ ಜನಕನಿಗೆ ಸಂತೋಷವಾಯಿತು. ಚಂದ್ರದರ್ಶನದಿಂದ ಚಕ್ರವಾಕಿಯು ಹರ್ಷಿತವಾಗುವಂತೆ ಸೀತೆಯು ಶೋಕರಹಿತಳಾಗಿ ಸುಖಿಯಾದಳು.

ವಿವಾಹಸಮಾರಂಭ:--ಹೀಗೆ ನೋಡಿದತ್ತೆಲ್ಲ ಆನಂದಲಹರಿಗಳೇಳುತ್ತಿರಲು, ಜನಕರಾಜನು ವಿಶ್ವಾಮಿತ್ರನನ್ನು ನಮಸ್ಕರಿಸಿ—"ಪ್ರಭುಗಳ ಪ್ರಸಾದದಿಂದ ರಾಮನು ಧನುರ್ಭಂಗಮಾಡಿದನು. ಉಭಯಬಂಧುಗಳು ನನ್ನನ್ನು ಕೃತಾರ್ಥನನ್ನಾಗಿ ಮಾಡಿದರು. ಇನ್ನು ನಾನು ಏನು ಮಾಡಬೇಕೆಂಬದನ್ನು ಸ್ವಾಮಿಗಳು ಆಜ್ಞಾಪಿಸಬೇಕು" ಎಂದು ಕೇಳಿಕೊಳ್ಳಲು, ವಿಶ್ವಾಮಿತ್ರನು—ರಾಜಾ, ನೀನು ಚತುರನಿರುವೆ. ವಿವಾಹವು ಧನುರ್ಭಂಗವನ್ನವಲಂಬಿಸಿ ಇದ್ದದ್ದರಿಂದ, ಧನುರ್ಭಂಗವಾದಾಗಲೇ ವಿವಾಹವಾದಂತಾಗಿರುವದು. ಅದಕ್ಕೆ ಸುರ-ನರ-ನಾಗ ಮೊದಲಾದವರೆಲ್ಲರೂ ಸಾಕ್ಷಿಯಾಗಿರುವರು; ಆದರೂ ಈಗ ಹೋಗಿ ವಿಪ್ರರು, ಕುಲವೃದ್ಧರು, ಗುರುಗಳು ಇವರ ಸಮ್ಮತಿಯಿಂದ ವೈದಿಕಪದ್ಧತಿಯಂತೆ ನಿನ್ನ ಕುಲಕ್ಕೆ ಉಚಿತವಾದ ಯಾವತ್ತು ವ್ಯವಹಾರಗಳನ್ನು ಮಾಡು. ಹೋಗು, ಅಯೋಧ್ಯೆಗೆ ದೂತರನ್ನು ಕಳಿಸಿ ದಶರಥರಾಜನನ್ನು ಕರೆಸು,, ಎಂದು ಹೇಳಿದನು. ಆಗ ಜನಕನು-"ಹಾಗೇ ಆಗಲಿ ಮಹಾರಾಜ,, ಎಂದು ಹೇಳಿ ಕೂಡಲೆ ಅಯೋಧ್ಯೆಗೆ ದೂತರನ್ನು ಕಳುಹಿದನು. ಆಮೇಲೆ ರಾಜರು, ಸೆಟ್ಟರು, ಸಾವುಕಾರರು ಮೊದಲಾದವರನ್ನು ಕರೆಸಿ ಪಟ್ಟಣವನ್ನು ಶೃಂಗರಿಸಲು ಆಜ್ಞಾಪಿಸಿದನು. ತರುವಾಯ ಪರಿಚಾರಕರನ್ನು ಕರೆಸಿ ಚಿತ್ರವಿಚಿತ್ರವಾದ ಸುಂದರ ವಿವಾಹಮಂಟಪಗಳನ್ನು ರಚಿಸಲು ಆಜ್ಞಾಪಿಸಿದನು. ಅವರು ಉತ್ತಮ ಕಲಾಕೌಶಲ್ಯದವರನ್ನು ಕರೆಸಿ ರತ್ನಖಚಿತಗಳಾದ ಸುವರ್ಣಮಯ ಮಂಟಪಗಳನ್ನು ಸಿದ್ಧಮಾಡತೊಡಗಿದರು. ಮೊದಲೇ ಜನಕರಾಜನ ಸುಂದರವಾದ ಪಟ್ಟಣವು; ಅಲ್ಲಿ ಸಾಕ್ಷಾತ್ ಮಹಾಲಕ್ಷ್ಮಿಯು ಕಪಟದ

ಸುಂದರ ಸ್ತ್ರೀವೇಷದಿಂದ ವ್ಯವಹರಿಸುತ್ತಿದ್ದಳು. ಅಂಥಲ್ಲಿಯು ವಿವಾಹಮಂಟಪದ ವೈಭವನ್ನೂ, ಸೌಂದರ್ಯವನ್ನೂ ವರ್ಣಿಸುವದು ಯಾರಿಗೆ ಶಕ್ಯವು?

ಇತ್ತ ಜನಕರಾಜನ ದೂತರು ಅಯೋಧ್ಯೆಗೆ ಹೋಗಿ ಲಗ್ನಪತ್ರಿಕೆಯನ್ನು ದಶರಥರಾಜನಿಗೆ ಕೊಟ್ಟರು. ಪತ್ರವನ್ನು ಓದುತ್ತಿರುವಾಗ ದಶರಥರಾಜನ ದೇಹವು ರೋಮಾಂಚಿತವಾಗಿ ಆತನ ಕಣ್ಣುಗಳಿಂದ ಆನಂದಾಶ್ರುಗಳು ಉದುರಹತ್ತಿದವು. ಹೃದಯದಲ್ಲಿ ರಾಮಲಕ್ಷ್ಮಣರು, ಕೈಯಲ್ಲಿ ಪತ್ರವು ಈ ಸ್ಥಿತಿಯಲ್ಲಿ ರಾಜನು ಸ್ತಬ್ಧವಾಗಿ ಕುಳಿತುಕೊಂಡನು. ಕೆಲವು ಹೊತ್ತಿನಮೇಲೆ ಅರಸನು ಧೈರ್ಯತಾಳಿ ಆ ಪತ್ರವನ್ನು ಓದಲು, ತಾನು ಕೇಳಿದ ಸುದ್ದಿಯು ನಿಜವಾಯಿತೆಂದು ಸಭೆಯು ಹರ್ಷಭರಿತವಾಯಿತು. ಆಡುತ್ತಿದ್ದ ಭರತ–ಶತ್ರುಘ್ನರಿಗೆ ಅಲ್ಲಿಯೇ ಈ ಸುದ್ದಿಯು ಹತ್ತಲು, ಅವರು ಆನಂದದಭರದಿಂದ ತಂದೆಯಬಳಿಗೆಬಂದು ಸಂತೋಷಪೂರ್ವಕವಾಗಿ ಬಂಧುಗಳ ವರ್ತಮಾನವೇನೆಂದು ಕೇಳಿದರು. ದಶರಥನು ಮತ್ತೊಮ್ಮೆ ಪತ್ರವನ್ನು ಓದಿದನು. ಅದನ್ನು ಕೇಳಿ ಇಬ್ಬರು ಬಂಧುಗಳೂ ರೋಮಾಂಚಿತರಾದರು. ದಶರಥನು ಪುನಃ ಪುನಃ ಮಕ್ಕಳ ಕುಶಲವರ್ತಮಾನವನ್ನು ದೂತರಿಂದ ತಿಳಿದುಕೊಳ್ಳುತ್ತಲಿದ್ದನು. ಆತನು ಆನಂದದ ಭರದಲ್ಲಿ ದೂತರಿಗೆ ಕೊಡುವದಕ್ಕಾಗಿ ಪಾರಿತೋಷಕಗಳನ್ನು ತರಿಸಲು, ದೂತರು ಇದು ಧರ್ಮವಲ್ಲವೆಂದು ಕಿವಿಗಳಮೇಲೆ ಕೈಯಿಟ್ಟುಕೊಂಡರು. ಅವರ ಆ ಧಾರ್ಮಿಕ ವಿಚಾರವನ್ನು ತಿಳಿದು ಸಭಿಕರೆಲ್ಲರೂ ಸಂತೋಷಪಟ್ಟರು. ಬಳಿಕ ದಶರಥನು ಗುರುಗಳಾದ ವಸಿಷ್ಠರಬಳಿಗೆ ಹೋಗಿ ಲಗ್ನಪತ್ರಿಕೆಯನ್ನು ತೋರಿಸಿ, ದೂತರ ಮುಖಾಂತರದಿಂದ ತಿಳಿದ ವೃತ್ತಾಂತವನ್ನು ಗುರುಗಳಿಗೆ ನಿವೇದಿಸಿದನು. ಅದನ್ನು ಕೇಳಿ ವಸಿಷ್ಠರು ಆನಂದಭರಿತರಾಗಿ—"ರಾಜಾ, ಪುಣ್ಯಪುರುಷರಸಲುವಾಗಿ ಪೃಥ್ವಿಯು ಸುಖದಿಂದ ತುಂಬಿರುವದು. ಸಮುದ್ರವು ಇಚ್ಛಿಸದಿದ್ದರೂ ನದಿಗಳು ಪಕ್ಕೆಬಂದ ಕೂಡುವಂತೆ ಧರ್ಮಶೀಲಪುರುಷನ ಕಡೆಗೆ ಸುಖ–ಸಂಪತ್ತುಗಳು ಸ್ವಾಭಾವಿಕವಾಗಿಯೇ ಬರುತ್ತವೆ! ರಾಜಾ, ನೀನು ಗುರುಗಳ, ಬ್ರಾಹ್ಮಣರ, ಆಕಳುಗಳ ಸೇವಕನಾಗಿರುತ್ತೀ. ರಾಣೀ ಕೌಸಲ್ಯಾದೇವಿಯಾದರೂ ಅಂಥ ಪುಣ್ಯಶೀಲಳೇ ಇರುವಳು. ನಿನ್ನಂಥ ಪುಣ್ಯವಂತನು ಸದ್ಯಕ್ಕೆ ಇರುವನಿಲ್ಲ; ಹಿಂದಕ್ಕೆ ಆಗಿಲ್ಲ; ಮುಂದೆಯೂ ಯಾರೂ ಆಗುವಹಾಗಿಲ್ಲ. ಎಲೈ ರಾಜನೇ, ರಾಮನಂಥ ವೀರರೂ, ವಿನೀತರೂ, ಧರ್ಮಧುರಂಧರರೂ, ಗುಣಸಾಗರರೂ ಆದ ನಾಲ್ವರು ಜನ ಉತ್ತಮಮಕ್ಕಳು ಆಗಿರಲು, ನಿನ್ನಂಥ ಭಾಗ್ಯಶಾಲಿಯು ಬೇರೆಯಾವನಿರುವನು! ಯಾವಾಗಲೂ ನಿನ್ನ ಕಲ್ಯಾಣವೇ ಆಗುತ್ತಿರುವದು; ಆದ್ದರಿಂದ ನಿಬ್ಬಣವು ಸಿದ್ಧವಾಗಲಿ, ಮಂಗಲವಾದ್ಯಗಳು ಬಾರಿಸಲಿ!

ಬಳಿಕ ರಾಜನು ಅಂತಃಪುರಕ್ಕೆ ಹೋಗಿ ಯಾವತ್ತು ರಾಣಿಯರಿಗೆ ಪತ್ರವನ್ನು ತೋರಿಸಿ ಯಾವತ್ತು ವರ್ತಮಾನವನ್ನು ಸ್ವತಃ ಹೇಳಿದನು. ಅದನ್ನು ಕೇಳಿ ರಾಣಿಯರು ಪ್ರೇಮದಿಂದ ಪ್ರಫುಲ್ಲಿತರಾಗಿ ತೋರಿದರು. ವೃದ್ಧಳಾದ ಅರುಂಧತಿಯು ಆನಂದನಿಮಗ್ನಳಾಗಿ ಪ್ರೇಮದಿಂದ ಆಶೀರ್ವದಿಸಹತ್ತಿದಳು. ಇದೆಲ್ಲ ಮುನಿಯ ಪ್ರಸಾದವೆಂದು ಹೇಳಿ ದಶರಥನು ರಾಜದ್ವಾರಕ್ಕೆ ಬಂದನು. ರಾಣಿಯರು ಬ್ರಾಹ್ಮಣರನ್ನು ಕರೆಸಿ ಅವರಿಗೆ ಅತ್ಯಾನಂದದಿಂದ ದಾನಕೊಡಲು, ಅವರು ಆಶೀರ್ವದಿಸಿ ಹೊರಟುಹೋದರು. ಯಾಚಕರು ದಾನಧರ್ಮಗಳಿಂದ ಸಂತುಷ್ಟರಾಗಿ ದಶರಥಪುತ್ರರನ್ನು ಹರಸಹತ್ತಿದರು. ಧ್ವಜ-ತೋರಣ-ಪತಾಕೆಗಳಿಂದ ಅಯೋಧ್ಯೆಯು ಶೃಂಗರಿಸಲ್ಪಟ್ಟಿತು. ರಾಮನ ನಗರವಾದ್ದರಿಂದ ಅಯೋಧ್ಯಾ ಪಟ್ಟಣವು ಸರ್ವದಾ ರಮಣೀಯವೂ, ಮಂಗಲಮಯವೂ, ಪಾವನವೂ ಆಗಿದ್ದರೂ, ಈ ಕಾಲದಲ್ಲಿ ಜನರು ತಮ್ಮ ಪ್ರೇಮವನ್ನು ವ್ಯಕ್ತಮಾಡುವದಕ್ಕಾಗಿ ಅದರ ಶೃಂಗಾರವನ್ನು ವಿಶೇಷವಾಗಿಯೇ ಹೆಚ್ಚಿಸಿದರು. ಅರಸನ ಅಪ್ಪಣೆಯಿಂದ ಭರತನು ಚತುರಂಗಬಲವನ್ನು ಸಿದ್ಧಮಾಡಿಸಿದನು. ವಂದಿ-ಮಾಗಧ-ಸೂತರು ಸ್ತುತಿಸಹತ್ತಿದರು. ಮೇಣೆ, ಪಲ್ಲಕ್ಕಿ ಮೊದಲಾದ ವಿವಿಧವಾಹನಗಳಿಂದ ಚತುರಂಗಬಲದೊಡನೆ ದಿಬ್ಬಣವು ಹೊರಡಲು, ಶುಭಶಕುನಗಳು ಆಗತೊಡಗಿದವು. ಹೆಸರುಗತ್ತೆ, ಎತ್ತು, ಒಂಟೆ ಮೊದಲಾದವುಗಳಮೇಲೆ ಎಲ್ಲ ಸಾಮಾನುಗಳನ್ನು ಹೇರಿ ಲಗ್ನದ ಸೌರಣೆಯು ಸಾಗಿತು. ಯಾವತ್ತು ಸೇವಕರು ತಮ್ಮ ಪರಿವಾರದೊಡನೆ ಆನಂದದಿಂದ ಹೊರಟರು. ಗಜಬೃಂಹಿತವೂ, ಅಶ್ವಗಳ ಹೇಷಾರವವೂ, ದಿಬ್ಬಣದವರ ಆನಂದೋದ್ಗಾರಗಳೂ ದಿಕ್ಕುದಿಕ್ಕುಗಳಿಗೆ ಪಸರಿಸಿದವು. ವಸಿಷ್ಠರನ್ನು ಒಂದು ಉತ್ತಮವಾದ ರಥದಲ್ಲಿ ಕುಳ್ಳಿರಿಸಿ, ದಶರಥನು ಅವರ ಚರಣವಂದನಪೂರ್ವಕ ಅವರ ಅನುಜ್ಞೆಪಡೆದು ತಾನೂ ಒಂದು ರಥದಲ್ಲಿ ಕುಳಿತನು. ಆಗ ದೇವಗುರುವಾದ ಬೃಹಸ್ಪತಿಯೊಡನೆ ಇಂದ್ರನು ಸಾಗಿರುವಂತೆ ತೋರಿತು. ಕುಲರೀತಿಯಂತೆ ವೈದಿಕ ಆಚಾರಗಳನ್ನು ಮಾಡಿ, ಎಲ್ಲಬಗೆಯಿಂದ ವ್ಯವಸ್ಥೆಯಾಗಿರುವದನ್ನು ನೋಡಿ ಅರಸನು ರಾಮಸ್ಮರಣಪೂರ್ವಕವಾಗಿ ಪಯಣಿಗನಾದನು. ಒಡನೆ ಗುರುಗಳ ಅಪ್ಪಣೆಯಂತೆ ಮಾರ್ಗವನ್ನು ಕ್ರಮಿಸತೊಡಗಿದರು. ಆ ದಿಬ್ಬಣವನ್ನು ನೋಡಿ ದೇವತೆಗಳಿಗೂ ಆಲ್ಹಾದವಾಗಿ, ಅವರು ಮಂಗಲಪ್ರದರಾಗಿ ಪುಷ್ಪವೃಷ್ಟಿಯನ್ನು ಸುರಿಸಿದರು.

ಭಾನುಕುಲಶಿರೋಮಣಿಯಾದ ದಶರಥರಾಜನು ಬರುವನೆಂದು ತಿಳಿದು ಜನಕರಾಜನು ನದಿಗಳಿಗೆ ಪೂಲುಗಳನ್ನೂ, ಮಾರ್ಗದಲ್ಲಿ ಅಲ್ಲಲ್ಲಿ ಉತ್ತಮಮಂದಿರಗಳನ್ನು ಕಟ್ಟಿಸಿ, ಮಂದಿರಗಳಲ್ಲಿ ಸ್ವರ್ಗತುಲ್ಯಭೋಗಗಳನ್ನು ಸಂಗ್ರಹಿಸಿದನು. ಬೀಗರಿಗೆ ಪ್ರತಿದಿನ ಹೊಸಹೊಸ ಉತ್ತಮೋತ್ತಮ ಖಾದ್ಯಗಳು, ಶಯ್ಯಾಗಳು, ಉತ್ತಮೋತ್ತಮ ವಸ್ತ್ರಗಳು ಮೊದಲಾದವುಗಳು ದೊರೆಯುವಂತೆ ಜನಕನು ವ್ಯವಸ್ಥೆ ಮಾಡಿದ್ದರಿಂದ, ಯಾವತ್ತು ಜನರು

ಹರ್ಷಿತರಾಗಿ ತಮ್ಮ ಮನೆಮಾರುಗಳನ್ನು ಕೂಡ ಮರೆತರು! ವಾದ್ಯಗಳ ರಭಸಗಳನ್ನು ಕೇಳಿ ಜನಕನು, ಬೀಗರು ಬಂದರೆಂದು ತಿಳಿದು ಚತುರಂಗಬಲದೊಡನೆ ಅವರನ್ನು ಎದುರುಗೊಳ್ಳುವದಕ್ಕಾಗಿ ಸಮಾರಂಭದೊಡನೆ ಹೊರಟನು. ಸುವರ್ಣಭಾಂಡಗಳಲ್ಲಿ ಅಮೃತಪ್ರಾಯವಾದ ಉತ್ತಮೋತ್ತಮ ಪಕ್ವಾನ್ನಗಳನ್ನೂ, ಹಂಣುಹಂಪಲಗಳನ್ನೂ ಜನಕನು ಮುಂದೆ ಕಳಿಸಿಕೊಟ್ಟನು. ಅವಲಕ್ಕಿ, ಮೊಸರು, ಹಾಲು ಮೊದಲಾದ ಫಲಾಹಾರದ ಪದಾರ್ಥಗಳನ್ನೂ ಜನಕನು ಕಳಿಸಿದನು. ಉಭಯುಪಕ್ಷದ ಬೀಗಮಂಡಲಿಯು ಪರಸ್ಪರರನ್ನು ನೋಡಿ ಹರ್ಷಭರಿತವಾಯಿತು. ಎರಡುಸಮುದ್ರಗಳು ಪರಸ್ಪರಕೂಡಿಕೊಳ್ಳುವಂತೆ ಅವರಿಬ್ಬರು ಬೀಗರೂ ಪರಸ್ಪರರನ್ನು ಎದುರುಗೊಂಡರು. ಜನಕನು ಯಾವತ್ತು ಪದಾರ್ಥಗಳನ್ನು ದಶರಥರಾಜನಮುಂದೆ ಇಟ್ಟು ಸದ್ಗದಿತಕಂಠದಿಂದ ಅವನ್ನು ಸ್ವೀಕರಿಸಲುಪ್ರಾರ್ಥಿಸಿದನು. ದಶರಥನಾದರೂ ಆ ಎಲ್ಲ ಕಾಣಿಕೆಗಳನ್ನು ಪ್ರೇಮದಿಂದ ಸ್ವೀಕರಿಸಿದನು. ಸೀಮಾಂತಪೂಜೆಯೂ, ಆದರಸತ್ಕಾರಗಳೂ ಆದಬಳಿಕ ಜನಕನು ಬೀಗರಿಗಾಗಿ ಗೊತ್ತುಮಾಡಿದ್ದ ಮಂದಿರಗಳಿಗೆ ಅವರನ್ನು ಕರಕೊಂಡುಹೋಗಿ ಇಳಿಸಿದನು. ಅಲ್ಲಿಯ ಎಲ್ಲಬಗೆಯ ಅನುಕೂಲತೆಗಳನ್ನು ನೋಡಿಬೀಗರು ಸಂತೋಷಪಟ್ಟರು. ಬೀಗರ ಮೆರವಣಿಗೆಯು ಊರಲ್ಲಿ ಬಂದದ್ದನ್ನು ಕೇಳಿ ಸೀತೆಯು ತನ್ನ ಪ್ರಭಾವವನ್ನು ಕೆಲಮಟ್ಟಿಗೆ ಪ್ರಕಟಮಾಡಿದಳು. ಯಾವತ್ತು ಸಿದ್ಧಿಗಳನ್ನು ಹೃದಯದಲ್ಲಿ ಸ್ಮರಿಸಿ ಅವನ್ನು ಬರಮಾಡಿಕೊಂಡು ದಶರಥನ ಪರಿವಾರದ ಸತ್ಕಾರಕ್ಕಾಗಿ ಅವನ್ನು ಕಳುಹಿದಳು! ಆ ಋದ್ಧಿ–ಸಿದ್ಧಿಗಳು ಜಾನಕಿಯ ಅಪ್ಪಣೆಯಿಂದ ದಶರಥನ ಪರಿವಾರಕ್ಕೆ ಸ್ವರ್ಗಸೌಖ್ಯವನ್ನು ಒದಗಿಸಿಕೊಟ್ಟವು. ಅದರಿಂದ ಯಾವತ್ತು ಬೀಗರು ಜನಕನನ್ನು ಸ್ತುತಿಸತೊಡಗಿದರು. ರಘುನಾಥನು ಸೀತೆಯ ಈ ಕರ್ತೃತ್ವವನ್ನು ತಿಳಿದು, ಆಕೆಯ ಮನೋಗತವನ್ನು ಗುರುತಿಸಿ ಮನಸ್ಸಿನಲ್ಲಿ ಸಂತುಷ್ಟನಾದನು

ತಂದೆಯು ಬಂದ ವರ್ತಮಾನವನ್ನು ಕೇಳಿ ರಾಮಲಕ್ಷ್ಮಣರಿಗೆ ಪರಮಾನಂದವಾಗಿ ತಂದೆಯನ್ನು ಕಾಣುವ ಆತುರತೆಯು ಅವರಲ್ಲಿ ವಿಶೇಷವಾಗಿ ಉಂಟಾಯಿತ ; ಆದರೂ ಅವರು ಗುರುಗಳಾದ ವಿಶ್ವಾಮಿತ್ರರ ಮುಂದ ಅದನ್ನು ಹೇಳಲಾರದೆ ಸಂಕೋಚಪಟ್ಟು ಅವರ ಬಳಿಯಲ್ಲಿ ಕುಳಿತಿದ್ದರು. ರಾಮಲಕ್ಷ್ಮಣರ ಈ ವಿನಯವನ್ನು ನೋಡಿ ವಿಶ್ವಾಮಿತ್ರನು ಸಂತೋಷಪಟ್ಟು ಅವರೊಡನೆ ದಶರಥನ ಬಳಿಗೆ ಹೊರಟನು. ವಿಶ್ವಾಮಿತ್ರರು ಬಂದದ್ದನ್ನು ನೋಡಿ ದಶರಥನು ಅವರಚರಣಕ್ಕೆರಗಿ, ಅವರ ಪಾದಧೂಳಿಯನ್ನು ಪುನಃ ಪುನಃ ಶಿರಸ್ಸಿನಲ್ಲಿ ಧರಿಸಿದನು. ವಿಶ್ವಾಮಿತ್ರನು ಅರಸನನ್ನು ಹಿಡಿದೆತ್ತಿ ಆಶೀರ್ವದಿಸಿ ಸಂತಯಿಸಿದನು. ರಾಮಲಕ್ಷ್ಮಣರು ತನಗೆ ದೀರ್ಘದಂಡವಾಗಿ ನಮಸ್ಕರಿಸುವದನ್ನು ನೋಡುವಾಗ ದಶರಥನ ಹೃದಯದ ಆನಂದವು ಉಕ್ಕಿ ಹೊರಸೂಸ ಹತ್ತಿತು. ಆತನು ಮಕ್ಕಳನ್ನು ಅಪ್ಪಿಕೊಂಡು ಮುಂಡಾಡಿದನು. ಬಳಿಕ ರಾಮಲಕ್ಷ್ಮಣರು ಗುರುಗಳಾದ

ವಸಿಷ್ಠರ ಚರಣಕ್ಕೆರಗಲು, ಮುನಿವರನು ಪ್ರೇಮದಿಂದ ಆ ರಾಜಕುವರರನ್ನಪ್ಪಿಕೊಂಡು ಆಶೀರ್ವದಿಸಿದನು. ಅಷ್ಟರಲ್ಲಿ ಭರತನು ಶತ್ರುಘ್ನನೊಡನೆ ರಾಮನಿಗೆ ನಮಸ್ಕರಿಸಿದನು. ನಾಲ್ಕುಜನ ಮಕ್ಕಳೊಡನೆ ದಶರಥನು ಶೋಭಿಸುವದನ್ನು ನೋಡಿ ಎಲ್ಲರೂ ಸಂತೋಷ ಪಟ್ಟರು. ಆಗ ದೇವತೆಗಳು ಪುಷ್ಪವೃಷ್ಟಿಗರೆದರು. ಬಳಿಕ ಶತಾನಂದನೇ ಮೊದಲಾದ ಬ್ರಾಹ್ಮಣರೂ, ಜನಕರಾಜನೇ ಮೊದಲಾದ ಯಾವತ್ತು ಪರಿವಾರವೂ ದಶರಥನನ್ನು ಬಗೆ ಬಗೆಯಾಗಿ ಸನ್ಮಾನಿಸಿ ಆತನ ಅಪ್ಪಣೆಯಿಂದ ಮನೆಗೆ ಬಂದರು. ಜನಕನ ರಾಜಧಾನಿಯು ಬಗೆಬಗೆಯ ಆನಂದದಾಯಕ ಉಪಚಾರಗಳಿಂದ ಗಜಬಜಿಸಿ ಹೋಯಿತು.

ಮಂಗಲಕರವಾದ ಲಗ್ನದ ದಿವಸವು ಪ್ರಾಪ್ತವಾಯಿತು. ಆಗ ಹೇಮಂತಋತುವೂ, ಪವಿತ್ರವಾದ ಮಾರ್ಗಶೀರ್ಷಮಾಸವೂ ಇತ್ತು. ಉತ್ತಮಮುಹೂರ್ತವನ್ನು ನೋಡಿ ಬ್ರಹ್ಮದೇವನು ನಾರದನ ಮುಖದಿಂದ ಅದನ್ನು ಜನಕನಿಗೆತಿಳಿಸಿದನು. ಅದೇ ಮುಹೂರ್ತವನ್ನೇಜನಕನಜ್ಯೋತಿಷಿಗಳುಗೊತ್ತುಮಾಡಿದ್ದರು. ಅದನ್ನು ಕೇಳಿಎಲ್ಲಜನರುಆಜ್ಯೋತಿಷಿಗೆ ಎರಡನೆಯ ಬ್ರಹ್ಮದೇವನೆಂದು ಕರೆಯುತೊಡಗಿದರು. ಸಕಲಸುಮಂಗಲಮೂಲವಾದ ಆ ಪವಿತ್ರ ಗೋರಜ ಮುಹೂರ್ತವನ್ನು ಬ್ರಾಹ್ಮಣರು ಜನಕರಾಜನಿಗೆ ಹೇಳಿದರು. ಆಗ ಆ ವಿದೇಹನು ತನ್ನ ಪುರೋಹಿತರಾದ ಶತಾನಂದರ ಮುಖಾಂತರ ಯಾವತ್ತು ಸಿದ್ಧತೆಯನ್ನು ಮಾಡಿಸಿದನು. ಯಾವತ್ತು ಮಂಗಲ ದ್ರವ್ಯಗಳು ಸಿದ್ಧವಾದವು; ವಿವಿಧ ಮಂಗಲ ವಾದ್ಯಗಳು ಭೋರ್ಗರೆಯತೊಡಗಿದವು; ಸುಂದರ ಸುವಾಸಿನಿಯರು ಹಾಡತೊಡಗಿದರು; ಶ್ರುತಿಸ್ಮೃತಿಸಂಪನ್ನ ವಿಪ್ರರು ವೇದಘೋಷಮಾಡತೊಡಗಿದರು. ಸಮಾರಂಭದೊಡನೆ ಬೀಗರನ್ನು ಕರೆಯಲಿಕ್ಕೆ ಹೋದರು. ದಶರಥನ ಸಮಾಜದ ವೈಭವವನ್ನು ನೋಡಿ ಇಂದ್ರನೂ ತುಚ್ಛನಾಗಿ ತೋರುತ್ತಿದನು. ಕಾಲವು ಸಮೀಪಿಸಿದ್ದರಿಂದ ಬೇಗನೆ ಹೊರಡಲೇಬೇಕೆಂದು ದಶರಥನಿಗೆ ವಿನಂತಿಯನ್ನು ಮಾಡಿಕೊಳ್ಳಲು, ಅದನ್ನು ಕೇಳಿದಕೂಡಲೆ ವಾದ್ಯಗಳು ಬಾರಿಸತೊಡಗಿದವು. ದಶರಥರಾಜನು ಗುರುಗಳ ವಿಚಾರದಿಂದ ಕುಲವಿಧಿಯನ್ನು ತೀರಿಸಿಕೊಂಡು ಮುನಿಮಂಡಲವನ್ನು, ಬೀಗರ ಯಾವತ್ತು ಪರಿವಾರವನ್ನು ಕೂಡಿಕೊಂಡು ಹೊರಟನು. ಆಗ ಬ್ರಹ್ಮನೊದಲಾದ ದೇವತೆಗಳು ತಮ್ಮ ತಮ್ಮ ಪರಿವಾರದೊಡನೆ ಶ್ರೀರಾಮನ ಕಲ್ಯಾಣೋತ್ಸವವನ್ನು ನೋಡಲು ಪುಲಕಿತಗಾತ್ರರಾಗಿ ವಿಮಾನದಲ್ಲಿ ಕುಳಿತು ಬಂದರು. ಆಕಾಶದಲ್ಲಿ ದುಂದುಭಿಗಳು ಬಾರಿಸತೊಡಗಿದವು. ದೇವತೆಗಳು ಪುಷ್ಪವೃಷ್ಟಿಮಾಡತೊಡಗಿದರು. ದಿವ್ಯಾಲಂಕಾರಗಳಿಂದ ವಿಭೂಷಿತವಾದ ಶ್ರೀರಾಮನ ಅಪ್ರತಿರೂಪ ಶ್ಯಾಮಲ ಸುಂದರ ಮೂರ್ತಿಯು ಅವರ್ಣನೀಯವಾದದ್ದರಿಂದ, ಅದನ್ನು ನಾನು ನನ್ನಿಂದಲೇ ವರ್ಣಿಸಲಶಕ್ತನಿದ್ದೇನೆ. ಶ್ರೀ ಶಂಕರನು ರಾಮರೂಪದಲ್ಲಿ ಅನುರಕ್ತನಾದನು. ಆಗ ಆತನಿಗೆ ತನ್ನ ಐದುಮುಖಗಳಲ್ಲಿಯ ಹದಿನೈದು ನೇತ್ರಗಳು ಅತ್ಯಂತ ಪ್ರಿಯವಾದವು. ಬ್ರಹ್ಮನು ತನಗೆ ಎಂಟೇ ಕಣ್ಣುಗಳಿಂದು

ಪಶ್ಚಾತ್ತಾಪಪಟ್ಟನು. ಸಹಸ್ರಾಕ್ಷನಾದ ಇಂದ್ರನು ಗೌತಮಶಾಪವನ್ನು ಈ ಕಾಲದಲ್ಲಿ ಹಿತಕರವೆಂದು ಭಾವಿಸಿದನು. ಹೀಗೆ ದೇವತೆಗಳೂ ಶ್ರೀರಾಮನ ಸುಂದರರೂಪವನ್ನು ನೋಡುವಲ್ಲಿ ಆಸಕ್ತರಾಗಿರುವಾಗ, ಮೆರವಣಿಗೆಯು ವಿವಾಹಮಂಟಪದ ಬಾಗಿಲಿಗೆ ಬರಲು, ಸುವಾಸಿನಿಯರು ವರನಿಗೆ ಆರತಿಮಾಡಿದರು. ಆಗ ಶಚೀ, ಸರಸ್ವತೀ, ಪಾರ್ವತೀ, ಲಕ್ಷ್ಮೀ ಮೊದಲಾದ ದೇವತಾಸ್ತ್ರೀಯರು ಕಪಟಸ್ತ್ರೀ ವೇಷಗಳನ್ನು ಧರಿಸಿ ಶ್ರೀರಾಮನಿಗೆ ಆರತಿ ಮಾಡುವಾಗ ಮಂಜುಲ ಗಾನಮಾಡಿದರು! ಎಲ್ಲರೂ ಆನಂದಮಗ್ನರಾದರು. ಒಬ್ಬರ ಗುರುತು ಒಬ್ಬರಿಗೆ ಇಲ್ಲದಾಯಿತು. ರಾಣಿಯು ಆರತಿಮಾಡಿ ಅರ್ಘ್ಯವನ್ನು ಕೊಡಲು, ವರನು ಮಂಟಪಪ್ರವೇಶಮಾಡಿದನು. ಆಗ ದೇವತೆಗಳು ಆಗಾಗ್ಗೆ ಹೂಗಳನ್ನು ಸುರಿಸಿದರು. ಬ್ರಾಹ್ಮಣರು ಪ್ರಸಂಗೋಚಿತವಾದ ಶಾಂತಿಸೂಕ್ತಗಳ ಪಠಣಮಾಡಿದರು. ರಾಮನಮೇಲಿನ ನಿವಾಳಿಗಳನ್ನು ಆರಿಸಿಕೊಂಡು ನಾಪಿತರು, ಭಾಟರು, ನಟರು ಮೊದಲಾದವರು ಸಂತುಷ್ಟರಾಗಿ ತಲೆಬಾಗಿ ಹರಸಿದರು.

ಯಾವತ್ತು ವೈದಿಕ-ಲೌಕಿಕಾಚಾರಗಳನ್ನು ಆಚರಿಸಿದಬಳಿಕ ಶಿಷ್ಟಸಾಂಪ್ರದಾಯದಂತೆ ದಶರಥ-ಜನಕರು ಪರಸ್ಪರರನ್ನು ಪ್ರೇಮದಿಂದ ಕಾಣಿಸಿಕೊಂಡರು. ಬಳಿಕ ಜನಕನು ಆದರದಿಂದ ದಶರಥನನ್ನು ಮಂಟಪದಲ್ಲಿ ಕರತಂದನು. ಚತುರನಾದ ಜನಕನು ಸ್ವತಃ ಕೈಹಿಡಿದು ಬಿಡದೆ ಎಲ್ಲರನ್ನು ಆದರದಿಂದ ಅವರವರ ಆಸನಗಳಲ್ಲಿ ಕುಳ್ಳಿರಿಸಿದನು. ಕುಲಪೋಷಕ-ಇಷ್ಟದೇವತೆಯಂತೆ ಮಹಾತ್ಮನಾದ ವಸಿಷ್ಠನನ್ನು ಪೂಜಿಸಿ, ಅರಸನು ಆಶೀರ್ವಾದವನ್ನು ಗ್ರಹಿಸಿದನು; ಆದರೆ ವಿಶ್ವಾಮಿತ್ರನನ್ನು ಪೂಜಿಸುವಾಗ ಜನಕನ ಹೃದಯದಲ್ಲಿ ಉಂಟಾದ ಪ್ರೇಮವನ್ನು ವರ್ಣಿಸುವದು ಶಕ್ಯವಲ್ಲ. ವಾಮದೇವ ಮೊದಲಾದ ಯಾವತ್ತು ಋಷಿಗಳನ್ನು ಜನಕನು ಪೂಜಿಸಿ, ಅವರ ಆಶೀರ್ವಾದವನ್ನು ಗ್ರಹಿಸಿದನು. ಬಳಿಕ ಈಶ್ವರಸ್ವರೂಪನೆಂದು ದಶರಥನನ್ನು ಪೂಜಿಸಿ, ಇಂಥ ಅಪೂರ್ವಯೋಗವನ್ನು ಒದಗಿಸಿಕೊಟ್ಟದ್ದಕ್ಕಾಗಿ ಬಗೆಬಗೆಯಾಗಿ ಅವನನ್ನು ಸ್ತುತಿಸಿದನು. ಯಾವತ್ತು ಬೀಗರನ್ನು ಯಥಾಯೋಗ್ಯವಾಗಿ ಸತ್ಕರಿಸಿ ಪೂಜಿಸಿ ಪ್ರೇಮಸ್ತುತಿಗಳಿಂದ ಅವರನ್ನು ಗೌರವಿಸಿದನು. ರಘುವೀರನ ಪ್ರಭಾವವನ್ನರಿಯುವ ಬ್ರಹ್ಮ-ವಿಷ್ಣು-ರುದ್ರ-ಅಷ್ಟದಿಕ್ಪಾಲ-ಸೂರ್ಯ ಮೊದಲಾದ ದೇವತೆಗಳು ಕಪಟಬ್ರಾಹ್ಮಣರೂಪದಿಂದ ಪ್ರೇಮಪುರಸ್ಸರ ವಿವಾಹಮಹೋತ್ಸವವನ್ನು ಕುತೂಹಲದಿಂದ ನೋಡುತ್ತಲಿದ್ದರು; ಆದರೆ ಜನಕನು ಅವರ ಗುರುತು ಹಿಡಿಯದಿದ್ದರೂ ದೇವರಂತೆ ತಿಳಿದು ಅವರನ್ನು ಸತ್ಕರಿಸಿ ಪೂಜಿಸಿದನು. ಈ ಪ್ರಸಂಗದಲ್ಲಿ ತಮ್ಮ ಗುರುತೇ ತಮಗೆ ಇಲ್ಲದಿರುವಾಗ, ಅನ್ಯರು ಯಾರು ಯಾರನ್ನು ಗುರುತಿಸಬೇಕು! ಯೋಗ್ಯ ಪ್ರಸಂಗವು ಒದಗಲು, ವಸಿಷ್ಠರು ಶತಾನಂದರ ಮುಖಾಂತರವಾಗಿ ಸೀತೆಯನ್ನು ವಿವಾಹಮಂಟಪಕ್ಕೆ ಕಳಿಸುವದಕ್ಕಾಗಿ ಜನಕಪತ್ನಿಯಾದ ಸುಲೋಚನಾ ರಾಣಿಗೆ ಸೂಚಿಸಿದರು. ಆಗ ರಾಣಿಯು ಬ್ರಾಹ್ಮಣರನ್ನೂ,

ಸುವಾಸಿನಿಯರನ್ನೂ, ಕುಲವೃದ್ಧ ಸ್ತ್ರೀಯರನ್ನೂ ಕರೆಸಿ ಕುಲಾಚಾರಗಳನ್ನು ಮಾಡಿಸಿ, ಸಖಿಯರು ಸುತ್ತುಗಟ್ಟಲು ಸೀತೆಯನ್ನು ವಿವಾಹಮಂಟಪಕ್ಕೆ ಕಳಿಸಿದಳು. ಸೀತೆಯ ಅನುಪಮ ಸೌಂದರ್ಯವನ್ನು ವರ್ಣಿಸುವದು ಶಕ್ಯವಲ್ಲ; ಯಾಕಂದರೆ ಅದು ಅಪಾರ ವಿದ್ದು, ಬುದ್ಧಿಶಕ್ತಿಯು ಅಲ್ಪವಾದದ್ದಿರುವದು! ಸೀತೆಯು ಬರುತ್ತಿರಲು, ಬೀಗಮಂಡ ಲಿಯು ಮನಸ್ಸಿನಲ್ಲಿ ಆಕೆಗೆ ನಮಸ್ಕರಿಸತೊಡಗಿತು. ಆಕೆಯನ್ನು ನೋಡಿ ರಾಮನು ಪೂರ್ಣಕಾಮನಾದನು.

ಸೀತೆಯು ಮಂಟಪವನ್ನು ಪ್ರವೇಶಿಸಲು, ಮುನಿವರ್ಯರು ಆನಂದದಿಂದ ಶಾಂತಿ ಸೂಕ್ತಗಳನ್ನು ( ) ತೊಡಗಿದರು. ಆಗಿನಕಾಲದ ವಿಧ್ಯುಕ್ತ ಹಾಗು ವ್ಯವಹಾರೋಕ್ತ ಆಚಾರಗಳನ್ನು ಉಭಯಪಕ್ಷದ ಕುಲಗುರುಗಳೂ ಮಾಡಿದರು. ಬಳಿಕ ಗುರು, ಗೌರಿ, ಗಣಪತಿ ಇವರ ಪೂಜೆಯನ್ನು ಬ್ರಾಹ್ಮಣರು ಆನಂದದಿಂದ ಮಾಡಿಸಿದರು. ದೇವತೆಗಳು ಪ್ರತ್ಯಕ್ಷಪೂಜೆಯನ್ನು ಗ್ರಹಿಸಿ ಆಶೀರ್ವದಿಸುತ್ತಿದ್ದರು. ಅದನ್ನು ಕೇಳಿ ಎಲ್ಲರೂ ಆನಂದಪಡುತ್ತಿದ್ದರು ಮಧುಪರ್ಕದ ಎಲ್ಲ ಮಂಗಲ ದ್ರವ್ಯಗಳು ಸುವರ್ಣಪಾತ್ರೆಗಳಲ್ಲಿ ಸಿದ್ಧವಾಗಿದ್ದವು. ರಘುಕುಲದ ಮೂಲಪುರುಷನಾದ ಸೂರ್ಯನು ತನ್ನ ಕುಲಾಚಾರ ಗಳನ್ನು ಪ್ರೇಮದಿಂದ ಪ್ರತ್ಯಕ್ಷ ಹೇಳತೊಡಗಿದನು, ಅದರಂತೆ ಆದರಪೂರ್ವಕವಾಗಿ ಎಲ್ಲ ಆಚಾರಗಳನ್ನು ಆಚರಿಸಿ, ಸೀತೆಯನ್ನು ಸುಂದರವಾದ ಸಿಂಹಾಸನದಲ್ಲಿ ಕುಳ್ಳಿರಿಸಿ ದರು. ಹೋಮಕಾಲದಲ್ಲಿ ಅಗ್ನಿನಾರಾಯಣನು ಮೂರ್ತಿಮಂತಪ್ರಕಟನಾಗಿ ಅತ್ಯಾ ನಂದದಿಂದ ಆಹುತಿಗಳನ್ನು ಸ್ವೀಕರಿಸಿದನು. ಅದರಂತೆ ಯಾವತ್ತು ದೇವತೆಗಳು ಬ್ರಾಹ್ಮಣವೇಷವನ್ನು ಧರಿಸಿ ವೈವಾಹಿಕ ಪ್ರಯೋಗವನ್ನು ಅಂದರು. ಸುಲೋಚ ನೆಯೂ, ಜನಕನೂ ಸುವರ್ಣಕಲಶದಲ್ಲಿ ತುಂಬಿದ ಸುಗಂಧಿತ ಜಲದಿಂದ ಸುವರ್ಣ ಪಾತ್ರದಲ್ಲಿ ಶ್ರೀರಾಮನ ಪಾದಪ್ರಕ್ಷಾಲನ ಮಾಡಿದರು. ಆ ಕಾಲದಲ್ಲಿ ಮುನಿಜನರು ಮಂಗಲವಾಣಿಯಿಂದ ವೇದಪಠಣ ಮಾಡುತ್ತಿದ್ದರು. ಆಕಾಶದಲ್ಲಿ ದೇವತೆಗಳು ಪುಷ್ಪ ವೃಷ್ಟಿಮಾಡುತ್ತಿದ್ದರು ಆಗ ಜನಕ-ಸುಲೋಚನೆಯರು ರೋಮಾಂಚಿತರಾಗಿದ್ದರು. ಸಾಕ್ಷಾತ್ ಶಂಕರನು ಮನಸ್ಸಿನಲ್ಲಿ ಸದಾ ಧ್ಯಾನಿಸುವ, ಪುಣ್ಯಬಲದಿಂದ ಸ್ಮರಣಮಾಡಲು ಮನಸ್ಸನ್ನು ನಿರ್ಮಲಮಾಡುವ, ಭಾಗೀರಥಿಯ ಉಗಮಸ್ಥಾನವಾದ, ಸ್ಪರ್ಶಮಾತ್ರದಿಂದ ಅಹಲ್ಯೆಯನ್ನು ಉದ್ಧರಿಸಿದ ಶ್ರೀ ರಾಮಚರಣದ ಮಹತ್ವವನ್ನು ವರ್ಣಿಸಲು ಯಾರು ಶಕ್ತರು! ವಧೂವರರ ಪಾಣಿಗ್ರಹಣಮಾಡಿಸಿ ಉಭಯಕುಲಗುರುಗಳ ಗೋತ್ರೋಚ್ಚಾರ ಮಾಡಿದರು. ನೃಪಶ್ರೇಷ್ಠನಾದ ಜನಕನು ಶಾಸ್ತ್ರವನ್ನೂ, ವ್ಯವಹಾರವನ್ನೂ ಅನುಸರಿಸಿ ಕನ್ಯಾದಾನಮಾಡಿದನು. ಹಿಮಾಲಯನು ಶ್ರೀ ಶಂಕರನಿಗೆ ಪಾರ್ವತಿಯನ್ನೂ, ಸಾಗ ರನು ಶ್ರೀ ಹರಿಗೆ ಲಕ್ಷ್ಮಿಯನ್ನು ಅರ್ಪಿಸಿದಂತೆ ಜನಕನು ಶ್ರೀ ರಾಮನಿಗೆ ಸೀತೆಯನ್ನು ಅರ್ಪಿಸಿ, ತ್ರೈಲೋಕ್ಯದಲ್ಲಿ ತನ್ನ ಅಪೂರ್ವ ಯಶಸ್ಸನ್ನು ಉಜ್ವಲಗೊಳಿಸಿದನು. ವಿಧಿ

ಪೂರ್ವಕ ರಾಜಾ ಕಿರೀಟಮಾದವಳಿಕ ವಧೂವರರ ಸೆರಗುಗಳಿಗೆ ಗಂಟುಹೊಡೆಯಲು, ಅವರ ಸಪ್ತಪದಿಗೆ ಆರಂಭವಾಯಿತು. ಆ ಮನೋಹರರಾದ ನೂತನ ದಂಪತಿಗಳ ಸಪ್ತಪದಿಯನ್ನು ನೋಡಿ ಜನರನೇತ್ರಗಳು ಸಫಲವಾದವು. ಬ್ರಾಹ್ಮಣರು ದಕ್ಷಿಣೆಯಿಂದ ಸಹಿತವಾಗಿ ಯಾವತ್ತು ಕರ್ಮಗಳನ್ನು ಮುಗಿಸಿದರು. ಶ್ರೀ ರಾಮನು ಸೀತೆಯ ಬೈತಲಲ್ಲಿ ಸಿಂದೂರವನ್ನು ತುಂಬಿದನು. ಬಳಿಕ ವಸಿಷ್ಠರ ಅಪ್ಪಣೆಯಂತೆ ವಧೂವರರು ಒಂದೇ ಸಿಂಹಾಸನದಮೇಲೆ ಕುಳಿತುಕೊಂಡರು. ಅದನ್ನು ನೋಡಿ ದಶರಥನು ಸಂತೃಪ್ತನಾದನು.

ಬಳಿಕ ಜನಕನು ವಸಿಷ್ಠರ ಅಪ್ಪಣೆಯಂತೆ ವಿವಾಹ ಸಾಮಗ್ರಿಗಳನ್ನು ಸಿದ್ಧಗೊಳಿಸಿ ಮಾಂಡವಿ, ಶ್ರುತಕೀರ್ತಿ, ಊರ್ಮಿಲಾ ಇವರನ್ನು ಕರೆಸಿ, ಕುಶಕೇತು ಕನ್ಯೆಯಾದ ಮಾಂಡವಿಯನ್ನು ಭರತನಿಗೂ, ಸೀತೆಯ ತಂಗೆಯರಾದ ಶ್ರುತಕೀರ್ತಿ-ಊರ್ಮಿಲೆಯರನ್ನು ಕ್ರಮವಾಗಿ ಶತ್ರುಘ್ನ ಲಕ್ಷ್ಮಣರಿಗೂ ಕೊಟ್ಟು ಲಗ್ನಮಾಡಿದನು. ಜಾಗೃತಿ, ಸ್ವಪ್ನ, ಸುಷುಪ್ತಿ, ತೂರ್ಯ ಎಂಬ ನಾಲ್ಕು ಅವಸ್ಥೆಗಳು ತಮ್ಮ ತಮ್ಮ ವಿಭುಗಳಾದ ವಿಶ್ವ, ತೈಜಸ, ಪ್ರಾಜ್ಞ, ಬ್ರಹ್ಮರಿಂದ ಶೋಭಿಸುವಂತೆ, ಆನಾಲ್ವರೂ ವಧೂವರರು ಶೋಭಿಸತೊಡಗಿದರು. ದಶರಥರಾಜನು ತನ್ನ ನಾಲ್ವರು ಪುತ್ರರೂ ಸಪತ್ನೀಕರಾದದ್ದನ್ನು ನೋಡಿ ಹರ್ಷಿತನಾದನು. ಆತನಿಗೆ ಸೇವಾ, ಶ್ರದ್ಧಾ, ತಪಸ್ಸು, ಭಕ್ತಿ ಎಂಬ ನಾಲ್ಕು ಕ್ರಿಯೆಗಳಿಂದ ಸಹಿತವಾಗಿ ಧರ್ಮ-ಅರ್ಥ-ಕಾಮ-ಮೋಕ್ಷ ಎಂಬ ನಾಲ್ಕು ಫಲಗಳು ದೊರೆತಂತಾಯಿತು. ವರೋಪಚಾರಗಳನ್ನು ಜನಕನು ಅಪಾರವಾಗಿ ಕೊಟ್ಟನು. ಅವನ್ನು ದಶರಥನು ಆದರದಿಂದ ಸ್ವೀಕರಿಸಿ, ಅವುಗಳಲ್ಲಿ ಯಾಚಕರಿಗೆ ಕೊಟ್ಟು ಉಳಿವವನ್ನು ತನ್ನ ಮನೆಗೆ ಕಳಿಸಿದನು. ಯಾವತ್ತೂ ಬೀಗರನ್ನು ಆದರದ ಉಡುಗೊರೆಗಳಿಂದ ಜನಕನು ಸತ್ಕರಿಸಿದ ಬಳಿಕ, ಮುನಿಜನರನ್ನು ಗೌರವದ ಸ್ತುತಿಗಳಿಂದ ಪೂಜಿಸಿ, ತಾನು ಸತ್ಕರಿಸಲು ಶಕ್ತನಲ್ಲವೆಂದು ತನ್ನ ವಿನಯ ಭಾವವನ್ನು ಪ್ರಕಟ ಮಾಡಿದನು. ಆತನು ದೇವತೆಗಳನ್ನೂ, ಋಷಿಗಳನ್ನೂ ಕುರಿತು—"ದೇವತೆಗಳೂ, ಸಂತರೂ ಕೇವಲ ಭಾವವನ್ನು ನೋಡಿ ಸಂತೋಷಪಡುವವರಾಗಿರುವರು; ಹಾಗಲ್ಲದಿದ್ದರೆ ಒಂದು ಬೊಗಸೆನೀರು ಕೊಡುವದರಿಂದ ಸಮುದ್ರದ ಸಂತೋಷವಾಗುತ್ತಿತ್ತೋ? ಎಂದು ಕೇಳಿದನು. ಬಳಿಕ ಮತ್ತೆ ಆತನು ದಶರಥನನ್ನು ಕುರಿತು ಕೈಜೋಡಿಸಿ ವಿನಯ ವಾಣಿಯಿಂದ—"ಮಹಾರಾಜರೊಡನ ಈ ಸಂಬಂಧವು ಒದಗಿದ್ದರಿಂದ ನಾನು ಎಲ್ಲ ಬಗೆಯಿಂದಲೂ ಧನ್ಯನಾಗಿರುವೆನು. ಈ ರಾಜ ವೈಭವದಿಂದ ಸಹಿತವಾಗಿ ನನ್ನನ್ನು ತಮ್ಮ ನಿಷ್ಕಾಮ ಸೇವಕನೆಂದು ತಿಳಿಯಬೇಕು. ಈ ಹುಡುಗಿಯರನ್ನು ತಮ್ಮ ಪರಿಚಾರಕಿಯರೆಂದು ತಿಳಿದು, ಅವರನ್ನು ಪಾಲಿಸತಕ್ಕದ್ದು. ಕೃಪಾನಿಧಾನರೇ, ನಿಮ್ಮನ್ನು ಕರೆಕಳುಹಿದ ಉದ್ಧತತನಕ್ಕಾಗಿ ನನ್ನನ್ನು ಕ್ಷಮಿಸಬೇಕು." ಎಂದು ಪ್ರಾರ್ಥಿಸಿದನು. ಆ ಮೇಲೆ ದಶರಥನಾದರೂ ಜನಕನನ್ನು ಬಹಳ

ವಾಗಿ ಗೌರವಿಸಿದನು. ಅವರಿಬ್ಬರ ಪ್ರೇಮಪೂರ್ಣವಾದ ಅಂತಃಕರಣದೊಳಗಿನ ವಿನಯವು ವರ್ಣನೀಯವಾಗಿತ್ತು. ವಧೂವರರು ಗೌರೀಹರನನ್ನು ಪೂಜಿಸಿದನಂತರ ದಶರಥನ ಕಡೆಗೆ ಬಂದರು. ಆ ಮೇಲೆ ವಿವಿಧ ಪಕ್ವಾನ್ನಗಳ ಭೋಜನವಾಯಿತು. ಆಗಿನ ಬೀಗಬೀಗರೊಳಗಿನ ವಿನೋದದ ಹಾಡುಗಳಿಂದ ದಶರಥನೇ ಮೊದಲಾದವರು ಸಂತೋಷಪಟ್ಟರು. ಬಳಿಕ ತಾಂಬೂಲಾದಿಗಳ ಸತ್ಕಾರಾನಂತರ ಬೀಗರು ತಮ್ಮ ಮನೆಗೆ ಹೋದರು.

ಹೀಗೆ ಕೆಲವು ದಿನ ಜನಕನ ರಾಜಧಾನಿಯಲ್ಲಿ ನಿತ್ಯ ಹೊಸ ಹೊಸ ಮಂಗಲೋತ್ಸವಗಳೂ, ವಿವಿಧ ಪಕ್ವಾನ್ನಗಳ ಭೋಜನಗಳೂ ನಡೆದು, ಜನರಿಗೆ ದಿವಸ ರಾತ್ರಿಗಳು ಕ್ಷಣದಲ್ಲಿ ಹೋಗುತ್ತಲಿದ್ದವು. ದಶರಥನು ವಸಿಷ್ಠರನ್ನು ಪ್ರಾರ್ಥಿಸಿ ಮುನಿಜನರಿಗೆ ಅಲಂಕೃತಗಳಾದ ನಾಲ್ಕುಲಕ್ಷ ಗೋಗಳನ್ನು ದಾನಮಾಡಿ ಅವರ ಆಶೀರ್ವಾದವನ್ನು ಪಡೆದನು. ಯಾಚಕರಿಗೆ ಅವರವರ ಇಚ್ಛೆಯಂತೆ ರತ್ನ, ಗಜ, ಅಶ್ವ, ರಥ, ವಸ್ತ್ರ ಮೊದಲಾದವನ್ನು ದಾನ ಮಾಡಿದನು. ಅವರು ದಶರಥನ ಗುಣಗಾನ ಮಾಡುತ್ತ “ ದಿನಕರಕುಲನಾಥನ ಜಯಜಯಕಾರವಿರಲಿ” ಎಂದು ಹರಿಸುತ್ತ ಹೊರಟು ಹೋದರು. ಹೀಗೆ ಎಲ್ಲರನ್ನು ಸಂತೋಷ ಪಡಿಸಿ, ದಶರಥನು ಅಯೋಧ್ಯೆಗೆ ಹೋಗುವದಕ್ಕಾಗಿ ಜನಕನ ಅನುಮತಿಯನ್ನು ಕೇಳಲು, ಆತನು ಪ್ರೇಮದಿಂದ ಇಂದುನಾಳೆ ಎಂದು ಕಾಲಹರಣ ಮಾಡಹತ್ತಿದನು. ಆನಂದೋತ್ಸವಗಳು ಅವ್ಯಾಹತವಾಗಿ ನಡೆಯತೊಡಗಿದವು. ದಶರಥನು ಊರಿಗೆ ಹೋಗುವದು ಯಾರಿಗೂ ಸಮಾಧಾನಕರವಾಗಲೊಲ್ಲದು. ಕಡೆಗೆ ದಶರಥನ ಆಗ್ರಹವು ಹೆಚ್ಚಾದದ್ದರಿಂದ ನಿರ್ವಾಹವಿಲ್ಲದೆ ಜನಕನು ಆತನ ಪ್ರಯಾಣಕ್ಕೆ ಅನುಮತಿಸಬೇಕಾಯಿತು. ಬೀಗರು ಬರುವಾಗ ಇಳಿದುಕೊಂಡ ಸ್ಥಳಗಳಿಗೆ ಪುನಃ ಯಾವತ್ತು ಸಾಹಿತ್ಯಗಳನ್ನು ಜನಕನು ಕಳಿಸಿದನು. ಅಲಂಕೃತಗಳಾದ ಒಂದು ಲಕ್ಷ ಕುದುರೆಗಳನ್ನೂ, ಇಪ್ಪತ್ತೈದುಸಾವಿರ ರಥಗಳನ್ನೂ, ಅಲಂಕೃತಗಳಾದ ಹತ್ತು ಸಹಸ್ರ ಆನೆಗಳನ್ನೂ, ಬಂಡಿಗಳನ್ನು ತುಂಬಿ ತುಂಬಿ ಬಂಗಾರ, ರತ್ನಗಳು, ವಸ್ತ್ರಗಳು ಮುಂತಾದ ವಿವಿಧವಸ್ತುಗಳನ್ನೂ, ಅಸಂಖ್ಯ ಎತ್ತು ಆಕಳುಗಳನ್ನೂ ಜನಕನು ದಶರಥನಿಗೆ ಅಂದಣವಾಗಿ ಕೊಟ್ಟನು. ಸುಲೋಚನೆಯೇ ಮೊದಲಾದ ಅಂತಃಪುರದ ಜನರು ದಶರಥನ ಪ್ರಯಾಣವನ್ನು ನೆನಿಸಿ ವ್ಯಥಿತಾಂತಃಕರಣರಾದರು. ಸುಲೋಚನೆಯು ಸೀತೆಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು— “ ಸೀತೆ, ನೀನು ಯಾವಾಗಲೂ ನಿನ್ನ ಪತಿಗೆ ಪ್ರಿಯಳಾಗಿ, ನಿನ್ನ ಸೌಭಾಗ್ಯವು ಅಖಂಡವಾಗಿರಲೆಂಬದೇ ನಿನಗೆ ನಮ್ಮ ಆಶೀರ್ವಾದವು. ನೀನು ಅತ್ತೆಮಾವಂದಿರನ್ನೂ ಗುರುಜನರನ್ನೂ ಸೇವಿಸುತ್ತಲಿರು. ನಿನ್ನ ಪತಿಯ ಒಲವನ್ನರಿತು ಆತನ ಅನುಜ್ಞೆಯಂತೆ ನಡೆಯುತ್ತ ಹೋಗು.” ಎಂದು ಸ್ತ್ರೀಧರ್ಮವನ್ನು ಕಲಿಸಿದಳು. ಯಾವತ್ತು ರಾಣಿಯರು ರಾಜಪುತ್ರಿಯನ್ನು ಸಂತಯಿಸಿ ಕಳಿಸುವಾಗ“ ಬ್ರಹ್ಮನು ಸ್ತ್ರೀ ಜಾತಿಯನ್ನು ಯಾಕೆ

ನಿರ್ವಾಣಮಾಡಿದನೋ!" ಎಂದು ಆಸಮಾಧಾನ ಪಟ್ಟರು. ಶ್ರೀ ರಾಮನು ಅನುಜ್ಞೆ ಪಡೆಯುವದಕ್ಕಾಗಿ ಅಂತಃ ಪುರಕ್ಕೆ ಹೋಗಿ ಅತ್ತೆಯವರಿಗೆ ನಮಸ್ಕರಿಸಿದ್ದನು. ಸುಲೋಚನೆಯು ರಾಮನಗುಣಗಳನ್ನು ಶ್ಲಾಘಿಸಿ ಆತನನ್ನು ಕುರಿತು—" ನಮ್ಮೆಲ್ಲರಿಗೂ ಅತ್ಯಂತ ಪ್ರಿಯಳಾಗಿರುವ ಈ ಸೀತೆಯನ್ನು, ಆಕೆಯಸುಶೀಲತೆ, ಪ್ರೇಮಗಳನ್ನು ಲಕ್ಷಿಸಿ ನಿಮ್ಮ ದಾಸಿಯೆಂದು ಸ್ವೀಕರಿಸಬೇಕು. ಶ್ರೀರಾಮನೇ, ನೀನು ಪೂರ್ಣಕಾಮನೂ, ಜ್ಞಾನಿಶಿರೋಮಣಿಯೂ, ಭಾವಪ್ರಿಯನೂ, ಪರಗುಣಗ್ರಾಹಕನೂ, ದೋಷಹಾರಕನೂ ಇರುತ್ತೀ, ಎಂದು ಮತ್ತೆ, ಶ್ಲಾಘಿಸಿ ರಾಮನ ಚರಣಗಳಿಗೆರಗಿ ಅಪ್ಪಣೆಕೊಟ್ಟಳು.

ಈ ವೇಳೆಗೆ ದಶರಥನ ಪರಿವಾರವು ಜನಕನಿಂದ ಅಪ್ಪಣೆ ಪಡೆದು ಹೊರಟಿತು, ಪಯಣದ ಮೇಲೆ ಪಯಣವನ್ನು ಮಾಡುತ್ತ ಅಯೋಧ್ಯೆಯನ್ನು ಮುಟ್ಟಿತು. ದಶರಥರಾಜನು ಸಪತ್ನೀಕರಾದ ಪುತ್ರರೊಡನೆ ಬಂದದ್ದನ್ನುಕೇಳಿ, ಪುರಜನರು ಅಯೋಧ್ಯಾಪಟ್ಟಣವನ್ನು ಶೃಂಗರಿಸಿ, ವೈಭವದೊಡನೆ ಅರಸನನ್ನು ಕರಕೊಂಡು ಹೋದರು. ಆತನು ಗುರುಗಳಾದ ವಸಿಷ್ಠರೊಡನೆಯೂ, ಬ್ರಹ್ಮವೃಂದದೊಡನೆಯೂ ಗೃಹಪ್ರವೇಶಮಾಡಿದನು. ದಶರಥನೂ, ಯಾವತ್ತೂ ರಾಣಿಯರೂ ಬ್ರಾಹ್ಮಣರನ್ನೂ ವಶಿಷ್ಠ—ವಿಶ್ವಾಮಿತ್ರರನ್ನೂ ಭಕ್ತಿಯಿಂದ ಪೂಜಿಸಿ, ಆದರ, ದಾನ, ಪ್ರೇಮ ಇವುಗಳಿಂದ ಅವರನ್ನು ಸಂತೋಷಪಡಿಸಿದರು. ದಶರಥನು ಪ್ರೇಮಯುಕ್ತವಾದ ಅಂತಃಕರಣದಿಂದ ಪುತ್ರ—ಮಿತ್ರಾದಿ ಸರ್ವಸ್ವವನ್ನೂ ವಸಿಷ್ಠರಮುಂದಿಟ್ಟನು. ಮುನಿಶ್ರೇಷ್ಠನು ಅದರೊಳಗಿಂದ ತನ್ನ ದಕ್ಷಿಣೆಯನ್ನಷ್ಟು ಇಸುಕೊಂಡು ಆನಂದದಿಂದ ಸ್ವಸ್ಥಾನಕ್ಕೆ ಗಮನಮಾಡಿದನು. ಪ್ರಿಯಜನರು, ಅತಿಥಿಗಳು, ಪೂಜ್ಯಮಂಡಲಿಯು, ಬಾಬುದಾರರು ಇವರೆಲ್ಲರನ್ನು ಅರಸನು ಸಂತೋಷಪಡಿಸಿದನು. ಅರಸನು ಅಂತಃಪುರವನ್ನು ಪ್ರವೇಶಿಸಿ ರಾಣಿಯರಿಗೆ ವಿವಾಹವೃತ್ತಾಂತವನ್ನು ಸಾದ್ಯಂತವಾಗಿ ಹೇಳಿದನು. ಅದನ್ನು ಕೇಳಿ ಯಾವತ್ತು ರಾಣಿಯರು ಹರ್ಷಭರಿತರಾದರು. ತಾಂಬೂಲ—ಸುಗಂಧ ದ್ರವ್ಯಾದಿಗಳಿಂದ ಸತ್ಕೃತರಾಗಿ ಎಲ್ಲರೂ ರಾಮನ ದರ್ಶನವನ್ನು ಮಾಡಿಕೊಂಡು ಅರಸನ ಅಪ್ಪಣೆಯಿಂದ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ದಶರಥನು ಯಾವತ್ತು ರಾಣಿಯರನ್ನು ಕುರಿತು—"ಈ ಸೊಸೆಂದಿರು ಹೊಟ್ಟೆಯಮಕ್ಕಳಂತೆಯಿದ್ದು, ಅಪರಿಚಿತಸ್ಥಳದಲ್ಲಿ ಬಂದಿರುವದರಿಂದ ಇವರ ಸಂರಕ್ಷಣವನ್ನು, ರೆಪ್ಪೆಗಳು ಕಣ್ಣುಗಳನ್ನು ರಕ್ಷಿಸುವಂತೆ ಮಾಡಬೇಕೆಂದು" ಹೇಳಿದನು. ರಾತ್ರಿಯಾಗಲು, ಎಲ್ಲರೂ ನಿದ್ರಾಸುಖವನ್ನನುಭವಿಸಿ, ಬೆಳಗಾಗುತ್ತಲೆ ಎಲ್ಲ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ದರ್ಬಾರಕ್ಕೆ ಬಂದರು. ನಾಲ್ವರು ಪುತ್ರರಿಂದ ಸಹಿತನಾದ ದಶರಥರಾಜನನ್ನು ನೋಡಿ ಎಲ್ಲರಿಗೂ ಸಂತೋಷವಾಯಿತು; ಅವರ ನೇತ್ರಗಳು ಸಫಲವಾದವು. ಅಷ್ಟರಲ್ಲಿ ವಸಿಷ್ಠ—ವಿಶ್ವಾಮಿತ್ರಾದಿ ಋಷಿಮಂಡಲಿಯು ಬರಲು, ಅವರಿಗೆ ಅರಸನು ಶ್ರೇಷ್ಠಗಳಾದ ಆಸನಗಳನ್ನು ಕೊಟ್ಟು ಪೂಜಿಸಿ ಅವರಚರಣಕ್ಕೆರಗಿದನು. ರಾಮನನ್ನು ನೋಡಿದ ಕೂಡಲೆ ಇಬ್ಬರು ಗುರುಮೂರ್ತಿಗಳ ಪ್ರೇಮವೂ ಉಕ್ಕೇರಿತು!

ಈ ಮೇರೆಗೆ ಆನಂದೋತ್ಸವಗಳು ಕೆಲವುದಿನ ನಡೆದಬಳಿಕ, ಒಂದುದಿನ ಶುಭಮುಹೂರ್ತನೋಡಿ ವಧೂವರರ ಲಗ್ನಕಂಕಣಗಳನ್ನು ಬಿಚ್ಚಿದರು. ವಿಶ್ವಾಮಿತ್ರರು ತಮ್ಮ ಆಶ್ರಮಕ್ಕೆ ಹೋಗುವದಕ್ಕಾಗಿ ಅನುಜ್ಞೆಯನ್ನು ಬೇಡುತ್ತಲಿದ್ದರು; ಆದರೆ ದಶರಥನ ಪ್ರೇಮದ ಆಗ್ರಹಕ್ಕಾಗಿ ಅವರು ಬಹುದಿವಸ ಅಯೋಧ್ಯೆಯಲ್ಲಿ ಆತನ ಸೇವೆಯನ್ನು ಗ್ರಹಿಸುತ್ತ ಆನಂದದಿಂದ ಇರಬೇಕಾಯಿತು; ಮುಂದೆ ವಿಶ್ವಾಮಿತ್ರರು ಸ್ವಸ್ಥಳಕ್ಕೆ ಹೋಗಲು ಅತ್ಯಾತುರಪಡಲು, ದಶರಥನು ಅನಿವಾರ್ಯಹಪಕ್ಷ ಪುತ್ರ-ಕಳತ್ರರೊಡನೆ ಆ ಮುನಿಶ್ರೇಷ್ಠರನ್ನು ಪೂಜಿಸಿ, "ತಮ್ಮ ಯೋಗದಿಂದಲೇ ನನ್ನ ಅಭ್ಯುದಯವಾಯಿತೆಂತಲೂ, ನನ್ನ ಮಕ್ಕಳಮೇಲೆ ಯಾವಾಗಲೂ ಲೋಭವಿರಬೇಕೆಂತಲೂ, ಪುತ್ರ-ಕುಲಪುತ್ರರೊಡನೆ ನಾನು ತಮ್ಮ ಸೇವಕನಿರುವೆನೆಂತಲೂ, ಮೇಲೆ ಮೇಲೆ ನನಗೆ ತಮ್ಮ ದರ್ಶನವಾಗಬೇಕೆಂತಲೂ ಬೇಡಿಕೊಂಡನು. ಆಗ ಆ ಬ್ರಹ್ಮಋಷಿಯು ಪ್ರೇಮ—ಪರವಶನಾಗಿ ಅವರೆಲ್ಲರನ್ನು ಆಶೀರ್ವದಿಸಿ, ಅವರ ಅನುಜ್ಞೆಪಡೆದು ಸ್ವಸ್ಥಾನಕ್ಕೆ ತೆರಳಿದನು. ಎಲ್ಲಕಡೆಯಲ್ಲಿ ರಾಮವಿವಾಹದ ಸುದ್ದಿಯೇ ಪಸರಿಸಿತು. ರಾಮನ ಪಾವನತರಯಶಸ್ಸನ್ನು ತ್ರೈಲೋಕ್ಯವು ಗಾಯನಮಾಡತೊಡಗಿತು. ರಾಮನು ವಿವಾಹಿತನಾಗಿ ಅಯೋಧ್ಯೆಗೆ ಬಂದಂದಿನಿಂದ ಅಯೋಧ್ಯಾನಗರಿಯು ಆನಂದದ ನಿವಾಸಸ್ಥಾನವಾಯಿತು. ಶ್ರೀರಾಮನ ಮೌಂಜೀಬಂಧನ, ವಿವಾಹ ಮೊದಲಾದ ಮಂಗಲೋತ್ಸವದ ಪ್ರಸಂಗಗಳನ್ನು ಆನಂದದಿಂದ ಕೇಳುವವರೂ, ಹೇಳುವವರೂ ಶ್ರೀ ಸೀತಾರಾಮನ ಪ್ರಸಾದದಿಂದ ಯಾವಾಗಲೂ ಸುಖಪಡುವರು! ಅವರಿಗೆ ನಿತ್ಯ ಆನಂದದ ಲಾಭವಾಗುವದು; ಯಾಕಂದರೆ, ರಾಮನ ಯಶಸ್ಸು ಮಂಗಲದ ನಿವಾಸಸ್ಥಾನವಾಗಿರುವದು!

ಇತಿ, ಶ್ರೀರಾಮಚರಿತಮಾನಸೇ ಸಕಲಕಲಿಕಲುಷ ವಿಧ್ವಂಸನೇ ವಿಮಲ ಸಂತೋಷ
ಸಂಪಾದನೋ ನಾಮ ಪ್ರಥಮಃ ಸೋಪಾನಃ ಸಮಾಪ್ತಃ

*

*

॥ ಶ್ರೀ ಗಣೇಶಾಯ ನಮಃ ॥

ಶ್ರೀ ಜಾನಕೀವಲ್ಲಭೋ ವಿಜಯತೇ.

# ರಾಮಚರಿತ ಮಾನಸ

## ಶ್ರೀ ತುಲಸೀ-

# ರಾಮಾಯಣ.

## ದ್ವಿತೀಯಸೋಪಾನ.

## [ ಅಯೋಧ್ಯಾಕಾಂಡ ]

ರಾಮನ ಯೌವರಾಜ್ಯಾಭಿಷೇಕ--ಶ್ರೀ ಗುರುಚರಣಾರವಿಂದದ ಧೂಳಿ
ನ್ನ ಮನಸ್ಸೆಂಬ ಕನ್ನಡಿಯನ್ನು ಸ್ವಚ್ಛಮಾಡಿ, ನಾಲ್ಕು ಪುರುಷಾರ್ಥಗಳನ್ನು
ಾಡಿಕೊಡುವಂಥ ರಘುಪುಂಗವನ ಉಜ್ವಲಯಶಸ್ಸನ್ನು ವರ್ಣಿಸುವೆನು- ರಾಮ
ು ವಿವಾಹಮಾಡಿಕೊಂಡು ಅಯೋಧ್ಯೆಗೆ ಬಂದಂದಿನಿಂದ ಅಲ್ಲಿ ನಿತ್ಯ ಹೊಸ ಹೊಸ
ೋತ್ಸವಗಳು ನಡೆಯತೊಡಗಿದವು. ರಾಮಚಂದ್ರನ ಮುಖಚಂದ್ರನ ದರ್ಶನ
ಂದ ಯಾವತ್ತು ಪ್ರಜೆಗಳು ಸುಖಿಗಳಾಗುತ್ತಿದ್ದರು. ದಶರಥನು ರಾಮಚಂ
ಗುಣಶೀಲಸ್ವಭಾವಗಳನ್ನು ನೋಡಿ ತಲ್ಲೀನನಾಗುತ್ತಿದ್ದನು. ರಾಮಚಂದ್ರನ
ತಾಯಂದಿರೂ, ಅವರ ಸಖಿಯರೂ, ಸಹಚರಿಯರೂ ತಮ್ಮ ಮನೋರಥ
ದ ಬಳ್ಳಿಯು ಫಲಿಸಿದ್ದನ್ನು ನೋಡಿ ಸಂತುಷ್ಟರಾಗುತ್ತಿದ್ದರು. ದಶರಥನ ಕಣ್ಣ
ರಾಮನಿಗೆ ಯೌವರಾಜ್ಯಾಭಿಷೇಕವಾಗಬೇಕೆಂದು ಎಲ್ಲರೂ ಅಂತಃಕರಣಪೂ
ಗಿ ಇಚ್ಛಿಸುತ್ತಿದ್ದರು. ಅದರಂತೆ ಅವರು ಬಾಯಿಂದ ಒಡನುಡಿಯುತ್ತಿದ್ದರಲ್ಲದೆ
ೇಗನೆ ಒದಗಿಬರುವದಕ್ಕಾಗಿ ಶ್ರೀ ಶಂಕರನನ್ನು ಪ್ರಾರ್ಥಿಸುತ್ತಿದ್ದರು. ಒಂದುದಿನ
ು ಸಭಾಗೃಹದಲ್ಲಿ ಕುಳಿತಿರುವಾಗ ಸಹಜವಾಗಿ ಕೈಯಲ್ಲಿ ಕನ್ನಡಿಯನ್ನು
ಡು ಮೋರೆಯನ್ನು ನೋಡಿಕೊಳ್ಳುತ್ತಿತ್ತು, ತಲೆಯ ಮೇಲಿನ ಕಿರೀಟವನ್ನು ಸರಿಮಾ

ನೋಡಿಕೊಳ್ಳುತ್ತಿರಲು, ಕರ್ಣಪ್ರದೇಶದಲ್ಲಿಯ ಕೂದಲುಗಳು ಬೆಳ್ಳಗಾದದ್ದು ಆತನ ಕಣ್ಣಿಗೆ ಬಿದ್ದಿತು. ಆಗ ಆತನಿಗೆ ಮುಪ್ಪು—“ಎಲೈ ದಶರಥನೇ, ರಾಮನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿ ಜನ್ಮದ ಹಾಗು ಜೀವಿತ್ವದ ಸಾರ್ಥಕ್ಯಮಾಡಿಕೊಳ್ಳೆಂ”ದು ಬೋಧಿಸುತ್ತಿರುವಂತೆ ತೋರಿತು. ಈ ವಿಚಾರವನ್ನು ಮನಸ್ಸಿನಲ್ಲಿ ತಂದು, ಒಳ್ಳೆಯದಿವಸವನ್ನು ಸಾಧಿಸಿ ಆತನು ತನ್ನ ಗುರುಗಳಾದ ವಸಿಷ್ಠರನ್ನು ಕುರಿತು—ಎಲೈ ಮುನಿನಾಯಕಾ, ಕೇಳಬೇಕು. ರಾಮನು ಸರ್ವಪ್ರಕಾರಗಳಿಂದ ಯಾವತ್ತು ಕಾರ್ಯಗಳನ್ನು ಮಾಡಲು ಸಮರ್ಥನಾಗಿರುವನು. ರಾಮನು ನನಗೆ ಪ್ರಿಯನಾಗಿರುವಂತೆಯೇ ಇತರ ಸೇವಕರಿಗೂ, ಮಿತ್ರಮಂಡಲಿಗೂ, ಯಾವತ್ತು ಪುರವಾಸಿಜನರಿಗೂ, ನಮ್ಮ ಶತ್ರು-ಮಿತ್ರ,—ಉದಾಸೀನರಾದವರೆಲ್ಲರಿಗೂ ಪ್ರಿಯನಾಗಿರುವನು. ಸಮರ್ಥರಾದ ತಮ್ಮ ಆಶೀರ್ವಾದವೇ ಮೂರ್ತಿಗೊಂಡಂತೆ ರಾಮನು ಇರುವನು. ಸ್ವಾಮಿನ್, ವಿಪ್ರಮಂಡಲಿಯು ಕೂಡ ತಮ್ಮ ತಮ್ಮ ಪರಿವಾರದಿಂದ ಸಹಿತವಾಗಿ ರಾಮನಮೇಲೆ ಮಹಾರಾಜನಂತೆ ಲೋಭಮಾಡುತ್ತಿರುವದು. ಗುರುಚರಣದ ಧೂಲಿಯನ್ನು ಮಸ್ತಕದಲ್ಲಿ ಧರಿಸುವವರು ಯಾವತ್ತು ವೈಭವಗಳನ್ನು ತಮಗೆ ಅಂಕಿತವಾಗಿಮಾಡಿಕೊಳ್ಳುವರು. ಇದರ ಅನುಭವವು ನನ್ನ ಹಾಗೆ ಬೇರೆ ಯಾರಿಗೂ ಬಂದಿರಲಿಕ್ಕಿಲ್ಲ. ಇದೇ ಪವಿತ್ರಧೂಲಿಯ ಸೇವನದಿಂದಲೇ ನನಗೆ ಎಲ್ಲವೂ ಪ್ರಾಪ್ತವಾಗಿ ಹೋಗಿರುತ್ತವೆ. ಎಲೈ ನಾಥನೇ, ನನ್ನ ಮನಸ್ಸಿನಲ್ಲಿ ಈಗೊಂದು ಇಚ್ಛೆಯು ಉಂಟಾಗಿದ್ದು, ಅದಾದರೂ ತಮ್ಮ ಆಶೀರ್ವಾದದಿಂದಲೇ ಸಫಲವಾಗುವದು. ಮಹಾರಾಜ, ನನಗೆ ನನ್ನ ಮನೋದಯವನ್ನು ಹೇಳಲು ಅಪ್ಪಣೆಯಾಗಬೇಕು.

ದಶರಥನ ಈ ಮಾತುಗಳನ್ನು ಕೇಳಿ ಸುಪ್ರಸನ್ನರಾದವಸಿಷ್ಠರು—“ರಾಜಾ, ನಿನ್ನ ನಾಮ-ಯಶಸ್ಸುಗಳೇ ನಿನ್ನ ಯಾವತ್ತು ಇಚ್ಛೆಗಳನ್ನು ಪೂರ್ಣಮಾಡುವಂತಹವಾಗಿರುವವು. ನಿನ್ನ ಮನಸ್ಸಿನ ಇಚ್ಛೆಗಳು ಫಲಾನುಗಾಮಿಗಳಾಗಿಯೇ ಇರುವವು.” ಅನ್ನಲು, ಗುರುವು ಪೂರ್ಣಪ್ರಸನ್ನ ಚಿತ್ತನಾಗಿರುವದನ್ನು ನೋಡಿ ದಶರಥನು ಪ್ರೇಮಲ ಶಬ್ದಗಳಿಂದ ಮೆಲ್ಲನೆ—“ನಾಥನೆ, ರಾಮನನ್ನು ಯುವರಾಜನಾಗಿಮಾಡಬೇಕು. ಅನುಗ್ರಹಿಸಿ ಅಪ್ಪಣೆ ಮಾಡಿದರೆ ಸಮಾರಂಭಮಾಡಿಸುವೆನು. ನನ್ನ ಕಣ್ಣೆದುರಿನಲ್ಲಿ ಇದಿಷ್ಟು ಉತ್ಸವವಾದರೆ, ಯಾವತ್ತು ಪ್ರಜೆಗಳ ನೇತ್ರಗಳ ಸಾಫಲ್ಯವಾಗುವದು. ಪ್ರಭುಗಳ ಪ್ರಸಾದದಿಂದ ಶ್ರೀಶಂಕರನು ಎಲ್ಲವನ್ನೂ ನನಗೆ ಅನುಕೂಲಿಸಿಯೇ ಇರುವನು. ನನ್ನ ಮನಸ್ಸಿನದಿದೊಂದು ಉತ್ಸಾಹವು ಪೂರ್ಣವಾಗುವದು ಉಳಿದಿರುವದು. ಇದೊಂದು ಪೂರ್ಣವಾದರೆ ನನಗೆ ಬೇರೆ ಯಾತರ ಚಿಂತೆಯೂ ಉಳಿದಿರುವದಿಲ್ಲ. ನನ್ನ ದೇಹವು ಇರಲಿ-ಹೋಗಲಿ; ಹಿಂದಿನಿಂದ ಪಶ್ಚಾತ್ತಾಪಪಡುವ ಪ್ರಸಂಗವು ಬರಬಾರದು.” ಅನ್ನಲು, ದಶರಥನ ಈ ಪ್ರೇಮಲವೂ, ಮಂಗಲಾತ್ಮಕವೂ, ಆನಂದಜನಕವೂ ಆದಭಾಷಣವು ಮುನಿವರ್ಯನ ಮನಸ್ಸಿಗೂ

ಬಂದಿತು. ಆತನು—"ಅರಸನೇ, ಕೇಳು; ಯಾವಾತನಿಗೆ ವಿಮುಖನಾಗುವದರಿಂದ ಜೀವನ ದುಃಖ-ಪರಂಪರೆಯನ್ನು ಭೋಗಿಸಬೇಕಾಗುವದೋ, ಯಾವಾತನ ಭಜನೆಯಿಂದ ಜೀವನ ತಾಪವು ಶಾಂತವಾಗುವದೋ, ಆ ಪುನೀತನೂ, ಪ್ರೇಮಾನುಗಾಮಿಯೂ, ಸ್ವಾಮಿಯೂ ಆದ ಶ್ರೀ ರಾಮಚಂದ್ರನು ನಿನ್ನ ಮಗನರೂಪದಿಂದ ಅವತರಿಸಿರುವನು; ಅದ್ದರಿಂದ ರಾಜನೇ, ಬೇಗನೆ ಯಾವತ್ತು ಸಮಾರಂಭದ ಸಿದ್ಧತೆಯಲ್ಲಿ ತೊಡಗು. ರಾಮನ ಯುವರಾಜನಾದ ದಿವಸವೇ ಸುದಿವಸವು, ಅದೇ ಸುಮಂಗಲವು, ಎಂದು ಹೇಳಿದರು. ಅದನ್ನು ಕೇಳಿದ ದಶರಥನು ಸಂತೋಷಪಟ್ಟು ಸೇವಕರ ಮುಖಾಂತರ ಸುಮಂತ್ರಮಂತ್ರಿಯನ್ನು ಕರೆಸಿ ಆತನಿಗೆ, ಗುರುಮಹಾರಾಜರು ಪ್ರಸನ್ನರಾಗಿ ತನ್ನನ್ನು ಕುರಿತು—"ರಾಜಾ, ರಾಮನಿಗೆ ಯುವರಾಜ್ಯವನ್ನು ಕೊಡು. ದರ್ಬಾರದ ಮತದಿಂದ ಇದ್ದು ಒಪ್ಪಿಗೆಯಾದರೆ ರಾಮನಿಗೆ ರಾಜ್ಯಾಭಿಷೇಕವನ್ನು ಮಾಡು" ಎಂದು ಅಜ್ಞಾಪಿಸಿದ್ದನ್ನು ತಿಳಿಸಿದನು. ಈ ಪ್ರಿಯವಾರ್ತೆಯನ್ನು ಕೇಳಿದ ಕೂಡಲೆ ಸುಮಂತ್ರನಿಗೆ ಆನಂದವಾಯಿತು. ಆತನು ಕೈ ಜೋಡಿಸಿ ವಿನಯದಿಂದ—"ಚಕ್ರವರ್ತಿ ರಾಜನು ಚಿರಂಜೀವನಾಗಲಿ; ಜಗತ್ತಿನ ಕಲ್ಯಾಣವನ್ನುಂಟುಮಾಡುವ ಕಾರ್ಯವನ್ನೇ ತಾವು ನಿಶ್ಚಯಿಸಿರುವಿರಿ. ಮಹಾರಾಜ, ತ್ವರೆಮಾಡಬೇಕು; ಕಾರ್ಯದಲ್ಲಿ ಆಲಸ್ಯವಾಗಬಾರದು," ಎಂದು ಬೇಡಿಕೊಂಡನು. ಅದನ್ನು ಕೇಳಿ ದಶರಥನಿಗೆ ಪರಮಾನಂದವಾಯಿತು.

ಸುಮಂತ್ರನು ದಶರಥನ ಅಪ್ಪಣೆಯಿಂದ ಗುರುಗಳಾದ ವಸಿಷ್ಠರನ್ನು ಕೇಳಿ ರಾಜ್ಯಾಭಿಷೇಕದ ಯಾವತ್ತು ಪದಾರ್ಥಗಳನ್ನು ಸಿದ್ಧಪಡಿಸತೊಡಗಿದನು. ಗುರುಗಳ ಅಪ್ಪಣೆಯಂತೆ ಶಾಸ್ತ್ರೋಕ್ತರೀತಿಯಿಂದ ಮಂಟಪಗಳನ್ನು ಹಾಕಿಸಿ ಪಟ್ಟಣವನ್ನು ಶೃಂಗರಿಸಿದನು. ಗಣಪತಿ, ಗುರು, ಕುಲದೇವತೆ ಮೊದಲಾದವುಗಳ ಅರ್ಚನೆಗಳು ನಡೆದವು. ಬಗೆಬಗೆಯಿಂದ ಬ್ರಾಹ್ಮಣಸಂತರ್ಪಣಗಳು ಸಾಗಿದವು. ರಾಮಾಭಿಷೇಕದ ಮಂಗಲಕರವಾದ ಸುದ್ದಿಯನ್ನು ಕೇಳಿ ಮನೆಮನೆಗೆ ಮಂಗಲವಾದ್ಯಗಳು ಬಾರಿಸತೊಡಗಿದವು. ಸೀತಾರಾಮರ ಶುಭಾಂಗಗಳಲ್ಲಿ ಶುಭ ಚಿಹ್ನಗಳು ತೋರಹತ್ತಿದವು. ಅವರ ಶುಭಾಂಗಗಳು ಸ್ಫುರಿಸತೊಡಗಿದವು. ಆ ಶುಭಸೂಚನೆಗಳ ಅರ್ಥವನ್ನು ಸೀತಾ ರಾಮರು ಪ್ರೇಮ ರೋಮಾಂಚಿತರಾಗಿ—"ಇವು ಭರತನ ಆಗಮನದ ಚಿಹ್ನಗಳಾಗಿರುವವು. ಆತನು ಅಜ್ಜನ ಮನೆಗೆ ಹೋಗಿ ಬಹಳ ದಿವಸಗಳಾಗಿರುವವು. ಈ ಶುಭಶಕುನಗಳ ಮೇಲಿಂದ ಆ ಪ್ರಿಯಭ್ರಾತನನ್ನು ಬೇಗನೆ ಕಾಣುವ ಯೋಗವಿದ್ದಂತೆ ನಿರ್ವಿವಾದವಾಗಿ ತೋರುತ್ತದೆ. ಭರತನ ಹಾಗೆ ಪ್ರಿಯಕರರಾದವರು ನಮಗೆ ಜಗತ್ತಿನಲ್ಲಿ ಬೇರೆ ಯಾರಿರುವರು! ಶಕುನದ ಫಲವು ಬೇರೆ ಏನೂ ಆಗಿರದೆ ಇದೇ ಆಗಿರುವದು." ಎಂದು ಪರಸ್ಪರ ಆಲೋಚಿಸಿದರು. ಇತ್ತ ಅಭಿಷೇಕದ ಮಂಗಲವಾರ್ತೆಯನ್ನು ಕೇಳಿ ಅಂತಃಪುರದಲ್ಲಿ ಯಾವತ್ತು ರಾಣಿಯರಿಗೆ ಪರಮಾನಂದ ವಾಯಿತು. ಅವರು ಮಂಗಲ ಸಾಹಿತ್ಯಗಳನ್ನು ಸಿದ್ಧಗೊಳಿಸತೊಡಗಿ-

ತರು. ಕೌಸಲ್ಯೆಯು ಆನಂದದ ಭರದಿಂದ ಬ್ರಾಹ್ಮಣರನ್ನು ಕರೆಸಿ ವಿವಿಧ ದಾನಗಳನ್ನು ಕೊಟ್ಟಳು. ಗ್ರಾಮದೇವತೆ, ಜಲಸ್ಥಲಾದಿ ದೇವತೆ, ನಾಗದೇವತೆಗಳಿಗೆ ಪೂಜೆಗಳನ್ನು ಕಟ್ಟಿ, ಬಲಿ-ಭಾಗಗಳನ್ನು ನಿಯಮಿಸಿ ಕೊಟ್ಟಳು. "ರಾಮನಿಗೆ ಕಲ್ಯಾಣವಾಗುವಂತೆ ವರಪ್ರದಾನ ಮಾಡಿರಿ" ಎಂದು ಆಕೆಯು ದೇವತೆಗಳನ್ನು ಪ್ರಾರ್ಥಿಸಿದಳು.

ಬಳಿಕ ದಶರಥನು ವಸಿಷ್ಠಮುನಿಯನ್ನು ಕರೆಸಿ, —"ತಾವು ರಾಮನಬಳಿಗೆ ಹೋಗಿ ವ್ರತೋಪವಾಸಗಳ ನಿಯಮವನ್ನು ಹೇಳಬೇಕೆಂದು ಬೇಡಿಕೊಂಡನು. ಗುರುಗಳ ಬಂದ ವರ್ತಮಾನವನ್ನು ಕೇಳಿ ಆ ರಾಘವಶ್ರೇಷ್ಠನು ಬಾಗಿಲವರೆಗೆ ಬಂದು ಅವರ ಚರಣಗಳ ಮೇಲೆ ಮಸ್ತಕವನ್ನಿಟ್ಟನು. ಆತನು ಪ್ರೇಮಾಕ್ಷರಗಳಿಂದ ಅರ್ಘ್ಯವನ್ನು ಅರ್ಪಿಸಿ ಒಳಗೆ ಕರೆತಂದು ಷೋಡಶೋಪಚಾರಗಳಿಂದ ಪೂಜಿಸಿ ಅವರ ಸನ್ಮಾನಮಾಡಿದನು. ಬಳಿಕ ಶ್ರೀ ರಾಮನು ಸೀತೆಯೊಡನೆ ಗುರುಚರಣಕ್ಕೆರಗಿ ಕೈಜೋಡಿಸಿಕೊಂಡು —"ಸೇವಕನ ಮನೆಗೆ ಸ್ವಾಮಿಯು ಆಗಮನವೆಂದರೆ, ಮಂಗಲಕರವೂ, ಅಮಂಗಲಹಾರಕವೂ ಆಗಿರು ವದು; ಆದರೂ ದಾಸನನ್ನು ಕರೆಸಿ ಕೃಪೆಮಾಡಿ ಕಾರ್ಯ ನಿಯುಕ್ತನನ್ನಾಗಿ ಮಾಡಿ ದರೂ ಆದಾದರೂ ನ್ಯಾಯೋಚಿತವೇ ಆಗುತ್ತಿತ್ತು. ಪ್ರಭುತ್ವವನ್ನು ಬಿಟ್ಟು ಪ್ರಭುವು ಪ್ರೀತಿ ತೋರಿಸಿದಂತಾಯಿತು. ಇಂದು ಈ ಮಂದಿರವು ಪುನೀತವಾಯಿತು, ಸ್ವಾಮಿನ್, ತಮ್ಮ ಅಪ್ಪಣೆಯಂತೆ ನಡೆದುಕೊಳ್ಳುವೆನು, ಸ್ವಾಮಿಯ ಸೇವೆಯು ಸೇವಕನಿಂದ ಆಗಲೇಬೇಕು, "ಎಂದು ನುಡಿಯಲು, ಶ್ರೀರಾಮನ ಈ ಸ್ನಿಗ್ಧ ಭಾಷಣವನ್ನು ಕೇಳಿ ವಸಿಷ್ಠಮುನಿಯು ಆ ರಘುವೀರನ ಅಭಿನಂದನ ಮಾಡಿ —"ಸೂರ್ಯಕುಲಭೂಷಣಾ ರಾಮಾ, ನೀನು ಹೀಗೆ ಮಾತಾಡದೆ ಹೇಗೆ ಇದ್ದೀ? ನಿನ್ನ ಗುಣ-ಶೀಲ-ಸ್ವಭಾವಗಳು ಅವರ್ಣನೀಯವಾಗಿರುವವು. ಅರಸನು ಅಭಿಷೇಕ ಸಮಾರಂಭವನ್ನು ಯೋಚಿಸಿರು ವನು. ನಿನಗೆ ಯೌವರಾಜ್ಯವನ್ನು ಕೊಡಬೇಕೆಂದು ಆತನು ಇಚ್ಛಿಸುತ್ತಿರುವನು. ರಾಮಾ, ವಿಧಾತೃವು ಕಾರ್ಯವನ್ನು ನಿರ್ವಿಘ್ನವಾಗಿ ಕೊನೆಗಾಣಿಸುವವನಿದ್ದರೆ, ಇಂದು ನೀನು ಸಂಯಮನದಿಂದ ಇರಬೇಕು." ಎಂದು ಹೇಳಿ ಗುರುರಾಜನು ರಾಜನ ಕಡೆಗೆ ಹೋದನು. ಇತ್ತ ರಾಮನು ಆಶ್ಚರ್ಯಪಟ್ಟು-"ನಾವೆಲ್ಲರೂ ಅಣ್ಣ ತಮ್ಮಂದಿರು ಒಬ್ಬನಹೊಟ್ಟೆಯಲ್ಲಿಯೇ ಹುಟ್ಟಿರುವೆವು. ನಮ್ಮ ಊಟ, ಉಡಿಗೆ, ಮಲಗುವದು, ಆಡುವದು ಮೊದಲಾದ ಬಾಲ್ಯದ ಎಲ್ಲ ವ್ಯವಹಾರಗಳು ಪರಸ್ಪರರ ಸಂಗತಿಯಿಂದಲೇ ಆಗಿರುವವು. ಕರ್ಣವೇಧ, ಮೌಂಜೀಬಂಧನ, ವಿವಾಹ ಮೊದಲಾದ ಪ್ರಸಂಗಗಳಾದರೂ ಎಲ್ಲರವೂ ಕೂಡಿಯೇ ಆಗಿರುವವು. ಹೀಗಿದ್ದು, ನಮ್ಮ ಈ ವಿಮಲವಂಶದಲ್ಲಿ ಕಿರಿಯರನ್ನು ಬಿಟ್ಟು ಹಿರಿಯಮಗನಿಗೇ ರಾಜ್ಯಾಭಿಷೇಕಮಾಡುವದು ಇದೊಂದು ಅಪ್ರಶಸ್ತಪ್ರಕಾರವೇ ಆಗಿರುವದು!" ಎಂದು ಪ್ರಭುವು ಯೋಚಿಸಿ, ಭಕ್ತರ ಮನಸ್ಸಿನೊಳಗಿನ ಕೌಟಿಲ್ಯವನ್ನು ದೂರಮಾಡಿದನು. ಇತ್ತ ಪಟ್ಟಣದಲ್ಲಿ ಅನೇಕ ಪ್ರಕಾರದ ವಾದ್ಯಗಳು ಬಾರಿಸತೊಡಗಿ

ಅವರ್ಣನೀಯ ಆನಂದವು ಉಂಟಾಯಿತು. ಭರತನ ಬರವನ್ನು ಎಲ್ಲರೂ ಎದುರು ನೋಡತೊಡಗಿದರು. ಜನರು ರಾಮನ ಮಂಗಲೋತ್ಸವವನ್ನು ನೋಡಲು ಅತ್ಯಂತ ಆತುರರಾಗಿದ್ದರು. ಅವರು ತಮ್ಮ ತಮ್ಮೊಳಗೆ --ನಾಳಿಗೇ ಮಂಗಲೋತ್ಸವದ ಮುಹೂರ್ತ ವಿದ್ದರೂ ಇನ್ನೂ ಎಷ್ಟು ಹೊತ್ತು ಹೋಗಬೇಕಾಗಿರುವದಲ್ಲ! ಪರಮೇಶ್ವರನು ನಮ್ಮ ಇಚ್ಛೆಯನ್ನು ಪೂರ್ಣ ಮಾಡಿದಾಗ ನಮಗೆ ಸಮಾಧಾನವಾಗುವದು; ಎಂದು ಎಲ್ಲರು " ನಾಳೆಯಾವಾಗ ಬೆಳಗಾಗುವದೋ" ಎಂದು ಆತುರರಾಗಿದ್ದರು.

ಮಂಥರೆಯ ದುಷ್ಕೃತನ—ಅಯೋಧ್ಯೆಯ ಜನರ ಸ್ಥಿತಿಯು ಹೀಗಿರುವಾಗ ಅತ್ತ ಕುಟಿಲರಾದ ದೇವತೆಗಳು ವಿಘ್ನವನ್ನು ಚಿಂತಿಸತೊಡಗಿದರು. ಶ್ರೀ ರಾಮನು ಪಟ್ಟಾಭಿಷಿಕ್ತನಾದರೆ ತಮಗೆ ಕಂಟಕಪ್ರಾಯರಾಗಿದ್ದ ರಾವಣಾದಿಗಳ ಸಂಹಾರವಾಗುವದಿಲ್ಲವೆಂಬದನ್ನು ಅವರು ಅರಿತಿದ್ದರು. ಅವರಿಗೆ ಅಯೋಧ್ಯೆಯೊಳಗಿನ ಸಮಾರಂಭಗಳು ಸೇರದಾದವು. ಅವರು ಸರಸ್ವತಿಯನ್ನು ಆವಾಹಿಸಿ ಮೇಲಿಂದಮೇಲೆ ಆಕೆಯ ಚರಣಕ್ಕೆರಗಿ ಕನಿಕರದಿಂದ ಆಕೆಯನ್ನು ಕುರಿತು—"ಮಾತೇ, ನಮ್ಮ ಈ ಭಯಂಕರ ದೈನ್ಯವನ್ನು ನೋಡಿ ರಾಮನು ಪಟ್ಟಾಭಿಷಿಕ್ತನಾಗದೆ ವನವಾಸಿಯಾಗುವಂತೆ ಮಾಡಿ ನಮ್ಮ ದೇವತೆಗಳ ಕಾರ್ಯವನ್ನು ನೀನು ಕೊನೆಗಾಣಿಸು" ಎಂದು ಪ್ರಾರ್ಥಿಸಲು, ಸರಸ್ವತಿಯು ಶ್ರೀ ರಾಮನ ಮಂಗಲ ಕಾರ್ಯಕ್ಕೆ ವಿಘ್ನಮಾಡಲಾರದೆ ಪಶ್ಚಾತ್ತಾಪದಿಂದ ಕನಿಕರ ಪಡುತ್ತ ಸುಮ್ಮನೆ ನಿಂತುಕೊಂಡಳು. ಆಗ ದೇವತೆಗಳು ಪುನಃ ಆಕೆಯ ಚರಣಕ್ಕೆರಗಿ—"ಮಾತೇ, ನಿನ್ನ ಕಡೆಗೆ ಸ್ವಲ್ಪವಾದರೂ ದೋಷವುಂಟಾಗುವದಿಲ್ಲ. ರಘುರಾಜನು ಹರ್ಷವಿಷಾದರಹಿತನಾಗಿರುವನು. ನೀನಾದರೂ ರಾಮನ ಪ್ರಭಾವವನ್ನು ಪೂರ್ಣವಾಗಿ ಅರಿತಿರುವೆ. ಕರ್ಮಾನುಬಂಧದಂತೆ ಜೀವಿಯು ಸುಖದುಃಖಗಳಿಗೆ ವಿಭಾಗಿಯಾಗುತ್ತಲೇ ಇರುವನು. ದೇವತೆಗಳ ಮೇಲೆ ಉಪಕಾರ ಮಾಡುವದಕ್ಕಾಗಿ ನೀನು ಅಯೋಧ್ಯೆಗೆ ಹೋಗಲೇಬೇಕು," ಎಂದು ಪುನಃಪುನಃ ಆಕೆಯ ಚರಣಕ್ಕೆರಗಿ ಪ್ರಾರ್ಥಿಸಲು, ಸರಸ್ವತಿಯು ಸಂಕೋಚಪಟ್ಟು ಅಯೋಧ್ಯೆಗೆ ಹೊರಟು ಮನಸ್ಸಿನಲ್ಲಿ—"ಈ ದೇವತೆಗಳ ಬುದ್ಧಿಯು ನಷ್ಟವಾಗಿರುವದು. ಇವರ ಅಧಿಕಾರವು ಮಾತ್ರ ಉತ್ಕೃಷ್ಟತರವಾದ್ದಾಗಿದ್ದು, ಕೃತಿಯು ನೀಚತರದ್ದಾಗಿರುವದು. ಅನ್ಯರ ಐಶ್ವರ್ಯವನ್ನು ನೋಡಿ ಇವರು ಸಹಿಸಲಾರರು; ಆದರೂ ಮುಂದಿನ ಕಾರ್ಯಕ್ಕೆ ಲಕ್ಷಗೊಟ್ಟು ಮಹಾಕವಿಗಳು ನನ್ನನ್ನು ಅಭಿನಂದಿಸದೆ ಇರರು." ಎಂದು ಯೋಚಿಸಿ ಹರ್ಷಿತಾಂತಃಕರಣದಿಂದ ಅಯೋಧ್ಯೆಗೆ ಹೋದಳು. ಆಕೆಯ ಬರುವಿಕೆಯಿಂದ ಅಯೋಧ್ಯೆಗೆ ದುಸ್ಸಹ ಪೀಡೆಯನ್ನುಂಟು ಮಾಡುವ ಗ್ರಹದೆಶೆಯೇ ಒದಗಿತೆಂದು ಹೇಳಬಹುದು. ಅಯೋಧ್ಯೆಯಲ್ಲಿ ಕೈಕಯರಾಣಿಯ ದಾಸಿಯಾದ ಮಂಥರೆ ಎಂಬ ಮಹಾಕರ್ಕಶೆಯಾದ ಸ್ತ್ರೀಯೊಬ್ಬಳಿದ್ದಳು. ಸರಸ್ವತಿಯು ಆಕೆಯ ಬುದ್ಧಿಯನ್ನು ಕೆಡಿಸಿ ಆಕೆಯನ್ನು ಅಪಕೀರ್ತಿಗೆ ಗುರಿಮಾಡಿ ಹೊರಟಳು.

ಹೋದಳು. ಇತ್ತ ಮಂಥರೆಯು ರಾಮನ ರಾಜ್ಯಾರೋಹಣಕ್ಕೆ ಹೇಗೆ ವಿಘ್ನವನ್ನುಂಟು ಮಾಡಬೇಕೆಂದು ರಾತ್ರಿಯೆಲ್ಲ ಆಲೋಚಿಸಿದಳು. ಆಕೆಯು ದುಃಖಾಕುಲಳಾಗಿ ಕೈಕೇಯಿಯು ಕಡೆಗೆ ಹೋಗಲು, ಆಕೆಯು ಮಂಥರೆಯನ್ನು ಕುರಿತು—ಯಾಕೇ ಮಂಥರೇ, ಇಂದು ನೀನು ಹೀಗೇಕೆ ಉದಾಸೀನಳಾಗಿರುತ್ತೀ? ಎಂದು ನಗುತ್ತ ಕೇಳಿದಳು; ಆದರೆ ಮಂಥರೆಯು ಅದಕ್ಕೆ ಉತ್ತರವನ್ನೇ ಕೊಡದೆ ಒಂದೇಸವನೆ ಕಣ್ಣೀರು ಸುರಿಸ ಹತ್ತಿದಳು.

ಇದನ್ನು ನೋಡಿ ಕೈಕೇಯಿಯು ನಗುತ್ತ—ಯಾಕೆ? ಮಂಥರೇ, ಯಾಕೆ ಮಾತಾಡಲೊಲ್ಲೆ? ನೀನು ಬಾಯಿಬಡಿಕೆಯಾದದ್ದರಿಂದ ಲಕ್ಷ್ಮಣನು ಬುದ್ಧಿಗಲಿಸಿದನೋ ಏನು? ಮಹಾರಾಜರೂ, ರಾಮ-ಲಕ್ಷ್ಮಣ-ಭರತ-ಶತ್ರುಘ್ನ ಮೊದಲಾದವರೂ ನೆಟ್ಟಗಿರುವರಷ್ಟೆ? ಎಂದು ಕೇಳಲು, ಈ ಹೆಸರುಗಳನ್ನು ಕೇಳಿದಕೂಡಲೆ ಮಂಥರೆಯು ಕಠೋರತನದಿಂದ ಮುಸುಗುಟ್ಟುತ್ತ—ಅವ್ವನವರೇ, ನಮಗೆ ಯಾರು ಯಾಕೆ ಕಲಿಸುವರು? ಬಾಯಿಬಡಕರು ಎರಡನೆಯವರ ಸಾಮರ್ಥ್ಯವನ್ನು ಕಡವಾಗಿ ತಂದು ಬಾಯಿಬಡಕತನ ಮಾಡುವರೋ? ಯೌವರಾಜ್ಯಾಭಿಷೇಕ ಹೊಂದುವ ರಾಮನೊಬ್ಬನಿಗಲ್ಲದೆ ಉಳಿದವರಾರಿಗೆ ಕ್ಷೇಮವಿರುವದು? ಕೌಸಲ್ಯೆಯ ದೈವವು ಇಂದಿಗೆ ಚನ್ನಾಗಿ ಫಲಿಸಿತು. ಆಕೆಯ ಇಂದಿನ ವೈಭವದ ಅಭಿವೃದ್ಧಿಯನ್ನು ನೋಡಿದರೆ, ನಿಮ್ಮ ಮನಸ್ಸಿನೊಳಗಿನ ಹೆಮ್ಮೆಯು ಸ್ವಲ್ಪವೂ ಉಳಿಯಲಾರದು. ಯಾವ ಸಮಾರಂಭವನ್ನು ನೋಡಿ ನನ್ನ ಮನಸ್ಸು ಇಷ್ಟು ಕ್ಷುಬ್ಧವಾಗಿರುವದೋ, ಆ ಸಮಾರಂಭವನ್ನು ನೀವು ಇನ್ನೂ ಯಾಕೆ ನೋಡಿರುವದಿಲ್ಲ? ಹೊಟ್ಟೆಯಮಗನು ದೆಸೆಗೇಡಿಯಾದದ್ದರ ಅರಿವು ನಿಮಗೆ ಇಲ್ಲವೇ ಇಲ್ಲವೋ? ಮಹಾರಾಜರು ನನ್ನ ಕೈಯಲ್ಲಿರುವರೆಂದು ನೀವು ತಿಳಿದಿರುವಿರಿ; ಗಾದಿ, ಗಿರದೆ, ಯಥೇಷ್ಟ ನಿದ್ದೆ ಇವುಗಳಲ್ಲಿಯೇ ನೀವು ಸಂತುಷ್ಟರಾಗಿರುವಿರಿ. ದಶರಥ ಮಹಾರಾಜರವರ ಕಾಪಟ್ಯವೂ, ಕಾರಸ್ಥಾನವೂ ನಿಮಗೆ ಸ್ವಪ್ನದಲ್ಲಿಯೂ ಗೊತ್ತಾಗಿರುವದಿಲ್ಲ. ಅನ್ನಲು, ಮಂಥರೆಯ ಈ ಸವಿಮಾತುಗಳನ್ನು ಕೇಳಿ ಕೈಕೇಯಿಯು ತನ್ನ ಆ ದಾಸಿಯ ಮನಸ್ಸಿನೊಳಗಿನ ಪಾಪವನ್ನು ಅರಿತುಕೊಂಡಳು. ಆಕೆಯು ಸಿಟ್ಟಿನಿಂದ ಕವಕ್ಕನೆ ಆಕೆಯ ಮೈಮೇಲೆ ಹೋಗಿ—"ಮಂಥರೇ, ತೆಪ್ಪಗಾಗು. ಮನೆಮುರಕೀ, ತಿರುಗಿ ಹೀಗೆ ಮಾತಾಡಿದರೆ ನಿನ್ನ ಈ ನಾಲಿಗೆಯನ್ನೇ ಕೊಯ್ದುಬಿಟ್ಟೇನು. ಕುಂಟರೂ, ಕುರುಡರೂ, ವಕ್ರರೂ ಒಳ್ಳೇ ಚಾಡಿಕೋರರಾಗಿರುವರೆಂಬದನ್ನು ನಾನು ಅರಿತಿರುವೆನು. ಅದರಲ್ಲಿಯೂ ಹೆಂಗಸರು; ಅವರಲ್ಲಿಯೂ ನಿನ್ನಂಥ ದಾಸಿಯರು" ಎಂದು ನುಡಿದು ಕೈಕೇಯಿಯು ನಗತೊಡಗಿದಳು. ಪುನಃ ಆಕೆಯು ಮಂಥರೆಯನ್ನು ಕುರಿತು—ನೀನು ಯಾವಾಗಲೂ ಸವಿಮಾತುಗಳನ್ನಾಡತಕ್ಕವಳಿದ್ದು, ಇಂದು ಹೀಗೆ ವಿಪರೀತಮಾತುಗಳನ್ನಾಡಿದ್ದರಿಂದ ನಾನು ಹೀಗೆ ಸಿಟ್ಟು ಮಾಡಿದೆನು. ಇಲ್ಲದಿದ್ದರೆ ಕನಸಿನಲ್ಲಿಕೂಡ ನಿನ್ನ

ಮೇಲೆ ನಾನು ಸಿಟ್ಟಾಗುವವಳಲ್ಲ. ರಾಮನು ಪಟ್ಟಾಭಿಷಿಕ್ತನಾಗುವನೆಂಬ ನಿನ್ನ ಮಾತು ಯಾವದಿವಸ ನಿಜವಾಗುವದೋ, ಅದೇ ಸುದಿನವಾಗಿದ್ದು. ಅಂದೇ ನನ್ನ ನಿಜವಾದ ಸುಖವು ಸಾಧಿಸಿದಂತಾಗುವದು. ಹಿರಿಯಮಗನು ಸ್ವಾಮಿಯೂ, ಚಿಕ್ಕಮಕ್ಕಳು ಸೇವಕರೂ ಎಂಬದು ನಮ್ಮ ಸೂರ್ಯ ವಂಶದ ಪರಂಪರಾಗತ ಪದ್ಧತಿಯಾಗಿರುವದು. ನಿಜವಾಗಿಯೇ ನಾಳೆ ರಾಮನಿಗೆ ರಾಜ್ಯಾಭಿಷೇಕವಾಗುವದಿದ್ದರೆ ನೀನು ಬೇಡಿದ್ದು ನಾನು ಕೊಡುವೆನು. ರಾಮನಿಗೆ ಕೌಸಲ್ಯೆಯಂತೆ ಉಳಿದ ತಾಯಂದಿರೂ ಸ್ವಾಭಾವಿಕವಾಗಿಯೇ ಪ್ರಿಯರಾಗಿ ತೋರುವರು. ನನ್ನನ್ನಂತು ಆತನು ವಿಶೇಷವಾಗಿ ಪ್ರೀತಿಸುತ್ತಿರುವನು. ಆತನ ಪ್ರೇಮವನ್ನು ನಾನು ಒರೆಗೆ ಹಚ್ಚಿ ನೋಡಿರುವೆನು. ದೇವರ ಮನಸ್ಸಿನಲ್ಲಿ ನನಗೆ ಪುನರ್ಜನ್ಮಕೊಡುವದೇ ಇದ್ದರೆ, ಆ ಜನ್ಮದಲ್ಲಿ ನನಗೆ ರಾಮನಂಥ ಮಗನೂ, ಸೀತೆಯಂಥ ಸೊಸೆಯೂ ಆಗಲೆಂದು ದೇವರನ್ನು ಪ್ರಾರ್ಥಿಸುವೆನು. ನನಗಂತೂ ರಾಮನು ಪ್ರಾಣಕ್ಕಿಂತಲೂ ಪ್ರಿಯನಾಗಿರುವನು; ಆತನ ಅಭಿಷೇಕದ ಸಲುವಾಗಿ ನೀನು ಇಷ್ಟೇಕೆ ಸಂತಾಪಗೊಂಡಿರುವೆ? ನಿನಗೆ ಭರತನದೇ ಆಣೆಯಿರುವದು, ನಿಜವಾಗಿ ಹೇಳು; ಹೀಗೆ ಒಳಗೊಂದು ಹೊರಗೊಂದೂ, ಮರೆ-ಮೋಸವೂ ಬೇಡ; ಇಂಥ ಈ ಆನಂದದ ಪ್ರಸಂಗದಲ್ಲಿ ನೀನು ಹೀಗೆ ದುಃಖಿತಮನಸ್ಕಳಾಗಲಿಕ್ಕೆ ಕಾರಣವೇನೆಂಬದನ್ನು ನೀನು ಹೇಳಲೇಬೇಕು.

ಕೈಕೇಯಿಯ ಈಮಾತುಗಳನ್ನು ಕೇಳಿ ಮಂಥರೆಯು—ಒಮ್ಮೆ ಮಾತಾಡಿ ಎಲ್ಲ ಸವಿಗಂಡೆನು. ಇನ್ನು ಚಕಾರಶಬ್ದವನು, ಉಚ್ಚರಿಸಬೇಕಾದರೆ ಎರಡನೆಯದೊಂದು ನಾಲಿಗೆಯನ್ನು ಮಾಡಿಸಿಕೊಂಡು ಬರಬೇಕಾದೀತು. ಅವ್ವನವರೇ, ಒಳಿತನ್ನು ಹೇಳ ಹೋದರೂ ನಿಮ್ಮ ಮನಸ್ಸಿಗೆ ಹತ್ತುತ್ತದೆ. ನಿಜವಿರಲಿ, ಸುಳ್ಳು ಇರಲಿ ಉಪ್ಪುಕಾರ ಹಚ್ಚಿ ಹೇಳುವವರನ್ನು ಕಂಡರೆ ನಿಮಗೆ ಬಹಳ ಪ್ರೀತಿಯುಂಟಾಗುತ್ತದೆ. ನನ್ನನ್ನು ಕಂಡರೆಮಾತ್ರ ನಿಮಗೆ ತಲೆನೋವು ಏಳುತ್ತದೆ. ಇನ್ನುಮೇಲೆ ನಾನಾದರೂ "ಜೀ ಸರಕಾರ" ಅನ್ನುತ್ತ ಹೋಗುವೆನು, ಇಲ್ಲದಿದ್ದರೆ ನಾಲಿಗೆಗೆ ಮುಳ್ಳುಮುರಿದುಕೊಂಡು ಹಗಲು ರಾತ್ರಿ ಸುಮ್ಮನೆ ಕುಳಿತುಕೊಳ್ಳುವೆನು. ದೇವರೇ ನನ್ನನ್ನು ಕುರೂಪಿಯನ್ನಾಗಿ ಮಾಡಿ ತೊತ್ತಾಗಿ ಹುಟ್ಟಿಸಿರುವನು. ಬಿತ್ತಿದ್ದನ್ನೇ ಕೊಯ್ಯಬೇಕು, ಕೊಟ್ಟದ್ದನ್ನೇ ಕೊಳ್ಳಬೇಕು. ಎಂದು ಗಾದೆಯಿರುವದು. ಯಾರು ಯಾಕೆ ಅರಸಾಗಲೊಲ್ಲರು, ಅದರಲ್ಲಿ ನನ್ನ ಹಾನಿಯೇನು? ಇನ್ನು ನಾನು ತೊತ್ತು ಹೋಗಿ ರಾಣಿಯಾಗಬೇಕಾಗಿದೆಯೇ? ನನ್ನ ಸ್ವಭಾವವೇ ಕೆಟ್ಟದು, ನಿಮಗೆ ಕೆಡಕಾದದ್ದು ನನ್ನಿಂದ ನೋಡುವದಾಗದು-ಅಂತೇ ಮಾತಾಡುತ್ತಾಡುತ್ತ ಮಾತಿಗೆ ಮಾತು ಹೊರಟು ಹೋಯಿತು. ರಾಣಿಯವರೇ, ಕ್ಷಮಿಸಬೇಕು, ನನ್ನಿಂದ ಮಹದಪರಾಧವಾಯಿತು, ಅನ್ನಲು, ಮಂಥರೆಯು ಈ ಗಂಭೀರವೂ-ಕಪಟತನದ್ದೂ, ಆದರೆ ಮೇಲೆ ಮೇಲೆ ಮಮತೆಯುಳ್ಳದ್ದೂ ಆದ ಮಾತನ್ನು ಕೇಳಿ

ಕೈಕೇಯಿಯು ಮೋಸಹೋದಳು. ಮೊದಲೇ ಸ್ತ್ರೀಜಾತಿ, ಮೇಲೆ ದೇವಮಾಯೆಯಿಂದ ಮೋಹಿತಳಾದ ಮಂಥರೆಯ ಮಾತು, ಕೇಳುವದೇನು? ಕ್ಷುದ್ರ ಬುದ್ಧಿಯ ಕೈಕೇಯಿಯು ತನ್ನ ವೈರಿಣಿಯನ್ನು ಹಿತಕರ್ತೃವಾಗಿ ಭಾವಿಸಿದಳು. ಜೇಡತಿಯು ಹಾಡಿಗೆ ಮರುಳಾದ ಹೆಣ್ಣು ಚಿಗರಿಯಂತೆ ಕೈಕೇಯಿಯು ಮಂಥರೆಯ ಮಾತುಗಳಿಗೆ ಮರುಳಾಗಿ ಆಕೆಯನ್ನು ಬಗೆಬಗೆಯಾಗಿ ರಮಿಸುತ್ತ ಆಕೆಯನ್ನು ಕೆದರಿ ಕೆದರಿ ಕೇಳತೊಡಗಿದಳು. ಆಗ ಅಯೋಧ್ಯೆಯ ದುಷ್ಟಗ್ರಹವಾದ ಮಂಥರೆಯು—"ಅವ್ವನವರೇ, ನೀವು ಕೇಳುವಿರಿ, ನನಗಂತು ಮಾತಾಡಲಿಕ್ಕೇ ಅಂಜಿಕೆ ಬರುತ್ತದೆ; ಯಾಕಂದರೆ ನನಗೆ ನೀವು ಮನೆಮುರಕ ಳೆಂದು ಹೆಸರು ಇಟ್ಟಿರುತ್ತೀರಿ. ಸೀತಾ-ರಾಮರು ತಮಗೆ ಪ್ರಿಯರಾಗಿರುವರೆಂತಲೂ, ರಾಮನಿಗೆ ತಾವು ಪ್ರಿಯರಾಗಿರುವಿರೆಂತಲೂ ತಾವು ಹೇಳುವದು ಕೇಳಲಿಕ್ಕೆ ನೆಟ್ಟಗಿರು ವದು; ಆದರೆ ಈ ಮಾತು ಹಳೇದಾಯಿತು; ಆ ಮಾನುವು ಈಗ ತಿರುಗಿರುತ್ತದೆ. ಕಾಲವು ಬದಲಾಯಿತೆಂದರೆ ತನ್ನ ಪ್ರೀತಿಯ ಜನರೂ ಶತ್ರುಗಳಾಗುವರು. ಸೂರ್ಯನು ಕಮ ಲದ ಪೋಷಕನಾಗಿದ್ದರೂ, ನೀರಿಲ್ಲದಾಯಿತೆಂದರೆ ಕಮಲವನ್ನು ಸುಟ್ಟು ಬೂದಿಮಾಡಿ ಬಿಡುವನು; ಅದರಂತೆ ನಿಮ್ಮ ಸವತಿಯಾದ ಕೌಸಲ್ಯೆಯೇ ನಿಮ್ಮನ್ನು ಬೇರುಸಹಿತ ಕಿತ್ತಿ ಒಗೆಯಲು ಯುಕ್ತಿ ಸುತ್ತಿರುವಳು; ಆದ್ದರಿಂದ ನೀವು ನಿಮ್ಮ ಸುಂದರವಾದ ತೋಟಕ್ಕೆ ಯುಕ್ತಿಯಿಂದ ಬೇಲಿಯ ಹಚ್ಚಲೇಬೇಕು. ನೀವು ನಿಮ್ಮ ಸೌಭಾಗ್ಯದ ಬಲದಿಂದ ನಿಶ್ಚಿಂತರಾಗಿರುವಿರಿ; ಮಹಾರಾಜರು ನಿಮ್ಮ ಮುಷ್ಟಿಯಲ್ಲಿರುವರೆಂಬವರ ನಂಬಿಗೆಯು ನಿಮಗೆ ಸಂಪೂರ್ಣವಾಗಿ ಇರುತ್ತದೆ; ಆದರೆ ಮಹಾರಾಜರ ಮಾತಿನಲ್ಲಿ ಸವಿಯು ಇರು ತ್ತಿರುವಷ್ಟೇ ಅವರ ಹೃದಯದಲ್ಲಿ ವಿಷವು ತುಂಬಿರುವದು; ಮೂಲತಃ ನೀವು ಮಾತ್ರ ಕೇವಲ ಸರಳ ಸ್ವಭಾವದವರು. ಅವ್ವನವರೇ, ರಾಮನ ತಾಯಿಯು ಜಾಣಳೂ, ಮತ್ಸರಬುದ್ಧಿಯೂ ಇರುವಳು. ಆಕೆಯು ಅನುಕೂಲಕಾಲವು ಒದಗುತ್ತಲೆ ತನ್ನ ಹಿತ ವನ್ನು ಸಾಧಿಸಿಕೊಂಡಳು. ಅಜ್ಜನಮನೆಗೆ ಭರತನನ್ನು ಕಳಿಸುವದರಲ್ಲಿ ಕೌಸಲ್ಯೆಯ ಅಂಗವು ಇರುತ್ತದೆಂಬವನ್ನು ನಿಶ್ಚಯವಾಗಿ ನಂಬಿರಿ. ಎಲ್ಲ ಸವತಿಯರು ತನಗೆ ಬಾಗಿ ನಡೆಯುತ್ತಿದ್ದು, ನೀವು ಮಾತ್ರ ಯಜಮಾನರ ಬಲದಿಂದ ಎಟ್ಟಯಾಗಿ ನಡೆಯು ವದು ಕೌಸಲ್ಯೆಯ ಹೃದಯದಲ್ಲಿ ಬರಚಿಯಂತೆ ಬಾಧಿಸುತ್ತಿರುವದು; ಆದರೆ ಆಕೆಯು ಚಪಲಳೂ, ಧೂರ್ತಳೂ ಇರುವದರಿಂದ ಹೊರಗೆ ಹಾಗೆ ಕಾಣುವದಿಲ್ಲ. ಮಹಾರಾ ಜರ ಸುಪ್ರಸನ್ನತೆಯು ನಿಮ್ಮ ಮೇಲೆ ವಿಶೇಷವಾಗಿ ಇರುವದು ಸವತಿಮತ್ಸರದಮೂಲಕ ಕೌಸಲ್ಯೆಗೆ ಸಹನವಾಗುವದಿಲ್ಲ; ಅಂತೇ ಆಕೆಯು ಅರಸನನ್ನು ತನ್ನಂತೆ ಮಾಡಿಕೊಂಡು ಆತನ ಕೈಯಿಂದ ರಾಮನ ಪಟ್ಟಾಭಿಷೇಕದ ಮುಹೂರ್ತವನ್ನು ಈಗ ಗೊತ್ತುಪಡಿಸಿರು ವಳು; ರಾಮನಿಗೆ ರಾಜ್ಯದೊರೆಯುವದು ಕುಲಪರಂಪರೆಗೆ ಉಚಿತವಾಗಿರುವದು; ಎಲ್ಲ ರಂತೆ ನನಗೂ ಹಾಗೆ ಆಗುವದರಲ್ಲಿ ಆನಂದವಿರುವದು; ಆದರೆ ಮುಂದಿನ ಪರಿಣಾಮಕ

ವನ್ನು ಮನಸ್ಸಿನಲ್ಲಿ ತಂದರೆ, ಎದೆಯು ದಸಕ್ಕೆನ್ನುವದು! ದುರ್ದೈವವೇ, ಆ ದುಷ್ಟ ದಾ
ಣಾಮವನ್ನು ಆ ಕೌಶಲ್ಯೆಯೇ ಭೋಗಿಸುವಂತೆ ನೀನು ಮಾಡು!

ಈ ಮೇರೆಗೆ ಸವತಿಸವತಿಯರಲ್ಲಿ ದ್ವೇಷವು ಹೆಚ್ಚುವಂತೆ ಮಂಥರೆಯು ನೂರಾರು ಚಾಡಿಗಳನ್ನು ಹೇಳಿ, ತನ್ನ ಕುಟಿಲತನದ ಕೋಟೆಯನ್ನು ಏರಿಸಿ, ಕೈಕೇಯಿಯ ಮನಸ್ಸಿನಲ್ಲಿ ಕಪಟವನ್ನುಂಟು ಮಾಡಿದಳ. ಭವಿತವ್ಯತೆಯ ಮೂಲಕ ಕೈಕೇಯಿಗೆ ಆಕೆಯ ಮಾತು ವಿಶ್ವಸನೀಯವಾಗಿ ತೋರಿ, ಆ ರಾಣಿಯು ತಿರುತಿರುಗಿ ಭರತನ ಆಣೆಹಾಕಿ ಮಂಥರೆಯನ್ನು ಕೇಳತೊಡಗಿದಳು. ಆಗ ಮಂಥರೆಯು—ನೀವು ನನ್ನನ್ನೇನು ಕೇಳುವಿರಿ! ನಿಮಗೆ ಇನ್ನೂ ಸುದ್ದಿಯು ಗೊತ್ತೇ ಆಗಿರುವದಿಲ್ಲವೆ? ದನಗಳಿಗೂ ತಮ್ಮ ಒಳಿತು—ಕೇಡುಗಳು ತಿಳಿಯುತ್ತವೆ. ಹದಿನೈದು ದಿನಗಳಾದವು; ಸಿದ್ಧತೆಯು ನಡೆದದೆ; ಈ ಹೊತ್ತು ಏನೋ ನಿಮಗೆ ಸುದ್ದಿ ಹತ್ತಿದಹಾಗಾಗಿರುತ್ತದೆ. ಇಂದು ಉಂಡು ಉಟ್ಟುಕೊಳ್ಳಿರಿ, ರಾಜ್ಯವು ನಿಮ್ಮದದೆ. ಇದ್ದದ್ದನ್ನು ಹೇಳುವರೆ ನನ್ನ ಕಡೆಗೆ ತಪ್ಪು ಇಲ್ಲ. ನಾನು ಇಲ್ಲದ್ದೊಂದು ಸುಳ್ಳು, ಸೊಟ್ಟು ಏನಾದರೂ ಹೇಳಿದರೆ ದೇವರೇ ನೋಡಿಕೊಂಡು ನನಗೆ ಬೇಕಾದ ಶಿಕ್ಷೆ ಮಾಡಲಿ. ನಾಳೆ ಬೆಳಗಾಗುತ್ತಲೆ ರಾಮನಿಗೆ ಪಟ್ಟಾಭಿಷೇಕವಾದ ಪಕ್ಷದಲ್ಲಿ ನಿಮ್ಮ ದುಃಖದ ಪರಂಪರೆಯ ಬೀಜವನ್ನು ನಿಮ್ಮ ದುರ್ದೈವವೇ ಬಿತ್ತಿತೆಂದು ತಿಳಿಯಬೇಕಾಗುವದು. ನಾನು ಗೆರೆಕೊರೆದು ಪ್ರತಿಜ್ಞೆಯಿಂದ ಹೇಳುವೆನು—"ನಿಮ್ಮ ಅವಸ್ಥೆಯು ಹಾಲಿನಮೇಲಿನ ನೊಣದ ಅವಸ್ಥೆಯಂತೆ ಆಗುವದು. ಮಗನೊಡನೆ ನೀವು ಸವತಿಯ ತೊತ್ತಾಗಿ ನಡೆದರೆ ಮಾತ್ರ ನಿಮ್ಮ ಪರಿಣಾಮವಾಗುವದು. ಸರ್ಪಗಳ ತಾಯಿಯಾದ ಕದ್ರುವು, ಗರುಡನ ತಾಯಿಯಾದ ವಿನತೆಯನ್ನು ಛಲಿಸಿ ಛಲಿಸಿ ಹಣ್ಣುಮಾಡಿದ ಸಂಗತಿಯು ನಿಮಗೆ ಗೊತ್ತಿಲ್ಲವೆ? ಅದರಂತೆಯೇ ಕೌಸಲ್ಯೆಯು ನಿಮಗೆ ಮಾಡುವಳು. ಭರತನು ಕಾರಾಗೃಹದಲ್ಲಿ ಕೊಳೆಯಬೇಕಾಗುವದು; ಲಕ್ಷ್ಮಣನು ರಾಮನ ಮುಖ್ಯ ಅಧಿಕಾರಿಯಾಗುವನು" ಎಂದು ಹೇಳಿದಳು. ಆಕೆಯ ಈ ಕಠೋರ ಭಾಷಣವನ್ನು ಕೇಳಿ ಕೈಕೇಯಿಯು ಕಂದಿಕುಂದಿಹೋದಳು. ಆಕೆಯ ಮೋರೆಯು ಬಾಡಿತು. ಆಕೆಯ ಮುಖದಿಂದ ಮಾತುಗಳು ಹೊರಡದಾದವು. ಬಾಳೆಯಗಿಡದಂತೆ ಆಕೆಯು ಕಂಪಿಸತೊಡಗಿದಳು. ಆಕೆಯ ಮೋರೆಯು ಜೀರ್ಣವೆಂಬು ಬೆವತಿತು. ಆಗ ಮಾತ್ರ ಆ ಕುಬ್ಜೆಯು ಹಲ್ಲುಗಳಿಂದ ತನ್ನ ನಾಲಿಗೆ ಕಚ್ಚಿದಳು. ಆಕೆಯು ಮತ್ತೆ ನೂರಾರು ಚಾಡಿಗಳನ್ನು ಹೇಳಿದಳು. "ಧೈರ್ಯಗೆಡಬೇಡ" ಎಂದು ರಾಣಿಗೆ ಬುದ್ಧಿಗಲಿಸತೊಡಗಿದಳು. ಮತ್ತೆ ಊದಬಾರದ ಮಂತ್ರವನ್ನು ಊದಿಬಿಟ್ಟದ್ದರಿಂದ ಕೈಕೇಯಿಯು ಒಣಗಿದ ಕಟ್ಟಿಗೆಯಂತೆ ತಿರುಗಿ ಎಂದೂ ಯಾರಮಾತಿಗೂ ಮಣಿಯಲೇ ಇಲ್ಲ. ಆಕೆಯು ಮಂಥರೆಯನ್ನು ಕುರಿತು—ಮಂಥರೇ, ಕೇಳು. ನಿನ್ನ ಮಾತೇ ನಿಜವು. ನನ್ನ ಬಲಗಣ್ಣು ಇಂದು ಒಂದೇ ಸವನೆ ಹಾರುತ್ತಲಿದೆ. ದಿನಾಲು ನನಗೆ ಅಮಂಗಲಸ್ವಪ್ನಗಳು ಬೀಳುತ್ತಿರುವವು.

ಆದರೂ ನನ್ನ ಹುಚ್ಚು ಹಾಳಾಗಿ ಹೋಗಿ ನಾನು ನಿನ್ನ ಮುಂದೆ ಯಾವಮಾತನ್ನೂ ಹೇಳ ಲಿಲ್ಲ. ಸಖೀ, ಏನು ಮಾಡಲೇ! ನಾನು ಸ್ವಭಾವದಿಂದ ಸರಳಳು. ಎಡಬಲಗಳೇನೂ ನನಗೆ ಕಾಣುವದಿಲ್ಲ. ಈ ವರೆಗೆ ನಾನು ಅರಮನೆಯಲ್ಲಿ ಯಾರಿಗೂ ಕೇಡು ಬಗೆದಿರುವ ದಿಲ್ಲ. ಎಲಎಲಾ! ದುರ್ದೈವವೇ! ನನ್ನ ಯಾವಪಾಪಕ್ಕಾಗಿ ನನ್ನ ಮೇಲೆ ಇಂಥ ದುರ್ಧ ರಪ್ರಸಂಗವನ್ನು ತಂದೆ? ನಾನು ಜನ್ಮವಿರುವತನಕ ತವರಮನೆಯಲ್ಲಿ ಕಾಲಕಳೆದೇನು; ಆದರೆ ಸವತಿಯ ಸೆರೆಯೊಳಗೆ ಬಾಳಲಾರೆನು. ದುರ್ದೈವದಿಂದ ಶತ್ರುಗಳ ಸೇವೆಮಾಡುವ ಪ್ರಸಂಗ ಒದಗಿದಲ್ಲಿ ಜೀವದ ಹಂಗು ಇಡದೆ ಸಾಯಬೇಕಲ್ಲದೆ ಬದುಕಬಾರದು!

ಈ ಬಗೆಯಾಗಿ ಕೈಕೇಯಿಯು ಪ್ರಲಾಪಿಸುತ್ತ ದೈನ್ಯದಿಂದ ಮಾತಾಡತೊಡಗಿ ದ್ದನ್ನು ನೋಡಿ ಮಂಥರೆಯು—ಅಮ್ಮನವರೇ, ಕ್ಷುದ್ರಮನಸ್ಸಿನವರಂತೆ ಹೀಗೇಕೆ ಕೈಕಾಲು ಗೆಡುವಿರಿ? ನಿಮ್ಮ ಸುಖದ ದಿನಗಳಂತು ದಿನದಿನಕ್ಕೆ ಅಭಿವೃದ್ಧಿಯಾಗುತ್ತಿರುವವು. ತಮಗೆ ಕೇಡು ಬಗೆಯುವವರ ಮಂತ್ರಾಲೋಚನೆಯ ಫಲಗಳನ್ನು ಅವರ ಬಾಯಿಯಲ್ಲಿಯೇ ತುರುಕಬೇಕು. ಅವರ ಈ ಮಂತ್ರಾಲೋಚನೆಯನ್ನು ಕೇಳಿದಂದಿನಿಂದ ನನಗೆ ಹಗಲು ಹಸಿವೆಯಿಲ್ಲ, ರಾತ್ರಿ ನಿದ್ರೆಯಿಲ್ಲ, ಈ ಗತಿಯಾಗಿದೆ! ಜ್ಯೋತಿಷಿಗಳನ್ನು ಕೇಳಿದರೆ ನಿಶ್ಚಯವಾಗಿ ಭರತನೇ ಅರಸನಾಗುವನೆಂದು ಹೇಳುವರು. ರಾಣೀಸಾಹೇಬರೇ, ಮಾಡು ವದಾಗಿದ್ದರೆ ಒಂದು ಹಂಚಿಕೆಯನ್ನು ಹೇಳುತ್ತೇನೆ. ಮಹಾರಾಜರಂತು ತಮ್ಮ ಸೇವೆ ಗಾಗಿ ಕೈಜೋಡಿಸಿ ನಿಂತುಕೊಂಡು ತತ್ಪರರಾಗಿರುವರು, ಅನ್ನಲು ಕೈಕೇಯಿಯು—ಮಂಥ ರೇ, ನಿನ್ನ ಮಾತಿಗಾಗಿ ನಾನು ಬಾವಿಯಲ್ಲಾದರೂ ಹಾರಿಕೊಳ್ಳುವೆನು, ಪತಿಪುತ್ರರ ನ್ನಾದರೂ ತ್ಯಜಿಸುವೆನು. ನನ್ನ ಈ ಭಯಂಕರ ದುಃಖಕ್ಕಾಗಿ ಕನಿಕರಪಟ್ಟು ನನ್ನ ಹಿತಕ್ಕಾಗಿ ನೀನು ಏನಾದರೂ ಹೇಳಿದರೆ ಅದರಂತೆ ನಾನು ಯಾಕೆ ನಡೆಯಲಿಕ್ಕಿಲ್ಲ? ಎಂದು ಪ್ರಶ್ನಮಾಡಿದಳು. ಆಕೆಗೆ ಮಂಥರೆಯ ಮೃದುವಾದ, ಆದರೆ ಶೋಕಪರ್ಯವ ಸಾಯಿಯಾದ ಮಾತುಗಳು ಜೇನುತುಪ್ಪದಲ್ಲಿ ಹೊರಳಿಸಿಕೊಟ್ಟ ವಿಷವೇ ಆಗಿದ್ದವು. ಹೀಗೆ ಕೈಕೇಯಿಯು ತನ್ನ ಬಲೆಯಲ್ಲಿ ಸಂಪೂರ್ಣವಾಗಿ ಸಿಗಲು, ಕುಬ್ಜೆಯು—ರಾಣೀ ಸಾಹೇಬರೇ, ನಿಮಗೆ ನೆನಪಿಲ್ಲವೆ? ನೀವೇ ನನಗೆ ಆ ಮಾತು ಹೇಳಿದ್ದಿರಿ. ಮಹಾರಾಜರು ತಮಗೆ ಎರಡುವರಗಳನ್ನು ಕೊಟ್ಟಿದ್ದು, ಅವನ್ನು ನೀವು ಇಷ್ಟಗಂಟಿನಂತೆ ಅವರ ಬಳಿ ಯಲ್ಲಿ ಇಟ್ಟಿರುವಿರಿ. ಈಗ ಆ ವರಗಳನ್ನು ಬೇಡಿಕೊಂಡು ನಿಮ್ಮ ಹೃದಯವನ್ನು ಶಾಂತ ವಾಗಿ ಮಾಡಿಕೊಳ್ಳಿರಿ, ಭರತನಿಗೆ ರಾಜ್ಯಾಭಿಷೇಕವು, ರಾಮನಿಗೆ ವನವಾಸವು ಹೀಗೆ ಬೇಡಿಕೊಂಡು, ಸವತಿಯ ಉಲ್ಲಾಸವನ್ನು ಮಣ್ಣುಗೂಡಿಸಿಬಿಡಿರಿ; ಆದರೆ ಮಹಾರಾ ಜರು ರಾಮನ ಆಣೆಹಾಕಿ ವರಪ್ರದಾನ ಮಾಡುವೆನೆಂದು ಹೇಳಿದಾಗಲೇ ವರಗಳನ್ನು ಬೇಡಿಕೊಳ್ಳಿರಿ; ಅಂದರೆ ಕೊಟ್ಟ ವಚನವನ್ನು ಮುರಿಯಲಿಕ್ಕೆ ಅವರಿಗೆ ಆಸ್ಪದ ದೊರೆ ಯದೆ ಹೋಗುವದು. ಬೆಳಗಾಗುತ್ತಲೆ ಸರ್ವಸ್ವದ ಘಾತವಾಗುವದರಿಂದ ಈ ದಿನ

ರಾತ್ರಿಯಲ್ಲಿಯೇ ನೀವು ಕೋಪಗೃಹವನ್ನು (ಕತ್ತಲೆಕೋಣೆಯನ್ನು) ಪ್ರವೇಶಿಸಿ ಕಾರ್ಯವನ್ನು ಸಾಧಿಸಿಕೊಳ್ಳತಕ್ಕದ್ದು. ಎಂದಿಗೂ ವಿಶ್ವಾಸಕ್ಕೆ ಆಸ್ಪದ ಕೊಡದೆ ಕಡೆತನಕ ಕಾರ್ಯವನ್ನು ಬಹು ಜಾಗರೂಕತೆಯಿಂದ ಸಾಧಿಸಿರಿ" ಎಂದು ಹೇಳಲು, ಕೈಕೇಯಿಯು ಮಂಥರೆಯ ಗುಣಗಾಯನಮಾಡುತ್ತ—"ಮಂಥರೇ, ಈ ಜಗತ್ತಿನಲ್ಲಿ ನಿನ್ನಂತಹ ಹಿತಕರ್ತರು ನನಗೆ ಬೇರೆಯವರಿರುವದಿಲ್ಲ. ನಾನು ತೇಲಿಹೋಗುತ್ತಿರುವಾಗ ನೀನೇ ಕೈಕೊಟ್ಟು ಬದುಕಿಸಿದೆ. ಬೇಗಾಗುತ್ತಲೆ ಸುದೈವದಿಂದ ನನ್ನ ಕೋರಿಕೆಯು ಕೈಗೂಡಿದರೆ ಗೆಳತೀ, ನಿನ್ನನ್ನು ನನ್ನ ಕಣ್ಣೊಳಗಿನ ಗೊಂಬೆಯಂತೆ ಮಾಡಿ ಇಡುವೆನು" ಎಂದು ಹಲವು ವಿಧವಾಗಿ ಆದರಿಸಿ ತಾನು ಕೋಪಗೃಹವನ್ನು ಪ್ರವೇಶಿಸಿ ನಿಷ್ಠುರದ ಸಿಟ್ಟಿನ ಸೋಗನ್ನುಹಾಕಿ ಮಲಗಿಕೊಂಡಳು. ತಾನು ರಾಜ್ಯಾರೂಢಳಾಗಿರುವಾಗ ತನ್ನ ಕುಬುದ್ಧಿಯಿಂದಲೇ ಆಕೆಯು ಪದಚ್ಯುತಳಾದಳು. ಅಯೋಧ್ಯೆಯು ಮಂಗಲಕಾರ್ಯಗಳಿಂದ ಗಜಬಜಿಸಿ ಹೋದದ್ದರಿಂದ, ಅದಕ್ಕೆ ಈ ಕೃಷ್ಣಕಾರಸ್ಥಾನದ ಗಂಧವು ಕೂಡ ತಗಲಿದ್ದಿಲ್ಲ. ರಾಜನ ಪರಿಚಾರಕರು ಕಾರ್ಯನಿಮಿತ್ತದಿಂದ ಯಾರು ರಾಜಗೃಹವನ್ನು ಲಗಬಗೆಯಿಂದ ಪ್ರವೇಶಿಸುತ್ತಿದ್ದರು, ಯಾರು ರಾಜಗೃಹದಿಂದ ಹೊರಬೀಳುತ್ತಿದ್ದರು ಹೀಗಾಗಿ ರಾಜದರ್ಬಾರದಲ್ಲಿ ಜನರ ಗಜಿಬಿಜಿಯುಂಟಾಗಿತ್ತು.

**ದಶರಥವಚನ**—ರಾಜ್ಯಾಭಿಷೇಕದ ಸುದ್ದಿಯನ್ನು ಕೇಳಿ ರಾಮಭದ್ರನ ಬಾಲಮಿತ್ರರ ಅಂತಃಕರಣದಲ್ಲಿ ಆನಂದದ ತೆರೆಗಳುಂಟಾಗಿ, ಅವರು ಐದೈದು, ಹತ್ತುಹತ್ತು ಜನರುಕೂಡಿ ರಾಮದರ್ಶನಕ್ಕೆ ಹೋಗತೊಡಗಿದರು. ಅವರ ಪ್ರೇಮವನ್ನಂತು ವರ್ಣಿಸಲಾಸಲ್ಲ. ದೇವನಾದರೂ ಅವರನ್ನು ಮನ್ನಿಸುವನು—ಮೃದುವಾಣಿಯಿಂದ ಅವರ ಕ್ಷೇಮಸಮಾಚಾರಗಳನ್ನು ಕೇಳುವನು. ತಮ್ಮ ಜೀವದ ಗೆಳೆಯನ ನಿರೂಪವನ್ನು ಪಡೆದು ಅವರು ಮನೆಗೆ ಬಂದಬಳಿಕ ತಮ್ಮತಮ್ಮೊಳಗೆ —"ರಘುಪುಂಗವನಂತಹ ಸಚ್ಛೀಲರೂ, ಪ್ರೇಮಲಸ್ವಭಾವದವರೂ, ಪ್ರಸಂಗದಲ್ಲಿ ಪಾರುಮಾಡುವವರೂ ಮತ್ತೊಬ್ಬರು ಈ ಜಗತ್ತಿನಲ್ಲಿ ಯಾರಾದರೂ ಇರುವರೇನು? ನಮ್ಮ ನಮ್ಮ ಸಂಚಿತದಂತೆ ನಾವು ಯಾವಯಾವ ಯೋನಿಗಳಲ್ಲಿ ಸುತ್ತುವರಿಯುವೆವೋ, ಅವಾವಾಗೆಲ್ಲ ನಾವು ಸೇವಕರೂ, ಈ ಜಾನಕೀವಲ್ಲಭನು ನಮ್ಮ ಸ್ವಾಮಿಯೂ ಆಗುವಂತೆ ಪರಮೇಶ್ವರನು ಅನುಗ್ರಹಿಸತಕ್ಕದ್ದು, ಎಂದು ಮಾತನಾಡಿಕೊಳ್ಳುತ್ತಿದ್ದರು. ಅಯೋಧ್ಯೆಯೊಳಗಿನ ಜನರೆಲ್ಲರೂ ಹೀಗೆಯೇ ಇಚ್ಛಿಸುತ್ತಿದ್ದು, ಕೈಕೇಯಿಯ ಅಂತಃಕರಣದಲ್ಲಿ ಮಾತ್ರ ವಿಶೇಷ ದಾಹವು ಉಂಟಾಗಿತ್ತು. ದುರ್ಜನರ ಸಹವಾಸವಾಗಿಯೂ ನಾಶವಾಗದವರು ಯಾರಿರುವರು? ನೀಚರ ಸಹವಾಸದಿಂದ ಜಾಣತನವು ಉಳಿಯುವದಿಲ್ಲ. ಇರಲಿ. ಸಂಧ್ಯಾಕಾಲದ ಸಮಯವು; ದಶರಥನೂ ಆನಂದನಿಮಗ್ನನಾಗಿದ್ದನು. ಹೀಗಿರುವಾಗ ಆತನು ಕೈಕೇಯಿಯ ಅಂತಃಪುರವನ್ನು ಪ್ರವೇಶಿಸಿದನು. ಆಗ ಮೂರ್ತಿಮಂತಪ್ರೇಮವೇ ನಿಷ್ಠುರತೆಯ ಬಳಿಗೆ ಹೋದಂ

ತಾಯಿತು. ತನ್ನ ಪ್ರೀತಿಯ ರಾಣಿಯು ಕೋಪಗೃಹದಲ್ಲಿ ಇರುವಳೆಂಬುದನ್ನು ಕೇಳಿದ ಕೂಡಲೆ ಅರಸನ ಹೃದಯದಲ್ಲಿ ನಡುಗುಹುಟ್ಟಿತು. ಭೀತಿವಶನಾದದ್ದರಿಂದ ಆತನ ಕಾಲುಗಳೇ ಏಳಲೊಲ್ಲವು. ಇಂದ್ರನುಕೂಡ ಯಾವನ ಮುಂಗೈಕಸುವಿನಲ್ಲಿ ವಿಶ್ವಾಸವಿಟ್ಟು ನಿರ್ಭಯದಿಂದ ಇರುವನೋ, ಯಾವತ್ತು ರಾಜರು ಯಾವನ ಮನಸ್ಸಿನ ಪ್ರಸನ್ನತೆಗಾಗಿ ಯತ್ನಿಸುವರೋ ಅಂಥ ದಶರಥನು "ಸ್ತ್ರೀರೋಷ" ವೆಂಬ ಶಬ್ದವನ್ನು ಕೇಳಿದ ಕೂಡಲೆ ಹಿಪ್ಪಿಹಿಂಡಿಯಾಗಿಹೋದನೆಂದಬಳಿಕ, ಮದನಪ್ರತಾಪದಪ್ರಭಾವವನ್ನು ಎಷ್ಟೆಂದು ವರ್ಣಿಸಬೇಕು! ಅರಸನು ಅಂಜುತ್ತಂಜುತ್ತ ಕೈಕೇಯಿಯಬಳಿಗೆ ಹೋದನು. ಉರುಟು ಹಳೆಯ ಸೀರೆಯನ್ನುಟ್ಟುಕೊಂಡು, ಮೈಮೇಲಿನ ಯಾವತ್ತು ಅಲಂಕಾರಗಳನ್ನು ಚಲ್ಲಿಕೊಟ್ಟು ಬರಿಯ ನೆಲದಮೇಲೆ ಹೊರಳಾಡುತ್ತಿರುವ ಆ ಕೈಕೇಯಿಯ ಅವಲಕ್ಷಣವನ್ನು ನೋಡಿದಕೂಡಲೆ ಅರಸನ ಎದೆಯು ದಸಕ್ಕೆಂದಿತು! ಆ ದುಷ್ಟಬುದ್ಧಿಯಾದ ಕೈಕೇಯಿಯ ಆ ಹೊಲಸುವೇಷವು, ಆಕೆಗೆ ಮುಂದೆ ಒದಗಬೇಕಾಗಿರುವ ವೈಧವ್ಯದ ಸೂಚಕವೆಂಬಂತೆ ತೋರುತ್ತಿತ್ತು!

ಹೀಗೆ ಸಿಟ್ಟಾಗಿ ಮಲಗಿರುವ ಹೆಂಡತಿಯಬಳಿಗೆ ಹೋಗಿ ಅರಸನು ಸಾಸ್ನೇಹ ಉಪಚಾರದಿಂದ—"ಹೇ ಪ್ರಾಣಪ್ರಿಯೇ, ಈ ಸಿಟ್ಟಿನ ಕಾರಣವೇನು? ಇಷ್ಟು ಸಿಟ್ಟಾಗಲಿಕ್ಕೆ ಆದದ್ದಾದರೂ ಏನು?" ಎಂದು ಅನ್ನುತ್ತ ಆಕೆಯ ಮೈಸವರುತ್ತಿರಲು, ಆಕೆಯು ಕೈಕೊಸರಿ, ಸಿಟ್ಟಾದ ನಾಗಿಣಿಯಂತೆ ಕಣ್ಣುಕೆಕ್ಕರಿಸಿ ಅರಸನನ್ನು ನೋಡತೊಡಗಿದಳು. ಆಗರಾಜನು ಪರಿಪರಿಯಿಂದ ರಾಣಿಯನ್ನು ರಮಿಸುತ್ತ—"ಎಲೈ ಸುಮುಖಿಯೇ, ಸುಲೋಚನೇ, ಕೋಕಿಲಭಾಷಿಣೀ, ಎಲೈ ಗಜಗಾಮಿನೀ! ನಿನ್ನ ಸಿಟ್ಟಿನಕಾರಣವನ್ನಾದರೂ ನನಗೆ ಹೇಳು. ಯಾವನು ನಿನ್ನ ಅಪಮಾನಮಾಡಿದನು? ಯಾವನ ಆಯುಷ್ಯವು ತುಂಬಿ ಬಂದದೆ? ಪ್ರಿಯೇ, ಮಾತಾಡು, ಯಾವ ರಾಜನನ್ನು ಮಣ್ಣುಗೂಡಿಸಲಿ! ಯಾವ ತಿರುಕನನ್ನು ಅರಸನಾಗಮಾಡಲಿ? ನಿನ್ನ ವೈರಿಯು ಅಮರನಾಗಿದ್ದರೂ ಅವನನ್ನು ಕೊಲ್ಲುವ ದಮ್ಮು ನನಗಿರಲು, ಈ ನರಕೀಟಕಗಳ ಗಣನೆಯೇನು? ದೇವರೋ! ರೂ. ನಿನಗೆ ನನ್ನ ಸ್ವಭಾವವು ಗೊತ್ತೇ ಇರುತ್ತದೆ. ನನ್ನ ಪುತ್ರರು, ಮಿತ್ರರು, ಪರಿಜನರು, ಪ್ರಜೆಗಳು ಎಲ್ಲರೂ, ಅದೇಕೆ, ನನ್ನ ಪಂಚಪ್ರಾಣಗಳು ಕೂಡ ನಿನ್ನ ಅಧೀನವಾಗಿರುವವು. ನಿನ್ನ ಮುಂದೆ ನಾನು ಸುಳ್ಳಾಡುವೆನೆಂದು ನೀನು ಭಾವಿಸುತ್ತಿದ್ದರೆ, ನಾನು ನಮ್ಮ ರಾಮಭದ್ರನ ಆಣೆಯನ್ನು ನೂರುಸಾರೆಮಾಡಿ, ಈ ಮಾತು ನಿಜವೆಂದು ಹೇಳುವೆನು. ಒಮ್ಮೆ ನಗೆಮೊಗದಿಂದ ನಿನ್ನ ಮನಸ್ಸಿಗೆ ಬಂದದ್ದನ್ನು ಕೇಳಿಕೊಂಡು ನಿನ್ನ ಮನೋಹರವಾದ ಶರೀರವನ್ನು ಅಲಂಕಾರಗಳಿಂದ ಅಲಂಕರಿಸು. ಈಗಿನ ಮಂಗಲಪ್ರಸಂಗದಲ್ಲಿ ನೀನು ಹೀಗೆ ಅಮಂಗಲ ವೇಷತಾಳುವದು ಸರಿಯಲ್ಲ." ಎಂದು ಹೇಳಿದನು. ಆಗ ಮಂದಮತಿಯಾದ ಆ ಕೈಕೇಯಿಯು ಅರಸನ ದೊಡ್ಡ ದೊಡ್ಡ ಆಣೆಗಳ ವಿಚಾರಮಾಡಿ, ಚಿಗ

ರೆಗಳಿಗೆ ಬಲೆಯೊಡ್ಡುವ ಬೇಡತಿಯಂತೆ ಮೈಮೇಲೆ ಅಲಂಕಾರಗಳನ್ನು ಹೇರಿಕೊಳ್ಳ ಹತ್ತಿದಳು. ಆಕೆಯ ಅಂತರಂಗವು ನಿರ್ಮಲವಾಗಿರುವದೆಂದು ತಿಳಿದು ರಾಜನು— "ಭಾಮಿನೀ, ಆಯಿತಷ್ಟೇ ನಿನ್ನ ಮನಸ್ಸಿನಂತೆ! ಪಟ್ಟಣದಲ್ಲಿ ಮನೆಮನೆಗಳೊಳಗೆ ಆನಂದದ ಪ್ರಕಾರಗಳು ನಡೆದಿರುವವು. ಸುಂದರೀ, ನೀನಾದರೂ ಆ ಮಂಗಲಸಮಾರಂಭದ ಸಿದ್ಧತೆಯನ್ನು ಮಾಡತೊಡಗು," ಅನ್ನಲು ಅದನ್ನು ಕೇಳಿದಕೂಡಲೆ ಆ ಪಾಷಾಣಹೃದಯದ ಕೈಕೇಯಿಯು ಸಂತಾಪಗೊಂಡಳು; ಆದರೂ ಅದನ್ನು ನಗೆಯಮೇಲೆಹಾಕಿ ಅರಸನಿಗೆ ಅದನ್ನು ತೋರಗೊಡದೆ, ಸುಳ್ಳೇ ಪ್ರೇಮ ಪ್ರಕಟಮಾಡುತ್ತ ನಗೆಮೊಗದಿಂದ ಅರಸನನ್ನು ಕುರಿತು—" ಪ್ರಿಯಾ, ಕೇಳು ಕೇಳು ಎಂದು ಮಾತ್ರ ಅನ್ನುವದು; ಆದರೆ ಕೊಡಲಿಕ್ಕೆಬೇಡ-ತೆಗೆದುಕೊಳ್ಳಲಿಕ್ಕೆಬೇಡ! ಈ ಮೊದಲೆ ಕೊಟ್ಟಿರುವ ಎರಡುವರಗಳು ದೊರೆಯುವದೂ ಕಠಿಣವಾಗಿರುವಾಗ, ಇನ್ನು ಬೇರೆ ಕೇಳಿಕೊಳ್ಳುವದೇನು?

ಕೈಕೇಯಿಯ ಕಠೋರತನ—ಕೈಕೇಯಿಯ ಈ ಕೊಕ್ಕಿನಮಾತಿನಿಂದ ಅರಸನಿಗೆ ಹಿಂದಿನ ವರಗಳ ಸ್ಮರಣವಾಗಿ ಆತನು ನಗುತ್ತ —"ನಿಮಗೆ ಸಿಟ್ಟುಕೋಪಮಾಡುವದೊಂದು ಮೋಜೇ ಆಗಿರುತ್ತದೆ. ನೀನೇ ಇಡಗಂಟಾಗಿ ಆ ಎರಡುವರಗಳನ್ನು ನನ್ನ ಬಳಿಯಲ್ಲಿಟ್ಟು ತಿರುಗಿ ಕೇಳಲೇ ಇಲ್ಲ. ನಾನು ಮೊದಲೇ ಮರವಿನ ಸ್ವಭಾವದವನಾದ್ದರಿಂದ ಮರೆತುಬಿಟ್ಟೆನು. ಸುಳ್ಳೇ ನನ್ನ ಮೇಲೆ ತಪ್ಪುಹೊರಿಸಬೇಡ. ಎರಡು ವರಗಳ ಸ್ಥಳದಲ್ಲಿ ಈಗ ನಾಲ್ಕು ವರಗಳನ್ನೇಕೆ ಬೇಡಿಕೊಳ್ಳುವದಿಲ್ಲ? ಅನಾದಿಕಾಲದಿಂದ ರಘುಕುಲದ ರೀತಿಯೇ ನಡೆದುಬಂದಿರುವದು! ಅವರು ಪ್ರಾಣಹೋದರೂ ಕೊಟ್ಟವಚನವನ್ನು ತಪ್ಪಿಸಲಾರರು. ಅಸತ್ಯದಂಥ ಪಾಪದ ಪರ್ವತವೇ ಇರುವದಿಲ್ಲ. ಕೋಟ್ಯವಧಿ ಗುಲಗಂಜಿಯ ರಾಶಿಯು ಪರ್ವತದಷ್ಟು ಆಗಬಹುದೇ? ಯಾವತ್ತು ಸುಕೃತಿಗಳ ಮೂಲದಲ್ಲಿ ಸತ್ಯವಿದ್ದರೆಯೇ ಅವು ಶೋಭಿಸುವವೆಂದು ವೇದಪುರಾಣಗಳ, ಹಾಗು ಋಷಿಗಳ ನಿರ್ಣಯವಿರುವದು. ಇದಲ್ಲದೆ ನಾನು ರಾಮನ ಆಣೆಯನ್ನು ಮಾಡಿರುವೆನು; ರಘುರಾಮನೆಂದರೆ ನನ್ನ ಪುಣ್ಯದ ಹಾಗು ಪ್ರೇಮದ ಗಡಿಯೇ ಆಗಿರುವಂತೆ ನನಗೆ ತೋರುತ್ತದೆ," ಅನ್ನಲು, ಹೀಗೆ ಅರಸನನ್ನು ಪ್ರತಿಜ್ಞೆಯಿಂದ ಗಟ್ಟಿಮುಟ್ಟಿಯಾಗಿ ಬಿಗಿದಬಳಿಕ ಕೈಕೇಯಿಯು ನಗುತ್ತ ಅರಸನನ್ನು ಕುರಿತು—"ಪ್ರಾಣಪ್ರಿಯಾ, ನನ್ನ ಮನಸ್ಸಿಗೆ ಸಂಪೂರ್ಣವಾಗಿ ಬಂದ ವರಗಳನ್ನೇ ಕೇಳಿಕೊಳ್ಳುವೆನು. ಒಂದುವರದಿಂದ ಭರತನಿಗೆ ರಾಜ್ಯಕೊಡಬೇಕು. ಎರಡನೆಯ ವರವನ್ನು ನಾನು ಕೈಜೋಡಿಸಿ ಬೇಡಿಕೊಳ್ಳುತ್ತೇನೆ, ನಾಥರು ನನ್ನ ಇಚ್ಛೆಯನ್ನು ಪೂರ್ಣಮಾಡಬೇಕು. ರಾಮನು ತಾಪಸಿಗಳ ವೇಷದಿಂದ ಪೂರ್ಣಉದಾಸೀನನಾಗಿ ಹದಿನಾಲ್ಕುವರ್ಷ ವನವಾಸವನ್ನು ಮಾಡಲೇಬೇಕು" ಎಂದು ಕೇಳಿಕೊಂಡಳು. ಕೈಕೇಯಿಯ ಈ ಮೃದುವಚನಗಳನ್ನು ಕೇಳಿ ಅರಸನ ಹೃದಯವು ಶೋಕವಿಹ್ವಲವಾಯಿತು. ತಾಲವೃಕ್ಷದಮೇಲೆ ವಿದ್ಯುತ್ಪಾತವಾದಂತೆ

ಆತನು ತೀರ ಕಾಂತಿಹೀನನಾದನು. ಎರಡೂಕೈಗಳಿಂದ ತಲೆಯನ್ನು ಹಿಡಿದು ಕಣ್ಣು ಮುಚ್ಚಿಕೊಂಡು ಮೂರ್ತಿಮಂತ ಶೋಕದಂತೆ ಇದ್ದ ಆರಾಜನು ಮನಸ್ಸಿನಲ್ಲಿ—"ನನ್ನ ಮನೋರಥ ರೂಪ ಕಲ್ಪವೃಕ್ಷವು ಹೂವುಬಿಟ್ಟು, ಇನ್ನು ಕಾಯಿಗಳಾಗುತ್ತಿರುವಷ್ಟರಲ್ಲಿ ಹೆಣ್ಣಾನೆಯು ಅದನ್ನು ತಡಹಾಯ್ದು ಬೇರುಸಹಿತವಾಗಿ ಕೆಡವಿದಂತೆ ಆಯಿತು! ಕೈಕೇಯಿಯು ಅಯೋಧ್ಯೆಯನ್ನು ಹಾಳುಗೆಡವಿದಳು; ವಿಪತ್ತಿಗೆ ಆಮಂತ್ರಣಕೊಟ್ಟಳು; ಈಗಿನ ಹೊತ್ತು ಎಂಥಹದು, ಆದರೆ ಆಯಿತೇನು? ಯೋಗಸಿದ್ಧಿಯ ಫಲವು ಪ್ರಾಪ್ತವಾಗುವ ಸಮಯದಲ್ಲಿ ಯತಿಯು ಅವಿದ್ಯೆಯು ಹಾಳುಮಾಡಿಬಿಡುವಂತೆ, ನಾನು ಈ ಸ್ತ್ರೀಯ ಬೆನ್ನುಹತ್ತಿ ಮೋಸಹೋದೆನು" ಎಂದು ಶೋಕಿಸುತ್ತಿರಲು, ದುರ್ಬುದ್ಧಿಯು ಕೈಕೇಯಿಯು ಅರಸನನ್ನು ಮಾತ್ಸರ್ಯದಿಂದ ನೋಡುತ್ತ—"ಭರತನು ನಿಮ್ಮ ಹೊಟ್ಟೆಯ ಮಗನಲ್ಲವೋ ಏನು? ನನ್ನನ್ನೇನು ಬೆಲೆಕೊಟ್ಟು ಕೊಂಡುಕೊಂಡು ಬಂದಿರುವಿರಾ? ನನ್ನ ಮಾತು ಕೇಳುವದರಿಂದಲೇ ಇಷ್ಟು ನಿಮಗೆ ವ್ಯಥೆಯಾಗುತ್ತಿದ್ದರೆ, ಮೊದಲೇ ವಿಚಾರ ಮಾಡಿ ವಚನಕೊಡಬೇಕಾಗಿತ್ತು! ಉತ್ತರಕೊಡಿರಿ, ಏನೆಂಬದನ್ನು ಹೇಳಿಬಿಡಿರಿ; ಸ್ಪಷ್ಟ ಇಲ್ಲೆಂದಾದರೂ ಹೇಳಿರಿ! ರಘುವಂಶದೊಳಗಿನ ಸತ್ಯಪ್ರತಿಜ್ಞರು ನೀವೇ ಅಲ್ಲವೆ? ವರಕೊಡುವೆನೆಂದು ಹೇಳುವದಕ್ಕೆ ಮಾತ್ರ ಸಿದ್ಧರು! ಈಕೆ ಏನಾದರೂ ಚಕ್ಕಲಿ—ಕರ್ಜಿಕಾಯಿಗಳನ್ನು ಕೇಳುವಳೆಂದು ತಿಳಿದಿದ್ದಿರೋ ಏನು? ಶಿಬಿ, ದಧೀಚಿ, ಬಲಿ ಮೊದಲಾದವರು ತಮ್ಮ ಒಂದುಶಬ್ದದಸಲುವಾಗಿ ಧನವನ್ನೂ, ಪ್ರಾಣವನ್ನೂ ಕಳೆದುಕೊಂಡು, ತಮ್ಮ ವಚನದ ಸತ್ಯತ್ವವನ್ನು ಕಾಯ್ದುಕೊಂಡರು.

ಕೈಕೇಯಿಯ ಈ ಮಾತುಗಳು ಗಾಯಕ್ಕೆ ಉಪ್ಪುಹಚ್ಚಿದಂತೆ ದಶರಥನನ್ನು ವ್ಯಥೆಗೊಳಿಸಿದವು. ಆತನು ಧೈರ್ಯಶಾಲಿ ಕಣ್ಣುತೆರೆದು ಕೈಕೇಯಿಯನ್ನು ರವಿಸುವದಕ್ಕಾಗಿ—"ಪ್ರಿಯೇ, ನೀನು ಇಂಥ ಅಯೋಗ್ಯಮಾತುಗಳನ್ನಾದರೂ ಹೇಗೆ ಆಡಿದೆ! ಎಲೈ ಭೀರುವೇ, ನೀನು ಪ್ರೇಮವಿಶ್ವಾಸಗಳನ್ನು ಸಂಪೂರ್ಣಬಿಟ್ಟುಕೊಟ್ಟೆಯಲ್ಲ! ನಾನು ಶ್ರೀಶಂಕರನನ್ನು ಸಾಕ್ಷಿಯಾಗಿ ಇಟ್ಟು ಹೇಳುವೆನು, ನನಗೆ ರಾಮನೂ, ಭರತನೂ ಎರಡು ಕಣ್ಣುಗಳಂತೆ ಇರುವರು. ನಾಳೆ ಬೆಳಗಾಗುತ್ತಲೆ ನಾನು ದೂತನನ್ನು ಕಳಿಸುವೆನು. ನನ್ನ ಅಪ್ಪಣೆಯನ್ನು ಕೇಳಿದಕೂಡಲೆ ಭರತ—ಶತ್ರುಘ್ನರು ಬರುವರು. ಬಳಿಕ ಒಂದು ದಿನ ಶುಭಮುಹೂರ್ತನೋಡಿ ಮಹಾಸಮಾರಂಭದಿಂದ ಭರತನಿಗೆ ಪಟ್ಟಾಭಿಷೇಕ ಮಾಡುವೆನು. ರಾಮನಿಗಾದರೂ ರಾಜ್ಯದ ಲೋಭವು ಮೂಲತಃ ಇಲ್ಲವೇಇಲ್ಲ. ಇದಲ್ಲದೆ ಭರತನಮೇಲೆ ಆತನ ಪ್ರೇಮವು ವಿಶೇಷವಾಗಿರುವದು. ನಾನೇ, "ಹಿರಿಯ ಕಿರಿಯರೆಂ"ಬ ವಿಚಾರವನ್ನು ಮನಸ್ಸಿನಲ್ಲಿತಂದು, ರಾಜನೀತಿಯನ್ನನುಸರಿಸಿ ಹೀಗೆ ಮಾಡಿದೆನು. ಮೂರು ಸಾರೆ ರಾಮನ ಆಣೆ ಮಾಡಿ ಸರಳಮನಸ್ಸಿನಿಂದ ನಾನು ನಿನಗೆ ಹೇಳುವೆನು, ರಾಮನ ತಾಯಿಯು ಈ ಸಂಬಂಧದಿಂದ ಚಕಾರಶಬ್ದ ಮಾಡಿರುವದಿಲ್ಲ. ಎಲ್ಲ

ಮೂಡಿದವನು ನಾನು; ಆದರೆ ನಿನ್ನನ್ನು ಮಾತ್ರ ಕೇಳಲಿಲ್ಲ; ಆದ್ದರಿಂದಲೇ ನನ್ನ ವಿಚಾರಗಳೆಲ್ಲ ಮಣ್ಣುಗೂಡಿದವು; ಇನ್ನಾದರೂ ಸಿಟ್ಟುನುಂಗಿಕೊಂಡು ಆನಂದದಿಂದ ಸಮಾರಂಭದ ಸಿದ್ಧತೆಗೊಳಿಸು. ಕೆಲದಿನಗಳು ಹೋಗುತ್ತಲೆ ಭರತನು ಯುವರಾಜನಾಗುವನು-ನನಗೊಂದೇ ಮಾತಿನಸಲುವಾಗಿ ದುಃಖವಾಗುತ್ತದೆ. ನೀನು ಎರಡನೆಯ ವರವನ್ನು ಅವಿಚಾರದಿಂದಕೇಳಿದೆ! ಈಗಲೂ ಅದರ ಸ್ಮರಣದಿಂದ ನನ್ನ ಹೃದಯವು ಸುಡುತ್ತಿರುವದು! ಇದು ನಿನ್ನ ಸಿಟ್ಟೋ ವಿನೋದವೋ? ನಿಜವಾಗಿಹೇಳು- ಪ್ರಿಯೇ, ಸಿಟ್ಟನ್ನು ಬಿಡು; ರಾಮನ ಅಪರಾಧವಾವದರೂ ನನಗೆ ಗೊತ್ತಾಗಲಿ. ಯಾವತ್ತು ಜನರು ರಾಮನನ್ನು "ಒಳ್ಳೆಯವನು-ಒಳ್ಳೆಯವನು" ಎಂದು ಶ್ಲಾಘಿಸುತ್ತಿರುವರು. ನೀನಾದರೂ ಆತನ ಪ್ರಶಂಸೆಮಾಡುತ್ತ ಆತನ ಮೇಲೆ ಪಂಚಪ್ರಾಣವಾಗಿ ಇದ್ದಿ- ಈಗಿನ ನಿನ್ನ ಮಾತುಕೇಳಿ ಮಾತ್ರ ನನಗೆ ಬಹಳ ಚಮತ್ಕಾರವಾಗುತ್ತದೆ. ಯಾವನ ಸ್ವಭಾವವು ವೈರಿಗಳಿಗೂ ಮಾನ್ಯವಾಗಿರುವದೋ ಅಂಥ ರಾಮನು ಪ್ರತ್ಯಕ್ಷ ತನ್ನ ತಾಯಿಗೆ ವಿರೋಧವಾಗಿ ನಡೆದುಕೊಳ್ಳುವ ಸಂಭವವಾದರೂ ಇರುತ್ತದೆಯೇ! ಪ್ರಿಯೇ, ನಿಜವಾಗಿಯೇ ಇದೆಲ್ಲ ವಿನೋದಕ್ಕಾಗಿಯೇ ಇರಲಿ ಹಾಗಿದ್ದರೂ ಆ ವರದ ವಿಚಾರವನ್ನು ಬಿಟ್ಟುಕೊಟ್ಟು ಸಾರಾಸಾರ ವಿಚಾರದಿಂದಲೂ, ದೂರದೃಷ್ಟಿಯಿಂದಲೂ ವರವನ್ನು ಕೇಳಿಕೋ. ನೀನು ಕೇಳಿಕೊಳ್ಳುವ ವರದಿಂದ ನಾನು ಭರತನ ರಾಜ್ಯಾಭಿಷೇಕವನ್ನು ಕಣ್ತುಂಬ ನೋಡಲು ಅವಕಾಶವು ದೊರೆಯಬೇಕು. ಒಂದು ಪಕ್ಷದಲ್ಲಿ ಮೀನಗಳು ನೀರುಬಿಟ್ಟು ಬದುಕಬಹುದು; ಆದರೆ ನಾನು ರಾಮನಿಲ್ಲದೆ ಬದುಕಲಾರೆನು. ಈ ಮಾತನ್ನು ನಾನು ನಿಷ್ಕಪಟದಿಂದಲೂ, ಪ್ರಾಂಜಲಮನಸ್ಸಿನಿಂದಲೂ ನಿನ್ನಮುಂದೆ ಹೇಳುವೆನು. ಪ್ರಿಯೇ! ನೀನು ಸುಜ್ಞಳಿರುವೆ; ನೀನೂ ನಿನ್ನಲ್ಲಿ ವಿಚಾರಮಾಡಿನೋಡು. ನನ್ನ ಆಯುಷ್ಯವು ಕೇವಲ ರಾಮದರ್ಶನವನ್ನು ಅವಲಂಬಿಸಿರುವದು.

ಅರಸನ ಈ ಮೃದುನುಡಿಗಳನ್ನು ಕೇಳಿ ಬೆಂಕಿಯಲ್ಲಿ ತುಪ್ಪವನ್ನು ಹಾಕಿದಂತಾಗಿ ಕೈಕೇಯಿಯು ಸಂತಾಪದಿಂದ ಉರಿಯಹತ್ತಿದಳು. ಆಕೆಯು ಕಠೋರತನದಿಂದ— "ಹೇಳಿರಿ, ಕೇಳಿರಿ, ಕೋಟ್ಯವಧಿ ಉಪಾಯಗಳನ್ನು ಮಾಡಿರಿ; ಆದರೆ ನನ್ನ ಹತ್ತಿರ-ಈಗ ಮಾತ್ರ ಈ ಲಘುತ್ವವು ನಡೆಯಬಾರದು. ಕೊಟ್ಟರೆ ಎರಡೂ ವರಗಳನ್ನು ಕೊಡಿರಿ; ಕೊಡದಿದ್ದರೆ ಇಲ್ಲವೆಂದು ಸ್ಪಷ್ಟವಾಗಿ ಹೇಳಿ ಅಪಕೀರ್ತಿಯನ್ನು ಜಗದಲ್ಲಿ ಕಟ್ಟಿಕೊಳ್ಳಿರಿ; ಇಂಥ ಬಾಹ್ಯಳತನವು ನನಗೆ ಸರ್ವಥಾ ಸೇರುವದಲ್ಲ! ರಾಮನೂ ಸಾಧುವು, ನೀವೂ-ರಾಮನ ತಾಯಿಯೂ ಸಾಧುಗಳೂ—ಸುಜ್ಞರೂ ಇರುವಿರಿ! ನಾನು ನಿಮ್ಮೆಲ್ಲರ ಗ್ರಾಮಿತು ಹಿಡಿದಿರುವದರಿಂದಲೇ ನಷ್ಟಗಾಯಿತು. ಕೌಸಲ್ಯೆಯು ನನ್ನ ಹಿತಚಿಂತನೆ ಮಾಡಿದಂತೆ ನಾನೂ ಅದರ ಫಲಗಳನ್ನು ಆಕೆಗೆ ತಿನ್ನಿಸುವೆನು. ಇನ್ನು ಬೆಳಗಾಗುತ್ತಲೆ ಮುನಿವೇಷವನ್ನು ಧರಿಸಿ ರಾಮನು ವನಕ್ಕೆ ಹೋಗದಿದ್ದರೆ ಮಾತ್ರ ರಾಜ್ಯ ಚನ್ನಾಗಿ

ಲಕ್ಷ್ಯದಲ್ಲಿಡಿರಿ, ನಾನು ಸತ್ತೆನು, ನಿಮ್ಮ ಯಶಸ್ಸಿಗೆ ಕಲಂಕವುಂಟಾಯಿತು!" ಎಂದು ನುಡಿದು, ಆ ದುಷ್ಟಬುದ್ಧಿಯಾದ ಕೈಕೇಯಿಯು ಎದ್ದುನಿಂತು ಮುಸುಗುಟ್ಟುತ್ತ ಸಿಟ್ಟಿನ ನದಿಯಂತೆ ಸಾಗಿದಳು! ಪಾಪರೂಪಪರ್ವತದಿಂದ ಉಗಮಹೊಂದಿ, ಕ್ರೋಧರೂಪಜಲದಿಂದ ಘೋರಗರ್ಜನೆಯುತ್ತ ಭರದಿಂದಸಾಗಿದ ಆ ಕೈಕೇಯಿರೂಪದ ನದಿಯು, ದಶರಥರೂಪವೃಕ್ಷವನ್ನು ಬೇರುಸಹಿತಕಿತ್ತಿ ಒಗೆಯುವದಕ್ಕಾಗಿ ವಿಪತ್ತಿರೂಪವಾದ ಸಮುದ್ರದ ಕಡೆ ಎರಡೂ ದಂಡೆ ಹಿಡಿಸದೆ ಹರಿಯತೊಡಗಿತು! ಇದನ್ನು ನೋಡಿ ಅರಸನು— "ಈಕೆಯ ಮಾತುಗಳು ವಿನೋದದವಾಗಿರದೆ, ಯಾವತ್ತು ನಿಜವಾದ ಸಿಟ್ಟಿನವೆಂ"ತಲೂ, "ಸ್ತ್ರೀಯುನೆವದಿಂದ ತನ್ನ ಶಿರಸ್ಸಿನಮೇಲೆ ತನ್ನ ಮೃತ್ಯುವೇ ಕುಣಿಯುತ್ತಿರುವದೆಂ"ತಲೂ ತಿಳಿದನು. ಆಗ ಆತನು ಕೈಕೇಯಿಯ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ವಿನಯದಿಂದ ಕೇಳಿಕೊಂಡು— "ಪ್ರಿಯೇ, ಸೂರ್ಯವಂಶದಮೇಲೆ ಕೊಡಲಿಯನ್ನು ಪ್ರಯೋಗಿಸಬೇಡ. ನನ್ನ ಈ ತಲೆಯನ್ನು ಕೇಳು, ಅದನ್ನಾದರೂ ನಿನಗೆ ಒಪ್ಪಿಸುವೆನು; ಆದರೆ ರಾಮನನ್ನು ಅಗಲಿಸಿ ನನ್ನನ್ನು ಕೊಲ್ಲಬೇಡ; ಒಂದಿಲ್ಲೊಂದು ರೀತಿಯಿಂದ ರಾಮನನ್ನು ಇಟ್ಟುಕೋ, ಇಲ್ಲದಿದ್ದರೆ ಒಮ್ಮೆಕಿರುವವರೆಗೆ ನಿನ್ನ ಹೃದಯವು ಸುಡತೊಡಗೀತು!" ಎಂದು ಪ್ರಾರ್ಥಿಸಿದ್ದೆಲ್ಲ ವ್ಯರ್ಥವಾಯಿತು. ಕೈಕೇಯಿಯೇನು ತನ್ನ ಹಟಬಿಡಲಿಲ್ಲ. ಆಗ ದಶರಥನು. "ಬೇನೆಯು ಸಾಧ್ಯವಿರುವದೆಂ"ದು ತಿಳಿದು ಕನಿಕರದಿಂದ—"ಹಾರಾಮಾ! ಹಾರಾಮಾ! ಹಾರಘುನಾಥ!" ಎಂದು ಕೂಗುತ್ತ ಭೂಮಿಯಮೇಲೆ ಗಪಬಡ ಉರುಳಾಡ ಹತ್ತಿದನು. ಹೆಣ್ಣಾನೆಯು ಕಲ್ಪವೃಕ್ಷವನ್ನು ಸಮೂಲಕಿತ್ತು ಒಗೆದಂತೆ ಅರಸನ ಸರ್ವಾಂಗಗಳು ಶಿಥಿಲಿಕೆಯಾದವು! ಗಂಟಲವು ಒಣಗಿದ್ದರಿಂದ ಆತನ ಮುಖದಿಂದ ಶಬ್ದಗಳು ಹೊರಡದಾದವು; ನೀರಿಲ್ಲದ ಮೀನದಂತೆ ಅರಸನು ದೀನನಾದನು; ಆಗ ಗಾಯಕ್ಕೆ ವಿಷವತೊಡೆಯುವಂತೆ, ಕೈಕೇಯಿಯು ಮತ್ತೆ ನಿರ್ದಯದಿಂದ—"ನನ್ನ ಬೇಡಿಕೆಯ ಪರಿಣಾಮವನ್ನು ಹೀಗೆ ಮಾಡಬೇಕಾಗಿದ್ದರೆ "ಕೇಳು ಕೇಳು" ಎಂದು ಯಾತರ ಬಲದಿಂದ ನನಗೆ ಹೇಳಿದಿರಿ? ಒಂದೇಕಾಲಕ್ಕೆ ಇಬ್ಬರು ಅರಸರಂತೆ! ಈ ಮಾತು ಶಕ್ಯವಾದರೂ ಇರುವದೇ? ಬಾಯಿಂದ ದಾನಶೂರನೆನಿಸಿಕೊಳ್ಳುವನು, ಕೃತಿಮಾತ್ರ ಕೃಪಣನದು! ಚಕ್ಕಂದದಿಂದ ಸುಖಲೋಲುಪರಾಗಿ ಶೌರ್ಯದ ಬಡಿವಾರವನ್ನು ತೋರಿಸಲಿಕ್ಕೆ ಬರುವದೆಂದು ತಿಳಿದಿರುವಿರಲ್ಲವೆ? ವಚನಭ್ರಷ್ಟರಾದರೂ ಆಗಿರಿ, ಧೈರ್ಯದಿಂದ ವಚನವನ್ನಾದರೂ ಪಾಲಿಸಿರಿ! ಹೀಗೆ ಮಾಡದೆ ಹೆಂಗಸರಂತೆ ದಸಿದೆಗೆದು ಅತ್ತರೆ ನಡೆಯಲಾರದು- ಸತ್ಯಪ್ರತಿಜ್ಞನಾದವನು ದೇಹ—ಗೇಹ—ಪುತ್ರ- ಕಳತ್ರ—ರಾಜ್ಯ- ವಿತ್ತಗಳನ್ನೆಲ್ಲ ಹುಲ್ಲಿಗೆ ಸರಿಮಾಡುವನು!

ಕೈಕೇಯಿಯು ಈ ಕಠೋರ ಮಾತುಗಳನ್ನು ಕೇಳಿ ಅರಸನು— "ಬೇಕಾದಷ್ಟು ಅನ್ನು; ಇದರಲ್ಲಿ ಸರ್ವಥಾ ನಿನ್ನ ಅಪರಾಧವಿಲ್ಲ- ನನ್ನ ಮೃತ್ಯುವೇ

ನನಗೆ ಹೀಗೆ ಮಾತನಾಡಿಸುತ್ತದೆ; ಆ ಮೃತ್ಯುವೇ ನಿನಗೆ ಪಿಶಾಚನಂತೆ ಬಡಿದುಕೊಂಡಿರುತ್ತದೆ. ಭರತನಿಗೆ ಮರವಿನಿಂದಾದರೂ ಅರಸನಾಗುವ ಉತ್ಸಾಹವಿರುವದಿಲ್ಲ. ನನ್ನ ಪ್ರಾರಬ್ಧಕರ್ಮವೆಂತಲೇ ನಿನ್ನ ಮನಸ್ಸಿನಲ್ಲಿ ಇಂಥ ಕೆಟ್ಟ ವಾಸನೆಗಳು ಮನೆಮಾಡಿರುವವು. ಇದೆಲ್ಲ ನನ್ನ ಪಾಪದ ಫಲವಾಗಿರುವದು. ದೈವವು ಪ್ರತಿಕೂಲವಾದವರಿಗೆಲ್ಲ ಹೀಗೆಯೇ ದುಃಸ್ಥಿತಿಯು ಉಂಟಾಗಿರುವದು. ಕೈಕೇಯಿ, ಅಯೋಧ್ಯೆಯು ಪುನಃ ಸುಖಸಮಾಧಾನದಿಂದ ತುಂಬಿತುಳುಕುವದು; ಅಖಿಲಗುಣಧಾಮನಾದ ನನ್ನ ಶ್ರೀರಾಮನೇ ಅದರಮೇಲೆ ಪ್ರಭುತ್ವವನ್ನು ನಡೆಸುವನು; ಯಾವತ್ತು ಬಂಧುಗಳು ರಾಮನನ್ನು ಸೇವಿಸುವರು; ಮೂರುಲೋಕಗಳಲ್ಲಿ ರಾಮನ ಕೀರ್ತಿದುಂದುಭಿಯೇ ದಿಮಿಗುಟ್ಟುವದು. ಆದರೆ ನಿನಗುಂಟಾದ ಕಲಂಕವೂ, ನನಗಾಗಿರುವ ಪಶ್ಚಾತ್ತಾಪವೂ ಮಾತ್ರ ನಾವಿಬ್ಬರೂ ಸತ್ತರೂ ಅಳಿದು ಹೋಗಲಾರವು. ಇದರ ಮೇಲೆ ನಿನಗೆ ಸಾದೆನಿಸಿದಂತೆ ಮಾಡು; ಆದರೆ ನಿನ್ನ ಮೋರೆಯು ನನ್ನ ಕಣ್ಣಿಗೆ ಬೀಳದಂತೆ ಎತ್ತಾದರೂ ಮರೆಗೆ ಹೋಗಿ ಕುಳಿತುಕೋ! ನಿನಗೆ ನಾನು ಕೈಜೋಡಿಸಿ ಬೇಡಿಕೊಳ್ಳುವೆನೇನಂದರೆ—ನಾನು ಬದುಕಿರುವವರೆಗೆ ತಿರುಗಿ ಮಾತ್ರ ಪಿಟ್ಟೆಂದು ಮಾತಾಡಬೇಡ! ದೈವಹೀನಳೇ, ಕಡೆಗೆ ನಿನಗೆ ಪಶ್ಚಾತ್ತಾಪವು ಆಗಿಯೇ ಆಗುವದು." ಎಂದು ಅರಸನು ಕೈಕೇಯಿಗೆ ಪರಿಪರಿಯಾಗಿ ಹೇಳಿದನು. ಕಡೆಗೆ ಆತನು—"ನನ್ನ ಮರಣವನ್ನು ಯಾಕೆ ನೋಡುತ್ತೀ" ಎಂದು ಭೂಮಿಯಮೇಲೆ ಉರುಳಾಡಹತ್ತಿದನು; ಆದರೆ ದುಷ್ಟ ಕೈಕೇಯಿಯು ಚಕಾರ ಶಬ್ದನುಡಿಯಲಿಲ್ಲ. ಆಗ ಶ್ಮಶಾನವೇ ಜಾಗ್ರತವಾಗಿರುವದೋ ಅನ್ನುವಂತೆ ತೋರಿತು. ರೆಕ್ಕೆಮುರಿದ ಪಕ್ಷಿಯಂತೆ ಅರಸನು "ರಾಮಾ ರಾಮಾ" ಎಂದು ವಿಲಾಪಿಸತೊಡಗಿದನು! ಆತನು ಮನಸ್ಸಿನಲ್ಲಿ—"ಇನ್ನು ಬೆಳಗೇ ಆಗಬೇಡ; ರಾಮನಿಗೆ ಈ ಸುದ್ದಿಯನ್ನು ಯಾರೂ ಹೇಳಲೇಬೇಡ; ರವಿಕುಲದ ಮೂಲಪುರುಷನು ಉದಯಿಸಲೇಬೇಡ; ಯಾಕೆಂದರೆ ಅಯೋಧ್ಯೆಯನ್ನು ನೋಡಿ ಆತನಹೃದಯಕ್ಕೂ ವ್ಯಥೆಯಾದೀತು" ಎಂದು ಚಿಂತಿಸತೊಡಗಿದನು.

ಅಭಿಷೇಕರಸಭಂಗ--ಹೀಗಿರುವಾಗ ಬೆಳಗಾಯಿತು; ರಾಜದ್ವಾರದಲ್ಲಿ ವಿವಿಧ ಮಂಗಲವಾದ್ಯಗಳು ಬಾರಿಸತೊಡಗಿದವು; ಸ್ತುತಿಪಾಠಕರ ಮಂಜುರೆಗಳು ಕೇಳಿಸತೊಡಗಿದವು; ಗಾಯಕರ ಗಾಯನಕ್ಕೆ ಆರಂಭವಾಯಿತು. ಇವನ್ನೆಲ್ಲ ಕೇಳಿ ಅರಸನಹೃದಯಕ್ಕೆ ಬಾಣನಟ್ಟಂತಾಯಿತು. ಸಹಗಮನವಮಾಡುವ ಪತಿವ್ರತೆಗೆ ಅಲಂಕಾರಗಳು ಸೇರದಿರುವಂತೆ, ಅರಸನಿಗೆ ಅವೆಲ್ಲ ಮಂಗಲಸೂಚನೆಗಳು ಸೇರದಾದವು. ಆದಿನರಾತ್ರಿ ಎಲ್ಲರೂ ರಾಮದರ್ಶನೋತ್ಕಂಠಿತರಾದದ್ದರಿಂದ, ಯಾರಿಗೂ ನಿದ್ರೆಯಿದ್ದಿಲ್ಲ. ರಾಜದ್ವಾರದಲ್ಲಿ ನೆರೆದ ಸಚಿವರು, ಸೇವಕರು ಮೊದಲಾದವರು ಸೂರ್ಯೋದಯವಾದದ್ದನ್ನು ನೋಡಿ—"ಸರಕಾರದ ಸವಾರಿಯು ಇನ್ನೂ ಏಳದಿರುವದಕ್ಕೆ ವಿಶೇಷ ಕಾರಣವೇನಿರಬಹುದು? ಪ್ರತಿನಿತ್ಯ

ಕಡೆಯ ಪ್ರಹರದಲ್ಲಿ ಏಳುವದು ಪ್ರಭುಗಳ ಪರಿಪಾಠವಿದ್ದು, ಇಂದಿನರೀತಿಯು ಮಾತ್ರ ನಮಗೆ ಬಹಳ ಸೋಜಿಗದ್ದಾಗಿ ತೋರುತ್ತದೆ. ಸುಮಂತಾ, ಹೋಗು ಹೋಗು; ಪ್ರಭುಗಳನ್ನು ಎಬ್ಬಿಸು; ಯಾಕಂದರೆ ರಾಜಾಜ್ಞೆಪಡೆದು ನಾವು ಮುಂದಿನಕಾರ್ಯ ಗಳನ್ನು ಮಾಡಲೇಬೇಕು; ಅನ್ನಲು, ಸುಮಂತನು ಅರಸನಬಳಿಗೆ ಹೊರಟನು. ಅದರೆ ನೋಡಿದಷ್ಟ ಭಯಂಕರತೆಯು! ಅಲ್ಲಿ ವಿಪತ್ತಿಯೂ. ವಿಷಾದವೂ ಬೀಡುಬಿಟ್ಟಿರುವಂತೆ ಆತನಿಗೆ ತೋರಿತು. ಕೇಳಿದರೆ ಯಾರೂ ಉತ್ತರ ಕೊಡಲೊಲ್ಲರು. ಕಡೆಗೆ ಸುಮಂ ತನು ಕೈಕೇಯಿ-ದಶರಥರಿರುವ ಅಂತಃಪುರವನ್ನೇ ಪ್ರವೇಶಿಸಿದನು. ಆತನು "ಜಯಜೀವ" ಎಂದು ನಮಸ್ಕಾರಮಾಡಿ ಕುಳಿತುಕೊಂಡನು ಮಾತ್ರ, ಅರಸನ ಆ ಅವಸ್ಥೆಯನ್ನು ನೋಡಿ ಆತನು ಸುಗ್ರನೆ ಸುಕ್ಕಿದನು- ಶೋಕಾವಿಷ್ಟನೂ, ಕಾಂತಿಹೀನನೂ, ಮೂರ್ಛಿ ತನಾಗಿ ಭೂಮಿಯಮೇಲೆ ಬಿದ್ದವನೂ ಆದ ಅರಸನು ಆತನಿಗೆ ಬೇರುಸಹಿತವಾಗಿ ಕಿತ್ತಿ ಒಗೆದ ಕಮಲದಂತೆ ತೋರಿದನು. ಸುಮಂತನು ಅಂಜಿಕೆಯಿಂದ ಮುಂದುಗಾಣದವ ನಾಗಲು, ಮಾತಾಡುವಧೈರ್ಯವೇ ಆತನಿಗೆ ಆಗಲೊಲ್ಲದು. ಆಗ ಮಂಗಲರಹಿತೆಯೂ, ಅಮಂಗಲಪೂರ್ಣಳೂ ಆದ ಕೈಕೇಯಿಯು ತಾನಾಗಿಯೇ ಸುಮಂತನನ್ನು ಕುರಿತು— "ಏನಾಗಿದಯೋ ದೇವರಿಗೆಗೊತ್ತು. ಅಖಂಡರಾತ್ರಿ ಸರಕಾರಕ್ಕೆ ನಿದ್ರೆಯಿಲ್ಲ. ಒಂದೇ ಸವನೆ ರಾಮನನ್ನು ನೆನಿಸುತ್ತಿರುವರು. ಬೆಳಗಾದರೂ ಮನಸ್ಸಿನೊಳಗಿದ್ದದ್ದನ್ನು ಹೇಳ ಲೊಲ್ಲರು. ಸುಮಂತಾ, ಈಗಲೇ ಹೋಗಿ ಮೊದಲು ರಾಮನನ್ನು ಕರಕೊಂಡುಬಾ, ಆಮೇಲೆ ಏನಾಗಿದೆಯೆಂಬುದನ್ನು ವಿಚಾರಿಸುತ್ತ ಕುಳಿತುಕೊಳ್ಳು!

ರಾಜನ ಇಚ್ಛೆಯಾದರೂ ಹೀಗೆಯೇ ಇರುವದೆಂದು ತಿಳಿದು ಸುಮಂತನು ರಾಮನ ಬಳಿಗೆ ಹೊರಟನು. ಈ ಅವ್ವನವರೇ ಏನೋ ಕುಚೇಷ್ಟಿತನ ಮಾಡಿರುವರೆಂದು ಆತನು ತಿಳಿದನು. ದುಃಖಪೀಡಿತನಾದದ್ದರಿಂದ ಆತನ ಕಾಲುಗಳು ಏಳದಾದವು. ಹೋಗ ಹೋಗುತ್ತ, ಆತನು ಮನಸ್ಸಿನಲ್ಲಿ—"ರಾಮನನ್ನು ಕರೆಸಿ ಆತನಿಗೆ ಪ್ರಭುಗಳು ಹೇಳುವ ದಾದರೂ ಏನು!" ಎಂದು ಆಲೋಚಿಸುತ್ತ ಧೈರ್ಯಶಾಲಿ ರಾಜಾಸ್ಥಾನದಬಳಿಗೆ ಬರಲು, ಎಲ್ಲರೂ—"ಏನಾಯಿತು, ಏನಾಯಿತು" ಎಂದು ಕೇಳತೊಡಗಿದರು. ಸುಮಂತನು ತನ್ನ ಮನಸ್ಸನ್ನು ಬಿಗಿ ಹಿಡಿದು ಎಲ್ಲರನ್ನು ಸಮಾಧಾನಗೊಳಿಸುತ್ತ, ದಿನಕರಕುಲಾವತಂಸ ನಾದ ಪ್ರಭು ರಾಮಚಂದ್ರನ ಬಳಿಗೆ ಹೊರಟನು. ಸುಮಂತನು ಬಂದದ್ದನ್ನು ನೋಡಿ ರಾಮನು ತಂದೆಯಂತೆ ಆತನನ್ನು ಸತ್ಕರಿಸಿದನು. ರಾಮನ ಮುಖವನ್ನು ನೋಡಿ ಸುಮಂ ತನು ಆತನಿಗೆ ರಾಜಾಜ್ಞೆಯನ್ನು ಅರುಹಿ ಆ ರಘುಕುಲದೀಪನನ್ನು ಕರಕೊಂಡು ಹೊರ ಟನು. ಸಚಿವನ ಸಂಗಡ ರಾಮಚಂದ್ರನು ಹೇಗೆ ಹೇಗೋ ಹೋಗುತ್ತಿರುವದನ್ನು ನೋಡಿ ಜನರಲ್ಲ ಎಲ್ಲಕಡೆಗೂ ಗಲಿಬಿಲಿಯುಂಟಾಯಿತು. ರಘುವಂಶಮಣಿಯು ಹೋಗಿ ನೋಡಲು, ಅರಸನು ತೀರಾ ಕಲಾಹೀನನಾಗಿರುವದು ಆತನಕಣ್ಣಿಗೆ ಬಿದ್ದಿತು. ಹೆಣ್ಣು

ಸಿಂಹವನ್ನು ನೋಡಿ ಗಜರಾಜನು ಗರ್ಭಗಳಿತನಾಗಿ ಬಿದ್ದಿರುವಂತೆ ಆತನಿಗೆ ತೋರಿತು. ಒಣಗಿದ ತುಟಿಯುಳ್ಳವನೂ, ಸರ್ವಾಂಗತಪ್ತನೂ ಆದ ದಶರಥರಾಜನು ರಾಮನಿಗೆ ಮಣಿಹೀನಭುಜಂಗದಂತೆ ತೋರಿದನು; ಮತ್ತು ಆತನಬಳಿಯಲ್ಲಿಯೇ ಇದ್ದ ಕ್ರೋಧಸಂತಪ್ತ ಕೈಕೇಯಿಯು ಅರಸನ ಆಯುಷ್ಯದ ಗಳಿಗೆಗಳನ್ನು ಎಣಿಸುತ್ತ ಕುಳಿತಿರುವ ಮೃತ್ಯುದೇವತೆಯಂತೆ ತೋರಿದಳು. ರಾಮರಾಜನು ಸ್ವಭಾವದಿಂದ ಮೃದುವು; ಅತ್ಯಂತ ಕಾರುಣಿಕನು; ದುಃಖವೆಂಬದನ್ನೆಂದೂ ಆತನು ಕಿವಿಯಿಂದಲೂ ಕೇಳಿದವನಲ್ಲ; ಆದರೆ ಅದೇ ದುಃಖವನ್ನು ಈಗ ಕಣ್ಣಿನಿಂದ ನೋಡುವ ಪ್ರಥಮಪ್ರಸಂಗವು ಆತನಿಗೆ ಬಂದಿತು! ಆದರೂ ಆತನು ಕಾಲವನ್ನು ನಿರೀಕ್ಷಿಸಿ ಧೈರ್ಯತಾಳಿ ಮಧುರಶಬ್ದಗಳಿಂದ ತಾಯಿಯನ್ನು ಕುರಿತು—“ಅವ್ವಾ, ತಂದೆಯ ದುಃಖದ ಕಾರಣವನ್ನು ನನಗೆ ಹೇಳು. ಅದನ್ನು ದೂರಮಾಡಲು ನಾನು ಯತ್ನಿಸಲೇಬೇಕಾಗುವದು” ಅನ್ನಲು, ಕೈಕೇಯಿಯು—ರಾಮಾ, ಕೇಳು. ಒಟ್ಟಿಗೆ ನಿನ್ನ ಮೇಲಿರುವ ಮಹಾರಾಜರ ಅತ್ಯಂತ ಪ್ರೇಮವೇ ಅವರ ದುಃಖದ ಮೂಲವಾಗಿರುವದು. ಅವರು ನನಗೆ ಎರಡು ವರಗಳನ್ನು ಕೊಡುತ್ತೇವೆಂದು ಹೇಳಿದ್ದರು, ಅವನ್ನು ನಾನು ನನಗೆ ಬೇಕಾದಂತೆ ಕೇಳಿಕೊಳ್ಳಲು, ಅದನ್ನು ಕೇಳಿದ ಕೂಡಲೆ ಮಹಾರಾಜರ ಹೊಟ್ಟೆಯಲ್ಲಿ ಕಸವಿಸಿಯಾಗಹತ್ತಿತು. ಯಾಕಂದರೆ ನಿನ್ನಮೇಲಿನ ಪ್ರೇಮವನ್ನು ಕಡಿಮೆ ಮಾಡುವದು ಅವರಿಂದಾಗಲೊಲ್ಲದು. ಇತ್ತ ಬಿದ್ದರೆ ಬಾವಿ, ಇತ್ತ ಬಿದ್ದರೆ ಕೆರೆ ಎಂಬಂತೆ ಒತ್ತಟ್ಟಿಗೆ ನಿನ್ನ ಮೇಲಿನ ಪ್ರೇಮ, ಒತ್ತಟ್ಟಿಗೆ ನನಗೆ ಕೊಟ್ಟ ವಚನಗಳು ಹೀಗಾಗಿ ಇವರು ದುಃಖ ಪಡುತ್ತಿರುವರು. ನೀನು ಮಾಡುತ್ತಿದ್ದರೆ ನನ್ನ ಅಜ್ಞೆಯನ್ನು ಶಿರಸಾಮನ್ನಿಸಿ ಇವರ ದುರ್ಧರ ಕ್ಲೇಶವನ್ನು ದೂರಮಾಡು, ಎಂದು ಕೂತಕೂತಲ್ಲಿಯೇ ಕೈಕೇಯಿಯು ನಿರ್ಬಾಧವಾಗಿ ನುಡಿದಳು. ಆಕೆಯ ದುಷ್ಟಭಾಷಣವನ್ನು ಕೇಳಿ ಕಠೋರತೆಯೂ ಕೂಡ ತೀರಾ ಕರಗಿಹೋಗಿರಬಹುದು.

ತಾಯಿಯ ಈಮಾತುಗಳನ್ನು ಕೇಳಿ ನಿಜಾನಂದಘನನೂ, ಭಾನುಕುಲಸೂರ್ಯನೂ ಆದ ಶ್ರೀ ರಾಮಚಂದ್ರನು ಮನಸ್ಸಿನಲ್ಲಿನಕ್ಕು, ಸರ್ವಥೈವನಿರ್ದೋಷವೂ, ವಾಗ್ದೇವತೆಗೆ ಅಲಂಕಾರಭೂತವೂ ಆದ ಮೃದು-ಮಂಜುಲವಾಣಿಯಿಂದ ತಾಯಿಯನ್ನು ಕುರಿತು—ಅವ್ವಾ, ಕೇಳು. ತಾಯಿತಂದೆಗಳ ಆಜ್ಞೆಯಲ್ಲಿ ಅನುರಕ್ತನಾದ ಪುತ್ರನೇ ಮಹಾಭಾಗ್ಯಶಾಲಿಯು. ತಾಯಿತಂದೆಗಳನ್ನು ಸಂತೋಷಪಡಿಸುವ ಪುತ್ರನು ಯಾವತ್ತು ಬ್ರಹ್ಮಾಂಡದಲ್ಲಿ ದೊರೆಯುವದು ದುರ್ಲಭವು. ಇದಲ್ಲದೆ ವನದಲ್ಲಿ ವಿಶೇಷವಾಗಿ ಮುನಿಮಂಡಲಿಯ ದರ್ಶನವಾಗಬಹುದು. ಅದರಿಂದ ಯಾವತ್ತು ಪಕ್ಷಗಳಿಂದ ನನ್ನ ಕಲ್ಯಾಣವೇ ಆಗುವದು. ಅದರಲ್ಲಿ ತಂದೆಯ ಆಜ್ಞೆಯು; ಮೇಲೆ ತಾಯಿಯೇ, ಅದಕ್ಕೆ ನಿನ್ನ ಸಮ್ಮತಿಯೂ ಇರುವದು! ಇವಲ್ಲದೆ ನನ್ನ ಪ್ರಾಣಪ್ರಿಯನಾದ ಭರತನಿಗೆ ರಾಜ್ಯಲಾಭವಾಗುವದು! ಒಟ್ಟಿಗೆ ನನ್ನ ದೈವವು ಎಲ್ಲ ಕಡೆಯಿಂದಲೂ ನನ್ನನ್ನು ಎತ್ತಿ ಹಿಡಿದಿರು

ವಂತೆ ತೋರುತ್ತದೆ. ಇಂಥ ಕಾರ್ಯಗಳ ಸಲುವಾಗಿಯೂ ನಾನು ವನಕ್ಕೆ ಹೋಗದಿದ್ದರೆ, ಮೂರ್ಖರ ಸಾಲಿನಲ್ಲಿ ನನ್ನನ್ನು ಅಗ್ರಗಣ್ಯನೆಂದು ತಿಳಿಯಬೇಕಾದೀತು. ಕಲ್ಪವೃಕ್ಷವನ್ನು ದೂಡಿ ಔಡಲಗಿಡದ ಜೋಪಾನ ಮಾಡುವವನೂ, ಅಮೃತವನ್ನು ಚಲ್ಲಿಕೊಟ್ಟು ವಿಷವನ್ನು ಬೇಡಿಕೊಳ್ಳುವವನೂ ಕೂಡ ಇಂಥ ಸಂಧಿಯು ಬಂದಾಗ ವ್ಯರ್ಥ ಹೋಗಗೊಡಲಿಕ್ಕಿಲ್ಲ! ಅವ್ವಾ, ಈ ಮಾತಿನ ವಿಚಾರವನ್ನು ನೀನೇ ನಿನ್ನೊಳಗೆ ಮಾಡಿ ನೋಡು. ಈ ಲೋಕನಾಯಕನು ಅತ್ಯಂತ ವಿಕಲನಾದದ್ದನ್ನು ನೋಡಿ ಮಾತ್ರ ನನಗೆ ಬಹಳ ದುಃಖವಾಗುವದು. ಸಣ್ಣ ಮಾತಿನ ಸಲುವಾಗಿ ಮಹಾರಾಜರಿಗೆ ದುಃಖದ ಪರ್ವತವೇ ಭಾಸವಾಗುತ್ತಿರುವದು! ತಾಯಿಯೇ, ಇದರ ನಂಬಿಗೆಯು ಮಾತ್ರ ನನಗೆ ತೋರಲೊಲ್ಲದು. ಈ ರಾಜನೆಂದರೆ ಮಹಾ ಧೈರ್ಯಶಾಲಿಯೂ, ಅಪಾರ ಗುಣಸಾಗರನೂ ಆಗಿರುವನು. ನನ್ನಿಂದಲೇ ಏನಾದರೊಂದು ಮಹಾಪರಾಧವಾಗಿರುವದು. ಅಂತೇ ಮಹಾರಾಜರು ನನ್ನ ಸಂಗಡ ಮಾತಾಡದಾಗಿರುವರು. ಅವ್ವಾ, ನಿನಗೆ ನನ್ನ ಆಣೆಯಿರುತ್ತದೆ. ಸತ್ಯಭಾವದಿಂದ ಇದ್ದ ಸಂಗತಿಯನ್ನು ಹೇಳು.

ರಘುವರನ ಭಾಷಣವು ಸ್ವಾಭಾವಿಕವಾಗಿಯೇ ಸರಳವಾದದ್ದು; ಆದರೆ ಅದು ಕೂಡ ದುಷ್ಟಬುದ್ಧಿಯ ಕೈಕೇಯಿಗೆ ಕುಟಿಲವಾಗಿತೋರಿತು. ಆಕೆಯು ಮನಸ್ಸಿನಲ್ಲಿ ರಾಮನ ಒಲವನ್ನರಿತು ಮೇಲೆ ಮೇಲೆ ಲೋಭ ತೋರಿಸುತ್ತ ಆತನನ್ನು ಕುರಿತು "ರಾಮಾ, ನಿನ್ನ ಆಣೆಮಾಡಿಯೂ, ಭರತನ ಆಣೆಮಾಡಿಯೂ ಹೇಳುವೆನೇನಂದರೆ, ನನಗಂತು ಎರಡನೆಯ ಕಾರಣವೇನು ತೋರಲೊಲ್ಲದು. ಅಪ್ಪಾ ರಾಮಾ, ನೀನು ಅಪರಾಧಮಾಡುವಂತಹನು ಅಲ್ಲವೇ ಅಲ್ಲ. ನೀನಂತು ತಾಯಿತಂದೆಗಳನ್ನೂ, ಯಾವತ್ತು ಆಪ್ತೇಷ್ಟರನ್ನೂ ಸುಖಪಡಿಸುವವನಿರುತ್ತೀ. ರಾಮಾ, ನೀನಾಡುವದೆಲ್ಲ ನಿಜವಾಗಿರುತ್ತದೆ. ನೀನು ತಾಯಿತಂದೆಗಳ ಆಜ್ಞೆಯಲ್ಲಿ ಯಾವಾಗಲೂ ತತ್ಪರನಾಗಿರುತ್ತೀ. ನಾನು ನಿನ್ನ ಮೇಲಿಂದ ನನ್ನ ಜೀವವನ್ನು ನಿವಾಳಿಸಿ ಚಲ್ಲುವೆನು. ಮುಪ್ಪಿನಲ್ಲಿ ಮಹಾರಾಜರ ಹೆಸರಿಗೆ ಕುಂದುಬಾರದಂತೆ ಇನ್ನು ನೀನೇ ಮಹಾರಾಜರಿಗೆ ತಿಳಿಯಹೇಳು. ಮಹತ್ಪುಣ್ಯದಿಂದ ನಿನ್ನಂಥ ಮಗನು ಹುಟ್ಟಿಬಂದಿರಲು, ಆಪುಣ್ಯದ ತಿರಸ್ಕಾರಮಾಡುವದು ಉಚಿತವಲ್ಲವು." ಎಂದು ಹೇಳಿದಳು. ಆಕೆಯ ಕೆಟ್ಟಮುಖದಿಂದ ಈ ಶುಭವಾಕ್ಯಗಳು ಹೊರಡುವದೆಂದರೆ, ಮಗಧದೇಶದಲ್ಲಿ ಗಯಾದಿ ತೀರ್ಥಗಳ ಅಸ್ತಿತ್ವವಿದ್ದ ಹಾಗೆಯೆಂದು ತಿಳಿಯತಕ್ಕದ್ದು. ಭಾಗೀರಥಿಯನ್ನು ಕೂಡಿದ ಬಚ್ಚಲಹರಿಯ ನೀರೂ ಗಂಗಾಜಲವೇ ಆಗುವಂತೆ, ತಾಯಿಯೆಂಬ ಸಂಬಂಧದಿಂದ ಆಕೆಯಾಡಿದ ಒಂದೊಂದು ಶಬ್ದಗಳು ರಾಮನಿಗೆ ಪ್ರಿಯವಾಗಿಯೇ ತೋರಿದವು. ಅಷ್ಟರಲ್ಲಿ ರಾಜನ ಮೂರ್ಛೆತಿಳಿದು ಆತನು 'ರಾಮ' ರಾಮ, ಎಂದು ಮುಗ್ಗಲಾದನು. ಸುಮಂತನು ಶ್ರೀರಾಮಚಂದ್ರನ ಆಗಮನವನ್ನು ತಿಳಿಸಿ ಸಮಯೋಚಿತವಾಗಿ ಅರಸನನ್ನು ಸಮಾಧಾನಗೊಳಿಸಿದನು. ಆಗ ರಾಮಚಂದ್ರನು ದಶರಥನ ಬಳಿಗೆ ಹೋಗಲು, ದಶ

ರಥನು ಧೈರ್ಯವಮಾಡಿ ಕಣ್ಣುತೆರೆದನು. ಸುಮಂತನು ಆತನನ್ನು ಸಾವರಿಸಿ ಎಬ್ಬಿಸಿ ಕುಳ್ಳಿರಿಸಿದನು. ರಾಮನು ತನ್ನ ಚರಣಕ್ಕೆರಗುವದನ್ನು ನೋಡಿ ದಶರಥನು ಆತನನ್ನು ಬಿಗಿಯಾಗಿ ಅಪ್ಪಿಕೊಳ್ಳಲು, ಸರ್ಪಕ್ಕೆ ಕಳೆದು ಹೋದ ಮಣಿಯು ಪುನಃ ಸಿಕ್ಕಂತಾಯಿತು. ರಾಜನು ರಾಮಚಂದ್ರನನ್ನುಎವೆಯಿಕ್ಕದೆ ನೋಡುತ್ತ ಕುಳಿತುಬಿಟ್ಟನು. ಆತನ ಕಣ್ಣುಗಳೊಳಗಿಂದ ಅಶ್ರುಗಳಪ್ರವಾಹವು ಒಂದೇಸವನೆ ಸಾಗಿತು. ದುಃಖದಿಂದ ಕಸವಿಸಿಯಾಗತೊಡಗಿದ್ದರಿಂದ ಆತನಮುಖದಿಂದ ಶಬ್ದಗಳು ಹೊರಡದಾದವು. ಆತನು ಆಗಾಗ್ಗೆ ರಾಮನನ್ನು ಎದೆಗವಚಿಕೊಳ್ಳಹತ್ತಿದನು. ಅರಸನು ಮನಸ್ಸಿನಲ್ಲಿ ಬ್ರಹ್ಮನನ್ನು ಕುರಿತು—"ರಾಮನು ವನಕ್ಕೆ ಹೋಗದಂತೆ ನೀನು ಮಾಡು." ಎಂದು ಪ್ರಾರ್ಥಿಸಿದನು. ಬಳಿಕ ಉಮಾರಮಣನನ್ನು ಕುರಿತು—"ಹೇ ಅಖಂಡ ಕಲ್ಯಾಣಕಾರಿನ್, ನನ್ನ ಪ್ರಾರ್ಥನೆಯನ್ನು ನೀನು ಲಾಲಿಸಬೇಕು. ಶೀಘ್ರಸಂತೋಷಿಯೂ, ಕೊಡಗೈದೊರೆಯೂ ನೀನೇ ಆಗಿರುವೆ. ನನ್ನನ್ನು ದೀನನೆಂದು ತಿಳಿದು ನನ್ನ ದುಃಖಹರಣ ಮಾಡು. ನೀನು ಭೂತ ಮಾತ್ರಗಳ ಹೃದಯಪ್ರೇರಕ ನಾದದ್ದರಿಂದ ರಾಮನು ನನ್ನ ಆಜ್ಞೆಯನ್ನು ಉಲ್ಲಂಘಿಸಿ ತನ್ನ ಶಾಲೀನತೆಯನ್ನೂ, ಪ್ರೇಮಲತನವನ್ನೂ ಬಿಟ್ಟು, ಕೊಟ್ಟು ಆತನು ಮನೆಯಲ್ಲಿರುವಂತೆಯೇ ಆತನಿಗೆ ಬುದ್ಧಿಯನ್ನು ಕೊಡು. ನನ್ನ ಸತ್ಕೀರ್ತಿಯು ಮಾಸಿ ನನ್ನ ದುರ್ಲೌಕಿಕವಾದರೂ ಚಿಂತೆಯಿಲ್ಲ; ನನ್ನ ಸ್ವರ್ಗವಾಸವು ಹೋಗಿ ನಾನು ನರಕದಲ್ಲಿ ಕೊಳೆಯಹತ್ತಿದರೂ ಚಿಂತೆಯಿಲ್ಲ; ಅದರಂತೆ ದಯಾನಿಧೇ ಶಂಕರಾ, ನೀನು ನನಗೆ ದುರ್ಧರ ದುಃಖಗಳನ್ನು ಭೋಗಿಸ ತೊಡಗಿಸಿದರೂ ಚಿಂತೆಯಿಲ್ಲ; ರಾಮನನ್ನು ಮಾತ್ರ ಕಣ್ಣುಮರೆಮಾಡಬೇಡ!

ಹೀಗೆ ದಶರಥನು ಮನಸ್ಸಿನಲ್ಲಿ ಪ್ರಾರ್ಥಿಸತೊಡಗಿದ್ದರಿಂದ ಬಾಯಿ ಬಿಚ್ಚಿ ಆತನು ಏನೂ ಮಾತಾಡಲಿಲ್ಲ. ಆತನಮನಸ್ಸು ಅರಳೆಯ ಎಲೆಯಂತೆ ಡಳಮಳಿಸಹತ್ತಿತು. ತಂದೆಯು ಪ್ರೇಮಾವಿಷ್ಟನಾಗಿರುವದನ್ನು ತಿಳಿದು, ಕೈಕೇಯಿಯು ಮತ್ತೆ ಏನಾದರೂ ವಾಕ್ಪ್ರಹಾರ ಮಾಡಿಯಾಳೆಂದು ಭಾವಿಸಿ ದೇಶ–ಕಾಲ–ವರ್ತಮಾನಗಳನ್ನನುಸರಿಸಿವಿನಯಯುಕ್ತವಿಚಾರದಿಂದ ಶ್ರೀರಾಮನು ತಂದೆಯನ್ನು ಕುರಿತು ಭಾಷಣ ಮಾಡತೊಡಗಿದನು—"ಅಪ್ಪಾ, ನಾನು ಏನು ಮಾತಾಡಿದರೂ ನನಗೆ ಉದ್ಧತತನದ ದೋಷವು ತಟ್ಟಿಯೇ ತಟ್ಟುವದು; ಆದರೂ ನಾನು ಮಗನೆಂದು ತಿಳಿದು ನನ್ನ ಅಪರಾಧವನ್ನು ಕ್ಷಮಿಸಬೇಕು. ತೀರ ಸಣ್ಣಮಾತಿಗಾಗಿ ನೀವು ಎಷ್ಟು ದುಃಖಿತರಾಗಿರುವಿರಿ! ನನಗೆ ಮೊದಲೇಯಾಕೆ ಹೇಳಿಕಳಿಸಲಿಲ್ಲ? ಮಹಾರಾಜರ ಸ್ಥಿತಿಯನ್ನು ನೋಡಿ ನಾನು ಅಮ್ಮನನ್ನೇ ಕೇಳಲು, ಆಕೆಯು ಎಲ್ಲ ವರ್ತಮಾನವನ್ನು ಹೇಳಿದಾಗ ನನ್ನ ಸರ್ವಾಂಗವು ಶಾಂತವಾಯಿತು. ಇಂಥ ಮಂಗಲ ಪ್ರಸಂಗದಲ್ಲಿ ಈ ಮಮತಾಜನಿತ ಶೋಕವನ್ನು ದೂರಕ್ಕೆದೂಡಿ, ಪ್ರಸನ್ನಚಿತ್ತದಿಂದ ವನಕ್ಕೆ ಹೋಗಲು ನನಗೆ ಅಪ್ಪಣೆಯಕೊಡಬೇಕು, ಎಂದು ನುಡಿಯುವಾಗ

ಭಗವಂತನ ದೇಹದಲ್ಲಿ ರೋಮೋದ್ಗಮವಾಯಿತು. ಆತನು ಪುನಃ ತಂದೆಯನ್ನು ಕುರಿತು—"ಈ ಪೃಥ್ವಿಯಲ್ಲಿ ಯಾವ ಪುತ್ರನ ಜೀವನ ಕ್ರಮವನ್ನು ಕೇಳಿ ಆತನ ತಂದೆಗೆ ಪರಮಾನಂದವಾಗುವದೋ ಆ ಪುತ್ರನೇ ಧನ್ಯನು. ಯಾವ ಸತ್ಪುತ್ರನಿಗೆ ತಾಯಿತಂದೆಗಳು ತಮ್ಮ ಪ್ರಾಣಕ್ಕಿಂತಲೂ ಪ್ರೀಯರಾಗಿ ತೋರುವರೋ ಆತನಿಗೆ ನಾಲ್ಕೂ ಪುರುಷಾರ್ಥಗಳು ಸುಲಭವಾಗಿ ಕೈ ಸೇರುವವು. ನಾನು ತಮ್ಮ ಅಪ್ಪಣೆಯನ್ನು ಪಾಲಿಸಿ ಜನ್ಮದ ಸಾರ್ಥಕ ಮಾಡಿಕೊಂಡು ಬೇಗನೆ ತಿರುಗಿ ಬರುವೆನು, ನನಗೆ ಅಪ್ಪಣೆಯನ್ನು ಕೊಡಬೇಕು. ನಾನು ಈಗ ತಾಯಿಯ ಅಪ್ಪಣೆಯನ್ನು ಪಡೆದು ಬಂದು ಪುನಃ ತಮ್ಮ ಚರಣಕ್ಕೆರಗಿ ವನಕ್ಕೆ ತೆರಳುವೆನು. ಎಂದು ನುಡಿದು ರಾಮನು ಅಲ್ಲಿಂದ ಹೊರಟು ಹೋದನು. ದುಃಖವಶದಿಂದ ರಾಜನು ಉತ್ತರವನ್ನೇ ಕೊಡಲಿಲ್ಲ. ಚೇಳಿನ ವಿಷವು ಕಡಿದ ಕೂಡಲೆ ಶರೀರವನ್ನೆಲ್ಲ ವ್ಯಾಪಿಸುವಂತೆ, ಈ ದುಃಖಕಾರಕ ವರ್ತಮಾನವು ಪಟ್ಟಣವನ್ನೆಲ್ಲ ವ್ಯಾಪಿಸಿತು. ಎಲ್ಲರೂ ಶೋಕ ಗ್ರಸ್ತರಾಗಿ ಕೈಕೇಯಿಯನ್ನು ಮನಸ್ಸಿಗೆ ಬಂದಂತೆ ಆಡಿಕೊಳ್ಳ ಹತ್ತಿದರು: ಕೆಲವರು ಅರಸನಿಗೆ ದೋಷ ವಿಡತೊಡಗಿದರು. ಸುಜ್ಞನರಿದ್ದವರು ಮಾತ್ರ ಧರ್ಮದ ನಿರೀಕ್ಷಣ ಮಾಡಿ, ಅರಸನಿಗೆ ದೋಷ ವಿಡದಾದರು. ಅವರು ಶಿಬಿ, ದಧೀಚಿ, ಹರಿಶ್ಚಂದ್ರ ಮೊದಲಾದವರ ಇತಿಹಾಸವನ್ನು ಪರಸ್ಪರರ ಮುಂದೆ ವರ್ಣನಮಾಡುತ್ತಲಿದ್ದರು. ಕೆಲವರು, ಇದರಲ್ಲಿ ಭರತನ ಅಂಗವಿರುತ್ತದೆಂತಲೂ ಅನ್ನಹತ್ತಿದರು; ಅದನ್ನು ಕೇಳಿ ಕೆಲವರು ಸುಮ್ಮನಿರುತ್ತಿದ್ದರು.— ಕೆಲವರು ಕಿವಿಯಲ್ಲಿ ಬೆರಳಿಟ್ಟುಕೊಂಡು, ಹಲ್ಲುಗಳಿಂದ ನಾಲಿಗೆ ಕಚ್ಚಿ —"ಇದು ಕೇವಲ ಮಿಥ್ಯಾರೋಪವು. ನಿಮ್ಮ ಈ ಭಾಷಣದಿಂದ ನಿಮ್ಮ ಸುಕೃತಗಳು ಲಯವಾದಾವು. ಭರತನಿಗೆ ರಾಮನು ಪಂಚಪ್ರಾಣವಾಗಿರುವನು. ಒಂದು ಪಕ್ಷದಲ್ಲಿ ಚಂದ್ರಮನು ಅಗ್ನಿ ಕಣಗಳನ್ನು ಸುರಿಸಹತ್ತನು, ಅಮೃತವೂ ವಿಷಕ್ಕೆ ಸಮನಾಗಬಹುದು. ಆದರೆ ಭರತನು ರಾಮನ ವಿರುದ್ಧವಾಗಿ ಸ್ವಪ್ನದಲ್ಲಿಯೂ ಎಂದೂ ಏನೂ ಮಾಡಲಾರನು." ಎಂದು ಭರತನಿಗೆ ಹೆಸರಿಡುವವರನ್ನು ನಿಷೇಧಿಸತೊಡಗಿದರು.

ಇತ್ತ ಕೈಕೇಯಿಗೆ ಅತ್ಯಂತ ಪ್ರಿಯರಾಗಿದ್ದ ವೃದ್ಧ ವಿಪ್ರ ಸ್ತ್ರೀಯರು ಆಕೆಯ ಶೀಲವನ್ನು ಹೊಗಳಿ ಆಕೆಯನ್ನು ಕುರಿತು—ದೇವೀ, ಕೈಕೇಯೀ, "ನನಗೆ ಭರತನು ಕೂಡ ರಾಮನಿಗಿಂತ ಪ್ರೀಯನಲ್ಲವೆಂ"ದು ನೀನು ಯಾವಾಗಲೂ ಅನ್ನುತ್ತಿದ್ದದ್ದು ಜಗತ್ತಿನಲ್ಲಿ ಪ್ರಸಿದ್ಧವಾಗಿರುವದು. ರಾಮನಮೇಲೆ ಸ್ವಾಭಾವಿಕವಾಗಿಯೇ ನಿನ್ನ ಪ್ರೇಮವಿರುತ್ತಿದ್ದು, ಇಂದು ಒಮ್ಮಿಂದೊಮ್ಮೆ ಆತನ ಯಾವ ತಪ್ಪಿಗಾಗಿ ಆತನನ್ನು ವನಕ್ಕೆ ಅಟ್ಟುವೆ? ಸವತಿಯರಮೇಲೆ ನೀನು ಎಂದೂ ಮತ್ಸರಮಾಡಿರುವದಿಲ್ಲ. ಯಾವತ್ತು ರಾಷ್ಟ್ರವು ನಿಮ್ಮ ಪರಸ್ಪರರ ಪ್ರೇಮ-ವಿಶ್ವಾಸಗಳ ಸಾಕ್ಷಿಯನ್ನು ಕೊಟ್ಟೀತು. ಹೀಗಿದ್ದು ಕೌಸಲ್ಯೆಯ ಯಾವ ಅಪರಾಧಕ್ಕಾಗಿ ಇಷ್ಟು ಭಯಂಕರ ರೀತಿಯಿಂದ ನೀನು ಈಗ ಆಕೆಯ

ಮೇಲೆ ವಜ್ರಪ್ರಹಾರಮಾಡಿ ಸೇಡುತೀರಿಸಿಕೊಳ್ಳುತ್ತೀ? ಸೀತೆಯು ಪತಿಯ ಸಂಗಡಲಿ ಇರಬಹುದೇ? ರಾಮನಿಲ್ಲದ ಲಕ್ಷ್ಮಣನು ಮನೆಯಲ್ಲಿ ನಿಲ್ಲಬಹುದೇ? ಭರತನಾದರೂ ಅಯೋಧ್ಯೆಯ ರಾಜ್ಯವನ್ನು ಭೋಗಿಸಬಹುದೇ? ರಾಮನ ಪಶ್ಚಾತ್ ಈ ದಶರಥರಾಜನು ಜೀವದಿಂದಿರಬಹುದೇ? ಇದನ್ನೆಲ್ಲ ವಿಚಾರಿಸಿ ಸಿಟ್ಟನ್ನು ಬಿಟ್ಟುಕೊಡು. ಶೋಕದ ಹಾಗು ಕಲಂಕದ ಪರಮಾವಧಿಗೆ ನೀನು ಗುರಿಯಾಗಬೇಡ. ಇದರಮೇಲೆಯೂ ನಿನಗೆ ಬೇಕಾಗಿದ್ದರೆ, ಭರತನಿಗೆ ಯುವರಾಜಪದವಿಯನ್ನು ಕೊಡು; ಆದರೆ ರಾಮನನ್ನು ವನವಾಸಕ್ಕೆ ಕಳಿಸುವ ಕಾರಣವೇನು? ರಾಮನು ನಿನ್ನ ರಾಜ್ಯಕ್ಕೆ ಎಂದೂ ಆಶೆಪಡುವಂತಿ ಕಾಣಿಸುತ್ತಿರುವದಿಲ್ಲ. ಆತನು ಕೇವಲ ಧರ್ಮಧುರೀಣನಿದ್ದು, ವಿಷಯರಸದಿಂದ ಪರಾಙ್ಮುಖನಾಗಿರುವನು. ರಾಮನು ರಾಜಗೃಹವನ್ನು ಪರಿತ್ಯಜಿಸಿ ಗುರುಗೃಹದಲ್ಲಿ ವಾಸಿಸಬೇಕೆಂದಾದರೂ ಅರಸನಿಗೆ ವರವನ್ನು ಬೇಡಿಕೋ? ನಮ್ಮ ಈ ಮಾತು ಸೇರದಿದ್ದರೆ ಕಡೆಗೆ ನಿನ್ನ ಕೈಗೂ ಏನೂ ಹತ್ತಲಿಕ್ಕಿಲ್ಲ. ಇದು ನಿನ್ನ ಪ್ರಣಯಕೋಪದ ಭಾಗವಿದ್ದರೆ ಸ್ಪಷ್ಟ ಬಾಯಿಂದ ಹೇಳಿಯಾದರೂ ಹೇಳು. ರಾಮನಂತಹ ಮಗನನ್ನು ನೀನು ವನಕ್ಕೆ ಕಳಿಸಿದರೆ ಜನರು ನಿನಗೆ ಅಂದರಾದರೂ ಏನು? ನಡೆ, ಈಗಲೆ ಎದ್ದು ನಮ್ಮ ಮನಸ್ಸಿಗೆ ಸಂತೋಷವಾಗುವಂತೆಯೂ, ನಿನ್ನ ಕಲಂಕವು ದೂರವಾಗುವಂತೆಯೂ ಮಾಡು ಏಳು. ರಾಮನು ವನವಾಸಕ್ಕೆ ಹೋದನಂತರೆ ಆತನನ್ನು ಹಟದಿಂದ ತಡೆದು ನಿಲ್ಲಿಸು ಇದರ ಹೊರತು ಎರಡನೆಯ ಉಪಾಯವನ್ನೇ ಮಾಡಬೇಡ. ಎಲೈ ಭಾಮಿನೀ, ಸೂರ್ಯನಿಲ್ಲದ ದಿವಸವೂ, ಪ್ರಾಣವಿಲ್ಲದ ದೇಹವೂ, ಚಂದ್ರನಿಲ್ಲದ ರಾತ್ರಿಯೂ ಶೂನ್ಯವಾಗಿರುವಂತೆ, ತುಲಸೀದಾಸನ ಪ್ರಭುವಾದ ಶ್ರೀರಾಮನಿಲ್ಲದ ಅಯೋಧ್ಯೆಯು ಶೂನ್ಯವಾದೀತೆಂಬದು ಸೂರಾ ನೆನಪಿನಲ್ಲಿಡು!!" ಎಂದು ಕೈಕೇಯಿಯ ಆ ಮೈತ್ರಿಣಿಯರು ಶ್ರವಣ-ಮಧುರವಾಗಿಯೂ, ಪರಿಣಾಮದಲ್ಲಿ ಹಿತಕರವಾಗಿಯೂ ಇರುವ ಉಪದೇಶವನ್ನು ಮಾಡಿದರು. ಆದರೆ ಕುಟಿಲತನದಲ್ಲಿ ಕುಬ್ಜೆಯ ಪಟ್ಟ ಶಿಷ್ಯಳೆನಿಸಿದ ಕೈಕೇಯಿಯು ಅದನ್ನು ಲಕ್ಷಿಸಲೇ ಇಲ್ಲ. ಆಕೆಯು ಅವರಮಾತಿಗೆ ಉತ್ತರವನ್ನಂತು ಕೊಡಲೇ ಇಲ್ಲ. ತಿರುಗಿ ಆಕೆಯ ಕ್ರೋಧವು ಹೆಚ್ಚಾಗಿ ಆಕೆಯು ಹಸಿದ ಹೆಣ್ಣುಹುಲಿಯಂತೆ ಅವರನ್ನು ಕೆಕ್ಕರಿಸಿ ನೋಡತೊಡಗಿದಳು. ಅದನ್ನು ನೋಡಿ! ಆ ಸ್ತ್ರೀಯರು "ವ್ಯಾಧಿಯು ಅಸಾಧ್ಯವೆಂ"ದು ತಿಳಿದು, ಆಕೆಯನ್ನು ತಿರಸ್ಕರಿಸಿ ಮಾತಾಡುತ್ತ ತಮ್ಮ ತಮ್ಮ ಮನೆಗಳಿಗೆ ಹೋದರು.

**ಕೌಸಲ್ಯೆಯ ವಿಲಾಪ**—ಇತ್ತ ಪ್ರಭುರಾಮಚಂದ್ರನು ತಾಯಿಯಾದ ಕೌಸಲ್ಯೆಯ ಬಳಿಗೆ ಹೋದನು. ಆತನ ಮುಖದಲ್ಲಿ ಪ್ರಸನ್ನತೆಯು ಸ್ಪಷ್ಟವಾಗಿ ತೋರುತ್ತಿದ್ದು, ಆತನ ಮನಸ್ಸಿಗೆ ನಾಲ್ಕುಪಟ್ಟು ಉತ್ಸಾಹವಾಗಿತ್ತು; ಇದಲ್ಲದೆ ಇನ್ನು ಅರಸನು ತನ್ನನ್ನು ಎಲ್ಲಿ ಮನೆಯಲ್ಲಿಟ್ಟುಕೊಳ್ಳುವನೋ ಎಂಬ ಆತನ ಚಿಂತೆಯೂ ದೂರವಾಗಿತ್ತು. ರಘುನಾಥನ ಮನಸ್ಸು ರಾಜ್ಯರೂಪವಾದ ಬೇಡಿಯು ಕಡಿದುಹೋಗಿ ವನಗಮನದ ಸುದ್ದಿಯು

ಕಿವಿಗೆ ಬಿದ್ದ ಕೂಡಲೆ ಬಾಲಗಜೇಂದ್ರನಂತೆ ಒಳಗಿಂದೊಳಗೆ ಉತ್ತರೋತ್ತರ ಆನಂದಿತ ವಾಗತೊಡಗಿತ್ತು. ಆ ರಘುಕುಲತಿಲಕನು ಆನಂದದಿಂದ ಎರಡೂ ಹಸ್ತಗಳನ್ನು ಜೋಡಿಸಿ ತಾಯಿಯ ಚರಣಗಳ ಮೇಲೆ ಮಸ್ತಕವಿಟ್ಟನು. ಆಕೆಯು ಆತನನ್ನು ಆಶೀರ್ವದಿಸಿ ಎತ್ತಿ ಎದೆಗವಚಿಕೊಂಡಳು. ಆಕೆಯು ರಾಮನಮೇಲೆ ವಸ್ತ್ರಾಲಂಕಾರಗಳನ್ನು ನಿವಾಳಿಸಿ ಚಲ್ಲಿ, ಮೇಲಿಂದ ಮೇಲೆ ಆತನ ಮುಖವನ್ನು ಚುಂಬಿಸತೊಡಗಿದಳು. ಆಕೆಯು ನೇತ್ರಗಳಿಂದ ಪ್ರೇಮಾಶ್ರುಗಳುದುರಿ ಮೈಮೇಲೆ ರೋಮಾಂಚಗಳು ಉತ್ಪನ್ನವಾದವು. ಆಕೆಯು ಮಗನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಪುನಃ ಆಲಿಂಗಿಸಿದಳು. ಪ್ರೇಮಾತಿರೇಕದಿಂದ ಆಕೆಯ ಮೊಲೆಯೊಳಗಿಂದ ಹಾಲುಗಳು ಸೋರಹತ್ತಿದವು! ಕುಬೇರನ ಪದವಿಯನ್ನೇರಿದಬಡವನಂತೆ ಆಕೆಯ ಪ್ರೇಮಾನಂದವು ಅವರ್ಣನೀಯವಾಯಿತು. ಆಕೆಯು ಮಗನ ಸುಂದರಮುಖ ವನ್ನು ದಿಟ್ಟಿಸಿನೋಡುತ್ತ ಅವನನ್ನು ಕುರಿತು—"ಬಾಳಾ, ಮಾತಾಡಪ್ಪಾ! ಈ ಜೀವ ವನ್ನು ನಿನ್ನಮೇಲೆ ನಿವಾಳಿಸಿ ಚಲ್ಲಬೇಕು. ಪುಣ್ಯಕಾರಕ ಸುಖಗಳಗಡಿಯೂ, ಜನ್ಮಲಾ ಭದ ಅತ್ಯಂತ ಮರ್ಯಾದೆಯೂ ಆಗಿರುವ ಆ ನನ್ನ ಸುಖದ ಮಹೋತ್ಸವದ ಆನಂದ ಮಯವಾದ ಮಂಗಲಕರ ಮುಹೂರ್ತವು ಯಾವಾಗ ಇರುವದು ಹೇಳು. ಶರದೃ ತುವಿನಲ್ಲಿ ಚಾತಕಗಳು ಸ್ವಾತಿಯ ಜಲಬಿಂದುವಿನ ಮಾರ್ಗವನ್ನು ನಿರೀಕ್ಷಿಸುವಂತೆ ನಿನ್ನ ಪಟ್ಟಾಭಿಷೇಕದ ಸುಮುಹೂರ್ತದ ಹಾದಿಯನ್ನು ಯಾವತ್ತು ಪ್ರಜೆಗಳು ಉತ್ಸುಕತೆ ಯಿಂದ ನೋಡುತ್ತಿರುವರು. ಬಾಳಾ, ಬೇಗನೆ ಹೋಗಿ ಮಂಗಲಸ್ನಾನಮಾಡು, ನಿನಗೆ ಸೇರುವದನ್ನೇನಾದರೂ ತಿಂದು ಆಮೇಲೆ ತಂದೆಯ ಬಳಿಗೆ ಹೋಗು. ಅಪ್ಪಾ, ಮೊದಲೇ ಬಹಳ ಹೊತ್ತಾಗಿರುವದು.

ತಾಯಿಯ ಈ ಅತ್ಯಂತ ಅನುಕೂಲವಾದ ಶಬ್ದಗಳನ್ನು ಕೇಳಿಯೂ ಅವುಗಳ ಮೇಲೆ ರಾಮನ ಮನಸ್ಸು ಮೋಹಿಸಲಿಲ್ಲ. ಆ ಧರ್ಮಧುರಂಧರನು ಧರ್ಮಗತಿ ಯನ್ನು ಪರ್ಯಾಲೋಚಿಸಿ ಅತ್ಯಂತವಾದ ಮೃದುನುಡಿಗಳಿಂದ ತಾಯಿಯನ್ನು ಕುರಿತು— ಅವ್ವಾ, ನನ್ನ ಕೈಯಿಂದ ಎಲ್ಲ ಬಗೆಯಿಂದಲೂ ಮಹತ್ಕಾರ್ಯಗಳಾಗುವಂಥ ವನದ ರಾಜ್ಯವನ್ನು ತಂದೆಯು ನನಗೆ ಕೊಟ್ಟಿರುವನು, ನೀನು ಪ್ರಸನ್ನಾಂತಃಕರಣದಿಂದ ನನಗೆ ಅಪ್ಪಣೆಯನ್ನು ಕೊಡು; ಅಂದರೆ ಅರಣ್ಯದಲ್ಲಿ ಹೋದರೂ ಅದು ನನಗೆ ಆನಂದಮ ಯವೂ, ಮಂಗಲಮಯವೂ ಆಗುವದು! ಪುತ್ರಪ್ರೇಮಕ್ಕೆ ಅಂಕಿತಳಾಗಿ ಅಪ್ರಿಯಕ್ಕೆ ಅಂಜಬೇಡ. ಅವ್ವಾ, ನಿನ್ನ ಆಶೀರ್ವಾದದಿಂದ ನಾನು ಆನಂದದಲ್ಲಿಯೇ ಇರುವೆನು- ಹದಿನಾಲ್ಕುವರ್ಷ ಅರಣ್ಯವಾಸವನ್ನು ಭೋಗಿಸಿ ತಂದೆಯ ಪ್ರತಿಜ್ಞೆಯನ್ನು ಸತ್ಯವಾಗಿ ಮಾಡಿ ನಾನು ತಿರುಗಿಬಂದು ನಿನ್ನ ಚರಣಗಳ ದರ್ಶನಮಾಡಿಕೊಳ್ಳುವೆನು; ಅದರ ಸಲುವಾಗಿ ನೀನುಮಾತ್ರ ಉದಾಸೀನಳಾಗಬೇಡ, ಎಂದು ಬೇಡಿಕೊಂಡನು. ರಘುವರನ ಈ ಮಧುರ ಶಬ್ದಗಳುಕೂಡ ಕೌಸಲ್ಯೆಯನ್ನು ಬಹಳವಾಗಿ ವ್ಯಥೆಗೊಳಿಸಿದವು. ಆಕೆಯು

ಅಂತಃಕರಣದೊಳಗಿನ ದುಃಖವನ್ನು ವರ್ಣಿಸುವದು ಶಕ್ಯವಲ್ಲ. ಸಿಂಹಗರ್ಜನೆಯನ್ನು ಕೇಳಿ ಹೆಣ್ಣಾನೆಯು ಸ್ಥಿತಿಯಾಗುವಂತೆ, ಆಕೆಯು ಸ್ಥಿತಿಯಾಯಿತು. ಆಕೆಯು ಕಣ್ಣುಗಳಲ್ಲಿ ದುಃಖಾಶ್ರುಗಳು ತುಂಬಿ, ಆಕೆಯು ದೇಹವು ಕಂಪಿಸತೊಡಗಿತು; ಆದರೂ ಆಕೆಯು ಧೈರ್ಯತಾಳಿ ಮಗನ ಮೋರೆಯು ಕಡೆಗೆ ನೋಡಿ ಸದ್ಗದಿತ ವಾಣಿಯಿಂದ—"ಬಾಳಾ, ನೀನು ನಿನ್ನ ತಂದೆಗಂತು ಪ್ರಾಣಕ್ಕಿಂತ ಪ್ರಿಯನಾಗಿರುತ್ತೀ. ನಿನ್ನ ಚರಿತ್ರವನ್ನು ನೋಡಿ ಅವರಿಗೆ ಯಾವಾಗಲೂ ಹರ್ಷವಾಗುತ್ತಿತ್ತು. ನಿನಗೆ ರಾಜ್ಯಾಭಿಷೇಕ ಮಾಡುವದಕ್ಕಾಗಿ ಶುಭಮುಹೂರ್ತವನ್ನು ಗೊತ್ತುಮಾಡುವದಾಗಿತ್ತು. ಹೀಗಿದ್ದು ಯಾವ ಅಪರಾಧಕ್ಕಾಗಿ ನಿನಗೆ ವನಕ್ಕೆ ಹೋಗಲು ಅಪ್ಪಣೆಯಾಗುತ್ತಿರುವದು? ಬಾಳಾ, ಇದರ ಇಂಗಿತವಾದರೂ ನನಗೆ ತಿಳಿಯಲಿ. ನಮ್ಮ ಸೂರ್ಯಕುಲವನ್ನು ಸುಟ್ಟು ಬೂದಿಮಾಡುವಂಥ ಈ ಅಗ್ನಿಯು ಇದೆಲ್ಲಿ ಉತ್ಪನ್ನವಾಗಿರುವದು!" ಎಂದು ಕೇಳಿದಳು. ಕೌಸಲ್ಯೆಯು ಈ ಭಾಷಣವನ್ನು ಕೇಳಿ, ರಾಮನ ಇಚ್ಛೆಯನ್ನರಿತು ಅಮಾತ್ಯಪುತ್ರನು ಕೌಸಲ್ಯೆಗೆ ಯಾವತ್ತು ವೃತ್ತಾಂತವನ್ನು ಹೇಳಿದನು. ಅದನ್ನು ಕೇಳಿದಕೂಡಲೆ ಕೌಸಲ್ಯೆಯು ಮೂಕೆಯಂತೆ ಸುಮ್ಮನೆ ಕುಳಿತಳು. ಆಕೆಯು ಈಗಿನ ಸ್ಥಿತಿಯನ್ನು ವರ್ಣಿಸುವದು ಶಕ್ಯವಲ್ಲ. ಆಕೆಗೆ ರಾಮನನ್ನು ಇಟ್ಟುಕೊಳ್ಳುವ ಧೈರ್ಯವೂ ಆಗಲೊಲ್ಲದು; ಆಕೆಯಿಂದ ರಾಮನಿಗೆ ಹೋಗೆನ್ನುವದೂ ಆಗಲೊಲ್ಲದು. ಉಭಯಪಕ್ಷಗಳಿಂದಲೂ ಆಕೆಯ ಅಂತಃಕರಣದ ದಾಹವಾಗಹತ್ತಿತು. ಸ್ತ್ರೀಧರ್ಮವೂ, ಪುತ್ರವಾತ್ಸಲ್ಯವೂ ಆಕೆಯ ವಿಚಾರಶಕ್ತಿಯನ್ನು ಕುಂಠಿತವಾಗಿ ಮಾಡಿದವು. ಹಾವು ಚುಚುಂದ್ರಿಯನ್ನು ನುಂಗಿದಂತೆ ಆಕೆಯ ಸ್ಥಿತಿಯಾಯಿತು. ಚುಚುಂದ್ರಿಯು ಪಚನವಾದರೆ ಹಾವು ಸಾಯುವದು; ಅದನ್ನು ಉಗುಳಿದರೆ ಅದರ ವಾಸನೆಯಿಂದ ಹಾವಿನ ಕಣ್ಣುಗಳು ಹೋಗುವವು. ಅದರಂತೆ ರಾಮನನ್ನು ಪ್ರತಿಬಂಧಿಸಿ ಇಟ್ಟುಕೊಂಡರೆ ಸ್ತ್ರೀಧರ್ಮವನ್ನು ಕಳಕೊಂಡುಮನೆತನದಲ್ಲಿ ಒಡಕು ಹುಟ್ಟಿಸಿದಂತಾಗುವದು; ವನಕ್ಕೆ ಹೋಗಲು ಅಪ್ಪಣೆಯನ್ನು ಕೊಟ್ಟರೆ ದಶರಥನ ಪ್ರಾಣಭಯದಂಥ ದೊಡ್ಡ ಅನರ್ಥವಾಗುವದು!

ಹೀಗೆ ಕೌಸಲ್ಯೆಯು ಸಂಕಟ-ಶೋಕಗಳ ಇರುಕಿನಲ್ಲಿ ಸಿಕ್ಕಳು; ಆದರೆ ಆಕೆಯು ಸುಜ್ಞಳೂ, ಸರಳಸ್ವಭಾವದವಳೂ ಆಗಿದ್ದಳು; ಯಾಕಂದರೆ ಆಕೆಯು ರಾಮನ ತಾಯಿಯಲ್ಲವೆ? ಕಡೆಗೆ ಆಕೆಯು ಸ್ತ್ರೀಧರ್ಮದಮೇಲೆಯೇ ಭಾರಹಾಕಿ, ರಾಮ-ಭರತರಿಬ್ಬರು ಮಕ್ಕಳನ್ನೂ ಸರಿಸಮಾನರೆಂದು ಭಾವಿಸಿ ಮಹಾಧೈರ್ಯದಿಂದ ರಾಮನನ್ನು ಕುರಿತು— ಬಾಳಾ, ಬಹಳ ಯೋಗ್ಯ ಕೆಲಸಮಾಡಿದೆ. ನಾನು ನಿನ್ನಮೇಲಿಂದ ನನ್ನ ದೇಹವನ್ನು ನಿವಾಳಿಸಿ ಚಲ್ಲುವೆನು. ಪಿತ್ರಾಜ್ಞೆಯನ್ನು ಪಾಲಿಸುವದು ಯಾವತ್ತು ಧರ್ಮಗಳಲ್ಲಿ ಶ್ರೇಷ್ಠಧರ್ಮವಾಗಿರುವದು. ರಾಜ್ಯಕೊಡುತ್ತೇನೆಂದು ಹೇಳಿ ವನವಾಸವನ್ನು ಕೊಟ್ಟದ್ದಕ್ಕಾಗಿ ನನಗೆರತಿಮಾತ್ರವೂ ದುಃಖವಾಗಿರುವದಿಲ್ಲ; ಆದರೆ ನಿನ್ನ ಹೊರತು ಭರತನು, ಮಹಾ

ಹಾದವರಿಗೇ ಅರಣ್ಯದಲ್ಲಿ ಯಾವದೂ ಕ್ಲೇಶಕರವೆನಿಸುವದಿಲ್ಲ. ಅಥವಾ ತಪಕ್ಕಾಗಿ ಸರ್ವ ಭೋಗಗಳನ್ನು ತ್ಯಜಿಸಿರುವ ತಪಸ್ವಿಗಳ ಸ್ತ್ರೀಯರು ಅರಣ್ಯವಾಸಕ್ಕೆಯೋಗ್ಯರಾಗಿರುವರು; ಆದರೆ ರಾಮಾ, ಜಾನಕಿಯು ಯಾವಬಗೆಯಿಂದ ಅರಣ್ಯವಾಸವನ್ನು ತಡೆಯಬಹುದು? ಆಕೆಯಂತು ಮಂಗನ ಚಿತ್ರವನ್ನು ನೋಡಿ ಅಂಜುವವಳಿರುವಳು! ಮಾನಸಸರೋವರದೊಳಗಿನ ರಮಣೀಯವಾದ ಕಮಲದಲ್ಲಿ ವಿಹರಿಸುವ ಹಂಸಕುಮಾರಿಯು ಕೊಳಕನೀರಿನ ಗುಂಡಿಯಲ್ಲಿ ಶೋಭಿಸಬಹುದೇ? ಇದನ್ನೆಲ್ಲ ವಿಚಾರಮಾಡಿ ಏನೆಂದ ಆಜ್ಞಾಪಿಸುವೆಯೋ ಅದರಂತೆ ಆಕೆಗೆ ನಾನು ನಾಲ್ಕು ಮಾತುಹೇಳುವೆನು. ಸೀತೆಯು ಕೇವಲ ಮನೆಯಲ್ಲಿದ್ದದರಿಂದಲೇ ನನಗೆ ಬಹಳ ವಿಶ್ರಾಂತಿಯಾದೀತು!

ಸೀತೆಯಶೋಕ—ಶೀಲ-ಸ್ವರೂಪ ಅಮೃತದಿಂದ ತುಂಬಿತುಳುಕುತ್ತಿರುವ ತಾಯಿಯ ಪ್ರಿಯವಾಣಿಯನ್ನು ಕೇಳಿ ರಘುವೀರನು ವಿನಯ ಪ್ರೇಮಗಳನ್ನೂ, ವಿವೇಕಯುಕ್ತವೂ ಆದ ಮಾತಿನಿಂದ ತಾಯಿಯನ್ನು ಸಮಾಧಾನ ಪಡಿಸಿದನು; ಮತ್ತು ಜಾನಕಿಗೆ ವನದ ಗುಣಗಳನ್ನು ಸ್ಪಷ್ಟೀಕರಿಸಿ ಬೋಧಿಸಲಾರಂಭಿಸಿದನು. ತಾಯಿಯಮುಂದೆ ಸೀತೆಯೊಡನೆ ಮಾತಾಡಲಿಕ್ಕೆ ಸಂಕೋಚವಾದರೂ ಮನಸ್ಸಿನಲ್ಲಿ ಪ್ರಸಂಗದ ವಿಚಾರ ಮಾಡಿ ಆತನು ಸೀತೆಯನ್ನು ಕುರಿತು—ಎಲೈ ರಾಜಕುಮಾರೀ, ನನ್ನ ಉಪದೇಶವನ್ನು ಕೇಳು. ಏನೊಂದೂ ಮನಸ್ಸಿನಲ್ಲಿ ತಂದುಕೊಳ್ಳಬೇಡ. ನಿನ್ನ, ಹಾಗು ನನ್ನ ಹಿತವಾಗಬೇಕೆಂದು ನೀನು ಇಚ್ಛಿಸುತ್ತಿದ್ದರೆ, ನನ್ನ ಅಪ್ಪಣೆಯನ್ನು ಮನ್ನಿಸಿ ನೀನು ಮನೆಯಲ್ಲಿಯೇ ಇದ್ದು ನೀನು ಅತ್ತೆಯವರ ಸೇವೆ ಮಾಡುತ್ತಿರಬೇಕೆಂಬದೇ ನನ್ನ ಆಜ್ಞೆಯು. ಎಲೈ ಭಾಮಿನೀ ನೀನುಮನೆಯಲ್ಲಿರುವದರಿಂದಲೇ ಎಲ್ಲ ಬಗೆಯಿಂದ ನಿನ್ನ ಕಲ್ಯಾಣವಾಗುವದು. ಅತ್ತೆ ಮಾವಂದಿರ ಚರಣಸೇವೆಯನ್ನು, ಆದರ ಪೂರ್ವಕ ಮಾಡುವದಕ್ಕಿಂತ ಶ್ರೇಷ್ಠವಾದಬೇರೆ ಧರ್ಮವಿಲ್ಲವು. ನನ್ನ ತಾಯಂದಿರು ನನ್ನ ನೆನಪು ಮಾಡಿದಾಗ, ಹಾಗು ನನ್ನ ಪ್ರೇಮದಿಂದ ವಿಹ್ವಲರಾಗಿ ವ್ಯಾಕುಲಿತರಾಗ ಎಲೈ ಸುಂದರಿಯೇ, ಪುಣ್ಯಕಾರಕ ಕಥೆಗಳನ್ನು ಹೇಳಿ ನಿನ್ನ ರಸಾಳವಾಣಿಯಿಂದ ಅವರನ್ನು ಸಮಾಧಾನಪಡಿಸುತ್ತಹೋಗು. ನಾನು ಮನಃಪೂರ್ವಕವಾಗಿ ಮೂರು ಸಾರೆ ಆಣೆಮಾಡಿ ಹೇಳುವದೇನಂದರೆ—ಕೇವಲ ನನ್ನ ತಾಯಿಂದಿರ ಹಿತಕ್ಕಾಗಿಯೇ ನಾನು ನಿನ್ನನ್ನು ಮನೆಯಲ್ಲಿ ಇಡುವೆನು. ಗುರುಗಳಿಗೂ, ಶ್ರುತಿಗೂ ಸಮ್ಮತವಾದ ಧರ್ಮಸಾಧನದ ಸಾಧವು ಅನಾಯಾಸವಾಗಿಯೇ ನಿನಗೆ ಸಾಧ್ಯವಾಗುವದು. ಸುಮ್ಮನೆ ಹಟಮಾಡಿ ಸಂಕಟವನ್ನು ತಂದುಕೊಳ್ಳಬೇಡ, ತಂದೆಯ ಮಾತನ್ನು ಸತ್ಯವಾಗಿ ಮಾಡಿ ನಾನೂ ಬೇಗನೆ ತಿರುಗಿ ಬರುವೆನು. ಪ್ರಿಯೇ, ಕೇಳು. ನೀನು ತಿಳಿದವಳೇ ಇರುತ್ತೀ. ದಿವಸಗಳು ಹೋಗಲಿಕ್ಕೆ ತಡವಾಗುವದಿಲ್ಲ. ಅರಣ್ಯವೆಂದರೆ ಬಹು ಕಠಿಣವೂ, ಭಯಂಕರವೂ ಆದ ಸ್ಥಳವು. ಅಲ್ಲಿಯ ಬಿಸಿಲು, ಚಳಿ, ಗಾಳಿ, ಮಳೆಗಳೆಲ್ಲ ಬಹು ತೀಕ್ಷ್ಣವಾಗಿರುವವು. ಹಾದಿಯಲ್ಲಿ ಹುಲ್ಲು, ಮುಳ್ಳು, ಕಲ್ಲು ವಿಶೇಷ

ವಾಗಿದ್ದು, ಅವುಗಳ ಮೇಲೆ ಬರಿಗಾಲಿನಿಂದ ನಡೆಯುತ್ತ ನೀನು ಚರಬೇಕಾಗುವದು. ಅದರಲ್ಲಿ ನಿನ್ನ ಪಾದಗಳು ಕಮಲದಂತೆ ಬಹು ಕೋಮಲವಾಗಿ ಇದ್ದು, ಹಾದಿಗಳು ತೀರ ಗುಡ್ಡಗಾಡಾಗಿ, ಹೋಗಲಿಕ್ಕೆ ಬಾರದವಾಗಿರುವವು. ಕಂದರಗಳು, ಓರೆಗಳು, ನದಿಗಳು, ನದಗಳು, ಹಳ್ಳಗಳು ಇವಾದರೂ ನೆಲೆಯಿಲ್ಲದವೂ, ದಾಟಲಿಕ್ಕೆ ಬಾರದವೂ, ಆಗಿದ್ದು ನೋಡಿದರೆ ಕಣ್ಣುತಿರುಗಿ ಹೋಗುವವು. ಕರಡಿಗಳು, ಹುಲಿಗಳು, ಸಿಂಹಗಳು, ತೋಳಗಳು, ಆನೆಗಳು ಮೊದಲಾದ ಹಿಂಸ್ರಪಶುಗಳ ಭಯಂಕರವಾದ ಗರ್ಜನೆಯನ್ನು ಕೇಳಿದವರು, ಕೂಡಲೆ ಗರ್ಭಗಲಿತರಾಗಿ ಹೋಗುವರು. ಅರಣ್ಯದಲ್ಲಿ ಮಲಗಲಿಕ್ಕೆ ನೆಲ ಉಡಲಿಕ್ಕೆ ನಾರಿನವಸ್ತ್ರಗಳು, ತಿನ್ನಲಿಕ್ಕೆ ಗಡ್ಡೆಬೇರುಗಳು ಹಾಗು ಹಣ್ಣುಹಂಪಲಗಳು ಈ ಚಂದದಸುಖ! ಇವಾದರೂ ಯಾವಾಗಲೂ ಒಂದೇಸವನೆ ದೊರೆಯುವವೆಂದು ತಿಳಿದಿರುವೆಯೋನು? ಇಲ್ಲ! ಪ್ರಸಂಗಕ್ಕನುಸರಿಸಿ ದೊರೆತಾಗ ದೊರೆಯುವವು. ಮನುಷ್ಯ ಭಕ್ಷಕರೂ, ಕೋಟ್ಯವಧಿ ಕಪಟವೇಷಗಳನ್ನು ಧರಿಸುವವರೂ ಆದ ರಾಕ್ಷಸರು ಅಲ್ಲಿ ಸಂಚರಿಸುತ್ತಿರುವರು. ಆ ಗುಡ್ಡಗಾಡುಗಳಲ್ಲಿ ದೊರೆಯುವನೀರು ಅತ್ಯಂತ ರೋಗಕರವಾದದ್ದು. ಪ್ರಿಯೇ, ಒಟ್ಟಿಗೆ ಅರಣ್ಯದೊಳಗಿನ ಸಂಕಟಗಳನ್ನು ವರ್ಣಿಸುವದೂ ಅಶಕ್ಯವಾಗಿರುವದು. ಅಲ್ಲಿಯ ಸರ್ಪಗಳು ವಿಕರಾಲವಾಗಿದ್ದು, ಪಕ್ಷಿಗಳಾದರೂ ಭಯಂಕರವಾಗಿರುವವು. ಅಲ್ಲಿ ರಾಕ್ಷಸರ ಗುಂಪಿಗೆ ಗುಂಪು ಇದ್ದು, ಅವರು ಹೆಂಗಸರನ್ನೂ, ಗಂಡಸರನ್ನೂ ಕದ್ದುಕೊಂಡು ಹೋಗುತ್ತಿರುವರು. ಅವರ ನೆನಪಾದರೆ ಸಾಕು, ಮಹಾ ಮಹಾ ವೀರರಿಗೂ ನಡುಗುಹುಟ್ಟುವದು; ಅಂದಬಳಿಕ ಮೃಗಾಕ್ಷಿಯೇ, ನೀನಂತು ಹುಟ್ಟಾ ಅಂಜುಬುರುಕಿಯಿರುವೆ; ನೀನು ವನಕ್ಕೆ ಹೋಗಲು ಯೋಗ್ಯಳಲ್ಲವೇ ಅಲ್ಲ. ನಿನ್ನನ್ನು ವನಕ್ಕೆ ಕರೆದೊಯ್ದರೆ ಜನರು ನನಗೆ ಹೆಸರು ಮಾತ್ರ ಇಟ್ಟಾರು. ಆದ್ದರಿಂದ ನೀನು ಇದನ್ನೆಲ್ಲ ವಿಚಾರಮಾಡಿ ಮನೆಯಲ್ಲಿಯೇ ಇರು. ಗುರುಗಳ, ಸ್ವಾಮಿಯ, ಸಹೃನ್ಮಿತ್ರರ ಮಾತನ್ನು ಶಿರಸಾವಹಿಸಿ ಅದರಂತೆ ನಡೆಯದವರು ಹಿತಸಂಬಂಧದ ಹಾನಿಯನ್ನು ಹೊಂದುವರು. ಆ ವೇಲೆ ಅಂಥವರು ಅಂತಃಕರಣಕರಗಿ ಪಶ್ಚಾತ್ತಾಪ ಪಡಬೇಕಾಗುವದು.

ಪ್ರಾಣಪತಿಯ ಈ ಮೃದುವೂ, ಮನೋಹರವೂ ಆದ ಭಾಷಣವನ್ನು ಕೇಳಿದ ಕೂಡಲೆ ಸೀತೆಯ ಕಣ್ಣುಗಳು ನೀರುತುಂಬಿದವು. ಚಕ್ರವಾಕಿಗೆ ಶರದೃತುವಿನೊಳಗಿನ ರಾತ್ರಿಯ ಚಂದ್ರನು ತಾಪದಾಯಕನಾಗುವಂತೆ, ಸೀತೆಗೆ ರಾಮನ ಶೀತಲವಾದ ಉಪದೇಶವು ತಾಪದಾಯಕವಾಯಿತು. ನನ್ನ ಪವಿತ್ರ ಪ್ರಾಣೇಶ್ವರನು ನನ್ನನ್ನು ಬಿಟ್ಟುಹೋಗಲಿಚ್ಛಿಸುವನೆಂಬದನ್ನು ನೋಡಿ ಜಾನಕಿಯು ಅತ್ಯಂತ ವಿಹ್ವಲಳಾದಳು. ಅದರಿಂದ ಆಕೆಯ ಮುಖದಿಂದ ಉತ್ತರವು ಹೊರಡಲೊಲ್ಲದು. ಆದರೂ ಪರಮಕಷ್ಟದಿಂದ ಕಣ್ಣೀರುಗಳನ್ನು ತಡೆದು ಧೈರ್ಯದಿಂದ ಆಕೆಯು ಅತ್ತೆಯ ಚರಣಗಳಿಗೆರಗಿ ಕೈಜೋ

ಡಿಸಿ—" ಅಪ್ಪಸವರೇ, ನನ್ನ ಈ ದಿಟ್ಟತನಕ್ಕಾಗಿ ಕ್ಷಮಿಸಬೇಕು. ಪ್ರಾಣನಾಥನು ಸರ್ವತೋಪರಿ ನನ್ನ ಕಲ್ಯಾಣವಾಗುವಂತೆಯೇ ಉಪದೇಶಮಾಡಿದನು; ಆದರೆ ತಿರುಗಿ ನಾನು ಮನಸ್ಸಿನಲ್ಲಿ ವಿಚಾರಮಾಡಿ ನೋಡಲು, ಪತಿಯವಿಯೋಗದಂಥ ದುಃಖವೇ ಜಗತ್ತಿನಲ್ಲಿ ಇಲ್ಲವೆಂಬಂತೆ ನನಗೆ ತೋರುತ್ತದೆ. ಎಲೈ ಕಾರುಣ್ಯಮಂದಿರಾ! ಸುಂದರಾ! ಸುಖದಾ! ಸರ್ವಜ್ಞಾ! ಎಲೈ ರಘುಕುಲಕಮಲಚಂದ್ರಾ, ನಿಮ್ಮ ಹೊರತು ನನಗೆ ಸ್ವರ್ಗವೂ ನರಕಕ್ಕೆ ಸಮಾನವಾಗಿರುವದು. ತಾಯಿತಂದೆಗಳು, ತಂಗಿತಮ್ಮಂದಿರು, ಇಷ್ಟಮಿತ್ರರು, ಹತ್ತಿಹೊಂದಿದವರು, ಅತ್ತೆಮಾವಂದಿರು, ಹಿರಿಯರು ಕಿರಿಯರು, ಇವರೆಲ್ಲರು ಲೋಭವಮಾಡುವವರೂ, ಬೇಡಿಕೆಗಳನ್ನು ಪೂರಯಿಸುವವರೂ ಆಗಿದ್ದರೂ, ಗಂಡನಿರುವವರೆಗೇ ಇವರ ಪ್ರೇಮವೂ, ಆಪ್ತತ್ವವೂ ಇರುವವೆಂದು ತಿಳಿಯಬೇಕು. ಪತಿವಿರಹಿತಳಾದ ಪತ್ನಿಯರಿಗೆ ಅವರೆಲ್ಲರೂ ಸೂರ್ಯನಿಗಿಂತಲೂ ತಾಪದಾಯಕರಾಗುವರು. ಪತಿಯು ಇಲ್ಲದಿರುವಾಗ ಸ್ತ್ರೀಗೆ ದೇಹ, ಮನೆ, ಧನ, ಹೊಲ, ಊರು, ರಾಜ್ಯ ಇವೆಲ್ಲವೂ ಶೋಕದ ಸಾಮುಗ್ರಿಗಳಾಗಿರುವವು. ಆಕೆಗೆ ಭೋಗವಿಲಾಸಗಳು ರೋಗದಂತೆ, ವಸ್ತ್ರ ಒಡನೆಗಳು ಭಾರದಂತೆ, ಸಂಸಾರವು ಯಮಯಾತನೆಯಂತೆ ಆಗಿರುವವು! ಪ್ರಾಣವಲ್ಲಭಾ, ನಿಮ್ಮ ಹೊರತಾಗಿ ಜಗತ್ತಿನಲ್ಲಿ ನನಗೆ ಸುಖದವು ಯಾವದೂ ಎಲ್ಲಿಯೂ ಇರುವದಿಲ್ಲ. ಪ್ರಾಣವಿಲ್ಲದ ದೇಹದಂತೆಯೂ, ಜಲವಿಲ್ಲದ ನದಿಯಂತೆಯೂ ಸ್ವಾಮಿನ್, ಪುರುಷನಿಲ್ಲದ ಸ್ತ್ರೀಯು ಆಗಿರುವಳು. ಎಲೈ ನಾಥನೇ, ನಿನ್ನ ಸಮಾಗಮದಲ್ಲಿ ನಿನ್ನ ಈ ಶರದ್ವಿಮಲ ಚಂದ್ರವದನವನ್ನು ನೋಡುವದರಲ್ಲಿಯೇ ನನ್ನ ಯಾವತ್ತು ಸುಖಗಳು ಒಟ್ಟುಗೂಡಿರುವವು. ನಾಥರವರ ಸಹವಾಸದಲ್ಲಿ ಅರಣ್ಯದೊಳಗಿನ ಖಗಮೃಗಾದಿಗಳೇ ನನ್ನ ಸೇವಕರು, ವನವೇ ಅಯೋಧ್ಯೆಯು, ನಾರಿನ ಬಟ್ಟೆಗಳೇ ಬೆಲೆಯುಳ್ಳ ಶಾಲುಗಳು, ಹುಲ್ಲು ಗುಡಿಸಲವೇ ಸ್ವರ್ಗವು ಆಗಿ, ಅವೆಲ್ಲವು ನನ್ನ ಸುಖದ ಆಸರಗಳಾಗಬಹುದು. ಉದಾರರಾದ ವನದ ದೇವರೂ, ದೇವತೆಗಳೂ ಅತ್ತೆಮಾವಂದಿರಂತೆ ನನಗೆ ಎಲ್ಲವನ್ನೂ ಒದಗಿಸಿ ಕೊಡುವರು. ಪ್ರಭುವಿನ ಸಹವಾಸದಿಂದ ನನಗೆ ಕುಶಪತ್ರಗಳ ಹಾಸಿಗೆಯೇ ಕಾಮಶಯ್ಯೆಯಂತೆ ಮೆತ್ತಗಾಗುವದು. ಕಂದ-ಮೂಲ-ಫಲಗಳ ಆಹಾರವೇ ನನಗೆ ಅಮೃತದಂತೆ ರುಚಿಕರವಾಗುವದು. ಅದರಂತೆ ಅಲ್ಲಿಯ ಗುಡ್ಡಗಳು ಅಯೋಧ್ಯೆಯೊಳಗಿನ ಅರಮನೆಗಿಂತ ನೂರುಪಟ್ಟು ನನಗೆ ಸುಖಕರವಾಗುವವು. ಒಟ್ಟಿಗೆ ಹಗಲನ್ನು ನೋಡಿ ಚಕ್ರವಾಕಿಯು ಆನಂದದಿಂದಿರುವಂತೆ ಪ್ರಭುಗಳ ಚರಣಕಮಲಗಳನ್ನು ಕ್ಷಣಶಃನೋಡಿ ನಾನು ವನದಲ್ಲಿ ಆನಂದದಿಂದ ಇರುವೆನು. ನಾಥರವರಿಂದ ವನದಸಂಬಂಧದ ನಾನಾವಿಧಗಳಾದ ದುಃಖ, ಭಯ, ವಿಷಾದ, ಕಷ್ಟಗಳನ್ನು ಕುರಿತು ಬಹು ಉದ್ದವಾಗಿ ವರ್ಣಿಸುವದಾಯಿತು; ಆದರೆ ಎಲೈ ದಯಾಲೋ, ಅವೆಲ್ಲವನ್ನು ಒಟ್ಟುಗೂಡಿಸಿದರೂ ಆ ಒಟ್ಟು ಪ್ರಭುವಿಯೋಗದುಃಖವನ್ನು ಲೇಶವಾದರೂ ಸರಿಗಟ್ಟಲೊಲ್ಲದು! ಇದನ್ನೆಲ್ಲ ಮನಸ್ಸಿನಲ್ಲಿ

ತಂದು ಎಲೈ ಸರ್ವಜ್ಞ ಶಿರೋಮಣಿಯೇ, ನನ್ನನ್ನು ಅಗಲಿರದೆ ಸಂಗಡ ಕರೆದುಕೊಂಡು ಹೋಗುವಂತೆಯೇ ಮಾಡತಕ್ಕದ್ದು. ನಾನು ಇದಕ್ಕೂ ಹೆಚ್ಚಿಗೆ ಏನು ಹೇಳಿಕೊಳ್ಳಲಿ! ಎಲೈ ಸ್ವಾಮಿಯೇ, ನೀವು ಕರುಣಾಮೂರ್ತಿಗಳಾಗಿದ್ದು, ಎಲ್ಲರ ಮನಸ್ಸಿನಲ್ಲಿರುವ ದನ್ನು ತಿಳಿಯುವವರಾಗಿರುತ್ತೀರಿ. ತಮ್ಮ ವನವಾಸದ ಅವಧಿಯು ಮುಗಿಯುವವರೆಗೆ ನನ್ನ ಪ್ರಾಣಗಳು ಉಳಿಯುವವೆಂಬ ನಂಬಿಗೆಯು ತಮಗಾಗಿದ್ದರೆ, ಎಲೈ ದೀನಬಂಧುವೇ, ಸುಂದರಾ, ಸುಖದಾ, ಎಲೈ ಸ್ನೇಹಶೀಲನಿಧಾನಾ, ನನ್ನನ್ನು ಅಯೋಧ್ಯೆಯಲ್ಲಿಯೇ ಇರ ಗೊಡಬೇಕು. ಪ್ರತಿಕ್ಷಣದಲ್ಲಿ ಈ ಚರಣಕಮಲಗಳು ನೋಡಲಿಕ್ಕೆ ಸಿಕ್ಕಮೇಲೆ ಹಾದಿ ಯುನಡೆಯುವಾಗ ನನಗೆ ದಣುವೇ ಆಗಲಾರದು. ನಾನು ಎಲ್ಲಬಗೆಯಿಂದ ಚರಣಗಳ ಯೋಗಕ್ಷೇಮವನ್ನು ವಹಿಸುತ್ತ ಹಾದಿಯಲ್ಲಾಗುವ ಶ್ರಮವನ್ನು ದೂರಮಾಡುವೆನು; ಗಿಡದನೆರಳಲ್ಲಿ ಕುಳಿತು ಈ ಪಾದಗಳನ್ನು ತೊಳೆಯುವೆನು; ಮನಃಪೂರ್ವಕವಾದ ಆನಂ ದದಿಂದ ಬೀಸಣಿಕೆಯನ್ನು ಬೀಸುವೆನು; ಶ್ರಮದಿಂದ ಬೆವತು ನೀರಾಗಿರುವ ಈ ಶ್ಯಾಮ ಸುಂದರ ತನುವನ್ನು ನೋಡುತ್ತಿರುವಾಗ, ಪ್ರಾಣನಾಥರು ನನ್ನ ಕಡೆಗೆ ನೋಡುತ್ತಿರಲು, ದುಃಖದ ಪ್ರಸಂಗವಾದರೂ ನನಗೆ ಎಲ್ಲಿಂದ ಬರಬೇಕು? ನೆಲವನ್ನು ಸಮಮಾಡಿ ಮೇಲೆ ಹುಲ್ಲು ಎಲೆಚಿಗರುಗಳನ್ನು ಹರವಿ ಈ ದಾಸಿಯು ರಾತ್ರಿಯೆಲ್ಲ ಕಾಲುಒತ್ತುತ್ತ ಕುಳಿತು ಕೊಳ್ಳುವೆನು. ಕ್ಷಣಕ್ಷಣಕ್ಕೆ ಈ ಸುಖಧಾಮಮೂರ್ತಿಯು ನನ್ನನ್ನು ದಿಟ್ಟಿಸಿ ನೋಡು ತ್ತಿರುವಾಗ ಬಿಸಿಲು-ಗಾಳಿಗಳು ನನಗೆ ಹತ್ತುವದೇ ಇಲ್ಲ. ಹೆಣ್ಣುಸಿಂಹದಕಡೆಗೆ ಹೇಗೆ ಕ್ಷುದ್ರ ಮೊಲಗಳು ನೋಡಲಾರವೋ, ಹಾಗೆ ಪ್ರಭುಗಳ ಸಂಗತಿಯಲ್ಲಿ ನಾನಿರುವಾಗ ನನ್ನಕಡೆಗೆ ನೋಡಲು ಯಾರು ಸಮರ್ಥರಾದಾರು? ನಾಥಾ, ನಾನು ಬಹು ಕೋಮ ಲೆಯು, ಪ್ರಭುಗಳು ಮಾತ್ರ ವನವಾಸಕ್ಕೆ ಯೋಗ್ಯರು! ತಾವು ತಪಸ್ಸನ್ನಾಚರಿಸಬೇಕು, ನಾನು ಭೋಗವಿಲಾಸಗಳನ್ನು ಭೋಗಿಸಬೇಕು. ಪ್ರಾಣನಾಥ, ಇದು ಉಚಿತವೇ? ಇಂಥ ಕಠೋರ ಶಬ್ದಗಳನ್ನು ಕೇಳಿಯೂ ನನ್ನ ಹೃದಯವು ಇಬ್ಭಾಗವಾಗದೆಯಿರುವಾಗ ಪ್ರಭುವಿಯೋಗದ ದಾರುಣದುಃಖವನ್ನು ನನ್ನ ನೀಚಪ್ರಾಣಗಳು ನಂಬಿಗೆಯಿಂದ ಸಹನ ಮಾಡುವವು!

ಈ ಮೇರೆಗೆ ನುಡಿದು ಸೀತೆಯು ಅತ್ಯಂತ ವ್ಯಥಿತಳಾದಳು. ಪ್ರತ್ಯಕ್ಷ ವಿಯೋಗ ವಂತೂ ಇರಲಿ, ಮಾತಿನೊಳಗಿನ "ವಿಯೋಗ" ಎಂಬಶಬ್ದವೂ ಕೂಡ ಆಕೆಗೆ ಸಹನ ವಾಗಲೊಲ್ಲದು. ಆಕೆಯ ಈ ಸ್ಥಿತಿಯನ್ನು ನೋಡಿ ರಘುಪತಿಯು ಮನಸ್ಸಿನಲ್ಲಿ— "ಈಕೆಯು ತನ್ನ ಪ್ರಾಣವನ್ನಾದರೂ ಬಿಟ್ಟಾಳು, ತನ್ನ ಹಟವನ್ನುಬಿಡಲಿಕ್ಕಿಲ್ಲ." ಎಂದು ಅಂದುಕೊಂಡು ದಯಾಘನನಾದ ರಾಮಚಂದ್ರನು ಆಕೆಯನ್ನು ಕುರಿತು—ಸೀತೆಯೇ, ಶೋಕವನ್ನು ಬಿಟ್ಟುಕೊಟ್ಟು ನನ್ನ ಸಂಗಡ ವನಕ್ಕೆ ನಡೆ. ಇಂದಿನ ದಿನವು ವಿಷಾದಪಡ ತಕ್ಕದ್ದಲ್ಲ! ಏಳು, ಬೇಗನೆ ವನಕ್ಕೆ ಹೊರಡುವ ಸಿದ್ಧತೆಯನ್ನು ಮಾಡು, ಎಂದು ಹೇಳಿ,

ಪ್ರಿಯವಚನಗಳಿಂದ ಸೀತೆಯನ್ನು ಸಂತುಷ್ಟಳಾಗಮಾಡಿದ ಮೇಲೆ ಆ ಪ್ರಭುವು ಮಾತೆಯ ಚರಣಕ್ಕೆರಗಿ ಆಶೀರ್ವಾದವನ್ನು ಪಡೆದನು. ಆಗ ಕೌಸಲ್ಯೆಯು —"ರಾಮಾ! ಬೇಗನೆ ತಿರುಗಿ ಬಂದು ಪ್ರಜೆಗಳ ದುಃಖವನ್ನು ದೂರಮಾಡು. ಇಲ್ಲಿಂದ ಹೋದ ಬಳಿಕ ಈ ನಿರ್ಭಾಗ್ಯಳಾದ ತಾಯಿಯನ್ನು ಮರೆಯಬೇಡ ಕಂಡೆಯಾ! ಎಲೈ ವತ್ಸ! ಎಲೈ ಲಾಲ! ಎಲೈ ರಘುಪತಿ! ಎಲೈ ರಘುವರ! ನಿಮ್ಮನ್ನು ಕರೆದು ಎದೆಗವಚಿಕೊಂಡು ನಿಮ್ಮ ಈ ಸುಂದರ ಮೂರ್ತಿಗಳನ್ನು ಕಣ್ಣುತುಂಬಾ ನೋಡುವ ಯೋಗವು ನನಗೆ ಯಾವಾಗ ಒದಗೀತು ,, ಎಂದು ನುಡಿಯುವಾಗ ಕೌಸಲ್ಯೆಯು ಅತ್ಯಂತ ದುಃಖಿತಳಾದಳು. ಆಕೆಯ ಮುಖದಿಂದ ಶಬ್ದಗಳು ಹೊರಡದಾದವು. ಹೀಗೆ ತಾಯಿಯು ಸ್ನೇಹವಶಳಾದದ್ದನ್ನು ನೋಡಿ ರಾಮನು ಪರಿಪರಿಯಿಂದ ಆಕೆಯನ್ನು ಸಮಾಧಾನಗೊಳಿಸಿದನು. ಆಗಿನಕಾಲದ ಪ್ರೇಮದ ಆವಿರ್ಭಾವವು ಅವರ್ಣನೀಯವಾಗಿತ್ತು. ಆಮೇಲೆ ಜಾನಕಿಯು ಅತ್ತೆಯ ಚರಣಕ್ಕೆರಗಿ-"ಅವ್ವನವರೇ. ನಾನು ಅತ್ಯಂತ ಭಾಗ್ಯಹೀನಳಾದದ್ದರಿಂದಲೇ ತಮ್ಮನ್ನು ಸೇವಿಸುವ ಕಾಲದಲ್ಲಿ ನನ್ನ ದುರ್ದೈವವು ನನ್ನನ್ನು ವನಕ್ಕೆ ಎಳೆದೊಯ್ದು ನನ್ನ ಮನೋರಥವನ್ನು ನಿಷ್ಫಲವಾಗಮಾಡಿತು. ತಾವು ನನ್ನ ಮೇಲಿನ ಸಿಟ್ಟನು ಮಾತ್ರ ಬಿಟ್ಟು ಎಂದಿನಂತೆಯೇ ಪ್ರೀತಿಮಾಡಬೇಕು. ನನ್ನ ಪ್ರಾರಬ್ಧವೇಕೆಟ್ಟದಾದ್ದರಿಂದ ನನ್ನ ಕಡೆಗೆ ತಪ್ಪೇನು ಇರುರುವದಿಲ್ಲ,, ಎಂದಳು. ಸೀತೆಯು ಈ ಮಾತುಗಳನ್ನು ಕೇಳಿ ಕೌಸಲ್ಯೆಯು ಪ್ರೇಮಾತಿಶಯದಿಂದ ಸದ್ಗದಿತಕಂಠಳಾದಳು. ಆಕೆಯು ಅಗಿಂದಾಗ್ಗೆ ಸೀತೆಯನ್ನು ಅಪ್ಪಿಕೊಂಡು ಕಡೆಗೆ ಧೈರ್ಯತಾಳಿ ಆಕೆಯನ್ನು ಬೋಧಿಸಿ—"ಗಂಗಾಯಮುನೆಗಳ ಪ್ರವಾಹವು ಇರುವವರೆಗೆ ನಿನ್ನ ಸೌಭಾಗ್ಯವು ಅಖಂಡವಾಗಿರಲಿ,, ಎಂದು ಆಶೀರ್ವದಿಸಿದಳು. ಆಗ ಸೀತೆಯು ಅತ್ತೆಯ ಚರಣಗಳಿಗೆ ಆಗಾಗ್ಗೆ ಆದರದಿಂದ ನಮಸ್ಕಾರ ಮಾಡಿ ಹೊರಡತೊಡಗಿದಳು.

ರಾಮ-ಲಕ್ಷ್ಮಣ ಸಂವಾದ— ಈ ವರ್ತಮಾನವು ಲಕ್ಷ್ಮಣನಿಗೆ ಗೊತ್ತಾಗಲು, ಆತನು ಬೆದರಿಬಿದ್ದು ಸತ್ವಹೀನನಾದನು. ಆತನು ಹಾಗೆಯೇ ಎದ್ದು ಧಾವಿಸುತ್ತ ಅಣ್ಣನ ಬಳಿಗೆ ಬಂದನು. ಆತನ ಮೈಗೂದಲುಗಳು ನೆಟ್ಟಗಾದವು; ಕಣ್ಣುಗಳಲ್ಲಿ ಅಶ್ರುಗಳು ಸುರಿಯಹತ್ತಿದವು; ಪ್ರೇಮಾಧಿಕ್ಯದಿಂದ ಆತನ ಧೈರ್ಯವು ಅಳಿದು ಹೋಯಿತು. ಆತನು ಅಣ್ಣನ ಚರಣಗಳಿಗೆರಗಿ ನೀರಿನಿಂದ ಹೊರ ಹೊರಡಿಸಿದ ಮೀನದಂತೆ ದೀನನಾಗಿ ಸುಮ್ಮನೆ ಅಣ್ಣನನ್ನು ಎವೆಯಿಕ್ಕದೆ ನೋಡುತ್ತ ನಿಂತುಕೊಂಡನು. ಆತನ ಮನಸ್ಸಿನಲ್ಲಿ—"ಇನ್ನು ಮುಂದೆ ಗತಿಯೇನು? ನಮ್ಮ ಯಾವತ್ತು ಸುಖದ ಹಾಗು ಪುಣ್ಯದಪರಿಸಮಾಪ್ತಿಯೇ ಆಯಿತು. ರಘುಕುಲನಾಥನು ನನ್ನನ್ನು ಏನೆಂದು ಆಜ್ಞಾಪಿಸುವನೋ ಯಾರಿಗೆ ಗೊತ್ತು! ಆತನು ನನ್ನನ್ನು ಮನೆಯಲ್ಲಿ ಬಿಟ್ಟು ಹೋಗುವನೋ ಸಂಗಡಕರೆದುಕೊಂಡು ಹೋಗುವನೋ?,, ಎಂಬ ಚಿಂತೆಯು ಉತ್ಪನ್ನನಾಯಿತು. ಹೀಗೆ

ದೇಹಗೇಹಾದಿಗಳ ಮೇಲಿನ ಆಶೆತೊರೆದು ಕೈಜೋಡಿಸಿಕೊಂಡು ನಿಂತಿರುವ ತನ್ನಬಂಧುವನ್ನು ನೋಡಿ, ನೀತಿನಿಪುಣನೂ, ಶೀಲ-ಸ್ನೇಹ-ಸರಳತನ-ಸುಖಗಳ ಸಾಗರನೂ ಆದ ಶ್ರೀ ರಾಮಚಂದ್ರನು —"ಅಪ್ಪಾ, ಲಕ್ಷ್ಮಣಾ, ಪ್ರೇಮಕ್ಕೆ ಅಧೀನನಾಗಿ ಹೀಗೆ ಗಾಬರಿಯಾಗಬೇಡ. ಕಡೆಗೆ ಸುಖವಾಗುವದೆಂಬದನ್ನು ಲಕ್ಷ್ಯದಲ್ಲಿಟ್ಟುಇರು. ತಾಯಿತಂದೆಗಳ, ಗುರುಗಳ, ಸ್ವಾಮಿಯ ಅಪ್ಪಣೆಯನ್ನು ಶಿರಸಾವಹಿಸಿ, ಅದನ್ನು ಮನೋಲ್ಲಾಸದಿಂದ ಕೊನೆಗಾಣಿಸುವವರೇ ತಮ್ಮ ಜನ್ಮವ ಸಾರ್ಥಕಮಾಡಿಕೊಳ್ಳುವರು; ಹೀಗೆ ಮಾಡದವರ ಜನ್ಮವು ವ್ಯರ್ಥವೇ ಸರಿ. ಆದ್ದರಿಂದ ಲಕ್ಷ್ಮಣಾ, ನೀನು ತಾಯಿತಂದೆಗಳನ್ನು ಸೇವಿಸುತ್ತಲಿರು. ಇಲ್ಲಿ ಭರತ-ಶತ್ರುಘ್ನರಿಲ್ಲ. ಅರಸನಿಗೆ ವೃದ್ಧಾಪ್ಯಕಾಲವು ಒದಗಿರುವದು. ಅದರಲ್ಲಿಯೂ ಆತನು ನನ್ನ ಸಲುವಾಗಿ ದುಃಖಿತನಾಗಿರುವನು; ಈ ಸ್ಥಿತಿಯಲ್ಲಿ ನಾನು ವನಕ್ಕೆ ಹೋಗುವವನು. ಇಂಥ ಪ್ರಸಂಗದಲ್ಲಿ ನಿನ್ನನ್ನು ಸಂಗಡ ಕರೆ ಕೊಂಡು ಹೋದರೆ ಅಯೋಧ್ಯೆಯು ಎಲ್ಲಬಗೆಯಿಂದಲೂ ಅನಾಥವಾಗಿ, ಗುರುಗಳು, ತಂದೆತಾಯಿಗಳು, ಪ್ರಜೆಗಳು, ಪರಿವಾರವು ಇವರನ್ನೆಲ್ಲ ಅಸಾಧ್ಯವಾದ ದುಃಖದಲ್ಲಿ ದೂಡಿದಂತಾಗುವದು. ನೀನಾದರೂ ಊರಲ್ಲಿದ್ದು ಎಲ್ಲರನ್ನು ಸಮಾಧಾನಗೊಳಿಸು. ಇಲ್ಲವಿದ್ದರೆ ಅಪ್ಪ ಲಕ್ಷ್ಮಣಾ, ಮಹತ್ತರ ದೋಷ ಬರಗೀತು. ಯಾವನ ರಾಜ್ಯದೊಳಗಿನ ಪ್ರಿಯಪ್ರಜೆಗಳು ದುಃಖಿತರಾಗುವರೋ, ಆ ಅರಸನು ಅವಶ್ಯವಾಗಿ ನರಕದಪಾಲುಗಾರನಾಗುವನು. ಆದ್ದರಿಂದ ನೀನು ಈ ನೀತಿಯ ವಿಚಾರಮಾಡಿ ಅಯೋಧ್ಯೆಯಲ್ಲಿ ಇರಲೇಬೇಕು." ಎಂದು ಹೇಳಿದನು.

ಅಣ್ಣನ ಈ ಮಾತುಗಳನ್ನು ಕೇಳಿ ಲಕ್ಷ್ಮಣನು ಅತ್ಯಂತ ವ್ಯಾಕುಲನಾದನು. ಆತನು ಅಣ್ಣನಚರಣಗಳಿಗೆರಗಿ ಸದ್ಗದಿತ ಕಂಠನಾಗಿ—ಎಲೈ ನಾಥನೇ, ನಾನು ನಿನ್ನದಾಸನಿದ್ದು, ನೀನು ನನ್ನಸ್ವಾಮಿಯಾಗಿರುತ್ತೀ ಹೀಗೆ ನೀನೇ ನನ್ನನ್ನು ದೂರಕ್ಕೆ ದೂಡಿದಬಳಿಕ ನನಗೆ ಸ್ಥಳವಾದರೂ ಎಲ್ಲಿ ದೊರೆಯಬೇಕು? ಸ್ವಾಮಿಯು ನೀನು ಉಪದೇಶ ಮಾಡಿದ್ದು ಯೋಗ್ಯವೇ ಸರಿ; ಆದರೆ ಅನಧಿಕಾರಿಯಾದ ನನಗೆ ಅದರಂತೆ ನಡೆಯುವದು ಅಶಕ್ಯವಾಗಿ ತೋರುತ್ತದೆ. ಧೈರ್ಯಶಾಲಿಗಳೂ, ಧರ್ಮಧುರಂಧರರೂ ಆದ ಅರಸರೇ ಈ ನಿಮ್ಮ ವೇದೋಕ್ತನೀತಿಗೆ ಅಧಿಕಾರಿಗಳಾಗಿರುವರು. ನಾನಂತು ಹೇಳಿಕೇಳಿ ಹುಡುಗನು; ಕೇವಲ ಒಡೆಯನಾದ ನಿನ್ನ ದಯೆಯಿಂದ ಪೋಷಿತನಾದವನು; ಹಂಸನ ಕೈಯಿಂದ ಮೇರು-ಮಂದಾರ ಪರ್ವತಗಳನ್ನು ಎತ್ತಲಿಕ್ಕೆ ಬಂದೀತೇನು? ಗುರುಗಳನ್ನೂ, ತಂದೆತಾಯಿಗಳನ್ನೂ, ಯಾರನ್ನೂ ನಾನು ಅರಿತವನಲ್ಲ. ನಾನು ಸ್ವಾಭಾವಿಕವಾಗಿ ಹೇಳುವ ಮಾತಿನಲ್ಲಿ ಒಡೆಯನಾದ ನಿನ್ನ ವಿಶ್ವಾಸವಿರಲಿ. ಪ್ರಭುವೇ, ಪ್ರಪಂಚದ ಯಾವತ್ತು ಸ್ನೇಹಸಂಬಂಧಗಳೂ, ಪಾರಮಾರ್ಥಿಕವಾದ ಪ್ರೇಮ-ವಿಶ್ವಾಸಾದಿ ರಹಸ್ಯಗಳೂ ನಿನ್ನಲ್ಲಿಯೇ ಒಟ್ಟುಗೂಡಿರುವವು. ನೀನೇ ಒಬ್ಬನು ನನ್ನ ದೀನಬಂಧುವೂ, ಸರ್ವವ್ಯಾಪಕ ಸ್ವಾಮಿಯೂ ಆಗಿರುತ್ತೀ. ಕೀರ್ತಿ, ವೈಭವ, ಉತ್ತಮಲೋಕ ಇವೇಮೊದಲಾದವುಗಳ

ಇಚ್ಛೆಯಿದ್ದವರಿಗೆ ಧರ್ಮಶಾಸ್ತ್ರ-ನೀತಿಶಾಸ್ತ್ರಾದಿಗಳನ್ನು ಕಲಿಸತಕ್ಕದ್ದು. ಶರೀರ-ವಾಣಿ-ಮನಸ್ಸುಗಳಿಂದ ನಿನ್ನ ಚರಣಗಳಲ್ಲಿ ಅನುರಕ್ತನಾಗಿರುವವನನ್ನು ನಿನ್ನಂಥ ದಯಾಸಾಗರನು ದೂಡುವದು ಯೋಗ್ಯವೇ?" ಅನ್ನಲು, ಕರುಣಾಸಿಂಧುವಾದ ರಾಮಚಂದ್ರನು ಪ್ರಿಯಬಂಧುವಿನ ಈ ಮೃದು-ವಿನೀತವಚನಗಳನ್ನು ಕೇಳಿ, ಆತನು ಸ್ನೇಹಮೂಲಕ ದುಃಖಿತನಾಗಿರುವದನ್ನು ನೋಡಿ ಆತನನ್ನು ಎತ್ತಿ ಎದೆಗವಚಿಕೊಂಡು— ಎಲೈ ಬಂಧುವೇ, ಹೋಗು. ನಿನ್ನ ತಾಯಿಯ ಅಪ್ಪಣೆಯನ್ನು ಪಡೆದು ಬೇಗನೆ ಬಾ, ವನಕ್ಕೆ ನಡೆ, ಎಂದು ಹೇಳಿದನು. ಅದನ್ನು ಕೇಳಿ ಲಕ್ಷ್ಮಣನು ಮಹಾಸಂಕಟದಿಂದ ಮುಕ್ತನಾಗಿ ದೊಡ್ಡ ಲಾಭವನ್ನು ಹೊಂದಿದವನಂತೆ ಆನಂದಪಡುತ್ತ, ತಾಯಿಯಾದ ಸುಮಿತ್ರೆಯ ಬಳಿಗೆ ಹೊರಟನು. ಆದರೂ ಆತನ ಮನಸ್ಸು ರಾಮಚಂದ್ರನನ್ನು ಬಿಟ್ಟು ಹೋಗಲಿಲ್ಲ.

**ಸುಮಿತ್ರೆಯ ಉದಾತ್ತತೆ**— ಲಕ್ಷ್ಮಣನು ತಾಯಿಯಾದ ಸುಮಿತ್ರೆಯ ಬಳಿಗೆ ಹೋಗಿ ಆಕೆಯ ಚರಣಕ್ಕೆರಗಿದನು. ಆಗ ಸುಮಿತ್ರೆಯು ಮಗನ ಔದಾಸೀನ್ಯದ ಕಾರಣವನ್ನು ಕೇಳಲು, ಲಕ್ಷ್ಮಣನು ಎಲ್ಲ ವೃತ್ತಾಂತವನ್ನು ಹೇಳಿದನು. ಆ ಕಠೋರ ವಚನವನ್ನು ಕೇಳಿದಕೂಡಲೆ ನಾಲ್ಕೂಕಡೆಗೆ ಬೇಗೆ ಹತ್ತಿದ ಹೆಣ್ಣು ಚಿಗರೆಯಂತೆ ಸುಮಿತ್ರೆಯು ತೀರ ಹತಾಶಳಾದಳು. ಅದನ್ನು ನೋಡಿ ಲಕ್ಷ್ಮಣನಿಗೆ ಅದೊಂದು ಅರಿಷ್ಟವೇ ಉತ್ಪನ್ನವಾದಂತಾಯಿತು! ಕದಾಚಿತ್ ಆಕೆಯು ತನ್ನನ್ನು ವನಕ್ಕೆ ಹೋಗಗೊಡು ವಳೋ, ಇಲ್ಲವೋ ಎಂದು ಅಂಜುತ್ತ ಆಕೆಯ ಅಪ್ಪಣೆ ಕೇಳಿಕೊಳ್ಳಲಿಕ್ಕೆ ಆತನು ಮುಂದೆ ನೋಡಹತ್ತಿದನು. ಸೀತಾ-ರಾಮಚಂದ್ರರ ಶೀಲ-ಸೌಜನ್ಯಗಳ ವಿಚಾರವೂ, ದಶರಥರಾಜನ ಪ್ರೇಮವೂ ಮನಸ್ಸಿನಲ್ಲಿ ಬಂದಕೂಡಲೆ ಸುಮಿತ್ರೆಯು ತಲೆತಿರುಗಹತ್ತಿ ತು- ಆಕೆಯು ಕೈಕೇಯಿಯನ್ನು ಕುರಿತು—"ಪಾಪಿಷ್ಠೆಯು ಒಳ್ಳೇ ಸೇಡು ತೀರಿಸಿಕೊಂಡಳು" ಎಂದು ತಿರಸ್ಕರಿಸಿದಳು. ಪ್ರಸಂಗವು ಕಠಿಣವಿರುವದೆಂದು ಧೈರ್ಯತಾಳಿ ಸ್ವಭಾವತಃ ಶುದ್ಧ ಮನಸ್ಸಿನವಳಾದ ಆ ಸುಮಿತ್ರೆಯು ಕೋಮಲಶಬ್ದಗಳಿಂದ ಲಕ್ಷ್ಮಣನನ್ನು ಕುರಿತು—ಮಗನೇ, ನಿನ್ನ ತಾಯಿಯು ಜಾನಕಿಯೆಂತಲೂ, ತಂದೆಯು ರಾಮನೆಂತಲೂ ನೀನು ನಿಶ್ಚಯವಾಗಿ ತಿಳಿದುಕೋ. ಅವರು ಎಲ್ಲಬಗೆಯಿಂದ ನಿನ್ನನ್ನು ಪ್ರೀತಿಸುವವರಾಗಿರುವರು. ಸೂರ್ಯಪ್ರಕಾಶವಿರುವಲ್ಲಿಯೇ ಹಗಲು, ಎಂದು ತಿಳಿಯುವಂತೆ ರಾಮಚಂದ್ರನು ವಾಸಿಸುವ ಸ್ಥಳವೇ ಅಯೋಧ್ಯೆಯೆಂದು ತಿಳಿ. ನಿಜವಾಗಿಯೇ ಸೀತಾರಾಮರು ವನವಾಸಕ್ಕೆ ಹೋಗುತ್ತಿದ್ದ ಪಕ್ಷದಲ್ಲಿ ಈ ಅಯೋಧ್ಯೆಯಲ್ಲಿ ನಿನ್ನ ಪ್ರಯೋಜನವೇನೂ ಇರುವದಿಲ್ಲ. ಗುರು, ತಂದೆ, ತಾಯಿ, ಬಂಧು, ದೇವರು, ಸ್ವಾಮಿಯು ಇವರೆಲ್ಲರೂ ಪ್ರಾಣದಂತೆ ಸೇವನೀಯರಾಗಿರುವರು. ರಾಮಚಂದ್ರನು ಪ್ರಾಣದ ಪ್ರಾಣವೂ, ಜೀವದ ಜೀವನವೂ, ಸರ್ವರ ನಿರಪೇಕ್ಷಮಿತ್ರನೂ ಆಗಿರುವನು. ಸೀತಾರಾಮರಿಗೆ ಏನೇನು ಯಾರು

ಯಾರು ಪ್ರಿಯರೂ, ಪೂಜ್ಯರು ಅಥವಾ ಶ್ರೇಷ್ಠರೂ ಆಗಿರುವರೋ, ಅವರೆಲ್ಲರನ್ನು ನೀನು ರಾಮನಂತೆಯೇ ತಿಳಿಯಬೇಕು. ತಮ್ಮಾ, ನೀನು ಮನಸ್ಸಿನ ನಿಗ್ರಹಮಾಡಿ, ಸೀತಾ-ರಾಮರ ಸಂಗಡ ವನಕ್ಕೇ ಹೋಗಿ ಜಗತ್ತಿನಲ್ಲಿ ಬದುಕುವದರ ಸಾರ್ಥಕವನ್ನು ಮಾಡಿಕೋ ನಿನ್ನ ಮನಸ್ಸು ನಿಷ್ಕಪಟದಿಂದ ರಾಮಪದವನ್ನು ಆಶ್ರಯಿಸಿದ್ದರೆ. ನೀನು ನನ್ನಿಂದ ಸಹಿತನಾಗಿ ಮಹದ್ಭಾಗ್ಯಕ್ಕೆ ಪಾತ್ರನಾದೆಯೆಂದು ತಿಳಿದು, ನಾನು ನಿನ್ನ ಮೇಲೆ ನನ್ನನ್ನು ನಿವಾಳಿಸಿ ಚಲ್ಲುವೆನು. ಅಪ್ಪಾ, ಲಕ್ಷ್ಮಣಾ, ರಾಮಭಕ್ತನು ಹೊಟ್ಟೆಯಲ್ಲಿ ಹುಟ್ಟಿದ ಸ್ತ್ರೀಯೇ ನಿಜವಾಗಿ ಪುತ್ರವತಿಯೆಂದು ತಿಳಿಯಬೇಕು. ಇಲ್ಲಗಿದ್ದರೆ ಆಕೆಯು ಬಂಜೆಯಾಗಿದ್ದರೂ ಒಳ್ಳೆಯದಾಗಬಹುದು; ಯಾಕಂದರೆ ರಾಮನಿಗೆ ವಿಮುಖನಾಗಿ... ಮಗನಿಂದ ಆತನ ತಾಯಿಯ ಹಿತದ ಹಾನಿಯೂ ಆಗುವದು. ಲಕ್ಷ್ಮಣಾ, ಕೇವಲ ನಿನ್ನ ಭಾಗ್ಯದಿಂದಲೇ ರಾಮನು ವನಕ್ಕೆ ಹೋಗುತ್ತಿರುವನು. ಇಲ್ಲವಿದ್ದರೆ ಬೇರೆ ಕಾರಣವೇನೂ ಇಲ್ಲವು. ಸೀತಾರಾಮರ ಪದದಲ್ಲಿ ಅಹೇತುಕಪ್ರೇಮವು ಉತ್ಪನ್ನವಾಗುವದೇ ಯಾವತ್ತು ಪುಣ್ಯದದೊಡ್ಡಫಲವಾಗಿರುವದು. ವಿಷಯಾಸಕ್ತಿ, ಸಿಟ್ಟು, ಈರ್ಷೆ, ವಾದ, ಮೋಹ ಇವುಗಳಬಲೆಯೊಳಗೆ ಸ್ವಪ್ನದಲ್ಲಿಯೂ ನೀನು ಸಿಲುಕಬೇಡ. ಎಲ್ಲ ಪ್ರಕಾರದ ದುಷ್ಟವ ನೊ ವಿಕಾರಗಳನ್ನು ಹತ್ತಿಕ್ಕಿಬಿಟ್ಟು ತ್ರಿಕರಣಪೂರ್ವಕವಾಗಿ ನೀನು ರಾಮನನ್ನು ಸೇವಿಸುತ್ತ ಹೋಗು ನಿನ್ನ ಬೆನ್ನಹಿಂದೆ ನಿನ್ನ ತಾಯಿತಂದೆಗಳು ಇರುವದರಿಂದ ನಿನಗೆ ಎಲ್ಲಬಗೆಯಿಂದ ವನವು ಸುಖಕರವಾಗಿಯೇ ಆಗುವದು. ತಮ್ಮಾ, ನಾನು ನಿನ್ನನ್ನು ಬೋಧಿಸುವದೇನಂದರೆ, ರಾಮನಿಗೆ ವನದಲ್ಲಿ ಕಷ್ಟವಾಗದಂತೆ ನೀನು ಮಾಡಬೇಕು. ನೀನು ಹೋಗುವದರಿಂದ ಸೀತಾರಾಮರಿಗೆ ಸುಖವಾಗಿ ಅವರಿಗೆ ತಂದೆತಾಯಿಗಳು, ಅಯೋಧ್ಯೆಯ ಜನ, ಇಷ್ಟರು, ಪರಿವಾರವು ಮೊದಲಾದವರ ನೆನಪಾಗಬಾರದು ನೋಡು; ಬಾಲಕಾ, ಹೋಗು, ಸೀತಾರಾಮರೊಡನೆ ವನವಾಸಕ್ಕೆ ಹೋಗು, ಸೀತಾರಾಮರ ಚರಣಗಳಲ್ಲಿ ಪ್ರತಿಕ್ಷಣಕ್ಕೆ ಅಭಿನವವೂ, ಶುದ್ಧವೂ, ಅವಿರಲವೂ ಆದ ಭಕ್ತಿಯು ನಿನ್ನ ಅಂತಃಕರಣದಲ್ಲಿ ಹುಟ್ಟಲೆಂದು ನಾನು ನಿನ್ನನ್ನು ಆಶೀರ್ವದಿಸುವೆನು.

ರಾಮನವನವಾಸಗಮನ—ತಾಯಿಯ ಚರಣಗಳ ಮೇಲೆ ಮಸ್ತಕವಿಟ್ಟು, ತಾಯಿಯು ಮತ್ತೆಲ್ಲಿ ತನಗೆ ವನಕ್ಕೆ ಹೋಗಬೇಡೆನ್ನುವಳೋ ಎಂಬ ಸಂಶಯದಿಂದ ಲಕ್ಷ್ಮಣನು ತಟ್ಟನೆ ಹೊರಟುಬಿಟ್ಟನು. ಅವನ ಆ ರೀತಿಯು—ಬಹು ವಿಸ್ತಾರವಾಗಿ ಪಸರಿಸಿಟ್ಟಿದ್ದ ಬಲೆಯು ದೈವವಶದಿಂದ ಹರಿದುಹೋಗಿ ಚಿಗರೆಯು ಹಾರುತ್ತ ಹೋಗುತ್ತಿರುವಂತೆ ಆಯಿತು. ಆತನು ಜಾನಕೀರಮಣನಿದ್ದಲ್ಲಿಗೆ ಹೋಗಿ ಮುಟ್ಟಿದನು. ಪ್ರಿಯ ಸಮಾಗಮವು ದೊರೆತದ್ದರಿಂದ ಆತನು ಮನಸ್ಸಿನಲ್ಲಿ ಉಲ್ಲಸಿತನಾದನು. ಶ್ರೀ ರಾಮನು ಸೀತಾಲಕ್ಷ್ಮಣರೊಡನೆ ಅರಮನೆಯನ್ನು ಹೊಗಲು, ಆಗ ಅಯೋಧ್ಯೆಯು ದುಃಖಮಯವಾಯಿತು. ದರ್ಬಾರದ ಜನರು ತಳಮಳಿಸಿದರು. ಸುಮಂತನು ದಶರಥನನ್ನು

ಮೆಲ್ಲಗೆ ಎಬ್ಬಿಸಿ ಕುಳ್ಳಿರಿಸಿ ರಾಮನು ಬಂದಿರುವನೆಂದು ಮಧುರಶಬ್ದಗಳಿಂದ ತಿಳಿಸಿದನು. ಸೀತೆಯಿಂದ ಸಹಿತರಾದ ಇಬ್ಬರು ಮಕ್ಕಳನ್ನು ನೋಡಿದಕೂಡಲೆ ದಶರಥನು ಅತ್ಯಂತ ದುಃಖಿತನಾಗಿ ಅವರನ್ನು ಪುನಃ ಪುನಃ ಆಲಿಂಗಿಸಿದನು. ದುಃಖಾತಿಶಯದಿಂದ ಆತನು ಮಾತಾಡದಾದನು. ಆಗ ಶ್ರೀರಾಮನೇ ತಂದೆಯ ಅಪ್ಪಣೆಯನ್ನು ಪಡೆಯುವದಕ್ಕಾಗಿ ಆತನನ್ನು ಕುರಿತು—"ಅಪ್ಪಾ, ನನ್ನನ್ನು ಆಶೀರ್ವದಿಸಿ ಅಪ್ಪಣೆಯನ್ನು ಕೊಡಬೇಕು. ಆನಂದದ ಪ್ರಸಂಗದಲ್ಲಿ ದುಃಖಿಸುವದೇಕೆ? ನಿಮ್ಮ ಇಚ್ಛೆಯಂತೆ ನಾನು ವನಕ್ಕೆ ಹೋಗದಿದ್ದರೆ ನನ್ನಿಂದ ಪ್ರೇಮಪ್ರಯುಕ್ತವಾಗಿ, ನಾನು ಕೀರ್ತಿಗೆ ಎರವಾಗಿ ಅಪಕೀರ್ತಿಗೆ ಗುರಿಯಾದೇನು!" ಅನ್ನಲು, ದಶರಥನು ಎದ್ದು ರಘುಪತಿಯ ಕೈಹಿಡಿದು ಕುಳ್ಳಿರಿಸಿಕೊಂಡು—"ಎಲೈ ತಾತನೇ ಕೇಳು. ರಾಮನು ಚರಾಚರನಿಯಂತೃವೆಂದು ಮುನಿಜನರು ಹೇಳುವರು. ಶುಭಾಶುಭಕರ್ಮಗಳಿಗನುಸರಿಸಿಯೇ ಪರಮೇಶ್ವರನು ವಿಚಾರಪೂರ್ವಕ ಫಲಕೊಡುತ್ತಿರುವನು. ಕರ್ಮ ಮಾಡಿದವನೇ ಅದರ ಫಲವನ್ನು ಅನುಭವಿಸುವನೆಂದು ವೇದಶಾಸ್ತ್ರಗಳೂ, ಎಲ್ಲ ಜನರೂ ಹೇಳುತ್ತಿರುವರು; ಆದರೆ ರಾಮಾ, ಒಬ್ಬನು ಒಂದು ಅಪರಾಧ ಮಾಡಬೇಕು, ಅದರ ಪ್ರಾಯಶ್ಚಿತ್ತವನ್ನು ಮತ್ತೊಬ್ಬನು ಭೋಗಿಸಬೇಕೆಂಬ ನಿನ್ನ ನ್ಯಾಯವು ಮಾತ್ರ ವಿಚಿತ್ರವಾಗಿರುವದು; ನಿನ್ನ ಆ ನ್ಯಾಯವನ್ನು ತಿಳಿಯಲು ಜಗತ್ತಿನಲ್ಲಿ ಯಾವನು ಸಮರ್ಥನಿರುವನು!" ಎಂದು ಹೇಳಿ ರಾಮನನ್ನು ಇಟ್ಟುಕೊಳ್ಳುವದಕ್ಕಾಗಿ ಮನಃಪೂರ್ವಕವಾಗಿ ಯತ್ನಮಾಡಿದನು; ಆದರೆ ಆತನು ನಿಲ್ಲುವಂತೆ ತೋರದ್ದರಿಂದ, ಸೀತೆಯನ್ನು ಇಟ್ಟುಕೊಳ್ಳಬೇಕೆಂದು ಯತ್ನಿಸಲು, ಅದೂ ವ್ಯರ್ಥವಾಯಿತು. ಸಚಿವಪತ್ನಿಯರು, ಗುರುಪತ್ನಿಯರು, ಮೊದಲಾದ ದೊಡ್ಡ ದೊಡ್ಡ ಯೋಗ್ಯತೆಯ ತಿಳುವಳಿಕೆಯ ಅನುಭವಿಕರಾದ ಹೆಣ್ಣುಮಕ್ಕಳು ಪ್ರೇಮಲವಾದ ಮೃದು ನುಡಿಗಳಿಂದ ಸೀತೆಗೆ ಬೇಕಾದಷ್ಟು ತಿಳಿಸಿ ಹೇಳಲು, ಆದರೆ ಸೀತೆಗೆ ಅವರ ಬೋಧವು ಸೇರಲಿಲ್ಲ. ಆಕೆಯು ಸಂಕೋಚಪಟ್ಟು ಅವರಿಗೆ ಉತ್ತರವನ್ನೇ ಕೊಡಲಿಲ್ಲ. ಆಕೆಗೆ ಮಾಡಿದ ಬೋಧವನ್ನು ಕೇಳಿದಕೂಡಲೆ ಕೈಕೇಯಿಯು ತಟ್ಟನೆ ಎದ್ದು ಮುನಿಗಳುಡುವ ನಾರಿನ ವಸ್ತ್ರಗಳನ್ನೂ, ಭಸ್ಮ, ಮಾಲೆ ಮೊದಲಾದ ಆಭರಣಗಳನ್ನೂ, ಕಮಂಡಲು ಮೊದಲಾದ ಪಾತ್ರಗಳನ್ನೂ ಮುಂದೆ ತಂದಿಟ್ಟು ಮೃದುನುಡಿಗಳಿಂದ ರಾಮನನ್ನು ಕುರಿತು—"ಎಲೈ ರಘುವೀರನೇ, ಅರಸನಿಗೆ ನೀನು ಪ್ರಾಣಕ್ಕಿಂತಲೂ ಪ್ರಿಯನಾಗಿರುವದರಿಂದ ಸುಕೃತವೂ, ಸುಯಶಸ್ಸೂ, ಪರಲೋಕವೂ ನಷ್ಟವಾದರೂ ನಿನಗೆ ವನಕ್ಕೆ ಹೋಗೆನ್ನುವದು ಅವರಿಂದಾಗುವದಿಲ್ಲ. ಇದನ್ನರಿತು ನೀನೇ ಉಚಿತವಾಗಿ ತೋರಿದಂತೆ ಮಾಡು" ಎಂದು ಹೇಳಿದಳು. ತಾಯಿಯ ಅಪ್ಪಣೆಯನ್ನು ಕೇಳಿ ರಾಮನಿಗೆ ಸಂತೋಷವಾಯಿತು. ಆ ನುಡಿಗಳನ್ನು ಕೇಳಿ ಅರಸನಿಗೆ ಬಾಣದಿಂದಿರಿದಂತಾಗಿ ಆತನು ಮೂರ್ಛೆಹೋದನು. ಎಲ್ಲ ಜನರು ದುಃಖಿತರಾದರು. ಕೂಡಲೆ ರಾಮಚಂದ್ರನು ಮುನಿವೇಷವನ್ನು ಧರಿಸಿ,

ಹೆಂಡತಿಯನ್ನೂ, ತಮ್ಮನನ್ನೂ, ಕರಕೊಂಡು ತಾಯಿತಂದೆಗಳನ್ನೂ, ಗುರುಗಳನ್ನೂ, ಬ್ರಾಹ್ಮಣರನ್ನೂ ನಮಸ್ಕರಿಸಿ, ಎಲ್ಲರಿಗೂ ಅಸಂತೋಷವನ್ನುಂಟುಮಾಡಿ ವನಕ್ಕೆ ಹೊರಟನು. ಆತನು ಗುರುಗಳಾದ ವಸಿಷ್ಠರಬಳಿಗೆ ಹೋಗಿ ಅವರನ್ನು ವ್ಯಾಕುಲದಿಂದ ಸಮಾಧಾನಪಡಿಸಿ ಅವರ ಕೈಯಿಂದ ಬ್ರಾಹ್ಮಣರಿಗೆ ವರ್ಷಾಶನಗಳನ್ನೂ, ದಕ್ಷಿಣೆಗಳನ್ನೂ ಕೊಡಿಸಿ ಬ್ರಾಹ್ಮಣರ ಅನುಕೂಲತೆಯನ್ನು ಸಂಪಾದಿಸಿದನು. ಅದರಂತೆ ದಾನ-ಮಾನಾದಿಗಳಿಂದ ಯಾಚಕರನ್ನೂ, ಪ್ರೇಮದಿಂದ ಸನ್ಮಿತ್ರರನ್ನೂ ಸಂತೋಷಪಡಿಸಿದನು. ಆ ಮೇಲೆ ದಾಸದಾಸಿಯರನ್ನು ಕರೆದು ಅವರನ್ನು ಗುರುಗಳಿಗೆ ಒಪ್ಪಿಸಿ ಆತನು ಕೈಜೋಡಿಸಿ—ಇವರೆಲ್ಲರನ್ನು ತಾಯಿತಂದೆಗಳಂತೆ ರಕ್ಷಿಸುವವರು ಸ್ವಾಮಿಗಳು ನೀವೇ ಇರುವಿರಿ, ಎಂದು ಹೇಳಿ, ನನ್ನ ತಂದೆ ತಾಯಿಗಳಿಗೆ ಸಂತೋಷವಾಗುವಂತೆ ನಡೆದುಕೊಳ್ಳುವವರೇ ನನ್ನ ಹಿತಕಾರಿಗಳೆಂದು ನುಡಿದು, ಗುರುಗಳ ಚರಣಗಳ ಮೇಲೆ ಮಸ್ತಕವಿಟ್ಟು, ಗಣಪತಿಯನ್ನೂ, ಗೌರೀಶಂಕರರನ್ನೂ ಧ್ಯಾನಿಸುತ್ತ ಸರ್ವರ ಆಶೀರ್ವಾದವನ್ನು ಪಡೆದು, ವನಕ್ಕೆ ಹೊರಟನು. ಆಗ ಲಂಕೆಯಲ್ಲಿ ಉಲ್ಕಾಪಾತವಾಯಿತು. ಅಯೋಧ್ಯೆಯಲ್ಲಿ ಹಾಹಾಕಾರವುಂಟಾಯಿತು. ದೇವಲೋಕವು ಹರ್ಷವಿಷಾದಗಳಲ್ಲಿ ಮಗ್ನವಾಯಿತು.

ಇತ್ತ ದಶರಥನು ಮೂರ್ಛೆತಿಳಿದೆದ್ದು ಸುಮಂತನನ್ನು ಕರೆದು—ರಾಮನು ವನಕ್ಕೆ ಹೋದರೂ ನನ್ನ ಪ್ರಾಣಗಳು ಹೋಗಲೊಲ್ಲವಲ್ಲ! ನೀನು ರಥವನ್ನು ತಕ್ಕೊಂಡು ರಾಮನಸಂಗಡ ಹೋಗು; ಅವರನ್ನು ರಥದಲ್ಲಿ ಕುಳ್ಳಿರಿಸಿ ನಾಲ್ಕುದಿನ ಅವರಿಗೆ ವನವನ್ನು ತೋರಿಸಿ ಹಾಗೇ ತಿರುಗಿ ಕರಕೊಂಡು ಬಾ. ಆ ರಘುಕುಲಶ್ರೇಷ್ಠರಿಬ್ಬರು ಬಂಧುಗಳೂ ಧೈರ್ಯಶಾಲಿಗಳೂ, ದೃಢವ್ರತರೂ, ಸತ್ಯಪ್ರತಿಜ್ಞರೂ, ಇರುವವರಿಂದ ಅವರು ಬಾರದಿದ್ದರೂ ಅವರನ್ನು ಪ್ರಾರ್ಥಿಸಿ ಜಾನಕಿಯನ್ನಾದರೂ ಕರೆದುಕೊಂಡು ಬಾ. ವನವನ್ನು ನೋಡಿ ಅಂಜಿದಸೀತೆಗೆ "ವನವಾಸವು ನಿನಗೆ ತಕ್ಕದ್ದಲ್ಲೆಂತಲೂ, ಬೇಕಾದರೆ ತವರಮನೆಯಲ್ಲಿ, ಬೇಕಾದರೆ ಅತ್ತೆಯಮನೆಯಲ್ಲಿ ಇದ್ದು ವಿಪತ್ಕಾಲವನ್ನು ಕಳೆಯೆಂತಲೂ" ಯುಕ್ತಿ ಪ್ರಯುಕ್ತಿಗಳಿಂದ ಹೇಳಿ ಆಕೆಯನ್ನು ಕರಕೊಂಡು ಬಾ. ಆಕೆಯಾದರೂ ಬಂದರೆ ನನ್ನ ಪ್ರಾಣಗಳಿಗೆ ವಿಶ್ರಾಂತಿಯು ದೊರೆಯಬಹುದು. ಇಲ್ಲದಿದ್ದರೆ ನನಗೆ ಮರಣವಂತು ಸಿದ್ಧವಾಗಿಯೇ ಇರುತ್ತದೆ. ಇದೂ ಆಗದಿದ್ದರೆ ರಾಮ–ಲಕ್ಷ್ಮಣ–ಸೀತೆಯರನ್ನು ಕರತಂದು ನನಗೆ ಇನ್ನೊಮ್ಮೆ ತೋರಿಸು- ಎಂದುಹೇಳಿ ಅರಸನು ಭೂಮಿಯಲ್ಲಿ ನಿಶ್ಚೇಷ್ಟಿತನಾಗಿ ಬಿದ್ದನು. ಅರಸನ ಅಪ್ಪಣೆಯಂತೆ ಸುಮಂತನು ರಥವನ್ನು ತೀವ್ರ ತಕ್ಕೊಂಡು ಊರಹೊರಗೆ ಸೀತೆಯೊಡನೆ ಆ ಬಂಧುಗಳಿರುವಲ್ಲಿಗೆ ಹೋದನು. ಆತನು ರಾಜಾಜ್ಞೆಯನ್ನು ತಿಳಿಸಲು, ಸೀತೆಯಿಂದ ಸಹಿತರಾಗಿ ಆ ಬಂಧುಗಳು ಅಯೋಧ್ಯೆಯನ್ನು ಮನಸಾವಂದಿಸಿ ಸೀತೆಯೊಡನೆ ರಥದಲ್ಲಿ ಕುಳಿತು ಹೊರಟರು. ಆಗ ಅಯೋ-

ಧ್ಯೆಯ ಜನರೆಲ್ಲ ರಾಮನ ರಥವನ್ನು ಹಿಂಬಾಲಿಸಿ ನಡೆದರು. ರಾಮನು ಎಷ್ಟು ಬಗೆ ಯಿಂದ ಸಮಾಧಾನ ಹೇಳಿದರೂ ಪ್ರೇಮವಶರಾದ ಅವರು ಹಿಂದಿರುಗಲಿಲ್ಲ. ರಾಮ ವಿಯೋಗದಿಂದ ಅಯೋಧ್ಯೆಯು ಶ್ಮಶಾನದಂತೆ ತೋರಹತ್ತಿ, ಅಲ್ಲಿಯ ಪಶುಪಕ್ಷಿಗಳು ಕೂಡ ಶೋಕಿಸಹತ್ತಿದವು. ಅಯೋಧ್ಯೆಯ ಜನರೆಲ್ಲ ಇಂದ್ರಭವನದಂಥ ತಮ್ಮ ಮನೆ ಗಳನ್ನು ಬಿಟ್ಟು ರಾಮನನ್ನು ಹಿಂಬಾಲಿಸಿದರು. ರಾಮಚಂದ್ರನ ಚರಣಕಮಲಗಳು ಪ್ರಿಯ ವಾಗಿರುವವರನ್ನು ವಿಷಯಭೋಗಗಳು ವಶಮಾಡಿಕೊಳ್ಳಲು ಸಮರ್ಥವಾಗಬಹುದೇ? ಮೊದಲನೆಯ ದಿವಸ ರಘುನಾಥನು ತಮಸಾ ನದಿಯ ತೀರದಲ್ಲಿ ವಾಸಮಾಡಿದನು. ಆತನು ಪ್ರಜೆಗಳಿಗೆ ಹಿಂದಿರುಗಿ ಅಯೋಧ್ಯೆಗೆ ಹೋಗಲು ಎಷ್ಟು ಬೋಧ ಮಾಡಿದರೂ ಅವರು ಕೇಳಲಿಲ್ಲ. ರಾಮನು ತನ್ನ ಶೀಲವನ್ನು ಬಿಡದಾದನು; ಪ್ರಜೆಗಳ ಪ್ರೇಮ ವನ್ನು ಮರೆಯದಾದನು. ಹೀಗೆ ಆತನು ಸಂಕಟಕ್ಕೆ ಒಳಗಾಗಿರುವಾಗ, ಶೋಕ ಶ್ರಮದಿಂದ ಪ್ರಜೆಗಳಿಗೆ ಇಳಿದುಕೊಂಡ ಸ್ಥಳದಲ್ಲಿ ರಾತ್ರಿ ನಿದ್ರೆಹತ್ತಿತು. ಆ ಕಾಲಕ್ಕೆ ದೇವಮಾಯೆಯು ಅವರನ್ನು ಕೆಲವು ಬಗೆ ಮೋಹಗೊಳಿಸಿತು. ಎರಡು ಪ್ರಹರ ರಾತ್ರಿ ಯಾದ ಮೇಲೆ ಶ್ರೀ ರಾಮನು ಸುಮಂತ್ರನನ್ನು ಕರೆದು—ಅಪ್ಪಾ ಸುಮಂತ್ರಾ, ನೀನು ರಥ ವನ್ನು ಒಹಳ ಜಾಗರೂಕತೆಯಿಂದ ನಡಿಸು. ಅದರ ಗುರುತು ಸರ್ವಥಾ ಯಾರಿಗೂ ಹತ್ತಲಾರದು. ಹೀಗೆ ಮಾಡದಿದ್ದರೆ ನಿಶ್ಚಯವಿಲ್ಲ, ಎಂದು ಹೇಳಿದನು. ಬಳಿಕ ಸೀತೆಯೊ ಡನೆ ರಾಮಲಕ್ಷ್ಮಣರು ಶಂಕರನ ಚರಣವನ್ನು ವಂದಿಸಿ ರಥದಲ್ಲಿ ಕುಳಿತರು. ಸುಮಂತ್ರನು ಅಡ್ಡದಾರಿಯಿಂದ ಸದ್ದಿಲ್ಲದಂತೆ ರಥವನ್ನು ನಡಿಸಿದನು. ಬೆಳಗಾದಬಳಿಕ ಎಲ್ಲರೂ ಎದ್ದುನೋಡಲು, ರಾಮಚಂದ್ರನು ಇದ್ದಿಲ್ಲವು. ಎಲ್ಲರೂ ಶೋಕಿಸತೊಡಗಿದರು. ರಥದ ಗಾಲಿಯ ಚಿಹ್ನವೂ ಕಾಣಲೊಲ್ಲದು. ಆಗಂತು ಅವರು "ರಾಮ ರಾಮ" ಎಂದು ಆಕ್ರೋಶಿಸುತ್ತ ನಾಲ್ಕೂ ಕಡೆಗೆ ಧಾವಿಸಿ ಹುಡುಕಿದರು; ಆದರೆ ರಾಮನ ಗೊತ್ತು ಹತ್ತಲಿಲ್ಲ. ಆಗ ಅವರು—"ರಾಮವಿಯೋಗವಾದ ತಮ್ಮ ಜೀವಿತಕ್ಕೆ ಧಿಕ್ಕಾರವಿರಲಿ" ಎಂದು ತಮ್ಮ ದೈವಹೀನತೆಯನ್ನು ಹಳಿದುಕೊಳ್ಳುತ, ಅತ್ಯಂತ ಶೋಕದಿಂದ ಅಯೋಧ್ಯೆಗೆ ತಿರುಗಿದರು. ಅವರು ೧೪ ವರ್ಷಗಳವರೆಗೆ ರಾಮನು ಬರು ವನೆಂಬ ಆಶೆಯಿಂದ ಪ್ರಾಣಧಾರಣ ಮಾಡಿಕೊಂಡು ವ್ರತ-ನಿಯಮಾದಿಗಳನ್ನು ಮಾಡಹತ್ತತೊಡಗಿದರು.

ಗುಹಸ್ನೇಹ—ಇತ್ತ ಸೀತಾ-ಸುಮಂತ್ರರೊಡನೆ ಆ ಇಬ್ಬರು ಬಂಧುಗಳು ಶೃಂಗವೇರಪುರಕ್ಕೆ ಹೋಗಿ ಮುಟ್ಟಿದರು. ಭಾಗೀರಥಿಯ ದರ್ಶನವಾದಕೂಡಲೆ ರಾಮನು ರಥದಿಂದ ಇಳಿದು ಹರ್ಷದಿಂದ ದೀರ್ಘದಂಡ ನಮಸ್ಕಾರ ಮಾಡಿದನು. ಅದರಂತೆ ಲಕ್ಷ್ಮ ಣನೂ, ಸೀತೆಯೂ; ಸುಮಂತ್ರನೂ ಜಾಹ್ನವಿಯನ್ನು ನಮಸ್ಕರಿಸಿದರು. ಶ್ರೀ ರಾಮನು ಆ ದೇವನದಿಯ ಮಹಿಮೆಯನ್ನು ಅನೇಕ ಕಥಾ ಪ್ರಸಂಗಗಳಿಂದ ವರ್ಣಿಸಿದನು.

ಗಂಗಾ ಸ್ನಾನದಿಂದ ಅವರ ಮಾರ್ಗಾಯಾಸದ ನಿವಾರಣವಾಗಿ, ಗಂಗಾಜಲ ಪಾನದಿಂದ ಅವರ ಮನಸ್ಸುಗಳು ಪ್ರಫುಲ್ಲಿತವಾದವು. ಯಾವನ ಸ್ಮರಣಮಾತ್ರದಿಂದ ಸಂಸಾರ ಶ್ರಮದ ಭಾರವು ಇಲ್ಲದಂತಾಗುವದೋ, ಆ ಶ್ರೀರಾಮನಿಗೆ ಶ್ರಮವಾಗುವದು ಕೇವಲ ಲೌಕಿಕ ವ್ಯವಹಾರವೇ ಸರಿ. ಭಾನುಕುಲ ಶ್ರೇಷ್ಠನಾದ ಶ್ರೀ ರಾಮನು ಶುದ್ಧ ಸಚ್ಚಿದಾನಂದಮಯನೂ' ಅಖಿಲಕಾರಣನೂ ಇದ್ದು, ಸಂಸಾರ ಸಾಗರಕ್ಕೆ ಸೇತುವಿನಂತೆ ಇದ್ದ ಲೀಲೆಯನ್ನು ಮಾಡುತ್ತ ಪ್ರಾಕೃತ ಜನರನ್ನನು ಸರಿಸಿ ನಡೆಯ ಹತ್ತಿದನು. ಶ್ರೀ ರಾಮನು ಬಂದ ಸುದ್ದಿಯು ಗುಹನಿಷಾದನಿಗೆ ತಿಳಿಯಲು ಆತನು ಆನಂದದಿಂದ ಆಪ್ತರನ್ನು ಅಪ್ಪೇಷ್ಟರನ್ನು ಒಟ್ಟುಗೂಡಿಸಿ, ಫಲಮೂಲಾದಿಗಳನ್ನು ಕಾಣಿಕೆಯಾಗಿ ತೆಗೆದುಕೊಂಡು ಶ್ರೀ ರಾಮನ ದರ್ಶನಕ್ಕಾಗಿ ಹೊರಟನು. ಆ ಭಕ್ತ ಶ್ರೇಷ್ಠನು ಕಾಣಿಕೆಗಳನ್ನು ಪ್ರಭುವಿನ ಮುಂದಿಟ್ಟು ಸಾಷ್ಟಾಂಗನಮಸ್ಕಾರಮಾಡಿ ಅತಿಶಯವಾದ ಪ್ರೇಮದಿಂದ ರಘುವೀರನನ್ನು ನೋಡತೊಡಗಿದನು. ರಘುರಾಮನು ಆತನಭೋಳೆ ಸ್ವಭಾವಕ್ಕೆ ಮೋಹಿತನಾಗಿ ಆತನನ್ನು ತೀರ ಹತ್ತರ ಕುಳ್ಳಿರಿಸಿಕೊಂಡು ಕುಶಲ ಪ್ರಶ್ನೆಗಳನ್ನು ಕೇಳಿದನು. ಆಗ ಗುಹನು—“ಎಲೈ ನಾಥನೇ, ಈ ನಿನ್ನ ಪದಕಮಲಗಳನ್ನು ನೋಡಿ ನಾನು ಕುಶಲನಾಗಿ, ಎಲ್ಲ ಜನರ ದೃಷ್ಟಿಯಿಂದಲೂ ನಾನು ಮಹಾ ಭಾಗ್ಯವನ್ನು ಹೊಂದಿದನು. ಎಲೈ ದೇವನೇ, ಈ ಮನೆಯೂ, ಧನವೂ, ರಾಜ್ಯವೂ ನಿನ್ನವಿರುವವು. ಇವಾತ್ತು ಪರಿವಾರದೊಡನೆ ನಾನು ನಿನ್ನ ನೀಚ ಸೇವಕನಾಗಿರುವೆನು. ದಯಮಾಡಿ ನನ್ನ ಪಟ್ಟಣದಲ್ಲಿ ಪಾದಧೂಳಿಯನ್ನು ಕೆಡವಿ ಅಲ್ಲಿಯೇ ಇದ್ದು, ನಿನ್ನ ದಾಸನೆಂದು ನನ್ನನ್ನು ಜಗತ್ತಿನಲ್ಲಿ ಪ್ರಸಿದ್ಧಗೊಳಿಸಬೇಕು, ಎಂದು ಪ್ರಾರ್ಥಿಸಿದನು. ಅದನ್ನು ಕೇಳಿ ಶ್ರೀ ರಾಮನು —“ಮಿತ್ರಾ, ಚತುರಾ, ನೀನು ಮಾತಾಡುವದೆಲ್ಲ ನಿಜವಾಗಿರುತ್ತದೆ; ಆದರೆ ನನ್ನ ತಂದೆಯು ನನ್ನನ್ನು ಬೇರೆ ವಿಧವಾಗಿ ಆಜ್ಞಾಪಿಸಿರುವನು—ಮುನಿಗಳ ವ್ರತ-ವೇಷ-ಆಹಾರಗಳಿಂದ ನಾನು ಹದಿನಾಲ್ಕು ವರ್ಷ ವನದಲ್ಲಿರಲೇ ಬೇಕು. ಆದ್ದರಿಂದ ನಾನು ಊರನ್ನು ಆಶ್ರಯಿಸುವದು ಉಚಿತವಲ್ಲವು, ಎಂದು ಹೇಳಿದನು. ಅದನ್ನು ಕೇಳಿದ ಕೂಡಲೆ ಗುಹನು ದುಃಖದಿಂದ ಕುಸಿದನು. ಸೀತಾ-ರಾಮ-ಲಕ್ಷ್ಮಣರ ಮೂರ್ತಿಗಳನ್ನು ನೋಡಿ ಹಳ್ಳಿಗಾಡ ಹೆಂಗಸರು-ಗಂಡಸರು ಕನಿಕರ ಪಟ್ಟು, ಇಂಥವರನ್ನು ಅಡವಿಗಟ್ಟಿದ ತಾಯಿ-ತಂದೆಗಳು ಎಂಥವರಿರುವರೋ ಎಂದು ಆಕ್ಷೇಪಿಸುತ್ತಿದ್ದರು. ಕೆಲವರು —“ರಾಜನು ನಮ್ಮ ಮೇಲೆ ಉಪಕಾರವನ್ನೇ ಮಾಡಿದನು. ಇಲ್ಲದಿದ್ದರೆ ಈ ಸುಂದರ ಮೂರ್ತಿಗಳ ದರ್ಶನವು ನಮಗೆ ಹ್ಯಾಗೆ ಆಗುತ್ತಿತ್ತು,,, ಎಂದು ರಾಜನನ್ನು ಅಭಿನಂಧಿಸಿದರು. ಇತ್ತ ಗುಹನು ಶಿಂಶುಪವೃಕ್ಷದ ಬುಡದಲ್ಲಿ ಶ್ರೀ ರಾಮನ ಅನುಜ್ಞೆಯಿಂದ ಉತ್ತಮವಾದ ಕುಶಶಯ್ಯೆಯನ್ನು ನಿರ್ಮಿಸಿ ಸ್ವಚ್ಛವೂ ಮೃದುವೂ ಮಧುರವೂ ಆದ ತನಗೆ ಗೊತ್ತಿರುವ ಫಲ ಮೂಲಗಳನ್ನು ದೊನ್ನೆಗಳಲ್ಲಿ ತುಂಬಿ ತುಂಬಿ ತಂದಿಟ್ಟನು. ಸೀತಾ-ಸುಮಂತ ಲಕ್ಷ್ಮಣರೊಡನೆ ಶ್ರೀ ರಾಮನು

ಅವನ್ನು ಭಕ್ಷಿಸಿ ಕುಶಶಯ್ಯೆಯ ಮೇಲೆ ಮಲಗಲು, ಲಕ್ಷ್ಮಣನು ಆತನ ಕಾಲು ಒತ್ತಹತ್ತಿದನು. ಪ್ರಭುವಿಗೆ ನಿದ್ರೆಹತ್ತಿದ್ದನ್ನು ನೋಡಿ ಲಕ್ಷ್ಮಣನು ಮೃದುನುಡಿಗಳಿಂದ ಸುಮಂತನಿಗೆ ನಿದ್ರೆಮಾಡಹೇಳಿ, ಸ್ವತಃ ಧನಸ್ಸು-ಬಾಣಗಳನ್ನು ಧರಿಸಿ ವೀರಾಸನ ಹಾಕಿ ಕೆಲವು ಅಂತರದ ಮೇಲೆ ಅಚ್ಚುಗಾವಲಾಗಿ ಕುಳಿತುಕೊಂಡನು. ಗುಹನು ತನ್ನ ನಂಬಿಗೆಯ ಕಾವಲುಗಾರರನ್ನು ಕರೆದು ಅಲ್ಲಲ್ಲಿ ಪಹರೆ ಮಾಡಲು ನಿಯಮಿಸಿ, ತಾನು ಧನುರ್ಬಾಣಗಳಿಂದ ಸಿದ್ಧನಾಗಿ ಲಕ್ಷ್ಮಣನ ಬಳಿಯಲ್ಲಿ ಕುಳಿತುಕೊಂಡನು. ಇಂದ್ರಭವನಕ್ಕೆ ಸಮಾನವಾದ ಅಯೋಧ್ಯೆಯೊಳಗಿನ ಅರಮನೆಯ ಮೃದು ತಲ್ಪದಮೇಲೆ ಮಲಗುತ್ತಿದ್ದ ಶ್ರೀ ರಾಮನು, ಈಗ ಕುಶಶಯ್ಯೆಯ ಮೇಲೆ ಮಲಗಿರುವದನ್ನು ನೋಡಿ ಗುಹನಿಗೆ ಬಹಳ ವಿಷಾದವಾಯಿತು. ಸೀತೆಯ ಕಷ್ಟವನ್ನು ನೋಡಿ ಆತನು ಕನಿಕರಪಟ್ಟನು.

ಹೀಗೆ ಗುಹನು ವ್ಯಥೆಪಟ್ಟು ಲಕ್ಷ್ಮಣನ ಮುಂದೆ ದುಃಖೋದ್ಗಾರಗಳನ್ನು ಹೊರಡಿಸಲು, ಲಕ್ಷ್ಮಣನು ಆ ಭಕ್ತಶಿರೋಮಣಿಯನ್ನು ಕುರಿತು—ಎಲೈ, ಬಂಧುವೇ, ಸುಖದುಃಖಗಳನ್ನು ಯಾರಿಗೆಯಾದರೂ ಕೊಡುವವರಿಲ್ಲವು. ಅವರವರು ತಮ್ಮತಮ್ಮ ಕರ್ಮದಫಲಗಳನ್ನು ತಾವೇ ಭೋಗಿಸುತ್ತಿರುವರು. ಸಂಯೋಗ, ವಿಯೋಗ, ಒಳ್ಳೆಯತನ, ಕೆಟ್ಟತನ, ಶತ್ರು ಮಿತ್ರ-ಉದಾಸೀನಭಾವಗಳು ಇವೆಲ್ಲ ಕೇವಲ ಭ್ರಮೆಗಳಾಗಿರುವವು. ಸಂಪತ್ತು, ವಿಪತ್ತು, ಕರ್ಮ, ಕಾಲ, ಧರ್ಮ, ಮನೆ, ಧನ, ವೈಭವ, ಪರಿವಾರ, ಸ್ವರ್ಗ, ನರಕ ಅಂತ ಇಂತ ಜಗತ್ತಿನೊಳಗಿನ ಯಾವತ್ತು ವ್ಯವಹಾರಗಳು, ಜನ್ಮಮರಣವೊದಲಾದ ಪ್ರಾಪಂಚಿಕ ಗೊಂಜಾಟವು, ಒಟ್ಟಿಗೆ ಕಣ್ಣಿಗೆ ಕಾಣುವ, ಕಿವಿಗೆ ಕೇಳುವ, ಮನಸ್ಸಿಗೆ ಗ್ರಾಹ್ಯವಾಗುವವುಗಳೆಲ್ಲ ಮೋಹದ ಆಡಂಬರಗಳಾಗಿರುವವು. ಅವುಗಳಲ್ಲಿ ಮೋಕ್ಷಕ್ಕೆ ಸಾಧನವಾದದ್ದೇನೂ ಇರುವದಿಲ್ಲ. ಕನಸಿನಲ್ಲಿ, ಅರಸನು ಬಡವನಾಗುವನು; ಬಡವನು ಅರಸನಾಗುವನು; ಆದರೆ ಎಚ್ಚತ್ತಒಳಿಕ ಅದರಿಂದ ಲಾಭಹಾನಿಗಳೇನೂ ಆಗುವದಿಲ್ಲ. ವಿಚಾರಮಾಡಿದರೆ ಈ ಸಂಸಾರವಾದರೂ ಅದರಂತೆಯೇ ಇರುವದು. ಇದನ್ನರಿತು ದುಃಖಪಡಬಾರದು; ವ್ಯರ್ಥವಾಗಿ ಯಾರಿಗೂ ಹೆಸರಿಡಬಾರದು. ಯಾವತ್ತು ಜನರು ಮೋಹನಿದ್ದೆಯಲ್ಲಿಗೊರಕೆಹೊಡೆಯುತ್ತಿದ್ದು, ನಾನಾಪ್ರಕಾರದ ಸ್ವಪ್ನಗಳನ್ನು ಕಾಣುತ್ತಿರುವರು. ಈ ಜಗತ್ತಿನೊಳಗೆ ಮೋಹರಾತ್ರಿಯಲ್ಲಿ ಅದ್ವೈತಾನುಭವದಿಂದ ಪ್ರಪಂಚದ ಲೇಪವಾಗದಿರುವ ಯೋಗಿಗಳು ಮಾತ್ರ ಜಾಗೃತರಾಗಿರುವರೆಂದು ತಿಳಿಯಬೇಕು. ವಿವೇಕಉಂಟಾದಾಗ ಮೋಹ-ಭ್ರಮೆಗಳ ನಿವಾರಣವಾಗುವದು; ಹಾಗಾದಾಗ ಮಾತ್ರ ರಾಮಚರಣದಲ್ಲಿ ಆಸಕ್ತಿಯುಂಟಾಗುವದು. ಮಿತ್ರಾ, ರಾಮನು ಪರಬ್ರಹ್ಮನೂ, ಪರಮಾರ್ಥರೂಪನೂ, ಅವೇದ್ಯನೂ, ಅಲಕ್ಷನೂ, ಅನಾದಿಯೂ, ಅಪ್ರಮೇಯನೂ, ನಿರ್ವಿಕಾರನೂ, ಅಭೇದ್ಯನೂ ಆಗಿದ್ದು, ಆತನನ್ನು ತಾವು ತಿಳಿಯುವದಿಲ್ಲವೆಂದು ವೇದಗಳು ಹೇಳುತ್ತಿರುವವು. ಅಂಥ ರಾಮಚಂದ್ರನಲ್ಲಿ ತ್ರಿಕರಣಪೂರ್ವಕವಾಗಿ ಪ್ರೇಮತಾಳುವದೇ ಪರಮಾರ್ಥದ ಸಾರವಾ

ಗಿರುವದು. ಭಕ್ತರು, ಭೂಮಿ ಬ್ರಾಹ್ಮಣರು, ಆಕಳು ಇವುಗಳ ಸಂರಕ್ಷಣಕ್ಕಾಗಿ ಕೃಪಾಳುವಾದ ರಾಮಚಂದ್ರನು ಮನುಷ್ಯಾವತಾರವನ್ನು ಧರಿಸಿ, ಶ್ರವಣಮಾತ್ರದಿಂದ ಪ್ರಪಂಚವನ್ನು ಅಸ್ತಗೊಳಿಸುವಂಥ ಚರಿತ್ರೆಗಳನ್ನು ಮಾಡುತ್ತಿರುವನು. ಆದ್ದರಿಂದ ಮಿತ್ರಾ, ಇದನ್ನರಿತು ಮೋಹವನ್ನು ತ್ಯಜಿಸಿ ಸೀತಾರಾಮಚರಣದಲ್ಲಿ ಆಸಕ್ತನಾಗು.

ಈಮೇರೆಗೆ ಜ್ಞಾನ-ವೈರಾಗ್ಯ-ಭಕ್ತಿರಸಗಳಿಂದ ತುಂಬಿತುಳುಕುತ್ತಿರುವ ಬೋಧವನ್ನು, ಲಕ್ಷ್ಮಣನು ಗುಹನಿಗೆ ಮಾಡುತ್ತಿರಲು, ಬೆಳಗಾಯಿತು. ಜಗತ್ತಿನ ಮಂಗಲದಾತ್ರವಾದ ಶ್ರೀ ರಾಮನು ಎಚ್ಚತ್ತನು. ಆತನು ಪ್ರಾತರ್ವಿಧಿಗಳನ್ನು ತೀರಿಸಿ ಸ್ನಾನ ಮಾಡಿದನು. ಬಳಿಕ ಆ ಶುದ್ಧ-ಬುದ್ಧನು ಆಲದ ಹಾಲನ್ನು ತರಿಸಿ ಲಕ್ಷ್ಮಣನೊಡನೆ ತನ್ನ ಮಸ್ತಕದಲ್ಲಿ ಜಡೆಯನ್ನು ರಚಿಸಿದನು. ಅದನ್ನು ನೋಡಿ ಸುಮಂತನ ಕಣ್ಣುಗಳು ಅಶ್ರುಪೂರ್ಣವಾದವು. ಆತನು ಕೈಜೋಡಿಸಿ—"ಎಲೈ ನಾಥನೇ, ಮಹಾರಾಜರು ನಿಮ್ಮನ್ನು, ರಥದಲ್ಲಿ ಕುಳ್ಳಿರಿಸಿಕೊಂಡು ಹೋಗಿ ವನವನ್ನು ತೋರಿಸಿ, ಗಂಗಾಸ್ನಾನ ಮಾಡಿಸಿ ತಿರುಗಿ ಕರಕೊಂಡು ಬರಲು ಅಜ್ಞಾಪಿಸಿರುವರು ಇದರ ಮೇಲೆ ತಮ್ಮ ಅಪ್ಪಣೆಯಂತೆ ನಡೆದುಕೊಳ್ಳುವೆನು. ಎಂದು ಹೇಳಿ ರಾಮನಿಗೆ ಸಾಷ್ಟಾಂಗವಾಗಿ ಎರಗಲು, ಪ್ರಭುವು ಆತನನ್ನು ಹಿಡಿದೆತ್ತಿ —"ಎಲೈ ಸುಮಂತ್ರರೇ, ನೀವು ಧರ್ಮವಿಚಾರಗಳನ್ನೆಲ್ಲ ಶೋಧಿಸಿರುವಿರಿ. ಶಿಬಿ,ದಧೀಚಿ,ಹರಿಶ್ಚಂದ್ರ,ರಂತಿದೇವ,ಬಲಿ ಮೊದಲಾದ ಪ್ರಾಚೀನಸುಜ್ಞರು ಧರ್ಮಕ್ಕಾಗಿ ದುಃಖದಪರ್ವತಗಳನ್ನು ಸಹಿಸಿ ಧರ್ಮವನ್ನು ಪಾಲಿಸಿರುವರು. ಸತ್ಯದಂಥ ಅನ್ಯ ಧರ್ಮವಿಲ್ಲವೆಂದು ವೇದಶಾಸ್ತ್ರಪುರಾಣಗಳ ಮತವಿರುವದು. ಅಂಥ ಶ್ರೇಷ್ಠ ಧರ್ಮವನ್ನು, ಪಾಲಿಸುವಸುಯೋಗವು ಅನಾಯಾಸವಾಗಿ ಒದಗಿರಲು, ಅದನ್ನು ತ್ಯಜಿಸಿದರೆ ತ್ರೈಲೋಕ್ಯದಲ್ಲಿ ನನ್ನ ದುಷ್ಕೀರ್ತಿಯಾದೀತು. ಸಂಭಾವಿತನಿಗೆ ಅಕೀರ್ತಿಯ ಜೋಡಾಗುವದೆಂದರೆ ಕೋಟಿಶಃ ಮೃತ್ಯುವಿನಂತೆ ಅತ್ಯಂತ ದುಃಖಕರವಾಗಿರುವದು. ಸುಮಂತಾ, ನಿಮ್ಮ ಮುಂದೆ ನಾನು ಹೆಚ್ಚಿಗೆ ಏನುಹೇಳುವದು? ನಿಮಗೆ ಪ್ರತ್ಯುತ್ತರವನ್ನು ಕೊಟ್ಟು ನಾನು ಪಾಪಕ್ಕೆ ಪಾಲುಗಾರನಾಗಬೇಕಾದೀತು. ಆದ್ದರಿಂದ ನನಗೆ ತಂದೆಯ ಸಮಾನರಾದ ನೀವು ಈ ಸಂಗತಿಯನ್ನು ಮಹಾರಾಜರಿಗೆ ನನ್ನ ವತಿಯಿಂದ ದಂಡಪ್ರಣಾಮಪೂರ್ವಕವಾಗಿ ತಿಳಿಸಿ, ನನ್ನ ಚಿಂತೆಯನ್ನು ಮಾಡಬಾರದೆಂದು ನಿವೇದಿಸಿ, ಅವರಿಗೆ ಸಮಾಧಾನವಾಗುವಂತೆ ನಡೆದು ಕೊಳ್ಳಬೇಕು. ಎಂದು ಹೇಳಿದನು. ಈ ರಾಮ ಸುಮಂತರಸಂವಾದವನ್ನು ಕೇಳಿ ಗುಹನೂ, ಅವನ ಪರಿವಾರದವರೂ ದುಃಖಿತ ರಾದರು. ಆಗ ಲಕ್ಷ್ಮಣನು ಕೆಲವು ಬಿರಸು ಮಾತುಗಳನ್ನು ಆಡಿದನು. ಆಗ ಶ್ರೀ ರಾಮನು ಆತನನ್ನು ನಿಷೇಧಿಸಿ, ಅವನ್ನು ತಂದೆಯ ಮುಂದೆ ಹೇಳಬಾರದೆಂದು ತನ್ನ ಆಣೆಯಿಟ್ಟು ಸುಮಂತನಿಗೆ ಹೇಳಿದನು. ಬಳಿಕ ಸುಮಂತನು "ಸೀತೆಯನ್ನಾದರೂ ಕಳಿಸಿಕೊಟ್ಟರೆ ನಾನು ಪ್ರಾಣಧಾರಣಮಾಡುವೆನೆಂದು" ದಶರಥನು ಹೇಳಿದ್ದನ್ನು ಶ್ರೀ ರಾಮನಿಗೆ ನೀವೇದಿಸಿ

ಧನು: ಆಗ ಪ್ರಭುವು ಅಯೋಧ್ಯೆಗೆ ಹೋಗುವದಕ್ಕಾಗಿ ಸೀತೆಯನ್ನು ಬೋಧಿಸಿದ್ದೆಲ್ಲ ವ್ಯರ್ಥವಾಯಿತು. ಸೀತೆಯು ಸುಮಂತನನ್ನು ಕುರಿತು ಮಧುರಶಬ್ದಗಳಿಂದ—“ಮಹಾರಾಜರೇ, ನೀವಾದರೂ ನನ್ನ ತಂದೆಯಂತೆಯೂ ಮಾವಂದಿರಂತೆಯೂ ಹಿತಚಿಂತಕರಾಗಿರುವಿರಿ; ಅಂದಬಳಿಕ ನಿಮಗೆ ನಾನು ಪ್ರತ್ಯುತ್ತರ ಕೊಡುವದು ದೊಡ್ಡ ಅಮರ್ಯಾದೆಯೇ ಸರಿ. ನಾನು ತವರಮನೆಯ ಹಾಗು ಅತ್ತೆಯಮನೆಯ ಅತುಲ ವೈಭವವನ್ನೂ ಸಂಪತ್ತನ್ನೂ, ಗೌರವವನ್ನೂ ಅರಿತಿರುವೆನು; ಆದರೆ ರಘುಪತಿಯ ಪದಕಮಲದ ಹೊರತಾಗಿ ನನಗೆ ಯಾತರಿಂದಲೂ ಸುಖವಾಗುವದಿಲ್ಲ. ನನ್ನ ವಿಷಯವಾಗಿ ಚಿಂತಿಸಬಾರದೆಂದು ಅತ್ತೆಮಾವಂದಿರಿಗೆ ಕಾಲುಬಿದ್ದು ಬೇಡಿ ಕೊಳ್ಳುವದಾಗಬೇಕು.” ಎಂದು ಹೇಳಿದಳು. ಆಗ ಸುಮಂತನು, ರಾಮನ ಅಜ್ಞೆಯು ಮೀರತಕ್ಕದ್ದಲ್ಲವೆಂಬದನ್ನೂ, ಕರ್ಮದಗತಿಯು ನಿವಾರಿಸ ತಕ್ಕದ್ದಲ್ಲವೆಂಬದನ್ನೂ ಅರಿತು ಗತಿಕಾಣದೆ ಸೀತಾರಾಮ—ಲಕ್ಷ್ಮಣರ ಚರಣಕ್ಕೆರಗಿ ಬಂಡವಲವನ್ನು ಕಳಕೊಂಡ ವ್ಯಾಪಾರಸ್ಥನಂತೆ ಅಯೋಧ್ಯೆಗೆ ಹೊರಡಲು ಸಿದ್ಧನಾದನು; ಆದರೆ ರಥದಕುದುರೆಗಳೂ ಕೂಡ ರಾಮನನ್ನು ದಿಟ್ಟಿಸಿನೋಡಿ ಹೇಕರಿಸುತ್ತ ಮುಂದಕ್ಕೆ ಹೆಜ್ಜೆಯಿಡದಾಗಲು, ರಾಮನು ಒತ್ತಾಯದಿಂದ ಸುಮಂತನನ್ನು ಅಯೋಧ್ಯೆಗೆ ಕಳಿಸಿದನು.

ಗಂಗಾವತರಣ—ಬಳಿಕ ಶ್ರೀರಾಮನು ಗಂಗೆಯನ್ನು ದಾಟುವದಕ್ಕಾಗಿ ನಾವು ತರಬೇಕೆಂದು ಗುಹನಿಗೆ ಹೇಳಲು, ಆತನು—ಪ್ರಭುವೇ, ನಾನು ನಿನ್ನ ಮರ್ಮವನ್ನು ಅರಿತಿರುವೆನು. ನಿನ್ನ ಪಾದ ಧೂಳಿಯಲ್ಲಿ ಕಲ್ಲು ಹೆಣ್ಣು ಮಾಡುವದೊಂದು ವಿಲಕ್ಷಣ ಸಾಮರ್ಥ್ಯವಿರುತ್ತದೆಂಬದಕ್ಕೆ ಜಗತ್ತೇ ಸಾಕ್ಷಿಯಾಗಿರುವದು. ಆ ಧೂಳಿಯು ತಗಲುತ್ತಲೆ ಶಿಲೆಯೊಳಗಿಂದ ಸುಂದರ ಸ್ತ್ರೀಯು ಪ್ರಕಟವಾದಳು. ಕಲ್ಲಿಗಿಂತಲೂ ಕಟಿಗೆಯು ಬಿರಸು ಅಲ್ಲವೇ ಅಲ್ಲ; ಅಂದಬಳಿಕ ಈ ನಾವೂ ಮುನಿಪತ್ನಿಯಾದರೆ ನನ್ನ ಹೊಟ್ಟೆಯ ಗತಿಯೇನು? ಈ ನಾವಿನ ನಂಬಿಗೆಯಿಂದಲೇ ನಾನು ಪ್ರಪಂಚದ ಪಾಲನಪೋಷಣಗಳನ್ನು ಮಾಡುತ್ತಿರುವೆನು. ಬೇರೆ ಯಾವ ಉದ್ಯೋಗಗಳನ್ನೂ ನಾನು ಅರಿಯೆನು. ಆಚೆಯ ದಂಡೆಗೆ ಹೋಗುವದೇ ಅಗತ್ಯವಾಗಿದ್ದರೆ, ಪ್ರಭುಗಳು ತಮ್ಮ ಚರಣಕಮಲಗಳನ್ನು ತೊಳೆಯಲು ನನ್ನನ್ನು ಆಜ್ಞಾಪಿಸಬೇಕು. ಪದಕಮಲಗಳನ್ನು ತೊಳೆದೇ ನಾವೆಯನ್ನು ಹತ್ತಿಸುವೆನು. ಎಲೈ ನಾಥನೇ, ನನಗೆ ಕೂಲಿಯ ಅವಶ್ಯಕತೆಯಿರುವದಿಲ್ಲೆಂಬದನ್ನು ರಾಮಪ್ರಭುವಿನ, ಹಾಗು ದಶರಥಮಹಾರಾಜರ ಆಣೆಮಾಡಿ ಸತ್ಯವಾಗಿ ಹೇಳುವೆನು. ಬೇಕಾದರೆ ಲಕ್ಷ್ಮಣನು ಬಾಣದಿಂದ ನನ್ನ ಜೀವತಕ್ಕೊಂಡರೂ ಬಾಧೆಯಿಲ್ಲ; ಆದರೆ ನಾನು ಕಾಲುತೊಳೆಯದೆ ಮಾತ್ರ ದಯಾಘನಪ್ರಭುವಾದ ನಿನ್ನನ್ನು ಆಚೆಯ ದಂಡೆಗೆ ಮುಟ್ಟಿಸುವದೇ ಇಲ್ಲವು!” ಎಂದು ಸ್ಪಷ್ಟವಾಗಿಹೇಳಿದನು. ಪ್ರೇಮದ ಪುಟಕೊಟ್ಟಿರುವ ಗುಹನ ಈ ಅಟ್ಪಟಿಯ ಮಾತುಗಳನ್ನು ಕೇಳಿ ಕರುಣಾನಿಧಿಯು ನಗುತ್ತ

ಸೀತಾ ಲಕ್ಷ್ಮಣರ ಕಡೆಗೆ ನೋಡುತ್ತ ಗುಹನನ್ನು ಕುರಿತು—ಗುಹಾ, ನಿನ್ನ ನಾವು ನಿನ್ನ ಕೈ ಬಿಟ್ಟು ಹೋಗದಂತೆಯೇ ಮಾಡು. ಬೇಗನೆ ನೀರು ತಂದು ಕಾಲು ತೊಳೆ! ಆಚೆಯ ದಂಡೆಗೆ ಹೋಗಲಿಕ್ಕೆ ತಡವಾಗುವದು. ಎಂದು ಪ್ರಭುವು ಅನುಗ್ರಹಿಸಿದನು! ರಾಮಾಜ್ಞೆಯಾದ ಕೂಡಲೆ ಗುಹನು ಕಟ್ಟಿಗೆಯ ಗುಂಡಿಯಲ್ಲಿ ನೀರು ತುಂಬಿ ತಂದು ಪ್ರೇಮಾನಂದಗಳ ಭರದಲ್ಲಿ ಪ್ರಭುವಿನ ಚರಣಕಮಲಗಳನ್ನು ತೊಳೆಯಹತ್ತಿದನು. ಆಗ ದೇವತೆಗಳು ಪುಷ್ಪವೃಷ್ಟಿಗರೆದು, ಇವನಂಥ ಪುಣ್ಯಶಾಲಿಗಳಿಲ್ಲವೆಂದು ಗುಹನನ್ನು ಶ್ಲಾಘಿಸತೊಡಗಿದರು. ಗುಹನು ಪಾದ ಪ್ರಕ್ಷಾಲನಾನಂತರ ಪರಿವಾರದೊಡನೆ ತೀರ್ಥಗ್ರಹಣ ಮಾಡಿ ಪಿತೃಗಳನ್ನು ಉದ್ಧರಿಸಿದಮೇಲೆ ಪ್ರಭುವನ್ನು ಆನಂದದಿಂದ ಆಚೆಯ ದಂಡೆಗೆ ಮುಟ್ಟಿಸಿದನು. ಸೀತಾ—ಲಕ್ಷ್ಮಣ, ಗುಹರೊಡನೆ ರಾಮನು ನಾವಿನಿಂದ ಇಳಿದು, ಭಾಗೀರಥಿಯ ಉಸುಬಿನಲ್ಲಿ ನಿಂತುಕೊಳ್ಳಲು, ಕೂಡಲೆ ಗುಹನು ಪ್ರಭುವಿಗೆ ದೀರ್ಘದಂಡ ನಮಸ್ಕಾರಮಾಡಿದನು. ಆಗ ಶ್ರೀ ರಾಮನು ಗುಹನಿಗೆ ಏನೂ ಕೊಡಲಾರದೆ ಸಂಕೋಚಪಡತೊಡಗಿದನು. ಆದನ್ನು ನೋಡಿ ಪತಿಯ ಹೃದ್ಗತವನ್ನರಿಯುವ ಸೀತೆಯು ಆನಂದದ ಮನಸ್ಸಿನಿಂದ ತನ್ನ ಬೆರಳೊಳಗಿನ ಉಂಗರವನ್ನು ತೆಗೆದಳು. ಆಗ ಶ್ರೀ ರಾಮನು ಅದನ್ನು ಗುಹನಿಗೆ ಕೊಡಹೋಗಲು, ಗುಹನು ಪ್ರಭುವಿನ ಚರಣಗಳನು ಹಿಡಿದು—ಪ್ರಭುವೇ, ನನಗೆ ಇಂದು ಏನು ದೊರೆತಿರುವದಿಲ್ಲ? ಎಲ್ಲವೂ ದೊರೆತಿರುತ್ತವೆ; ನನ್ನ ಪಾತಕ—ದುಃಖ—ದಾರಿದ್ರ್ಯರೂಪದಾವಾನಳದ ನಾಶವಾಯಿತು. ಹಲವು ದಿನಗಳಿಂದ ನಾನು ಈ ಉದ್ಯೋಗವನ್ನು ಮಾಡುತ್ತ ಬಂದಿದ್ದರೂ ಇಂದು ಮಾತ್ರ ನನಗೆ ದೇವನಾದ ನೀನು ಪುಷ್ಕಳವಾದ ಕೂಲಿಯನ್ನು ಕೊಟ್ಟೆ! ಎಲೈ ನಾಥನೇ, ಇನ್ನು ನನಗೆ ಯಾತರ ಇಚ್ಛೆಯೂ ಇರುವದಿಲ್ಲ. ಎಲೈ ದೀನದಯಾಲುವೇ, ನಿನ್ನ ಕೃಪೆಯೇ ಇದ್ದದ್ದಾದರೆ ನೀನು ತಿರುಗಿ ಬಂದಬಳಿಕ ನನಗೆ ಏನು ಕೊಟ್ಟರೂ ಪ್ರಸಾದವೆಂದು ಅದನ್ನು ಶಿರಸ್ಸಿನಲ್ಲಿ ಧಾರಣಮಾಡುವೆನು, ಎಂದು ಹೇಳಿದನು. ರಾಮ—ಲಕ್ಷ್ಮಣ—ಸೀತೆಯರು ಎಷ್ಟು ಆಗ್ರಹಮಾಡಿದರೂ ಗುಹನು ಏನನ್ನೂ ತೆಗೆದುಕೊಳ್ಳಲಿಲ್ಲ. ಆಗ ಶ್ರೀ ರಾಮನು ಆತನಿಗೆ ವಿಶುದ್ಧಭಕ್ತಿಯ ವರವನ್ನಿತ್ತು ಅಪ್ಪಣೆಕೊಟ್ಟನು.

ಬಳಿಕ ಶ್ರೀ ರಾಮನು ಪಾರ್ಥಿವಪೂಜೆಮಾಡಿ ನಮಸ್ಕರಿಸಿದನು. ಸೀತೆಯು ಗಂಗೆಯನ್ನು ಕುರಿತು—ತಾಯಿ, ನನ್ನ ಇಚ್ಛೆಯನ್ನು ಪೂರ್ಣಮಾಡಬೇಕು. ನಾನು ಪತಿಮೈದುನರೊಡನೆ ಸುರಕ್ಷಿತ ತಿರುಗಿ ಬಂದಬಳಿಕ ನಿನ್ನನ್ನು ಪೂಜಿಸುವೆನು, ಎಂದು ಪ್ರಾರ್ಥಿಸಿದಳು. ಸೀತೆಯ ಈ ಪ್ರೇಮರಸವಿಶಿಷ್ಟವಾದ ಪ್ರಾರ್ಥನೆಯನ್ನು ಕೇಳಿದ ಬಳಿಕ ನಿರ್ಮಲ ಗಂಗಾಜಲದಿಂದ ಗಂಭೀರಧ್ವನಿಯು ಉತ್ಪನ್ನವಾಯಿತು—"ಹೇ ರಘುವೀರವಲ್ಲಭೇ, ವೈದೇಹೀ, ನಿನ್ನ ಪ್ರಭಾವವು ಜಗತ್ತಿನಲ್ಲಿ ಯಾರಿಗೆ ಗೊತ್ತಿಲ್ಲವದಿಲ್ಲ? ನಿನ್ನ ದರ್ಶನಮಾತ್ರದಿಂದ ಲೋಕಪಾಲತ್ವವು ಪ್ರಾಪ್ತವಾಗುವದು. ನಿನ್ನ ಸೇವಕರು

ಸುಮಂಗಲೆಯಂತು ಯಾವತ್ತು ಸಿದ್ಧಿಗಳು ಕೈಸೇರಿಡಿಸಿ ನಿಂತುಕೊಂಡಿರುವವು. ಇಂಥ ನೀನು ನನ್ನಮುಂದೆ ಇಷ್ಟು ಲೀನತೆಯನ್ನು ತೋರಿಸುವದರಿಂದ ನೀನು ನನ್ನನ್ನು ಅನುಗ್ರಹಿಸಿದೆಯೆಂದು ನಾನು ತಿಳಿಯುವೆನು. ಆದರೂ ಎಲೌ ತಾಯಿಯೇ. ನಾನು ನನ್ನ ವಾಗ್ದೇವತೆಯನ್ನು ಸಫಲಗೊಳಿಸುವದಕ್ಕಾಗಿ ನಿನ್ನನ್ನು ಆಶೀರ್ವಾದಿಸುವೆನೇನಂದರೆ—“ನೀನು ಗಂಡ-ಮೈದುನರೊಡನೆ ಸುರಕ್ಷಿತಳಾಗಿ ಅಯೋಧ್ಯೆಗೆ ಬರುವೆ ನಿನ್ನ ಯಾವತ್ತು ಮನಃಕಾಮನೆಗಳು ಪೂರ್ಣವಾಗುವವು. ನಿನ್ನ ಸೌಭಾಗ್ಯವು ಬ್ರಹ್ಮಾಂಡಗೋಲವನ್ನು ಆಕ್ರಮಿಸುವದು” ಮಂಗಲಕರವಾದ ಈ ಗಂಗಾವಚನವನ್ನು ಕೇಳಿ ತನಗೆ ಗಂಗೆಯು ಅನುಕೂಲಳಾಗಿರುವಳೆಂದು ತಿಳಿದು ಸೀತೆಗೆ ಆಲ್ಹಾದವಾಯಿತು. ಬಳಿಕ ಪ್ರಭುವು ಗುಹನಿಗೆಹೋಗಲು ಆಜ್ಞಾಪಿಸಲು, ಆ ಭಕ್ತಶಿರೋಮಣಿಗೆ ಬಹಳ ವ್ಯಸನವಾಯಿತು-ಆತನು ಶ್ರೀ ರಾಮನನ್ನು ಕುರಿತು—ಪ್ರಭೋ. ನನ್ನ ವಿನಂತಿಯನ್ನು ಕೇಳಿಕೊಳ್ಳಬೇಕು. ನಾನು ಪ್ರಭುವಿನ ಸಮಾಗಮದಲ್ಲಿ ಹಾದಿಯನ್ನು ತೋರಿಸುತ್ತ ಬಂದು, ನಾಲ್ಕುದಿನ ಚರಣಸೇವೆ ಮಾಡುವೆನು. ರಘುರಾಯನು ವಾಸಮಾಡಲಿಚ್ಛಿಸುವ ವನದಲ್ಲಿ ನಾನು ಒಳ್ಳೇ ಅನುಕೂಲತೆಯುಳ್ಳ ಪರ್ಣಕುಟಿಯನ್ನು ಹಾಕುವೆನು! ಆ ಮೇಲೆ ಪ್ರಭುಚರಣ ಸಾಕ್ಷಿಯು. ತಮ್ಮ ಅಪ್ಪಣೆಯಾದಂತೆ ನಡೆದುಕೊಳ್ಳುವೆನು! ಎಂದು ಹೇಳಿದನು. ಆತನ ಶುದ್ಧವೂ, ಸರಳವೂ ಆದ ಭಾವವನ್ನು ನೋಡಿ ರಾಮನು ಗುಹನನ್ನು ಸಂಗಡ ಕರೆದುಕೊಳ್ಳಲು, ಆ ಭಾವಿಕ ಶ್ರೇಷ್ಠನಿಗೆ ಪರಮಾನಂದವಾಯಿತು. ಬಳಿಕ ಶ್ರೀ ರಾಮನು ಗಣಪತಿ-ಶಂಕರರನ್ನು ಸ್ಮರಿಸಿ ಗಂಗೆಯನ್ನು ನಮಸ್ಕರಿಸಿ ಸೀತಾ-ಲಕ್ಷ್ಮಣ-ಗುಹರೊಡನೆ ಪ್ರಯಾಗಕ್ಷೇತ್ರಕ್ಕೆ ಬಂದನು.

ಶ್ರೀ ರಾಮನ ವನಸಂಚಾರ--ತೀರ್ಥರಾಜನೆನಿಸುವ ಪ್ರಯಾಗದ ಮಹಿಮೆಯನ್ನು ಶ್ರೀ ರಾಮನು ಶ್ರೀ ಮುಖದಿಂದ ಸೀತಾಲಕ್ಷ್ಮಣ ಗುಹರಿಗೆ ಹೇಳಿ ತ್ರಿವೇಣೀ ಸಂಗಮದಲ್ಲಿ ಆನಂದದಿಂದ ಸ್ನಾನವನ್ನೂ, ಲಿಂಗಾರ್ಚನವನ್ನೂ ಮಾಡಿ ತೀರ್ಥದೇವತೆಯನ್ನು ಯಥಾವಿಧಿ ಪೂಜಿಸಿದನು. ಆ ಮೇಲೆ ಪ್ರಭುವು ಭರದ್ವಾಜಾಶ್ರಮಕ್ಕೆ ಬಂದು ಆ ಋಷಿಶ್ರೇಷ್ಠನಿಗೆ ಸಾಷ್ಟಾಂಗನಮಸ್ಕಾರಮಾಡಲು, ಆತನು ರಾಮನನ್ನು ಅಪ್ಪಿಕೊಂಡು ಬ್ರಹ್ಮಾನಂದದ ರಾಶಿಯೇ ಕೈಸೇರಿದಂತೆ ಆನಂದಪಟ್ಟು, ಶ್ರೀ ರಾಮನನ್ನು ಆಶೀರ್ವದಿಸಿದನು. ಮುನಿಯು ರಾಮನಿಗೆ ಕುಶಲಪ್ರಶ್ನಮಾಡಿ ಆಸನವನ್ನಿತ್ತು, ಆತನನ್ನು ಪ್ರೇಮದಿಂದ ಪೂಜಿಸಿ ಸಂತೋಷಪಡಿಸಿದನು. ಆ ಮುನಿಶ್ರೇಷ್ಠನು ಕೊಟ್ಟ ಸ್ವಾದಿಷ್ಟವಾದ ಕಂದ-ಮೂಲ-ಫಲಗಳನ್ನು ಸೀತಾ-ಲಕ್ಷ್ಮಣ-ಗುಹರೊಡನೆ ಶ್ರೀರಾಮನು ಆಸ್ಥೆಯಿಂದ ಭಕ್ಷಣಮಾಡಿದನು. ಹೀಗೆ ರಾಮಚಂದ್ರನು ತೃಪ್ತನೂ, ಶ್ರಮರಹಿತನೂ ಆಗಲು, ಭರದ್ವಾಜನು ಮೃದುನುಡಿಗಳಿಂದ— ರಾಮಾ, ಈ ವರೆಗೆ ನಾವು ಮಾಡಿದ ಯಾವತ್ತೂ ತಪಸ್ಸುಗಳು, ತೀರ್ಥಾಟನಗಳು, ದಾನಗಳು ಫಲಿಸಿದವು. ಜಪ-ಯೋಗ-ವೈರಾಗ್ಯಾದಿ

ನಿಮ್ಮ ದರ್ಶನದಿಂದ ನಮ್ಮ ಶುಭಾಚಾರದ ಸಾಮಗ್ರಿಗಳೆಲ್ಲ ಕೃತಾರ್ಥವಾಗಿ ನಮ್ಮ ಆಕಾಂಕ್ಷೆಗಳೆಲ್ಲ ಪೂರ್ಣವಾದವು. ಇನ್ನು, ನನ್ನ ಹೃದಯದಲ್ಲಿ ನಿನ್ನ ಪದಕಮಲದ ವಿಷಯದ ಅಹೇತುಕ ಭಕ್ತಿಯು ಉತ್ಪನ್ನವಾಗುವಂತೆ ವರವನ್ನು ಕೊಡು. ತ್ರಿಕರಣಪೂರ್ವಕವಾಗಿ ಕಪಟವನ್ನು ತ್ಯಜಿಸಿ ಪ್ರಾಣಿಗಳು ನಿನ್ನ ಸೇವಕರಾಗುವವರೆಗೆ, ಕೋಟ್ಯವಧಿ ಸಾಧನ ಗಳನ್ನು ಮಾಡಿದರೂ ಅವಕ್ಕೆ ಸುಖವು ಸ್ವಪ್ನದಲ್ಲಿಯೂ ದೊರೆಯಲಾರದು, ಎಂದು ನುಡಿ ಯಲು, ರಾಮನು ಸಂಕೋಚಪಟ್ಟನು. ಆದರೆ ಭರದ್ವಾಜನ ಭಾವ-ಭಕ್ತಿ-ಆನಂದ ಗಳನ್ನು ನೋಡಿ ಆತನಿಗೆ ಸಂತೋಷವಾಯಿತು. ಬಳಿಕ ರಾಮನು ಮುನಿಯ ಉಜ್ವಲ ಯಶಸ್ಸನ್ನು ಹಲವು ವಿಧವಾಗಿ ಹೊಗಳಿ, ಅದನ್ನು ಎಲ್ಲರಿಗೂ ಶ್ರವಣಮಾಡಿಸಿ ಮುನಿ ಯನ್ನು ಕುರಿತು— "ಮುನೀಶ್ವರರು ತಾವು ಯಾರನ್ನು ಗೌರವಿಸುವಿರೋ ಅವರೇ ಶ್ರೇಷ್ಠರು, ಅವರೇ ಗುಣಸಮುಚ್ಚಯದ ಭಾಂಡಾರವು ಎಂದು ತಿಳಿಯಬೇಕು." ಎಂದು ನುಡಿದನು. ಹೀಗೆ ಮುನಿಯೂ, ರಾಮನೂ ಪರಸ್ಪರರನ್ನು ಆದರಿಸಿ ಅನಿರ್ವಾ ಚ್ಯವಾದ ಸುಖವನ್ನು ಭೋಗಿಸಹತ್ತಿದರು. ಪ್ರಯಾಗವಾಸಿಗಳಾದ ಬ್ರಹ್ಮಚಾ ರಿಗಳು, ತಪಸ್ವಿಗಳು, ಮುನಿಗಳು, ಸಿದ್ಧರು, ಸನ್ಯಾಸಿಗಳು ಇವರೆಲ್ಲರು ರಾಮನು ಬಂದ ಸುದ್ದಿಯನ್ನು ಕೇಳಿದ ಕೂಡಲೆ ಆ ಮನೋಹರ ದಶರಥ ಪುತ್ರನ ದರ್ಶನಾರ್ಥ ವಾಗಿ ಭರದ್ವಾಜಾಶ್ರಮಕ್ಕೆ ಬಂದರು. ರಾಮನು ಎಲ್ಲರಿಗೂ ನಮಸ್ಕಾರ ಮಾಡಿದನು. ನೇತ್ರಗಳ ಸಾಫಲ್ಯವಾಯಿತೆಂದು ಎಲ್ಲರೂ ಆನಂದಪಟ್ಟು ಪರಮಸಂತುಷ್ಟರಾಗಿ ಆಶೀ ರ್ವದಿಸುತ್ತ, ಅವರ ಸೌಂದರ್ಯವನ್ನು ವರ್ಣಿಸುತ್ತ, ತಿರುಗಿಹೋಗಹತ್ತಿದರು. ಅಂದು ಭರದ್ವಾಜಾಶ್ರಮದಲ್ಲಿದ್ದು ಮರುದಿನ ಪ್ರಯಾಗಸ್ನಾನಮಾಡಿ, ಭರದ್ವಾಜರು ಅಗಾಧ ಪುಣ್ಯಶಾಲಿಗಳಾದ ನಾಲ್ಕುಜನ ಶಿಷ್ಯರನ್ನು ಹಾದಿಯತೋರಿಸುವದಕ್ಕಾಗಿ ಸಂಗಡಕಳಿ ಸಲು, ಶ್ರೀರಾಮನು ಸೀತಾ-ಲಕ್ಷ್ಮಣ-ಗುಹರೊಡನೆ ಮುಂದಕ್ಕೆ ಸಾಗಿದನು.

ಶ್ರೀರಾಮನು ಪರಿವಾರದೊಡನೆ ಮಾರ್ಗವನ್ನು ಕ್ರಮಿಸಿ ಯಮುನಾತೀರಕ್ಕೆಹೋಗಿ ಭರದ್ವಾಜಶಿಷ್ಯರನ್ನೂ, ಗುಹನನ್ನೂ ತಿರುಗಿ ಕಳಿಸಿ, ಯಮುನೆಯಲ್ಲಿ ಸ್ನಾನಮಾಡಿ ಮುಂದಕ್ಕೆ ಸಾಗಿದನು. ರಾಮನು ಮಾರ್ಗವನ್ನು ಕ್ರಮಿಸುವಾಗ ಅಲ್ಲಲ್ಲಿಯಜನರು ಅವ ರನ್ನು ನೋಡಿ ಧನ್ಯರಾಗುತ್ತ, ಅವರನ್ನು ಅಗಲಿ ಹೋಗಲಾರದೆ ಮಿಡುಕುತ್ತಲಿದ್ದರು. ಅವನು ಮಾರ್ಗಕ್ರಮಣ ಮಾಡುತ್ತಿರುವಾಗ ಕೆಲಜನರು ಗಿಡಗಳನೆರಳಲ್ಲಿ ಮೃದುಗಳಾದ ಕುಶಾಸನಗಳನ್ನು ರಚಿಸಿ ವಿಶ್ರಮಿಸಬೇಕೆಂದು ಪ್ರಾರ್ಥಿಸುತ್ತಿದ್ದರು; ಕೆಲವರು ಶೀತಲ ಮಧುರ ಜಲವನ್ನು ಕಲಶದಲ್ಲಿ ತುಂಬಿಕೊಂಡು ರಾಮನಿಗೆ ಆಚಮನಮಾಡಬೇಕೆಂದು ಬೇಡಿಕೊಳ್ಳುತ್ತಿದ್ದರು. ಕೆಲವರು, ಘೋರಾರಣ್ಯದಲ್ಲಿ ಈ ಲೋಕಮಾತೆಯೊಡನೆ ಮಾರ್ಗಕ್ರಮಿಸುವದು ಬಹು ಕಷ್ಟವೆಂದು ಹೇಳಿ, ಹಾದಿಯ ತೋರಿಸುವ ಇಚ್ಛೆಯನ್ನು ಪ್ರಕಟಮಾಡುತ್ತಿದ್ದರು. ರಾಮನು ಅವರೆಲ್ಲರ ಆದರಸತ್ಕಾರಗಳನ್ನು ಸ್ವೀಕರಿಸಿ, ಪ್ರೇಮದ

ಮೃದುನುಡಿಗಳಿಂದ ಅವರನ್ನು ಉಪಚರಿಸುತ್ತ ಮುಂದಕ್ಕೆ ಸಾಗುತ್ತಲಿದ್ದನು. ಜನರು ಸೀತಾರಾಮರನ್ನೂ, ಲಕ್ಷ್ಮಣನನ್ನೂ ಅಗಲಲಾರದೆ, ಅವರ ಕಷ್ಟಮಯಸ್ಥಿತಿಯನ್ನು ನೋಡಿ ಮರಗುತ್ತ ತಮ್ಮತಮ್ಮೊಳಗೆ—"ಬ್ರಹ್ಮನ ಯಾವತ್ತು ಆಟವು ವಿಪರೀತವಾಗಿಯೇ ಇರುತ್ತದೆ. ಆತನು ಅತ್ಯಂತ ದುಷ್ಟನೂ, ನಿರಂಕುಶನೂ, ನಿಷ್ಠುರನೂ, ನಿಶ್ಶಂಕನೂ ಆಗಿರುವನು. ಚಂದ್ರನನ್ನು ಕ್ಷಯರೋಗಿಯಾಗಮಾಡಿದ, ಕಲ್ಪವೃಕ್ಷವನ್ನು ಛಾಯಾರಹಿತವಾಗಿ ಮಾಡಿದ, ಸಮುದ್ರವನ್ನು ಉಪ್ಪಾಗಿಮಾಡಿದ ಆ ಬ್ರಹ್ಮನೇ ಇವರನ್ನು ಅಡವಡವಿತಿರುಗಿಸುವನು. ಇಂಥವರಿಗೆ ಆತನು ವನವಾಸವನ್ನು ಕೊಟ್ಟಬಳಿಕ ಭೋಗವಿಲಾಸಗಳನ್ನು ಆತನು ವ್ಯರ್ಥ ಉಂಟುಮಾಡಿದನೆಂದು ಹೇಳಬೇಕಾಗುವದು. ವನವಾಸದಲ್ಲಿ ಈ ಸುಂದರ ತನುಗಳು ಬರಿಗಾಲಿಲಿ ನಡೆದು, ಕುಶಶಯ್ಯೆಯಲ್ಲಿ ಮಲಗಿ, ಗಿಡದನೆಳಲಲ್ಲಿದ್ದು ಕಷ್ಟಪಡುತ್ತಿರುವಾಗ, ಆ ಬ್ರಹ್ಮನು ಬಗೆಬಗೆಯ ವಾಹನಗಳನ್ನೂ, ಸುಂದರವಾದ ಹಾಸಿಗೆಗಳನ್ನೂ, ಸ್ಫಟಿಕದ ಮಂದಿರಗಳನ್ನೂ ಯಾಕೆ ಮಾಡಿದನೋ ತಿಳಿಯದು," ಎಂದು ಮಾತಾಡುತ್ತಲಿದ್ದರು. ಕೆಲವರು—"ಈ ಸುಂದರಸ್ವರೂಪಿಗಳನ್ನು ಬ್ರಹ್ಮನು ನಿರ್ಮಿಸಿರುವದೇ ಇಲ್ಲ; ಇವರು ಸ್ವಚ್ಛಂದದಿಂದ ಅವತರಿಸಿರುವರು. ಬ್ರಹ್ಮಸೃಷ್ಟಿಯಲ್ಲಿ ಎಲ್ಲಿ ಹುಡುಕಿದರೂ ಇಂಥ ಸುಂದರ ಸ್ತ್ರೀ-ಪುರುಷರು ದೊರೆಯುವದೇ ಅಶಕ್ಯವು. ಇವರನ್ನು ನೋಡಿ ಬ್ರಹ್ಮದೇವನು ತಲ್ಲೀನನಾಗಿ ಇವರಂತಹ ಮೂರ್ತಿಗಳನ್ನು ರಚಿಸಬೇಕೆಂದು ಬಹು ಶ್ರಮಬಟ್ಟನು; ಆದರೆ ಸಾಧಿಸದ್ದರಿಂದ ಈರ್ಷೆಯುಂಟಾಗಲು, ಆತನು ವನದಲ್ಲಿ ಇವರನ್ನು ಬಚ್ಚಿಟ್ಟಿರುವನು;" ಎಂದು ಮಾತಾಡಿಕೊಳ್ಳುತ್ತಿದ್ದರು. ಹೀಗೆ ಜನರು ಮಾತಾಡುತ್ತಿರಲು, ರಾಮಚಂದ್ರನು ಎಲ್ಲಕ್ಕೂ ಮುಂದೆ, ಲಕ್ಷ್ಮಣನು ಎಲ್ಲಕ್ಕೂ ಹಿಂದೆ, ಸೀತೆಯು ಅವರಿಬ್ಬರ ನಡುವೆ ಹೀಗೆ ಹೋಗುತ್ತಿರುವಾಗ, ಬ್ರಹ್ಮ-ಜೀವರ ಮಧ್ಯದಲ್ಲಿ ಮಾಯೆಯು ಇರುವಂತೆ, ಅಥವಾ ಚಂದ್ರ-ಬುಧರ ಮಧ್ಯದಲ್ಲಿ ರೋಹಿಣಿಯು ಶೋಭಿಸುತ್ತಿರುವಂತೆ ಅವರು ಶೋಭಿಸುತ್ತಿದ್ದರು. ಪ್ರಭುವು ಮಾರ್ಗವನ್ನು ಕ್ರಮಿಸುವಾಗ ಸೀತೆಯು ಶ್ರೀರಾಮನ ಹೆಜ್ಜೆಗಳನಡುವೆ ಜಪ್ಪಿಸಿ ಜಪ್ಪಿಸಿ ಹೆಜ್ಜೆಗಳನ್ನಿಟ್ಟು ನಡೆಯುತ್ತಿದ್ದಳು. ಲಕ್ಷ್ಮಣನು ಸೀತಾರಾಮರ ಚಿಹ್ನಗಳನ್ನು ತಪ್ಪಿಸಿ ಅವುಗಳ ಬಲಗಡೆಯಲ್ಲಿ ಹೆಜ್ಜೆಗಳನ್ನಿಡುತ್ತ ನಡೆಯುತ್ತಿದ್ದನು. ಸೀತೆಯು ದಣಿದದ್ದನ್ನು ನೋಡಿ ಶ್ರೀರಾಮನು ಹತ್ತರದ ಜಲಾಶಯದ ದಂಡೆಯ ವಟವೃಕ್ಷದ ಬುಡದಲ್ಲಿ ಇಳಿದು, ಕಂದಮೂಲಗಳ ಉಪಾಹಾರಮಾಡಿ, ಬೆಳಗಾದಕೂಡಲೆ ಸ್ನಾನಮಾಡಿ, ಪರಿವಾರದೊಡನೆ ಮುಂದಕ್ಕೆಸಾಗಿ ಸುರಮ್ಯವನಗಳನ್ನೂ, ಸರೋವರಗಳನ್ನೂ, ಪರ್ವತಗಳನ್ನೂ ನೋಡುತ್ತ ವಾಲ್ಮೀಕಿ ಆಶ್ರಮಕ್ಕೆ ಬಂದನು.

ಸುಂದರ ಗಿರಿಗಳು, ಕಾನನಗಳು, ಪವಿತ್ರ ಜಲಸಂಚಯಗಳು, ಕಮಲಪಂಕ್ತಿಗಳುಳ್ಳ ಸರೋವರಗಳು, ಪ್ರಫುಲ್ಲಿತವಾದ ವನವೃಕ್ಷಗಳು, ಮಂಜುಲ ಧ್ವನಿಮಾಡುವ

ಮಧುಮತ್ತ ಭ್ರಮರಗಳು, ವಿಪುಲ ಕೋಲಾಹಲ ಮಾಡುವ ವೈರರ ಹಿತವಾದ ಸ್ವಚ್ಛಂದದಿಂದ ಸಾನಂದ ಸಂಚಾರ ಮಾಡುವ ಪಶುಪಕ್ಷಿಗಳು ಇತ್ಯಾದಿಗಳಿಂದ ರಮಣೀಯವಾದ ಆ ಮುನಿಯ ಶುಚಿಭೂರ್ಷಿತವೂ ಸುರಮ್ಯವೂ, ಆದ ಆಶ್ರಮವನ್ನು ನೋಡಿ, ರಾಜೀವನಯನನಿಗೆ ಹರ್ಷವಾಯಿತು. ರಘುವರನು ಬಂದ ಸುದ್ದಿಯನ್ನು ಕೇಳಿ ಆತನನ್ನು ಎದುಗೊಂಡು ಕರತರುವದಕ್ಕಾಗಿ ವಾಲ್ಮೀಕಿಮುನಿಯು ಆತನಿಗೆ ಸಮ್ಮುಖವಾಗಿ ಹೋದನು. ರಾಮನು ಮುನಿಗೆ ದೀರ್ಘದಂಡ ನಮಸ್ಕಾರ ಮಾಡಲು, ಮುನಿಯು ಆತನನ್ನು ಆಶೀರ್ವದಿಸಿದನು. ರಾಮನನ್ನು ನೋಡಿ ಮುನಿಯ ನೇತ್ರಗಳು ಶಾಂತವಾದವು. ಆತನು ಆದರದಿಂದ ರಾಮನನ್ನು ಆಶ್ರಮದಲ್ಲಿ ಕರತಂದನು. ಪ್ರಾಣಪ್ರಿಯನಾದ ಅತಿಥಿಯು ಪ್ರಾಪ್ತನಾದ ಕೂಡಲೆ ಮುನಿವರನು ಮಧುರ ಕಂದ-ಮೂಲ-ಫಲಗಳನ್ನು ತರಿಸಿ, ಶ್ರೀರಾಮನಿಗೆ ಉಚಿತವಾದ ಆಸನವನ್ನು ಕೊಟ್ಟನು. ಆ ಮೇಲೆ ಸೀತಾರಾಮ ಲಕ್ಷ್ಮಣರು ಫಲಾಹಾರ ಮಾಡಿದರು. ಆ ಮಂಗಲ ಮೂರ್ತಿಗಳನ್ನು ನೋಡಿ ವಾಲ್ಮೀಕಿಯ ಮನಸ್ಸಿನಲ್ಲಿ ಆನಂದವು ಉಕ್ಕೇರಿತು. ಆಗ ಪ್ರಭುವು ಕರಕಮಲಗಳನ್ನು ಜೋಡಿಸಿ ಶ್ರವಣ ಮಧುರವಾಗುವಂತೆ ವಾಲ್ಮೀಕಿಯನ್ನು ಕುರಿತು—"ಮುನಿನಾಥರೇ, ನೀವು ತ್ರಿಕಾಲಜ್ಞಾನಿಗಳಿರುವಿರಿ. ಈ ವಿಶ್ವವು ತಮಗೆ ಅಂಗೈಯೊಳಗಿನ ಬೋರಿಯ ಹಣ್ಣಿನಂತೆ ಇರುತ್ತದೆ," ಎಂದುನುಡಿದು, ಕೈಕೇಯಿಯು ವನವಾಸಕ್ಕೆ ಕಳಿಸಿದ್ದನ್ನು ಸಾಂಗೋಪಾಂಗವಾಗಿ ತಿಳಿಸಿ— "ಮುನಿವರಾ, ತಂದೆಯ ಅಪ್ಪಣೆಯು, ಅದರಲ್ಲಿ ತಾಯಿಯ ಒಪ್ಪಿಗೆಯು, ಮೇಲೆ ಭರತನಂಥ ತಮ್ಮನಿಗೆ ರಾಜ್ಯಾಭಿಷೇಕವು! ಪ್ರಭೋ, ಇವೂ ಅಲ್ಲದೆ ನನಗೆ ತಮ್ಮ ದರ್ಶನಾಲಾಭವು!! ಇವೆಲ್ಲ ಸುಯೋಗಗಳೆಂದರೆ ನನ್ನ ಪೂರ್ವ ಪುಣ್ಯದ ಪ್ರಭಾವವೆಂತಲೇ ತಿಳಿಯಬೇಕು. ನಿಮ್ಮ ಚರಣದರ್ಶನದಿಂದ ಸರ್ವ ಸುಕೃತಗಳು ಫಲಿಸಿದವು. ಇನ್ನು ಮಹಾರಾಜರವರ ಅಪ್ಪಣೆಯಾದ ಸ್ಥಳದಲ್ಲಿ ನಾನು ಇರುವೆನು; ಆದರೆ ಆ ಸ್ಥಳವು ಯಾವ ತಪಸ್ವಿ ಮುನಿಗಳಿಗೂ ತೊಂದರೆ ಯಾಗುವಂತಹದಿರಬಾರದು; ಯಾಕಂದರೆ, ತಾಪಸಮುನಿಗಳಿಗೆ ತೊಂದರೆ ಕೊಡುವ ಅರಸರು ಅಗ್ನಿಯಿಲ್ಲದಿದ್ದರೂ ದಗ್ಧವಾಗಿ ಹೋಗುವರು. ಬ್ರಾಹ್ಮಣರ ಸಂತೋಷವು ಯಾವತ್ತು ಕಲ್ಯಾಣಗಳ ಜನಕವಾಗಿದ್ದು, ಅವರ ರೋಷವು ಕೋಟಿ ಕುಲಗಳ ದಾಹಕವಾಗಿರುವದು. ಇದನ್ನೆಲ್ಲ ವಿಚಾರಮಾಡಿ ಪ್ರಭುಗಳು ನನಗೊಂದು ಸ್ಥಳತೋರಿಸಿದರೆ, ಅಲ್ಲಿಗೆ ನಾವು ಮೂವರು ಹೋಗುವೆವು. ಮುನಿಶ್ರೇಷ್ಠರೇ, ಆ ಸ್ಥಾನದಲ್ಲಿ ಒಂದು ಸುಂದರ ಪರ್ಣ ಕುಟಿಯನ್ನು ರಚಿಸಿ ಅಲ್ಲಿ ಕೆಲಕಾಲವನ್ನು ಕಳೆಯುವೆವು.

ರಘುವರನ ಈ ಸಹಜ-ಸರಳ ಭಾಷಣವನ್ನುಕೇಳಿ ಜ್ಞಾನಿಗಳಾದ ವಾಲ್ಮೀಕಿ ಋಷಿಗಳು ಆತನ ಧನ್ಯವಾದಮಾಡಿ—"ಎಲೈ ರಘುಕುಲಕೇತುವೆ, ವೇದವೆಂಬ ಸೇತುವನ್ನು ಸದಾ ರಕ್ಷಿಸುವನೀನು ನನ್ನನ್ನು ಹೀಗೆಕೇಳದೆ ಹೇಗೆ ಇದ್ದೀರಾಮಾ, ನೀನು ಶ್ರುತಿಯೆಂಬ

ಸೇತುವನ್ನು ಪಕ್ಷಿಸುವವನಿದ್ದು, ಈ ಜಾನಕಿಯು, ದಯಾಘನ ಪ್ರಭುವಾದ ನಿನ್ನ ಮನೋಗತವನ್ನರಿತು ಜಗತ್ತಿನ ಉತ್ಪತ್ತಿ-ಪಾಲನ-ಸಂಹಾರಗಳನ್ನು ಮಾಡುವ ನಿನ್ನ ಮಾಯೆಯಾಗಿರುವಳು. ಸಹಸ್ರ ಫಣಗಳುಳ್ಳ ಶೇಷನೇ ವಿಶ್ವದ ಸ್ವಾಮಿಯಾದ ಲಕ್ಷ್ಮಣನಿರುವನು. ದೇವತೆಗಳ ಕಾರ್ಯಕ್ಕಾಗಿ ದುಷ್ಟರಾಕ್ಷಸರ ಸೈನ್ಯವನ್ನು ಸಂಹಾರ ಮಾಡಬೇಕೆಂದು ನೀವು ಮೂವರೂ ಶ್ರೇಷ್ಠ ಮಾನವದೇಹಗಳನ್ನು ಧರಿಸಿ ಹೊರಟಿರುವಿರಿ! ಶ್ರೀರಾಮನೇ, ನಿನ್ನ ಸ್ವರೂಪವು, ವಾಣಿಗೆ ನಿಲುಕದ್ದು, ಬುದ್ಧಿಗೆ ಹೋಗಾದದ್ದು, ದುರ್ಜ್ಞೇಯವೂ, ಅನಿರ್ವಾಚ್ಯವೂ, ಅಪರಂಪಾರವೂ, ನಿಗಮಾದಿಕಗಳಿಂದಲೂ "ನೇತಿ" "ನೇತಿ" ಎಂಬ ಶಬ್ದಗಳಿಂದ ಮಾತ್ರ ತೋರಿಸಲ್ಪಟ್ಟದ್ದೂ ಆಗಿರುವದು. ಜಗತ್ತು ಒಂದು ಆಟವಾಗಿದ್ದು, ನೀನು ಅದನ್ನು ನೋಡುವವನಾಗಿರುತ್ತೀ. ಬ್ರಹ್ಮ-ವಿಷ್ಣು-ಮಹೇಶರವರನ್ನು ಕೂಡ ಈ ಆಟದಲ್ಲಿ ನೀನು ಕುಣಿಸುತ್ತಿರುವೆ. ಆ ತ್ರಿಮೂರ್ತಿಗಳೇ ನಿನ್ನ ತತ್ವವನ್ನು ತಿಳಿಯಲು ಶಕ್ತರಿಲ್ಲದಿರುವಾಗ ಉಳಿದವರ ಪಾಡೇನು? ನೀನು ಯಾರಿಗೆ ತಿಳುವಳಿಕೆಯನ್ನು ಕೊಡುವೆಯೋ ಅವರೇ ನಿನ್ನನ್ನು ತಿಳಿದು, ಹಾಗೆಯೇ ಅವರು ನಿನ್ನನು ತಿಳಿಯುತ್ತ ತಿಳಿಯುತ್ತ ಕಡೆಗೆ ನಿನ್ನ ಸ್ವರೂಪಾಕಾರರಾಗಿ ಹೋಗುವರು. ಎಲೈ ಭಕ್ತಮಾನಸಚಂದನಾ, ರಘುನಂದನಾ, ನಿನ್ನ ಕೃಪೆಯಿಂದ ನಿನ್ನ ಭಕ್ತರು ಮಾತ್ರ ನಿನ್ನನ್ನು ತಿಳಿಯುವರು. ಅಧಿಕಾರಿಗಳಾದವರೇ ನಿನ್ನ ಚಿದಾನಂದಮಯ ನಿರ್ವಿಕಾರ ಸ್ವರೂಪವನ್ನು ಅರಿಯುವರು. ಸಂತರ ಹಾಗು ದೇವತೆಗಳ ಕೆಲಸಕ್ಕಾಗಿ ಈ ನರಾವತಾರವನ್ನು ಧರಿಸಿ ಪ್ರಾಕೃತರಾಜನಂತೆ ನೀನು ಭಾಷಣವನ್ನೂ, ವರ್ತನವನ್ನೂ ಮಾಡುವೆ. ಎಲೈ ರಾಮನೇ, ನಿನ್ನ ಈ ಲೀಲೆಯನ್ನು ನೋಡಿ ಜಡಜೀವರು ಮೋಹಿತರಾಗುವರು. ಆದರೆ ಜ್ಞಾನಿಗಳು ಮಾತ್ರ ಆನಂದದಿಂದ ತಲೆದೂಗುವರು. ನೀನು ಮಾತಾಡುವದೂ, ಮಾಡುವದೂ ಮಾತ್ರ ಸತ್ಯವಾದವುಗಳು. ಸೋಗು ಹಾಕಿದಂತೆ ಕುಣಿಯಲೇ ಬೇಕಾಗುವದು; ಆದರೆ ಪ್ರಭುವೇ, ಎಲ್ಲಿ ಇರಬೇಕೆಂದು ನೀನು ನನ್ನನ್ನು ಕೇಳುವೆಯಲ್ಲ, ಆದರೆ ನಾನು ನಿನಗೆ ಪ್ರಶ್ನಮಾಡಲು ಸಂಕೋಚಪಡುತ್ತಿದ್ದರೂ ನೀನು ಎಲ್ಲಿ ಇರುವದಿಲ್ಲವೆಂಬದನ್ನು ಮೊದಲು ನನಗೆ ತಿಳಿಸಿಕೊಡು; ಆ ಮೇಲೆ ನಾನು ನಿನಗೆ ಇರಲಿಕ್ಕೆ ಸ್ಥಳವನ್ನು ತೋರಿಸುತ್ತೇನೆ!

ಮುನಿಯ ಈ ಪ್ರೇಮಪುರಸ್ಸರ ಭಾಷಣವನ್ನು ಕೇಳಿ ರಾಮಚಂದ್ರನು ಸಂಕೋಚಪಟ್ಟು ಮನಸ್ಸಿನಲ್ಲಿಯೇ ನಕ್ಕನು. ವಾಲ್ಮೀಕಿಮುನಿಯೂ ನಕ್ಕು ಪುನಃ ತನ್ನ ಅಮೃತಪೂರ್ಣ ವಾಣಿಯಿಂದ ರಾಮನನ್ನು ಕುರಿತು—"ಎಲೈ ರಾಮನೇ, ಸೀತಾ-ಸೌಮಿತ್ರಿ ಸಹಿತವಾಗಿ ನಿನಗೆ ಇರಲಿಕ್ಕೆ ಇನ್ನು ನಾನು ಸ್ಥಳವನ್ನು ತೋರಿಸುತ್ತೇನೆ, ಲಕ್ಷಗೊಟ್ಟು ಕೇಳಬೇಕು- ಸಮುದ್ರಕ್ಕೆ ಸಮಾನವಾದ ಯಾರ ಶ್ರವಣ ಸಂಪುಟದಲ್ಲಿ ಅಪಾರವೂ, ಸುಭಗವೂ ಆದ ನಿನ್ನ ಕಥಾರೂಪಗಳಾದ ನದಿಗಳನ್ನು ಯಾವಾಗಲೂ ಸಂಗ್ರಹಿಸುತ್ತಿದ್ದರೂ, ಆ ಶ್ರವಣ

ಸಂಪುಟವು ಪೂರ್ಣವಾಗುವದಿಲ್ಲವೋ ಅಂಥವರ ಹೃದಯದಲ್ಲಿ ನೀನು ವಾಸಮಾಡಿಕೊಂಡಿರು. ನಿನ್ನ ದರ್ಶನವನ್ನಪೇಕ್ಷಿಸುವವರ ಸುಖದಾಯಕವಾದ ಹೃದಯದಲ್ಲಿಯೂ ನಿನ್ನ ಪ್ರಸನ್ನಗಾಯನದಲ್ಲಿಯೇ ಜಿಹ್ವೆಯನ್ನು ಉಪಯೋಗಿಸುವವರ ಹೃದಯದಲ್ಲಿಯೂ, ನೀನು ವಾಸಮಾಡು. "ರಾಮ" ಎಂಬ ಮಹಾಮಂತ್ರವನ್ನು ನಿತ್ಯ ಜಪಿಸುವವರ, ಅನೇಕ ವಿಧವ ಹವನಗಳನ್ನೂ, ಸಂತರ್ಪಣಗಳನ್ನೂ ಮಾಡುವವರ, ಬ್ರಾಹ್ಮಣಭೋಜನ ಮಾಡಿಸಿ ವಿಪ್ರರ ದಕ್ಷಿಣೆ ಕೊಡುವವರ, ಮನಃಪೂರ್ವಕವಾಗಿ ತಮಗಿಂತಲೂ ಗುರುವು ಶ್ರೇಷ್ಠನೆಂದು ತಿಳಿದು ಸರ್ವಭಾವಗಳಿಂದಲೂ ಆತನ ಆದರವನ್ನೂ, ಪೂಜನವನ್ನೂ ಮಾಡುವವರ, ಸರ್ವ ಕರ್ಮಗಳನ್ನು ಮಾಡಿ ರಾಮನಲ್ಲಿ ಭಕ್ತಿಯಿರಬೇಕೆಂಬದೊಂದೇ ಫಲವನ್ನಿಚ್ಛಿಸುವವರ ಹೃದಯದಲ್ಲಿ ಸೀತೆಯಿಂದ ಸಹಿತವಾಗಿ ನೀವಿಬ್ಬರೂ ರಘುನಂದನರು ವಾಸಮಾಡಿರಿ. ಎಲೈ ರಘುನಾಥನೇ, ಕಾಮ, ಕ್ರೋಧ, ಮದ, ಮಾನ, ಮೋಹ, ಲೋಭ ಕ್ಷೋಭ, ರಾಗ, ದ್ರೋಹ, ಕಪಟ, ದಂಭ, ಮಾಯಾ ಇವುಗಳಿಲ್ಲದವರ ಹೃದಯದಲ್ಲಿ ನೀವು ವಾಸಮಾಡಬೇಕು. ಎಲೈ ರಾಮನೇ, ಎಲ್ಲರಿಗೂ ಪ್ರಿಯರೂ, ಎಲ್ಲರಮೇಲೆಯೂ ಉಪಕಾರಮಾಡುವವರೂ ಆಗಿರುವವರ, ಸ್ತುತಿ-ನಿಂದೆಗಳೂ, ಸುಖದುಃಖಗಳೂ ಸಮಾನವಾಗಿ ತೋರುವವರ, ಸತ್ಯವಾಗಿಯೂ-ಪ್ರಿಯವಾಗಿಯೂ-ವಿಚಾರಪೂರ್ವಕವಾಗಿಯೂ ಮಾತಾಡುವವರ, ಎಚ್ಚತ್ತಿರುವಾಗಲೂ-ನಿದ್ರೆಮಾಡುವಾಗಲೂ ನಿನ್ನನ್ನು ಶರಣು ಹೋಗಿರುವವರ, ನಿನಗಿಂತಲೂ ಹೆಚ್ಚಿನ ಶ್ರೇಯವೇ ಇಲ್ಲದವರ ಹೃದಯದಲ್ಲಿ ನೀನು ವಾಸಮಾಡು. ಪರಸ್ತ್ರೀಯನ್ನು ತಾಯಿಯಂತೆ ನೋಡುವವರ, ಪರಧನವನ್ನು ವಿಷಕ್ಕಿಂತಲೂ ತೀವ್ರವಿಷವಾಗಿ ತಿಳಿಯುವವರ, ಪರರ ಉತ್ಕರ್ಷವನ್ನು ನೋಡಿ ಹರ್ಷಿತರಾಗುವವರ, ಎರಡನೆಯವರ ದುಃಖದಿಂದ ವಿಶೇಷದುಃಖಿತರಾಗುವವರ, ರಾಮಾ, ನೀನು ಪ್ರಾಣಕ್ಕಿಂತಲೂ ಪ್ರಿಯರಾಗಿರುವವರ ಹೃದಯಗಳು ನಿನ್ನ ಶುಭನಿವಾಸದ ಮಂದಿರಗಳಾಗಿರುವವು. ಎಲೈ ತಾತನೇ, ಯಾರ ಸ್ವಾಮಿಯೂ, ಸಖನೂ, ಪಿತೃವೂ, ಮಾತೃವೂ, ಗುರುವೂ, ಸರ್ವಸ್ವವೂ ನೀನೇ ಆಗಿರುವೆಯೋ, ಅವರಮನೋಮಂದಿರದಲ್ಲಿ ಮೂವರೂ ನೀವು ವಾಸಮಾಡಿರಿ. ದೋಷವನ್ನು ಬಿಟ್ಟು ಗುಣವನ್ನೇ ಗ್ರಹಿಸುವವರ, ಬ್ರಾಹ್ಮಣರ ಹಾಗು ಗೋಗಳ ಪ್ರೀತ್ಯರ್ಥವಾಗಿ ಕಷ್ಟಪಡುವವರ, ನೀತಿಯಿಂದ ಪೂರ್ಣವಾದ ಜೀವನ ಚರಿತ್ರವುಳ್ಳವರ ಅಂತಃಕರಣವೇ ನಿಮಗೆ ಪ್ರಶಸ್ತ ಮಂದಿರವಾಗಿರುವದು. ಗುಣಗಳೆಲ್ಲ ನಿನ್ನವು-ದೋಷಗಳು ತಮ್ಮವು ಎಂದು ತಿಳಿಯುವವರ, ಎಲ್ಲ ಬಗೆಯಿಂದಲೂ ನಿನ್ನ ನಂಬಿಗೆಯೇ ಇರತಕ್ಕವರ, ರಾಮಭಕ್ತರು ಪರಮಪ್ರಿಯರಾಗಿ ತೋರುವವರ ಹೃದಯದಲ್ಲಿ ಜಾನಕೀ ಸಹಿತವಾಗಿ ನೀವು ವಾಸಿಸಬೇಕು. ಜಾತಿ, ಧನ, ಧರ್ಮ, ಪ್ರತಿಷ್ಠೆ, ಪ್ರೇಮ, ಪರಿವಾರ, ಗೃಹ ಮೊದಲಾದ ಸುಖಸಾಧನಗಳನ್ನು ತ್ಯಜಿಸಿ, ನಿನ್ನಲ್ಲಿಯೇ ಮನಸ್ಸಿಟ್ಟ

ರುವವರ ಹೃದಯದಲ್ಲಿ ರಘುರಾಯನು ,ನೀನು ವಾಸಮಾಡತಕ್ಕದ್ದು. ಯಾವಾಗಲೂ ಏನನ್ನೂ ಇಚ್ಛಿಸದವರ, ನಿನ್ನಲ್ಲಿ ಅಹೇತುಕ ಪ್ರೇಮವಿಡುವವರ ಮನಸ್ಸುಗಳೇ ನಿನ್ನ ಅಧಿಕಾರದ ಮಂದಿರಗಳಾಗಿದ್ದು, ಅಲ್ಲಿಯೇ ನೀನು ನಿರಂತರ ವಾಸಮಾಡತಕ್ಕದ್ದು.

ಚಿತ್ರಕೂಟವಾಸ--ಈ ಮೇರೆಗೆ ಮುನಿವರನು ರಾಮನಿಗೆ ಸ್ಥಳಗಳನ್ನು ಹೇಳಿದನು. ಆತನ ಪ್ರೇಮಯುಕ್ತ ಭಾಷಣಗಳು ರಾಮನ ಮನಸ್ಸಿಗೆ ಬಂದವು. ಆಗ ಮುನಿಯು ಪುನಃ ರಾಮನನ್ನು ಕುರಿತು—ಎಲೈ ಭಾನುಕುಲನಾಯಕಾ, ಈಗಿನ ಕಾಲದಲ್ಲಿ ನಿನಗೆ ಸುಖಕರವಾದ ಸ್ಥಾನವು ಯಾವದೆಂಬದನ್ನು ಹೇಳುವೆನು ಕೇಳು ಚಿತ್ರಕೂಟವೆಂಬಹೆಸರಿನದೊಂದು ಪರ್ವತವಿರುವದು. ಅಲ್ಲಿಯ ಅರಣ್ಯದಲ್ಲಿ ಆನೆ, ಸಿಂಹ, ಮೃಗ, ಪಕ್ಷಿಗಳು ವಿಹಾರಮಾಡುತ್ತಿರುವವು. ಪುರಾಣಪ್ರಸಿದ್ಧವೂ, ಪವಿತ್ರವೂ, ಪಾತಕವೆಂಬ ಬಾಲಕನಿಗೆ ಡಾಕಿನಿಯೂ ಆಗಿರುವ ದೇವನದಿಯು ಮಂದಾಕಿನಿಯೆಂಬ ಪ್ರವಾಹವನ್ನು ಅನಸೂಯೆಯು ತನ್ನ ತಪೋಬಲದಿಂದ ಅಲ್ಲಿಗೆ ತಂದಿರುವಳು. ಎಲೈ ರಾಮನೇ. ಅಲ್ಲಿ ಅತ್ರಿಪ್ರಭೃತಿಗಳಾದ ಅನೇಕ ಮುನಿವರರು ವಾಸಿಸುತ್ತಿದ್ದು, ಜಪ-ತಪ-ಯೋಗ ಇತ್ಯಾದಿಸಾಧನಗಳಿಂದ ದೇಹವನ್ನು ಕಷ್ಟಪಡಿಸುತ್ತಿರುವರು. ಅಲ್ಲಿಗೆ ಹೋಗಿ ನೀನು ಅವರೆಲ್ಲರ ಶ್ರಮದ ಸಾರ್ಥಕಮಾಡಿ ಗಿರಿವರನನ್ನು ಗೌರವಿಸಬೇಕು, ಎಂದು ಹೇಳಲು. ಸೀತೆಯೊಡನೆ ಅವರಿಬ್ಬರು ಬಂಧುಗಳು ಅಲ್ಲಿಗೆ ಹೋಗಿ ಗಂಗೆಯಲ್ಲಿ ಸ್ನಾನಮಾಡಿದರು, ಬಳಿಕ ರಾಮನು ಲಕ್ಷ್ಮಣನನ್ನು ಕುರಿತು—“ಲಕ್ಷ್ಮಣಾ, ಇಲ್ಲಿ ಎಲ್ಲಿಯಾದರೂ ನನ್ನ ವಾಸಕ್ಕಾಗಿ ಉತ್ತಮಸ್ಥಳವನ್ನು ನೋಡು, ಎಂದು ಹೇಳಲು, ಲಕ್ಷ್ಮಣನು ನಾಲ್ಕುಕಡೆಗೆ ಸ್ಥಳವನ್ನು ನೋಡಹತ್ತಿದನು. ಆಗ ನದಿಯ ಉತ್ತರಕ್ಕೆ ಪರ್ವತದ ಒಂದು ಸೆರೆಯು ಕಡಕೊಂಡು ಬಿದ್ದಿದ್ದು, ಅದರ ಸುತ್ತಲೂ ನದಿಯು ಧನುಷ್ಯಾಕೃತಿಯಾಗಿಪಸರಿಸಿತ್ತು. ಲಕ್ಷ್ಮಣನು ಆ ಸ್ಥಳವನ್ನು ರಾಮನಿಗೆ ತೋರಿಸಲು, ಅದನ್ನು ನೋಡಿ ರಾಮನಿಗೆ ಆನಂದವಾಯಿತು. ಆ ಸ್ಥಳವು ರಾಮನಮನಸ್ಸಿಗೆ ಬಂದದ್ದನ್ನು ತಿಳಿದು ಇಂದ್ರಾದಿದೇವತೆಗಳು ಹೊರಟುಬಂದು ಭಿಲ್ಲರವೇಷದಿಂದ ರಾಮನಿಗಾಗಿ ಎರಡು ಸುಂದರ ಪರ್ಣಕುಟಿಗಳನ್ನು ಸಿದ್ಧಮಾಡಿದರು. ಅವುಗಳಲ್ಲಿ ಒಂದು ವಿಸ್ತಾರವಾದದ್ದಿದ್ದು, ಒಂದು ಸಣ್ಣದಿದ್ದರೂ ಬಹು ಮಾಟಾಗಿ ಇದ್ದಿತು. ಆ ಸುಂದರ ಪರ್ಣಶಾಲೆಯಲ್ಲಿ ಪ್ರಭುವು ಸೀತಾಲಕ್ಷ್ಮಣರೊಡನೆ ವಾಸಿಸಲು, ರತಿ-ವಸಂತರೊಡನೆ ಮುನಿವೇಷಧಾರಿಯಾದ ಮದನನು ವಾಸಿಸುವಂತೆ ತೋರಿತು. ದೇವ, ನಾಗ, ಕಿನ್ನರ, ದಿಕ್ಪಾಲಕರು ಆಗ ಚಿತ್ರಕೂಟದ ಮೇಲೆ ಬರಲು ಅವರೆಲ್ಲರಿಗೂ ರಾಮನು ನಮಸ್ಕಾರಮಾಡಿದನು. ಅವರು ತಮ್ಮ ನೇತ್ರಗಳ ಸಾಫಲ್ಯವನ್ನು ಹೊಂದಿ ಹೂಮಳೆಗರೆದು ಶ್ರೀರಾಮನನ್ನು ಕುರಿತು—“ಪ್ರಭುವೇ, ನಾವು ಇಂದಿಗೆ ಸನಾಥರಾದೆವು” ಎಂದು ಹೇಳಿ ವಿನಯದಿಂದ ತಮ್ಮ ದುಸ್ಸಹವಾದ

ದುಃಖವನ್ನು ನಿವೇದಿಸಿ ಆನಂದದಿಂದ ತಮ್ಮ ತಮ್ಮ ಲೋಕಗಳಿಗೆ ತಿರುಗಿ ಹೋದರು. ಚಿತ್ರಕೂಟದಲ್ಲಿ ರಾಮನು ಮನೆಮಾಡಿರುವನೆಂಬದನ್ನು ಕೇಳಿ ಮುನಿಜನರು ಅಲ್ಲಿಗೆ ಬರ ತೊಡಗಿದರು. ಅವರನ್ನು ನೋಡಿ ರಘುನಾಥನು ದೀರ್ಘದಂಡನಮಸ್ಕಾರಮಾಡುವನು; ಮುನಿಜನರಾದರೂ ರಘುವರನನ್ನು ಹಿಡಿದೆತ್ತಿ ತಮ್ಮ ವಾಣಿಯು ಸಫಲವಾಗುವದಕ್ಕಾಗಿ ಆತನನ್ನು ಆಶೀರ್ವದಿಸುವರು; ರಾಮಸೀತಾಲಕ್ಷ್ಮಣರ ಮೂರ್ತಿಗಳನ್ನು ನೋಡಿ ತಮ್ಮ ಯಾವತ್ತು ಸಾಧನಗಳು ಸಫಲವಾದವೆಂದು ಅವರು ತಿಳಿಯುವರು. ಮುನಿವೃಂದವನ್ನು ಯಥೋಚಿತವಾಗಿ ಸನ್ಮಾನಿಸಿ ಪ್ರಭುವು ಅವರನ್ನು ಕಳಿಸುವನು; ಅವರು ತಮ್ಮ ತಮ್ಮ ಆಶ್ರಮದಲ್ಲಿ ಸ್ವಚ್ಛಂದದಿಂದ ಯೋಗ, ಜಪ, ಯಾಗ, ತಪ ಇತ್ಯಾದಿ ಕರ್ಮಗಳನ್ನು ಮಾಡುತ್ತಿರುವರು. ಅಲ್ಲಿಯ ಭಿಲ್ಲಜನರು ಕಂದ-ಮೂಲ-ಫಲಾದಿಗಳನ್ನು ಕಾಣಿಕೆಯಾಗಿ ಇತ್ತು ಜೋಹಾರಮಾಡಿ, ಚಿತ್ರದ ಗೊಂಬೆಗಳಂತೆ ತಟಸ್ಥರಾಗಿ ಆ ಸುಂದರ ಮೂರ್ತಿಗಳನ್ನು ನೋಡುವರು. ಅವರು ಕೈಜೋಡಿಸಿ ಪ್ರಭುವನ್ನು ಕುರಿತು—"ಯೋಗ್ಯ ಸ್ಥಳವನ್ನು ನೋಡಿ ಇಲ್ಲಿ ತಾವು ವಾಸಮಾಡಿದಿರಿ. ಯಾವತ್ತು ಋತುಗಳಲ್ಲಿ ಇಲ್ಲಿ ಸುಖದಿಂದ ಇರಲಿಕ್ಕೆ ಬರುವದು. ಎಲ್ಲ ಬಗೆಯಿಂದ ನಾವು ತಮ್ಮ ಸೇವೆಯನ್ನು ಮಾಡುವೆವು. ಆನೆಗಳು, ಸಿಂಹಗಳು, ಹಾವುಗಳು, ಹುಲಿಗಳು, ಹಂದಿಗಳು ಇಲ್ಲಿ ಇರುವವು. ದಟ್ಟಡವಿಗಳು, ಗುಡ್ಡಗಳು, ಕಂದರಗಳು, ಓರೆಗಳು ನಮಗೆ ಪೂರಾ ಗೊತ್ತಿನವಾಗಿರುವದರಿಂದ ನಾವು ಪ್ರತಿ ಒಂದು ಸ್ಥಳದಲ್ಲಿ ತಮ್ಮನ್ನು ಬೇಟೆಯಾಡಲಿಕ್ಕೆ ಕರೆದೊಯ್ದು, ಸರೋವರಗಳನ್ನೂ, ನೀರಿನಶಲೆಗಳನ್ನೂ ತೋರಿಸುವೆವು. ನಮ್ಮ ಪರಿವಾರದೊಡನೆ ನಾವು ನಿಮ್ಮ ಸೇವಕರಾಗಿರುವದರಿಂದ, ನಮ್ಮನ್ನು ಆಜ್ಞಾಪಿಸಲು ಪ್ರಭುಗಳು ಹಿಂದೆ ಮುಂದೆ ನೋಡಬಾರದು," ಅನ್ನಲು, ಶ್ರೀರಾಮನು ಆ ಮುಗ್ಧಜನರ ಪ್ರೇಮದಮಾತುಗಳನ್ನು ಕೇಳಿ, ಪ್ರೇಮಲ ಮಧುರಭಾಷಣಗಳಿಂದ ಅವರನ್ನು ಸಂತೋಷಪಡಿಸುವನು. ಇದರಿಂದ ರಘುವೀರನು ಭಕ್ತಿಪ್ರಿಯನೆಂಬದರ ಬೋಧವನ್ನು ಎಲ್ಲರೂ ಹೊಂದತಕ್ಕದ್ದು. ಹಾದಿಯಲ್ಲಿ ಹಳ್ಳಿಯ ಹೆಂಗಸರು ಸೀತಾ-ರಾಮ-ಲಕ್ಷ್ಮಣರನ್ನು ನೋಡಿ ಎಲ್ಲರೂ ಕೌತುಕಪಟ್ಟು ಸೀತೆಯನ್ನು ಕುರಿತು ಅಂಜುತ್ತಂಜುತ್ತ—ಅಮ್ಮನವರೇ, ಇವರು ನಿಮಗೇನಾಗಬೇಕೆಂದು ಅಸ್ಥೆಯಿಂದ ಕೇಳಲು, ಆ ಗೌರಕಾಯದ ಲಕ್ಷ್ಮಣನು ತನಗೆ ಮೈದುನನಾಗಬೇಕೆಂದು ಹೇಳಿ, ಮೇಘಶ್ಯಾಮನಾದ ಶ್ರೀರಾಮನಕಡೆಗೆ ಪ್ರೇಕಟಾಕ್ಷದಿಂದ ನೋಡಿ "ಅವರು ತನ್ನ ಯಜಮಾನರೆಂ"ಬ ಭಾವವನ್ನು ಪ್ರಕಟಮಾಡಿದಳು.

ಈ ಮೇರೆಗೆ ರಘುನಾಥನು ಸೀತಾಲಕ್ಷ್ಮಣರೊಡನೆ ವನದಲ್ಲಿ ವಾಸಿಸಲು, ವನವು ಮಂಗಲಪ್ರದವಾಯಿತು. ನಾನಾಪ್ರಕಾರದ ವೃಕ್ಷಗಳು ಪ್ರಫುಲ್ಲಿತವೂ, ಫಲಾನ್ವಿತವೂ ಆಗಿ, ನಾಲ್ಕೂಕಡೆಯಿಂದ ಬಳ್ಳಿಗಳಿಂದ ವ್ಯಾಪಿಸಲ್ಪಟ್ಟು ಲತಾಮಂಟಪದ ಸ್ವರೂಪವನ್ನು ಹೊಂದಿದವು. ತ್ರಿವಿಧವಾಯುಗಳ ಸಂಚಾರದಿಂದ ವನವು ಆನಂದಿತವಾಯಿತು. ವಿವಿಧ

ಪಕ್ಷಿಗಣವು ಸುಶ್ರಾವ್ಯಶಬ್ದಗಳನ್ನು ಮಾಡುತ್ತಲಿತ್ತು. ಆನೆ, ಸಿಂಹ ಮೊದಲಾದ ವನ್ಯಮೃಗಗಳು ಪರಸ್ಪರ ವೈರಭಾವವನ್ನು ಬಿಟ್ಟು ಸಂಚರಿಸತೊಡಗಿದವು. ಅಲ್ಲಿಯ ಯಾವತ್ತು ನದಿಗಳು ಪುಣ್ಯಕರಗಳಾದವು; ಚಿತ್ರಕೂಟವು ಶಿಖರವಾಗಿ ಉಳ್ಳ ವಿಂಧ್ಯಾದ್ರಿಗೆ ಶ್ರಮವಿಲ್ಲದೆ ಮಕುಟತ್ವವು ಪ್ರಾಪ್ತವಾದದ್ದರಿಂದ, ಅದಕ್ಕಾದ ಆನಂದವು ಅದರ ಹೊಟ್ಟೆಯಲ್ಲಿ ಹಿಡಿಸದಾಯಿತು. ಲಕ್ಷ್ಮಣನು ತ್ರಿಕರಣ ಪೂರ್ವಕವಾಗಿ ರಾಮಲಕ್ಷ್ಮಣರನ್ನು ಸೇವಿಸತೊಡಗಿದನು. ಪ್ರತಿಕ್ಷಣದಲ್ಲಿ ಆತನು ಸೀತಾರಾಮರ ಚರಣವನ್ನು ಅವಲೋಕಿಸುತ್ತ, ಅವರ ಪ್ರೇಮವು ತನ್ನ ಮೇಲೆ ಇರುವದೆಂಬವನ್ನು ನೆನಿಸಿ ತಾಯಿತಂದೆಗಳನ್ನು, ಬಂಧುಬಾಂಧವರನ್ನು, ಮನೆಮಾರುಗಳನ್ನು ಮರೆತನು. ರಾಮಸಮಾಗಮದಿಂದ ಸೀತೆಯು ಪುರ-ಪರಿಜನ-ಗೃಹಾದಿಗಳನ್ನು ಮರೆತು ಸುಖದಿಂದ ಇರತೊಡಗಿದಳು. ರಾಮಚರಣದಲ್ಲಿ ಅನುರಕ್ತಳಾದ ಆಕೆಗೆ ವನವೇ ಸಹಸ್ರಾವಧಿ ಅಯೋಧ್ಯೆಗಳಂತೆಯೂ, ಪರ್ಣಕುಟಿಯೇ ಅರಮನೆಯಂತೆಯೂ, ಚಿಗರೆ-ಹಕ್ಕಿಗಳೇ ಪರಿಜನರಂತೆಯೂ, ಮುನಿಶ್ರೇಷ್ಠರೂ ಮುನಿಪತ್ನಿಯರೂ ಅತ್ತೆಮಾವಂದಿರಂತೆಯೂ ತೋರಹತ್ತಿದರು. ಯಾವ ಲೋಕಮಾತೆಯಾದ ಜಾನಕಿಯ ಕೃಪಾಕಟಾಕ್ಷದಿಂದಲೇ ಲೋಕಪಾಲರು ಉತ್ಪನ್ನರಾಗುವರೋ, ಆಕೆಯನ್ನು ವಿಷಯವಿಲಾಸಗಳು ಮೋಹಿಸಲು ಸಮರ್ಥವಾಗಬಹುದೊ! ಸೀತಾಲಕ್ಷ್ಮಣರಿಗೆ ಪ್ರಿಯವಾದದ್ದನ್ನೇ ರಾಮನು ಮಾಡುತ್ತ, ಪುರಾತನ ಕಥೆಗಳನ್ನು ಅವರಿಗೆ ಹೇಳುತ್ತಲಿದ್ದನು. ಅಯೋಧ್ಯೆಯ ಸ್ಮರಣವಾದಾಗೆಲ್ಲ ಶ್ರೀರಾಮನ ನೇತ್ರಗಳು ಅಶ್ರುಪೂರ್ಣವಾಗುತ್ತಿದ್ದವು. ಅದನ್ನು ನೋಡಿ ಸೀತಾಲಕ್ಷ್ಮಣರು ದುಃಖಿತರಾಗುತ್ತಿದ್ದರು. ರೆಪ್ಪೆಗಳು ಗುಡ್ಡೆಗಳನ್ನು ರಕ್ಷಿಸುವಂತೆ ಶ್ರೀರಾಮನು ಸೀತಾಲಕ್ಷ್ಮಣರನ್ನು ರಕ್ಷಿಸುತ್ತಿದ್ದನು. ಅಜ್ಞಾನಿಗಳು ತಮ್ಮ ಶರೀರದ ಯೋಗಕ್ಷೇಮವನ್ನು ನೋಡಿಕೊಳ್ಳುವಂತೆ ಸೀತಾಲಕ್ಷ್ಮಣರು ರಾಮನನ್ನು ಸೇವಿಸುತ್ತಿದ್ದರು.

ಈ ಪರಿಗೆ ಶ್ರೀರಾಮನು ಸೀತಾಲಕ್ಷ್ಮಣರೊಡನೆ ವಾಸಿಸುತ್ತ, ಖಗ-ಮೃಗ-ಸುರ-ತಾಪಸರೇ ಮೊದಲಾದವರ ಮೇಲೆ ಉಪಕಾರಮಾಡುತ್ತ, ವನದಲ್ಲಿ ಕಾಲಹರಣ ಮಾಡುತ್ತಿದ್ದನು. ಇತ್ತ ಗುಹನು ರಾಮಾಜ್ಞೆಯಿಂದ ಊರಿಗೆ ಬರಲು, ಸುಮಂತನು ರಾಮವಿರಹದಿಂದ ದುಃಖಿಸುತ್ತಿದ್ದನು. ರಾಮನ ಕುದುರೆಗಳೂ ಕೂಡ ಮೇವು ಕಚ್ಚದ ಒಂದೇ ಸವನೆ ಕಣ್ಣೀರು ಸುರಿಸುತ್ತ ದಕ್ಷಿಣ ದಿಕ್ಕಿಗೆ ಮೋರೆ ಮಾಡಿ ಹೇಕರಿಸುತ್ತಲಿದ್ದವು. ಇದನ್ನೆಲ್ಲ ನೋಡಿ ಗುಹನು ಅತ್ಯಂತ ವ್ಯಥೆಪಟ್ಟು ಸುಮಂತನನ್ನು ಕುರಿತು—"ಮಂತ್ರಿವರನೇ, ಇನ್ನು ದುಃಖವನ್ನು ಒತ್ತಟ್ಟಿಗಿರಿಸಬೇಕು. ತಾವು ಸುಜ್ಞರೇ ಇರುವಿರಿ. ದೈವವು ಪ್ರತಿಕೂಲವಾಗಿರುವದನ್ನರಿತು ಶಾಂತಿಯನ್ನು ತಾಳಬೇಕು; ಎಂದು ಪರಿಪರಿಯಿಂದ ಸಮಾಧಾನವನ್ನು ಹೇಳಿ, ದುಃಖದಿಂದ ಜರ್ಜರನಾದ ಆತನನ್ನು ಒತ್ತಾಯದಿಂದ ರಥವಲ್ಲಿ ಕುಳ್ಳಿರಿಸಿ, ಚಟಪಟಿಕೆಯ ತನ್ನ ನಾಲ್ಕು ಜನ ಸೇವಕರನ್ನು

ಸಂಗಡಕೊಟ್ಟು ಆ ಮಂತ್ರಿಯನ್ನು ಅಯೋಧ್ಯೆಗೆ ಕಳಿಸಿದನು. ಮಾರ್ಗಸ್ಥನಾದ ಸುಮಂತನು ಶೋಕವಿಹ್ವಲನಾಗಿ ತಾನು ಅತ್ಯಂತ ದುರ್ದೈವಿಯೆಂದು ತನ್ನನ್ನು ಬಗೆ ಬಗೆಯಾಗಿ ಹಳಿದುಕೊಳ್ಳಹತ್ತಿದನು. ಆತನು ಪಶ್ಚಾತ್ತಾಪದಿಂದ ಮನಸ್ಸಿನಲ್ಲಿ—"ಇನ್ನು ನಾನು ಅಯೋಧ್ಯೆಗೆಹೋಗಿ ಏನುನೋಡಲಿ! ಅಯೋಧ್ಯೆಯ ಜನರು ನನ್ನ ಈ ರಾಮನಿಲ್ಲದ ರಥವನ್ನು ನೋಡಿ ಅಸಮಾಧಾನಪಟ್ಟು ಪ್ರಶ್ನೆಮಾಡಿದರೆನಾನೇನು ಉತ್ತರಕೊಡಲಿ? ಎಲ್ಲೆ ದುರ್ದೈವವೇ, ದುಃಖದಿಂದ ದೀನರಾದ ರಾಮನ ತಾಯಂದಿರು ಕೇಳತೊಡಗಿದರೆ ನಾನೇನು ಹೇಳಲಿ? ಲಕ್ಷ್ಮಣನ ತಾಯಿಗೆ ನಾನು ಯಾವ ಆನಂದದ ಸುದ್ದಿಯನ್ನು ಹೇಳಲಿ? ಕೌಸಲ್ಯಾಮಾತೆಗೆ ನಾನು ಹೇಗೆ ಮೋರೆಯನ್ನು ತೋರಿಸಲಿ? ಕೇವಲ ರಾಮನ ಆಧಾರದಿಂದ ಪ್ರಾಣಧಾರಣಮಾಡಿರುವ ದಶರಥರಾಜನು, ಸೀತಾ-ರಾಮ-ಲಕ್ಷ್ಮಣರ ವನವಾಸದ ಸುದ್ದಿಯನ್ನು ಕೇಳಿ ತೃಣದಂತೆ ದೇಹತ್ಯಾಗವನ್ನು ಮಾಡಲಿಕ್ಕಿಲ್ಲವೇ!" ಎಂದು ದುಃಖಿಸುತ್ತಿರಲು, ರಥವು ತಮಸಾತೀರಕ್ಕೆ ಪ್ರಾಪ್ತವಾಯಿತು. ಆಗ ಸುಮಂತನು ನಿಷಾದರನ್ನ ತಿರುಗಿ ಕಳಿಸಿ, ಪಟ್ಟಣದೊಳಗೆ ಹೋಗಲು ನಾಚಿಕೊಂಡು ಒಂದು ಗಿಡದ ಬುಡದಲ್ಲಿ ರಥವನ್ನು ಬಿಟ್ಟುಕೊಂಡುಕುಳಿತು ಹಗಲನ್ನು ಕಳೆದನು. ಹೊತ್ತು ಮುಣುಗಿದ ಬಳಿಕ ಅವಸರ ನೋಡಿ ಆತನು ಪಟ್ಟಣವನ್ನು ಪ್ರವೇಶಿಸಿ, ರಥವನ್ನು ಬಾಗಿಲಲ್ಲಿ ಬಿಟ್ಟು ಅರಮನೆಯನ್ನು ಹೊಕ್ಕನು.

ದಶರಥನಮರಣ—ಸುಮಂತನು ತಿರುಗಿ ಬಂದ ವರ್ತಮಾನವನ್ನು ಕೇಳಿ ಅಯೋಧ್ಯಾ ವಾಸಿಗಳು ದುಃಖಿತರಾದರು. ಅಂತಃಪುರದಲ್ಲಿ ಹಾ ಹಾ ಕಾರವುಂಟಾಯಿತು. ಅರಮನೆಯು ಶ್ಮಶಾನದಂತೆ ತೋರಹತ್ತಿತು. ಸುಮಂತನು ಕೌಸಲ್ಯೆಯ ಮಂದಿರಕ್ಕೆ ಹೋಗಲು, ಶೋಕಜರ್ಜರನಾದ ದಶರಥರಾಜನು ಕಲಾಹೀನನಾಗಿ, ಆಸನವನ್ನೂ, ಹಾಸಿಗೆಯನ್ನೂ, ಅಲಂಕಾರಗಳನ್ನೂ ಬಿಟ್ಟುಕೊಟ್ಟು ಭೂಮಿಯ ಮೇಲೆ ಹೊರಳಾಡುತ್ತಿದ್ದನು. "ಹೇ ರಾಮಾ, ಹೇ ರಾಮಾ, ಹೇಪ್ರಾಣಪ್ರಿಯಾರಾಮಾ, ಹೇ ಲಕ್ಷ್ಮಣಾ, ಹೇರಾಮಾ, ಹೇ ಜಾನಕೀ" ಎಂದುಆತನು ಒಂದೇಸವನೆ ಧ್ಯಾನಿಸುತ್ತಲಿದ್ದನು. ಇಂಥ ರಾಜನನ್ನು ನೋಡಿ ಸುಮಂತನು"ಜಯಜೀವ" ಎಂದು ದಂಡಪ್ರಣಾಮಗೈಯಲು, ಅರಸನು ವ್ಯಾಕುಲದಿಂದ ಎದ್ದು—"ಸುಮಂತಾ, ರಾಮನೆಲ್ಲಿರುವನು ಹೇಳು" ಎಂದು ಕೇಳುತ್ತ ಸುಮಂತನನ್ನು ಬಿಗಿಯಾಗಿ ಅಪ್ಪಿಕೊಂಡು—"ನನ್ನ ಪ್ರಾಣಪ್ರಿಯ ರಾಮನ ಕ್ಷೇಮಸಮಾಚಾರವನ್ನು ಹೇಳು. ರಾಮ—ಲಕ್ಷ್ಮಣ—ಸೀತೆಯರು ಇರುವರಾದರೂ ಎಲ್ಲಿ? ಅವರನ್ನು ತಿರುಗಿ ಕರಕೊಂಡು ಬಂದೆಯೋ ಅಥವಾ ಅವರು ವನದಲ್ಲಿ ಹೊರಟು ಹೋದರೋ?" ಎಂದು ಕೇಳುವಾಗ ರಾಮನ ಗುಣಶೀಲಗಳ ನೆನಪಾಗಿ ರಾಜನ ಹೊಟ್ಟೆಯಲ್ಲಿ ಕಸವಿಸಿಯಾಗಲು, ಆತನುಮತ್ತೆ ಸುಮಂತನನ್ನು ಕುರಿತು—"ಸುಮಂತಾ, ನಾನು ರಾಮನಿಗೆ ರಾಜ್ಯವನ್ನು ಕೊಡುತ್ತೇನೆಂದು

ಹೇಳಿ ವನವಾಸವನ್ನು ಕೊಟ್ಟೆನು; ಆದರೂ ನನ್ನ ರಾಮನಿಗೆ ಹರ್ಷ-ವಿಷಾದಗ
ಳೇನೂ ಆಗಲಿಲ್ಲ. ಅಂಥ ಸತ್ಪುತ್ರನ ವಿಯೋಗವಾಗಿಯೂ ನನ್ನ ಪ್ರಾಣಗಳು
ಹೊರಟು ಹೋಗಲೊಲ್ಲವಲ್ಲ! ನನ್ನಂಥ ಪಾಪಿಯು ಯಾರಿರಬಹುದು? ಎಲೈ
ಮಿತ್ರನೇ, ಆ ಮೂವರೂ ಇರುವಲ್ಲಿಗೆ ನನ್ನನ್ನು ಕಳಿಸು. ಇಲ್ಲದಿದ್ದರೆ ನಿಜವಾಗಿ
ಹೇಳುತ್ತೇನೆ, ಸುಮಂತಾ, ನನ್ನ ಪ್ರಾಣಗಳು ಹೊರಟು ಹೋಗತೊಡಗಿವೆ. ಮಿತ್ರಾ,
ನಮ್ಮ ರಾಮ-ಲಕ್ಷ್ಮಣರ ಕುಶಲವರ್ತಮಾನವನ್ನಾದರೂ ಹೇಳು. ಸುಮಂತನೇ
ರಾಮ ಲಕ್ಷ್ಮಣರು ನನ್ನ ಕಣ್ಣಿಗೆ ಬೀಳುವಂತೆ ಮಾಡಬಾರದೇ?" ಎಂದು ಬಾರಿಬಾ
ರಿಗೆ ಹಲಬುತ್ತಿರಲು, ಸುಮಂತನು ಧೈರ್ಯತಾಳಿ ಅರಸನನ್ನು ಕುರಿತು—ಮಹಾ
ರಾಜ, ತಾವು ವಿದ್ವಾಂಸರೂ, ಜ್ಞಾನಿಗಳೂ ಆಗಿದ್ದು, ಧೈರ್ಯಧುರಂಧರ- ವೀರರಿರು
ವಿರಿ. ಪ್ರಭುಗಳೇ, ಸಂತಸಮಾಗಮದಲ್ಲಿಯೇ ಎಲ್ಲ ಆಯುಷ್ಯವನ್ನು ತಾವು ವೆಚ್ಚಮಾ
ಡಿರುವಿರಿ. ಸ್ವಾಮಿನ್ ಜನ್ಮಮರಣಗಳು, ಸುಖ ದುಃಖಾದಿ ಭೋಗಗಳು, ಹಾನಿಲಾ
ಭಗಳು, ಪ್ರಿಯ-ಸಂಯೋಗ-ವಿಯೋಗಗಳು ಇವೆಲ್ಲವು ಕಾಲ-ಕರ್ಮಗಳನ್ನನುಸ
ರಿಸಿಯೇ ಆಗುತ್ತಿರುವವು. ಅವಕ್ಕೆ ಹಗಲು-ರಾತ್ರಿಗಳ ಕ್ರಮದಂತೆ ಎಂದೂ ವಿಚ್ಛಿತ್ತಿ
ಯುಂಟಾಗುವದಿಲ್ಲ. ಸುಖದಿಂದ ಹಿಗ್ಗುವವರೂ, ದುಃಖದಿಂದ ಕುಗ್ಗುವವರೂ
ಜ್ಞಾನಿಗಳಲ್ಲವು. ಧೀರರಾದ ಪುರುಷರು ಸುಖದುಃಖಗಳೆರಡನ್ನೂ ಮನಸ್ಸಿನಲ್ಲಿ ಸಮ
ಸಮಾನವಾಗಿಯೇ ಭಾವಿಸುವರು. ವಿವೇಕಯುಕ್ತ ವಿಚಾರದಿಂದ ತಾವು ಧೈರ್ಯ
ವನ್ನು ತಾಳಲೇಬೇಕು. ಎಲ್ಲರ ಹಿತವು ತಮ್ಮನ್ನು ಅವಲಂಬಿಸಿರುವದರಿಂದ, ತಾವು
ದುಃಖವನ್ನು ಬಿಟ್ಟುಕೊಡಬೇಕು. ರಾಮಚಂದ್ರನ ಮೊದಲನೆಯ ವಸತಿಯು
ತಮಸಾತೀರದಲ್ಲಾಗಿ, ಎರಡನೆಯದು ಗಂಗಾತೀರದಲ್ಲಿ ಆಯಿತು. ಇಬ್ಬರೂ
ವೀರರೂ ಸೀತೆಯೊಡನೆ ಗಂಗಾಸ್ನಾನವನ್ನು ಮಾಡಿ ಅಂದು ಜಲಪಾನವನ್ನೇ ಮಾಡಿ ಇದ್ದರು.
ಗುಹನು ಉತ್ತಮರೀತಿಯಿಂದ ಆತಿಥ್ಯಮಾಡಿದನು. ಆ ರಾತ್ರಿಯನ್ನು ಶೃಂಗವೇರ
ಪುರದಲ್ಲಿಯೇ ಕಳೆದೆವು. ಬೆಳಗಾಗುತ್ತಲೆ ಆಲದ ಹಾಲು ತರಿಸಿ ಅವರು ತಮ್ಮ ತಲೆಯ
ಮೇಲೆ ಜಡೆಗಳನ್ನು ರಚಿಸಿದರು. ಬಳಿಕ ಗುಹನು ಸಿದ್ಧಮಾಡಿದ ನಾವೆಯಲ್ಲಿ
ಆ ಮೂವರೂ ಕುಳಿತರು. ಮಹಾರಾಜ, ಶ್ರೀ ರಾಮನು ತಮಗೆ ದುಃಖವಾಗದಂತೆ
ಎಲ್ಲರೂ ನಡೆದು ಕೊಳ್ಳಬೇಕೆಂದು ಹೇಳಿ ಕಳಿಸಿರುವನಲ್ಲದೆ, ಬೇಗನೆ ತಾನು ತಿರುಗಿ
ಬಂದು ತಮ್ಮ ದರ್ಶನಮಾಡಿಕೊಳ್ಳುವದರಿಂದ, ಅಲ್ಲಿಯವರೆಗೆ ತಾವು ಸಮಾಧಾನ
ತಾಳಬೇಕೆಂತಲೂ, ಯಾವ ಬಗೆಯಿಂದಲೂ ನನ್ನ ಚಿಂತೆಯನ್ನು ಮಾಡಬಾರದೆಂತಲೂ
ಹೇಳಿರುವನು. ಹೀಗೆ ಪರಿಪರಿಯಿಂದ ನಿಮ್ಮ ಯೋಗಕ್ಷೇಮದ ಚಿಂತೆಯನ್ನು ವಹಿ
ಸಿರುವ ಶ್ರೀ ರಾಮನು ನನಗೆ ತಿರುಗಿ ಹೋಗಲು ಆಜ್ಞಾಪಿಸಿ, ತಾನು ಗಂಗೆಯನ್ನು
ದಾಟಿ ಹೋದನು;" ಎಂದು ಹೇಳುವಾಗ ಸುಮಂತನ ಮುಖದಿಂದ ಅಕ್ಷರಗಳ

ಹೊರಡದಾದವು. ಆತನು ಹಾನಿ-ಗ್ಲಾನಿ-ಶೋಕಗಳಿಗೆ ಪೂರ್ಣ ಅಧೀನ ನಾದನು.

ಸುಮಂತನ ಮಾತುಗಳನ್ನು ಕೇಳಿ ದಶರಥನ ಹೃದಯದಲ್ಲಿ ಅತಿಶಯವಾದ ದಾಹವು ಉತ್ಪನ್ನವಾಗಿ ಆತನು ಭೂಮಿಯ ಮೇಲೆ ಬಿದ್ದನು. ಆತನ ಅಂತಃಕರಣವು ಅಸಹ್ಯವಾದ ವೇದನೆಯಿಂದ ವ್ಯಾಪ್ತವಾಗಿ ಆತನು ಮುಂಗಾರಿ ಮಳೆಯ ರಾಡಿ ನೀರಿನೊಳಗಿನ ಮೀನದಂತೆ ತಳಮಳಿಸಹತ್ತಿದನು. ಯಾವತ್ತು ರಾಣಿಯರುಗೋಳಿಟ್ಟು ಅಳತೊಡಗಿದರು. ಆಗಿನ ಮಹದ್ದುಃಖವನ್ನು ವರ್ಣಿಸುವದು ಶಕ್ಯವಲ್ಲ. ಆ ವಿಲಾಪವನ್ನು ಕೇಳಿ ದುಃಖಕ್ಕೆ ದುಃಖವಾಯಿತು. ಧೈರ್ಯದ ಧೈರ್ಯವೂ ಅಳಿಸಿ ಹೋಯಿತು. ಅಂತಃಪುರದೊಳಗಿನ ಆ ಶೋಕವನ್ನು ಕೇಳಿ ಅಯೋಧ್ಯೆಯಲ್ಲಿ ಹಾ ಹಾ ಕಾರವುಂಟಾಯಿತು. ದಶರಥನ ಪ್ರಾಣವು ಕಂಠಗತವಾಗಲು, ಅದನ್ನು ನೋಡಿ ಕೌಸಲ್ಯೆಯು—“ಇನ್ನು ಈ ರವಿಕುಲಸೂರ್ಯನು ಅಸ್ತಂಗತನಾಗುವನೆ”ಂದು ತಿಳಿದು ಗಟ್ಟಿಮನಸ್ಸು ಮಾಡಿ ಆತನನ್ನು ಕುರಿತು ಸಮಯೋಚಿತವಾಗಿ ಭಾಷಣ ಮಾಡಹತ್ತಿದಳು. —“ಪ್ರಾಣನಾಥನೇ, ಈಗಿನ ಪ್ರಸಂಗವನ್ನು ತಾವೇ ಮನಸ್ಸಿನಲ್ಲಿ ವಿಚಾರ ಮಾಡಿ ನೋಡಬೇಕು. ರಾಮವಿಯೋಗವು ಅಪಾರವಾದ ಸಮುದ್ರವಿದ್ದು, ಅದರಲ್ಲಿ ಅಯೋಧ್ಯಾ ರೂಪವಾದ ಹಡಗವು ತೇಲಾಡುತ್ತಿರುವದು. ಅದರಲ್ಲಿ ತಮ್ಮ ಪ್ರಿಯ ಪ್ರಜಾರೂಪ ಪಥಿಕಸಮೂಹವು ಕುಳಿತುಕೊಂಡಿದ್ದು, ನೀವೇ ಆ ಹಡಗದ ಕರ್ಣಧಾರರಾಗಿರುವಿರಿ. ನೀವು ಧೈರ್ಯತಾಳಿದರೆಯೇ ಇದರೊಳಗಿಂದ ಎಲ್ಲರೂ ಪಾರಾಗಬಹುದಾಗಿದೆ; ಇಲ್ಲವಿದ್ದರೆ ಯಾವತ್ತು ಪ್ರಜೆಗಳು ಮುಣುಗಿಹೋಗುವರು. ನನ್ನ ಬೇಡಿಕೆಯನ್ನು ಪೂರ್ಣಮಾಡಿ ತಾವು ಧೈರ್ಯತಾಳಿದರೆ, ಪುನಃ ನಾವು ರಾಮ-ಲಕ್ಷ್ಮಣ-ಸೀತೆಯರನ್ನು ನಿಶ್ಚಯವಾಗಿ ಕಾಣುವೆವು.” ಹೆಂಡತಿಯ ಈ ಮೃದುವ ಡಿಗಳನು ಕೇಳಿ ದಶರಥನು ಕಣ್ಣುತೆರೆದು ನೋಡಿ ಧೈಯದಿಂದ ಎದ್ದು ಕುಳಿತುಕೊಂಡನು. ಆತನು ಸುಮಂತನನ್ನು ಕುರಿತು—“ಸುಮಂತಾ, ನನ್ನ ದಯಾಳುವಾದ ರಾಮನು ಎಲ್ಲಿ ಇರುವನು? ಎಲೈ ಲಕ್ಷ್ಮಣಾ, ನೀನು ಎಲ್ಲಿ ಹೋದಿ? ನನ್ನ ಸಖನಾದ ರಾಮನು ಎಲ್ಲಿ ಇರಬಹುದು? ಎಲೈ ಪ್ರಿಯ ಸ್ನುಷೇ ಜಾನಕೀ, ನೀನಾದರೂ ಎಲ್ಲಿಗೆ ಹೋದೆ!” ಎಂದು ವಿಲಾಪಿಸುತ್ತಿರುವಾಗ ಆರಾತ್ರಿಯು ಯುಗದಂತೆ ತೋರಿತು. ಏನು ಮಾಡಿದರೂ ಬೆಳಗಾಗಲೊಲ್ಲದು! ಅರಸನಿಗೆ ಅಂಧನಾದ ತಪಸ್ವಿಯ ಶಾಪದ ನೆನಪಾಗಿ ಆ ಸಂಗತಿಯನ್ನೆಲ್ಲ ಆತನು ಕೌಸಲ್ಯೆಗೆ ಹೇಳಿದನು. ಹೇಳಹೇಳುತ್ತ ಅರಸನು ಕಲಾಹೀನನಾಗುತ್ತ ಹೋಗಿ ಕಡೆಗೆ “ರಾಮರಾಮ” ಅನ್ನುತ್ತ ದೇವಲೋಕವನ್ನು ಕುರಿತು ಪ್ರಯಾಣಮಾಡಿದನು. ಬದುಕುವವರ ಹಾಗು ಸಾಯುವವರ ಸಾರ್ಥಕ್ಯವು ದಶರಥನಿಗೆ ಮಾತ್ರ ಆಯಿತು. ಯಾಕಂದರೆ ಆತನು ಬದುಕಿರುವವರೆಗೆ ರಾಮಚಂದ್ರನ ಮುಖ

ವನ್ನು ನೋಡಿದನು. ರಾಮವಿಯೋಗವಾದಕೂಡಲೆ ಆತನು ಮರಣವನ್ನು ಸಾಧಿಸಿದನು. ದಶರಥನ ರೂಪ-ಶೀಲ-ಬಲಗಳನ್ನು ನೆನಸಿ ಯಾವತ್ತು ರಾಣಿಯರು ಗೋಳಿಟ್ಟು ಅಳತೊಡಗಿದರು. ದಾಸದಾಸಿಯರೂ ಅಳತೊಡಗಿದರು. ಪುರವಾಸಿ ಜನರು ಮನೆಮನೆಗಳಲ್ಲಿ ಕಣ್ಣೀರು ಸುರಿಸತೊಡಗಿದರು. ಕೈಕೇಯಿಯು ಜಗತ್ತನ್ನು ಕುರುಡವಮಾಡಿದಳೆಂದು ಎಲ್ಲರು ಆಕೆಗೆ ಬಾಯಿಗೆ ಬಂದಂತೆ ಬೈದು ಶಪಿಸತೊಡಗಿದರು. ಈ ಮೇರೆಗೆ ಎಲ್ಲರೂ ಶೋಕಮಗ್ನರಾಗಿರುವಾಗ ಬೆಳಗಾಯಿತು. ದೊಡ್ಡ ದೊಡ್ಡ ಜ್ಞಾನಿಗಳಾದ ಮುನಿವರ್ಯರು ಒಟ್ಟುಗೂಡಿದರು. ವಶಿಷ್ಠಮಹಾಮುನಿಗಳು ಸಮಯೋಚಿತವಾದ ಹಲವು ಪುರಾತನಕಥೆಗಳನ್ನು ಹೇಳಿ ತಮ್ಮ ವಿಜ್ಞಾನ ಪ್ರಕಾಶದಿಂದ ಎಲ್ಲರ ಶೋಕವನ್ನು ದೂರಮಾಡಿದರು. ಬಳಿಕ ನಾವಿನಲ್ಲಿ ಎಣ್ಣೆಯನ್ನು ಹಾಕಿ ಅದರಲ್ಲಿ ಅರಸನ ಶವವನ್ನು ಇಟ್ಟರು.

ಈ ಮೇರೆಗೆ ವ್ಯವಸ್ಥೆ ಮಾಡಿದನಂತರ ವಶಿಷ್ಠರು ದೂತರನ್ನು ಕರಿಸಿ ಅವರನ್ನು ಕುರಿತು—"ನೀವು ಕ್ಷಣವಾದರೂ ನಿಲ್ಲದೆ ಭರತನಕಡೆಗೆ ಓಡುತ್ತ ಹೋಗಿರಿ. ಮಾವನ ಮನೆಯಲ್ಲಿರುವ ಆತನಿಗಾಗಲಿ, ಬೇರೆಯವರಿಗಾಗಲಿ ಅರಸನ ಸಂಬಂಧವಾಗಿ ಏನೂ ಹೇಳದೆ, ನಿಮ್ಮಿಬ್ಬರು ಬಂಧುಗಳನ್ನು ಗುರುಗಳು ಕರಕೊಂಡು ಬರಹೇಳಿದ್ದಾರೆಂಬದಿಷ್ಟೇ ನಿರೂಪವನ್ನು ತಿಳಿಸಿರಿ" ಎಂದು ಅಜ್ಞಾಪಿಸಿದರು. ತೇಜಸ್ವಿಗಳಾದ ಕುದುರೆಗಳೂ ನಾಚುವಂತಹ ವೇಗದಿಂದ ದೂತರು ಓಡತೊಡಗಿದರು. ಅಯೋಧ್ಯೆಯಲ್ಲಿ ಅನರ್ಥವು ಒದಗಿದಾಗಿನಿಂದ ಭರತನಿಗೆ ಅಪಶಕುನಗಳಾಗತೊಡಗಿದ್ದವು. ಆತನಿಗೆ ರಾತ್ರಿಯಲ್ಲಿ ಭಯಂಕರವಾದ ಸ್ವಪ್ನಗಳು ಬೀಳತೊಡಗಿದ್ದವು ಎಚ್ಚತ್ತಬಳಿಕ ಆತನಿಗೆ ಇಲ್ಲದ ಕೆಟ್ಟ ಕೆಟ್ಟ ಕಲ್ಪನೆಗಳು ಅಸಂಖ್ಯವಾಗಿ ಬರತೊಡಗಿದವು. ಆತನು ತನ್ನಿಮಿತ್ತವಾಗಿ ದಿನಾಲು ಬ್ರಾಹ್ಮಣಭೋಜನ ಮಾಡಿಸತೊಡಗಿ, ಬಡಬಗ್ಗರಿಗೆ ದಾನಧರ್ಮಗಳನ್ನು ಮಾಡತೊಡಗಿದನು. ಹಲವುಬಗೆಯಿಂದ ಶ್ರೀ ಶಂಕರನಿಗೆ ಅಭಿಷೇಕಮಾಡಿಸತೊಡಗಿ, ತನ್ನ ತಾಯಿ ತಂದೆ ಬಂಧುಗಳೇ ಮೊದಲಾದಕುಟುಂಬದವರೆಲ್ಲರೂ ಕ್ಷೇಮದಿಂದಿರಲೆಂದು ಪ್ರಾರ್ಥಿಸತೊಡಗಿದನು. ಹೀಗೆಭರತನು ಚಿಂತೆಗೊಳಗಾಗಿರಲು, ದೂತರುಬಂದರು. ಗುರುಗಳಅಪ್ಪಣೆಯನ್ನು ಕೇಳಿದಕೂಡಲೆಭರತನು ಸಿದ್ಧಿವಿನಾಯಕನನ್ನು ಸ್ಮರಿಸಿ ಹೊರಟನು. ಆತನು ಕುದುರೆಯನ್ನು ವೇಗವಾಗಿ ನಡಿಸುತ್ತ ಸಾಗಿದನು. ಆತನ ಮನಸ್ಸಿಗೆ ಬಹಳ ಚಡಪಡಿಕೆಯಾದದ್ದರಿಂದ ಸಮಾಧಾನವಾಗದೆ "ಒಮ್ಮೆಲೆ ಹಾರಿಹೋಗಲಾ" ಅನ್ನುವಹಾಗೆ ಆತನಿಗೆ ಆಯಿತು. ಒಂದು ಪಳವು ಆತನಿಗೆ ಸಂವತ್ಸರದಂತೆ ತೋರಿ ಆತನು ಅಯೋಧ್ಯೆಯ ಸಮೀಪಕ್ಕೆ ಬಂದನು. ನಗರವನ್ನು ಪ್ರವೇಶಿಸುವಾಗ ಆತನಿಗೆ ಅಪಶಕುನಗಳು ಆಗತೊಡಗಿದವು. ಜೀವಜಂತುಗಳು ಅಮಂಗಲವಾಗಿ ಭಯಂಕರ ಶಬ್ದಮಾಡತೊಡಗಿದವು. ಕತ್ತೆ-ನರಿಗಳು ಪ್ರತಿಕೂಲವಾಗಿ ಒದರುವದನ್ನು ಮೇಲೆ ಮೇಲೆ ಕೇಳಿ ಭರತನ

ಮನಸ್ಸಿನಲ್ಲಿ ನಡುಗು ಹುಟ್ಟಿಕೊಂಡಿತು. ಕೆರೆಗಳು, ನದಿಗಳು, ವನಗಳು, ತೋಟಗಳು ನಿಸ್ತೇಜವಾಗಿ ಕಾಣತೊಡಗಿದವು. ಅಯೋಧ್ಯೆಯಂತು ವಿಶೇಷ ಭಯಪ್ರದವಾಗಿ ತೋರಹತ್ತಿತು. ಪಕ್ಷಿಗಳು, ಮೃಗಗಳು, ಆನೆಗಳು, ಕುದುರೆಗಳು ಕೂಡ ರಾಮ ವಿಯೋಗದ ದುರ್ಧರದುಃಖದಿಂದ ನೋಡಲಾಗದಷ್ಟು ಜರ್ಜರವಾಗಿದ್ದವು. ಪಟ್ಟಣ ದೊಳಗಿನ ಜನರು ತಮ್ಮ ಸರ್ವಸ್ವವನ್ನು ಕಳೆದುಕೊಂಡವರಂತೆ ಉದಾಸವಾಗಿದ್ದರು. ಅವರು ಭರತನನ್ನು ಕಂಡರೂ ಬರಿಯ ನಮಸ್ಕಾರಮಾಡಿ ಸುಮ್ಮನೆ ಹೋಗುತ್ತಿದ್ದರು. ಇದನ್ನು ನೋಡಿ ಭರತನ ಮನಸ್ಸಿನಲ್ಲಿ ಭಯ-ವಿಷಾದಗಳು ಉತ್ಪನ್ನವಾದದ್ದರಿಂದ, ಅವನೂ ಅವರ ಕ್ಷೇಮಸಮಾಚಾರವನ್ನು ವಿಚಾರಿಸದಾದನು

ಮಗನು ಬಂದ ವರ್ತಮಾನವನ್ನು ಕೇಳಿ ಕೈಕೇಯಿಯು ಹರ್ಷಿತಳಾಗಿ, ಆರತಿಯನ್ನು ತಕ್ಕೊಂಡು ಹೋಗಿ ಮಗನನ್ನು ಒಳಗೆ ಕರೆದುಕೊಂಡು ಹೋದಳು. ಭರತನು ದುಃಖಿತನಾಗಿರುವದನ್ನು ನೋಡಿ ಕೈಕೇಯಿಯು ತನ್ನ ತವರು ಮನೆಯವರ ಕ್ಷೇಮಸಮಾಚಾರವನ್ನು ವಿಚಾರಿಸಿದಳು. ಭರತನು ಎಲ್ಲರೂ ನೆಟ್ಟಗಿರುವರೆಂದು ಹೇಳಿ ತಾಯಿಯನ್ನು ಕುರಿತು ತನ್ನಮನೆಯವರ ಕ್ಷೇಮಸಮಾಚಾರವನ್ನು ವಿಚಾರಿಸುವದಕ್ಕಾಗಿ—"ಅವ್ವಾ, ಅಪ್ಪನು ಎಲ್ಲಿರುವನು?" ಎಂದು ಕೇಳಲು, ಮಗನ ಪ್ರೇಮಲಭಾಷಣವನ್ನು ಕೇಳಿ ಆ ಪಾಪಿಷ್ಠೆಯಾದ ಕೈಕೇಯಿಯು—"ಬಾಳಾ, ಪಾಪ! ಮಂಥರೆಯ ಸಹಾಯದಿಂದ ನಾನು ಎಲ್ಲ ಕೆಲಸವನ್ನು ಸಾಧಿಸಿದ್ದೆನು; ಆದರೆ ದುರ್ದೈವವು ನಡುವೇ ಘಾತಮಾಡಿದ್ದರಿಂದ ಮಹಾರಾಜರು ಸುರಪುರ ಹೊಂದಿದರು" ಎಂದು ಹೇಳಿದಳು. ಅದನ್ನು ಕೇಳಿ ಭರತನು ಭಯವಿಷಾದಗಳಿಂದ ಮುಂದುಗಾಣದೆ—"ಎಲ್ಲೈ ತಾತನೇ, ಎಲ್ಲೈ ತಾತನೇ, ಎಲ್ಲೈ ತಾತಾ, ಹೋಗುವಾಗ ನನ್ನನ್ನು ರಾಮನಿಗೂ ಒಪ್ಪಿಸಿ ಹೋಗಲಿಲ್ಲವಲ್ಲ!" ಎಂದು ಹಾ ಹಾ ಕಾರಮಾಡುತ್ತ ಭೂಮಿಯಮೇಲೆ ಉರುಳಾಡ ಹತ್ತಿದನು. ಆತನು ಮತ್ತೆ ಧೈರ್ಯತಾಳಿ, ತನ್ನ ತಂದೆಯ ಮರಣದ ಕಾರಣವನ್ನು ಕೇಳಲು, ಕುಟಿಲಳಾದ ಕ್ರೂರ ಕೈಕೇಯಿಯು ಹಸಿಗಾಯವನ್ನು ವಿಷದಿಂದ ತುಂಬುವಂತೆ, ತನ್ನ ಕರ್ಮಕಥೆಯನ್ನು ಆದ್ಯಂತವಾಗಿ ಹರ್ಷಭರದಿಂದ ಹೇಳಿದಳು. ರಾಮನ ವನಪ್ರಯಾಣವನ್ನು ಕೇಳಿದಕೂಡಲೆ ಭರತನು ತಂದೆಯ ಮರಣವನ್ನು ಮರೆತನು. ಮತ್ತು ತಾನು ರಾಮನ ವನವಾಸಕ್ಕೆ ಕಾರಣನಾದೆನೆಂದು ಮನಸ್ಸಿನಲ್ಲಿ ತಿಳಿದು ಬೆರಗಾಗಿ ಸುಮ್ಮನೆ ನಿಂತುಕೊಂಡನು. ಭರತನು ವಿಹ್ವಲನಾದದ್ದನ್ನು ನೋಡಿ ಆತನನ್ನು ಸಮಾಧಾನಗೊಳಿಸುವದಕ್ಕಾಗಿ ಸುಟ್ಟಗಾಯಕ್ಕೆ ಉಪ್ಪು ತೊಡೆಯುವಂತೆ ಕೈಕೇಯಿಯು ಭರತನಿಗೆ—"ಬಾಳಾ, ಅರಸನ ಸಲುವಾಗಿ ಶೋಕ ಮಾಡುವದು ನಿನಗೆ ಉಚಿತವಲ್ಲ. ಅವರು ಭೋಗಿಸತಕ್ಕದ್ದನ್ನೆಲ್ಲ ಭೋಗಿಸಿಕೊಂಡರು, ಸುಕೃತವನ್ನೂ ಯಶಸ್ಸನ್ನೂ ವಿಪುಲವಾಗಿ ಸಂಪಾದಿಸಿ, ಬದುಕಿದ್ದರ ಸಾರ್ಥಕ್ಯ ಮಾಡಿಕೊಂಡದ್ದಲ್ಲದೆ, ಸತ್ತಬಳಿಕ

ಸ್ವರ್ಗವನ್ನು ಸಂಪಾದಿಸುವರು. ಇದನ್ನೆಲ್ಲ ವಿಚಾರಿಸಿ ಶೋಕವನ್ನು ಬಿಟ್ಟುಕೊಟ್ಟು ವೈಭವದಿಂದ ಅಯೋಧ್ಯೆಯ ರಾಜ್ಯವನ್ನು ಆಳು," ಎಂದು ಹೇಳಿದಳು.

ತಾಯಿಯ ಮಾತು ಕೇಳಿ ರಾಜಕುಮಾರನು ತಳಮಳಿಸುತ್ತ ಧೈರ್ಯ ತಾಳಿ ನಿಟ್ಟುಸಿರು ಬಿಟ್ಟು—ಎಲೈ ಪಾಪಿಣಿಯೇ, ಕುಲದ ಸರ್ವಸ್ವವನ್ನು ಘಾತ ಮಾಡಿದೆ! ನೀನು ಇಂಥ ಕೆಟ್ಟವಾಸನೆಯುಳ್ಳವಳಾಗಿದ್ದರೆ ಹುಟ್ಟುತ್ತಲೆ ನನ್ನ ಕುತ್ತಿಗೆಯನ್ನು ಯಾಕೆ ಹಿಚುಕಲಿಲ್ಲ? ಬೇರನ್ನು ಕತ್ತರಿಸಿ ಮೇಲೆ ಎಲೆಗಳ ಮೇಲೆ ನೀನು ನೀರು ಸಿಂಪಡಿಸಿದಂತೆ ಮಾಡಿದೆ! ಮೀನವನ್ನು ಬದುಕಿಸುವದಕ್ಕಾಗಿ ನೀನು ನೀರು ತೋಡಿ ಚಲ್ಲಿದೆ! ಸೂರ್ಯ ಕುಲದಂಥ ಉಜ್ವಲ ಕುಲವು, ದಶರಥನಂಥ ತಂದೆಯು, ರಾಮಲಕ್ಷ್ಮಣರಂಥ ಬಂಧುಗಳು ನನಗೆ ಪ್ರಾಪ್ತವಾಗಿದ್ದು, ನನ್ನ ತಾಯಿಯು ನೀನು ಇಂಥ ತಾಯಿಯಾದೆಯಲ್ಲವೆ! ದುರ್ದೈವಕ್ಕೆ ಮಾಡುವದೇನು? ಎಲೈ ದುಷ್ಟಬುದ್ಧಿಯೇ, ನಿನ್ನಮನಸ್ಸಿನಲ್ಲಿ ಈ ದುಷ್ಟ ಭಾವನೆಯುಂಟಾದಾಗಲೇ ನಿನ್ನಹೃದಯವು ತುಂಡುತುಂಡಾಗಿ ಯಾಕೆ ಹೋಗಲಿಲ್ಲ! ವರವನ್ನು ಕೇಳಿಕೊಳ್ಳುವಾಗ ನಿನಗೆ ನಾಚಿಕೆಯಾದರೂ ಹೇಗೆ ಬರಲಿಲ್ಲ! ನಿನ್ನ ನಾಲಿಗೆಯು ಉದುರಿಬಿದ್ದು ಹುಳಗಳಾದರೂ ಯಾಕೆ ಬೀಳಲಿಲ್ಲ! ಅರಸನು ನಿನ್ನ ಮೇಲೆ ವಿಶ್ವಾಸವನ್ನಾದರೂ ಹೇಗೆ ಇಟ್ಟನು! ಆತನ ಮರಣಕಾಲವು ಸಮೀಪಿಸಿದ್ದರಿಂದಲೇ ಆತನ ಪ್ರಾರಬ್ಧವು ಆತನ ಬುದ್ಧಿಯನ್ನು ಹರಣಮಾಡಿತು. ಈ ಹೆಂಗಸರೆಂದರೆ, ಯಾವತ್ತು ಕಪಟಗಳ, ಪಾಪಗಳ, ದುರ್ಗುಣಗಳ ಖನಿಯೇ ಆಗಿರುವರು. ಇವರ ಹೃದ್ಗತವು ಪ್ರತ್ಯಕ್ಷ ಬ್ರಹ್ಮದೇವನಿಗೂ ತಿಳಿಯದಿರುವಾಗ ಸರಳನೂ, ಸುಶೀಲನೂ, ಧರ್ಮಪರಾಯಣನೂ ಆಗಿರುವ ಅರಸನಿಗೆ ಅದು ಹೇಗೆ ತಿಳಿಯಬೇಕು? ಈ ಜಗತ್ತಿನಲ್ಲಿ ಶ್ರೀ ರಘುರಾಮನು ಪ್ರಾಣಕ್ಕಿಂತಲೂ ಪ್ರಿಯನಾಗಿ ತೋರದ ಪ್ರಾಣಿಯು ಯಾವದಿರಬಹುದು? ರಾಮನು ಹೃದಯದಲ್ಲಿ ಇಷ್ಟು ಒತ್ತುತ್ತಿರುವ ನೀನು ನಿಜವಾಗಿ ಯಾರಿರುವೆಯೆಂಬದನ್ನಾದರೂ ನಿಜವಾಗಿ ಹೇಳು. ಅಥವಾ ನೀನು ಇದ್ದವಳು ಇದ್ದಹಾಗೆ ಸಂತೋಷದಿಂದ ಇರು; ಆದರೆ ನಿನ್ನ ಕಪ್ಪು ಮೋರೆಯು ನನ್ನ ಕಣ್ಣಿಗೆ ಬೀಳದಂತೆ ಎತ್ತಾದರೂ ಎದ್ದು ಹೋಗಿ ಕುಳಿತುಕೋ. ರಾಮನ ಶತ್ರುವಾದ ನಿನ್ನ ಹೊಟ್ಟೆಯಲ್ಲಿ ಬ್ರಹ್ಮದೇವನು ನನ್ನನ್ನು ಹುಟ್ಟಿಸಿರುವದರಿಂದ, ನನ್ನಂಥ ಪಾಪಿಯು ಈ ಜಗತ್ತಿನಲ್ಲಿ ಯಾರಿರಬಹುದು? ಅಥವಾ ನಾನು ನಿನಗೆ ಏನು ಅಂದರೂ ವ್ಯರ್ಥವೇ ಇರುವದು.

ತಾಯಿಯ ಈ ಕೌಟಿಲ್ಯವನ್ನು ನೋಡಿ ಶತ್ರುಘ್ನನೂ ಸಂತಾಪಗೊಂಡನು; ಆದರೆ ಮಾಡುವನೇನು? ಅಷ್ಟರಲ್ಲಿ ಮಂಥರೆಯು ವಸ್ತ್ರಾಭರಣಗಳಿಂದ ಸಿಂಗಾರಾಗಿ ಅಲ್ಲಿಗೆ ಬರಲು, ಶತ್ರುಘ್ನನು ಸಿಟ್ಟಿನಿಂದ ಆಕೆಯ ಟೊಂಕ ಮುರಿಯುವಹಾಗೆ ಒದ್ದನು. ಆಗ ನೆಲಕ್ಕೆ ಬಿದ್ದ ಆ ಕುಬ್ಜೆಯ ಟೊಂಕ ಮುರಿದು ತಲೆ ಒಡೆಯಿತು; ಹಲ್ಲುಗಳು ಪುಡಿಪುಡಿಯಾದವು; ಬಾಯಿಂದ ರಕ್ತದಕರಣಿಗಳು ಹೊರಬೀಳಹತ್ತಿದವು. ಆಗ ಆಕೆಯು—ಹಾಯ್

ಹಾಯ್! ದೈವವೇ, ನಾನೇನು ಇವರಿಗೆ ಅಂತಹದು ಮಾಡಿದ್ದೆನು? ಒಳ್ಳೆಯದನ್ನು ಮಾಡಹೋದದ್ದಕ್ಕೆ ಇಂಥ ಫಲವು ದೊರೆಯಬೇಕೇ? ಎಂದು ಆಕ್ರೋಶ ಮಾಡತೊಡಗಲು, ಶತ್ರುಘ್ನನು—"ಈಕೆಯು ನಖಶಿಖಾಂತ ತಗಲಳಿರುವಳೆ" ಎಂದು ತಿಳಿದು ಆಕೆಯ ಹೆರಳು ಹಿಡಿದು ದರದರ ಎಳೆಯಹತ್ತಿದನು. ಅದನ್ನು ನೋಡಿ ದಯಾಲುವಾದ ಭರತನು ಆಕೆಯನ್ನು ಬಿಡಿಸಿದನು. ಬಳಿಕ ಆ ಇಬ್ಬರು ಬಂಧುಗಳು ಕೌಸಲ್ಯೆಯ ಬಳಿಗೆ ಹೋದರು. ಮಲಿನ ವಸ್ತ್ರವನ್ನುಟ್ಟುಕೊಂಡವಳೂ, ಕಾಂತಿಹೀನಳೂ, ದುಃಖದ ಪರ್ವತವು ಕಡಿದುಕೊಂಡು ಬಿದ್ದದ್ದರಿಂದ ಶರೀರದಿಂದ ಕೃಶಳಾದವಳೂ, ಭೂಮಿಯಲ್ಲಿ ತಳಮಳಿಸುತ್ತ ಬಿದ್ದುಕೊಂಡವಳೂ ಆದ ಕೌಸಲ್ಯೆಯು ಭರತನನ್ನು ನೋಡಿದಕೂಡಲೆ ಎದ್ದು ಧಾವಿಸಿ ಬರುವಾಗ್ಗೆ ಕಣ್ಣುಗಳಲ್ಲಿ ಕತ್ತಲೆಗೂಡಿದಂತಾಗಿ ಭೂಮಿಯ ಮೇಲೆ ಮೂರ್ಛಿತಳಾಗಿ ಬಿದ್ದಳು. ಅದನ್ನು ನೋಡಿ ಭರತನು ಬಹಳ ಗಾಬರಿಯಾಗಿ ನೈನ್ನುರಿತು, ಆ ಕೌಸಲ್ಯಾಮಾತೆಯ ಚರಣ ಹಿಡಿಯಲ್ಲಿ ಬಿದ್ದನು. ಆತನು ಕೌಸಲ್ಯೆಯನ್ನು ಕುರಿತು—ಅವ್ವಾ, ಅಪ್ಪನು ಎಲ್ಲಿ ಇರುವನು ತೋರಿಸು! ಜಾನಕಿಯೂ ನನ್ನ ಇಬ್ಬರು ಬಂಧುಗಳೂ ಎಲ್ಲಿಗೆ ಹೋದರವ್ವಾ! ಕೈಕೇಯಿಯು ಈ ಜಗತ್ತಿನಲ್ಲಿ ಯಾಕೆ ಹುಟ್ಟಿಬಂದಳು? ಹುಟ್ಟಿ ಬಂದು ನನ್ನಂಥ ಕುಲಕಲಂಕ ಮಗನನ್ನು ಹಡೆಯುವದಕ್ಕಿಂತ ಬಂಜೆಯಾದರೂ ಯಾಕೆ ಆಗಲಿಲ್ಲ? ಅವ್ವಾ, ನಿನ್ನ ಗತಿಯು ಹೀಗಾಗಲಿಕ್ಕೆ ಕಾರಣನಾದ ನನ್ನಂತಹ ಹತಭಾಗ್ಯನು ಯಾವನಿರಬಹುದು? ನಾನು ಅಪ್ಪನನ್ನು ಸ್ವರ್ಗಲೋಕಕ್ಕೆ ಕಳಿಸಿ, ರಘುವಂಶಮಣಿಯಾದ ರಾಮಚಂದ್ರನನ್ನು ವನಕ್ಕೆ ಕಳಿಸಿದನು. ಇಂಥ ಅಸಹ್ಯವಾದ ಸಂತಾಪ, ದುಃಖ, ದೂಷಣಗಳಿಗೆ ಪಾತ್ರನಾದಂಥ, ವಂಶವೃಕ್ಷಕ್ಕೆ (ಬಿದರಡವಿಗೆ) ಬೆಂಕಿಹಚ್ಚುವ ನನಗೆ ಧಿಕ್ಕಾರವಿರಲಿ!

ಭರತನ ಈ ದೈನ್ಯೋಕ್ತಿಗಳನ್ನು ಕೇಳಿದ ಕೂಡಲೆ ಕೌಸಲ್ಯೆಯು ಮೆಲ್ಲನೆ ಎದ್ದು, ಆತನನ್ನು ಬಿಗಿದಪ್ಪಿ ದುಃಖಾಶ್ರುಗಳಿಂದ ಆತನಿಗೆ ಅಭಿಷೇಕ ಮಾಡಿದಳು! ಆಗ ರಾಮನೇ ತಿರುಗಿಬಂದಂತೆ ಆ ಸರಳಹೃದಯದ ಕೌಸಲ್ಯಾ ಮಾತೆಗೆ ಆನಂದವಾಯಿತು. ಬಳಿಕ ಶತ್ರುಘ್ನನು ಆಕೆಯನ್ನು ಕಂಡನು. ಆಗ ಆಕೆಯ ದುಃಖವೂ, ಪ್ರೇಮವೂ ಹೊಟ್ಟೆಯಲ್ಲಿ ಹಿಡಿಸದಾದವು. ಆಕೆಯ ಆ ಸ್ವಭಾವವನ್ನು ನೋಡಿ ಎಲ್ಲಜನರು—"ಈಕೆಯು ರಾಮನತಾಯಿಯಾಗಿರುವದರಿಂದ ಹೀಗ ಯಾಕಿರಲಿಕ್ಕಿಲ್ಲ," ಎಂದು ಶ್ಲಾಘಿಸಿದರು. ಕೌಸಲ್ಯೆಯು ಭರತನನ್ನು ತೊಡೆಯ ಮೇಲೆ [illegible] ಕೊಂಡು, ಆತನ ಕಣ್ಣೀರುಗಳನ್ನು ಒರಿಸಿ ಮೃದುನುಡಿಗಳಿಂದ —ಬಾಳಾ, ಇಂದು ನೀನು ಧೈರ್ಯವನ್ನು ತಾಳಬೇಕು. ಕಠಿಣಪ್ರಸಂಗವಿರುವದನ್ನರಿತು ದುಃಖವನ್ನು ಬಿಗಿಹಿಡಿಯಲೇಬೇಕು. ಕಾಲಕರ್ಮಗಳ ರಚನೆಯು ಅಘಟಿತವಾದದ್ದು. ನೀನು ನಿನ್ನ ಮನಸ್ಸಿನಲ್ಲಿ ಕೊರಗಬೇಡ. ವತ್ಸಾ! ದೇವರು ಎಲ್ಲ ಬಗೆಯಿಂದಲೂ ನನ್ನ ಮೇಲೆ ಸಿಟ್ಟಾಗಿರುವನು! ಆದ್ದರಿಂದ ನೀನ್ನು

ಯಾರಿಗೂ ದೋಷವಿಡಬೇಡ. ಇಂಥ ದುಃಖವು ಒದಗಿದ್ದರೂ ಇನ್ನೂ ನಾನು ಜೀವದಿಂದಿರುವದರಿಂದ ದೇವರ ಮನಸ್ಸಿನಲ್ಲಿ ಏನಿರುವದೋ ಯಾರಿಗೆಗೊತ್ತು! ಬಾಳಾ, ತಂದೆಯ ಅಪ್ಪಣೆಯಾದ ಕೂಡಲೆ ರಘುವರನು ವಸ್ತ್ರಭೂಷಣಗಳನ್ನು ತ್ಯಜಿಸಿ ನಾರಿನವಸ್ತ್ರಗಳನ್ನು ಧರಿಸಿದನು. ಆದರೂ ಆತನ ಮನಸ್ಸಿಗೆ ಹರ್ಷವಿಷಾದಗಳು ಎಳ್ಳಷ್ಟಾದರೂ ಆಗಲಿಲ್ಲ. ಮನಸ್ಸಿನಲ್ಲಿ ಲಾಭ ಲೋಭಗಳನ್ನು ಹಿಡಿಯದೆ ರಘುಪತಿಯು ಪ್ರಸನ್ನವಾದ ಮನಸ್ಸಿನಿಂದ ಎಲ್ಲರನ್ನು ಎಲ್ಲಬಗೆಯಿಂದ ಸಮಾಧಾನಪಡಿಸುತ್ತ ವನಕ್ಕೆ ಹೊರಡಲು, ಎಷ್ಟು ಬೇಡವೆಂದು ಹೇಳಿದರೂ ಸೀತಾ-ಲಕ್ಷ್ಮಣರು ಆತನನ್ನು ಹಿಂಬಾಲಿಸಿ ಹೋದರು. ಅಪ್ಪಾ ಭರತಾ, ಹೀಗೆ ಸೀತೆಯೂ, ರಾಮಲಕ್ಷ್ಮಣರೂ ವನಕ್ಕೆ ಹೋದರೂ ನಾನು ಅವರನ್ನು ಹಿಂಬಾಲಿಸಿಹೋಗಲಿಲ್ಲ; ನನ್ನ ಪ್ರಾಣಗಳನ್ನೂ ಕಳಿಸಲಿಲ್ಲ. ರಾಮನಂಥಮಗನು, ನನ್ನಂಥ ತಾಯಿಯು! ರಾಮನ ಮೇಲಿನ ನನ್ನ ಮಮತೆಯನ್ನು ನೋಡಿ ನನಗೆ ನಾಚಿಕೆಯೂ ಬರುವದಿಲ್ಲ. ಬದುಕುವವರ ಹಾಗು ಸಾಯುವವರ ರಹಸ್ಯವನ್ನು ಮಹಾರಾಜರೊಬ್ಬರೇ ತಿಳಿದಿದ್ದರು." ಅನ್ನಲು, ಭರತನಿಂದ ಸಹಿತವಾಗಿ ಎಲ್ಲರೂ ದುಃಖಿಸತೊಡಗಿದರು. ಆ ಕಾಲದಲ್ಲಿ ಆ ರಾಜಮಂದಿರವು ಶೋಕಗೃಹದಂತೆ ತೋರಿತು.

ಭರತ-ಶತ್ರುಘ್ನರು ದುಃಖಿತರಾಗಿ ಅಳತೊಡಗಲು, ಆ ಇಬ್ಬರೂ ಬಂಧುಗಳನ್ನು ಕೌಸಲ್ಯೆಯು ಎದೆಗವಚಿ ನಾಲ್ಕು ವಿವೇಕದ ಮಾತುಗಳನ್ನು ಹೇಳಿ ಬಗೆಬಗೆಯಾಗಿ ಸಮಾಧಾನ ಪಡಿಸಿದಳು. ಉಳಿದ ರಾಣಿಯರೂ ವೇದಪುರಾಣಗಳೊಳಗಿನ ಸಮಯೋಚಿತ ಕಥೆಗಳನ್ನು ಹೇಳಿ ಭರತನನ್ನು ಸಮಾಧಾನಪಡಿಸಿದರು. ಆಮೇಲೆ ಭರತನು ಕೈಗಳನ್ನು ಜೋಡಿಸಿ, ತನ್ನ ನಿಷ್ಕಪಟವೂ, ಶುದ್ಧವೂ, ಸರಳವೂ ಆದ ಪ್ರಾಂಜಲವಾಣಿಯಿಂದ—"ಅವ್ವಾ, ಕೈಕೇಯಿಯು ಈ ಕೃತ್ಯದಲ್ಲಿ ನನ್ನದೇನಾದರೂ ಅಂಗವಿದ್ದರೆ, ಮಾತಾ-ಪಿತೃ-ಪುತ್ರಹತ್ಯಮಾಡಿದ, ಆಕಳ ಹಟ್ಟಿಗಳನ್ನೂ, ಬ್ರಾಹ್ಮಣರ ಮನೆಗಳನ್ನೂ ಸುಟ್ಟ, ಸ್ತ್ರೀಹತ್ಯ-ಭ್ರೂಣಹತ್ಯಗಳನ್ನು ಮಾಡಿದ, ಮಿತ್ರನಿಗೂ, ರಾಜನಿಗೂ, ವಿಷಪ್ರಯೋಗ ಮಾಡಿದ ಪಾತಕವೂ, ಇವುಗಳಲ್ಲದೆ ಬೇರೆ ಕವಿಕಥಿತ ಕಾಯಿಕ-ವಾಚಿಕ-ಮಾನಸಿಕ ಉಪಪಾತಕಗಳೂ ನನಗೆ ತಟ್ಟಲಿ! ಅವ್ವಾ, ಈ ಗುಪ್ತಸಂಗತಿಯ ಗಂಧವು ಕೂಡ ನನಗೆ ಹತ್ತಿದ್ದಾಗಿದ್ದರೂ, ಸಂತಸಂಗದಲ್ಲಿ ಪ್ರೇಮವಿಲ್ಲದವರ, ಪರಮಾರ್ಥಮಾರ್ಗವು ತೀರ ಬೇಸರವಾಗಿರುವವರ, ನರಜನ್ಮವು ಪ್ರಾಪ್ತವಾಗಿಯೂ ದೇವರನ್ನು ಭಜಿಸದಿರುವವರ, ಹರಿಹರ ಲೀಲೆಗಳು ಸವಿಹತ್ತದವರ, ವೇದಮಾರ್ಗವನ್ನು ಬಿಟ್ಟು ಅಡ್ಡ ಹಾದಿಯಿಂದ ಹೋಗುವವರ, ಕೇವಲ ವೇಷಮಾತ್ರದಿಂದ ಜಗತ್ತನ್ನು ಪೀಡಿಸುವ ದಾಂಭಿಕರ ಗತಿಯನ್ನು ಭಗವಾನ್ ಶಂಕರನು ನನಗೆ ಕೊಡಲಿ" ಎಂದು ನುಡಿಯಲು, ಕೌಸಲ್ಯೆಯು—"ಎಲೈ ತಾತಾ, ನೀನು ಯಾವಾಗಲೂ ವಾಣಿಯಿಂದಲೂ, ಮನಸ್ಸಿನಿಂದಲೂ ದೇಹದಿಂದಲೂ ರಾಮನಿಗೆ ಪ್ರಿಯನಾಗಿರುತ್ತೀ. ರಾಮನಾದರೂ ನಿನಗೆ ಪ್ರಾಣಕ್ಕಿಂತ

ಲೂ ಪ್ರಿಯನಾಗಿರುತ್ತಾನೆ ಚಂದ್ರನಿಂದ ವಿಷದ ಮಳೆಯು ಸುರಿಯಬಹುದು; ಹಿಮದಿಂದ ಅಗ್ನಿಯು ಹೊರಬೀಳಬಹುದು; ನೀರಿನೊಳಗಿನ ಪ್ರಾಣಿಗಳು ನೀರಿನೊಡನೆ ದ್ವೇಷ ಮಾಡಬಹುದು; ಜ್ಞಾನವಾಗಿಯೂ ಒಂದುಬಗೆಯ ಸಂಶಯವು ಉಳಿಯಬಹುದು; ಆದರೆ ನೀನುಮಾತ್ರ ರಾಮನಿಗೆ ಎಂದೂ ಬೇಡಾದವನಾಗಲಿಕ್ಕಿಲ್ಲ. ಈ ಕೃತಿಯಲ್ಲಿ ನಿನ್ನ ಅಂಗಪಿರುವವನು ಅವನಿಗೆ ಸ್ವಪ್ನದಲ್ಲಿಯೂ ಸುಖವಾಗಲಿ, ಸದ್ಗತಿಯಾಗಲಿ ಆಗಲಾರದು.'' ಎಂದು ನುಡಿದು ಕೌಸಲ್ಯೆಯು ಭರತನನ್ನು ಅಪ್ಪಿಕೊಳ್ಳಲು, ಆಕೆಯ ಮೊಲೆಗಳಿಂದ ಹಾಲು ಚಿಮ್ಮಿ ಆಕೆಯ ಕಣ್ಣುಗಳು ನೀರಿನಿಂದ ತುಂಬಿದವು. ಹೀಗೆ ದುಃಖಿಸುತ್ತಿರಲು, ಅವರು ಕುಳಿತಕುಳಿತಲ್ಲಿಯೇ ಬೆಳಗಾಯಿತು.

ಬಳಿಕ ವಸಿಷ್ಠ-ವಾಮದೇವರು ಬಂದು ಯಾವತ್ತು ಸಚಿವರನ್ನೂ, ಮಹಾಜನರನ್ನೂ ಕರೆಸಿ ಭರತನಿಗೆ ಯಥೋಚಿತ ನಾಲ್ಕು ಪರಮಾರ್ಥದ ಮಾತುಗಳನ್ನು ಹೇಳಿ ಹಲವುಬಗೆಯಿಂದ ಉಪದೇಶ ಮಾಡಿ—“ಬಾಳಾ, ಇನ್ನು ನೀನು ಧೈರ್ಯತಾಳಲೇಬೇಕು. ಈ ಕಾಲದ ಪ್ರಸಂಗಕ್ಕೆ ಸರಿಯಾಗಿ ವರ್ತಿಸಬೇಕು,” ಎಂದು ಹೇಳಲು, ಭರತನು ಗುರುಗಳ ಅಪ್ಪಣೆಯಂತೆ ಎದ್ದು ಅವರು ಹೇಳಿದಂತೆ ಯಾವತ್ತು ವಿಧಿಗಳನ್ನು ಮಾಡತೊಡಗಿದನು. ದಶರಥನ ದೇಹಕ್ಕೆ ವೈದಿಕರೀತಿಯಿಂದ ಸ್ನಾನಮಾಡಿಸಿದರು. ಬಹು ಸುಂದರವಾದ ವಿಮಾನವನ್ನು ಸಿದ್ಧಪಡಿಸಿದರು. ಭರತನು ಯಾವತ್ತು ತಾಯಂದಿರ ಕೈಕಾಲು ಬಿದ್ದು, ಅವರನ್ನು ಸಹಗಮನ ಮಾಡಗೊಡಲಿಲ್ಲ ಅವರಾದರೂ ರಾಮದರ್ಶನದ ಇಚ್ಛೆಯಿಂದ ಸಹಗಮನ ಮಾಡಲಿಲ್ಲವು. ಚಂದನ, ಅಗರು ಮೊದಲಾದ ಹಲವು ಪ್ರಕಾರದ ಸುಗಂಧದ್ರವ್ಯಗಳ ಹೊರೆಗಳನ್ನು ವಿಪುಲವಾಗಿ ತರಿಸಿದರು. ಸ್ವರ್ಗಾರೋಹಣಕ್ಕಾಗಿ ರಚಿಸಿದ ನಿಚ್ಚಣಿಕೆಯಂತೆ ಶರಯೂ ತೀರದಲ್ಲಿ ಉತ್ಕೃಷ್ಟವಾದ ಚಿತೆಯನ್ನು ರಚಿಸಿದರು. ಯಾವತ್ತು ದಹನವಿಧಿಯು ತೀರಿ ಸ್ನಾನವಾದಬಳಿಕ ವಿಧ್ಯುಕ್ತವಾಗಿ ತಿಲಾಂಜಲಿಯನ್ನು ಕೊಟ್ಟರು. ವೇದ, ಸ್ಮೃತಿ, ಪುರಾಣಮೊದಲಾದವುಗಳ ಸಮ್ಮತಿಯಂತೆ ಭರತನು ದಶಗಾತ್ರ ವಿಧಿಯನ್ನು ಮುಗಿಸಿದನು. ಮುನಿವರರು ಎಲ್ಲಿ ಹೇಗೆ ಆಜ್ಞಾಪಿಸುವರೋ ಅವಕ್ಕೂ ಅಧಿಕಪ್ರಮಾಣದಿಂದಮಾಡಿ ಆತನು ಶುದ್ಧನಾದಬಳಿಕ ಆಕಳುಗಳು, ಕುದುರೆಗಳು, ಆನೆಗಳು, ವಾಹನಗಳು ಮೊದಲಾದ ಯಾವತ್ತೂ ದಾನಗಳನ್ನು ಕೊಟ್ಟನು. ಭರತನು ಕೊಟ್ಟ ಸಿಂಹಾಸನ, ವಸ್ತ್ರ, ಅಲಂಕಾರ, ಅನ್ನ, ಪೃಥ್ವೀ, ಧನ, ಗೃಹ, ಮೊದಲಾದವುಗಳ ದಾನಗಳನ್ನು ಸ್ವೀಕರಿಸಿ ಬ್ರಾಹ್ಮಣರು ತೃಪ್ತರಾದರು. ಹೀಗೆ ತಂದೆಯ ಹಿತ-ಪ್ರೀತಿಗಳಿಗಾಗಿ ಭರತನು ಮಾಡಿದ ಕೃತಿಗಳನ್ನು ಲಕ್ಷಮುಖಗಳಿಂದ ವರ್ಣಿಸಿದರೂ ತೀರಲಾರದು.

ಬಳಿಕ ಮುನಿಶ್ರೇಷ್ಠರಾದ ವಸಿಷ್ಠರು ಶುಭಮುಹೂರ್ತವನ್ನು ನೋಡಿ ಯಾವತ್ತು ಅಮಾತ್ಯರ, ಜನರಮುಂದಾಳುಗಳ ದರ್ಬಾರವನ್ನು ಕೂಡಿಸಿದರು. ಎಲ್ಲರೂ ಬಂದು

ರಾಜನ ಸಭಾಗೃಹದಲ್ಲಿ ಕುಳಿತುಕೊಂಡರು. ಆಮೇಲೆ ವಸಿಷ್ಠರು ಭರತ-ಶತ್ರುಘ್ನ ರನ್ನು ಕರೆಕಳುಹಿ, ಭರತನನ್ನು ತೀರ ತಮ್ಮ ಹತ್ತರದಲ್ಲಿ ಕುಳ್ಳಿರಿಸಿಕೊಂಡು, ಕೈಕೇಯಿಯು ಯಾವತ್ತು ಕುಟಿಲ ತಂತ್ರಗಳನ್ನು ಸಾದ್ಯಂತವಾಗಿ ಹೇಳಿ, ಕಡೆಗೆ ದೇಹತ್ಯಾಗ ವನ್ನಾದರೂ ಮಾಡಿ ರಾಮನಮೇಲಿನ ತನ್ನ ಪ್ರೇಮವನ್ನು ಪ್ರಕಟಮಾಡಿದ ದಶರಥನ ಧರ್ಮವ್ರತವನ್ನೂ, ಸತ್ಯನಿಷ್ಠೆಯನ್ನೂ ಹೊಗಳಿದರು. ರಾಮನ ಗುಣ-ಶೀಲ-ಸ್ವಭಾವಗಳನ್ನು ವರ್ಣಿಸುವಾಗ ಮುನಿವರನ ನೇತ್ರಗಳು ಅಶ್ರುಪೂರ್ಣವಾಗಿ, ಆತನ ಶರೀರದಲ್ಲಿ ರೋಮಾಂಚಗಳೆದ್ದವು. ಆ ಮೇಲೆ ರಾಮನ ವಿಷಯದ ಲಕ್ಷ್ಮಣ-ಜಾನಕಿಯರ ಪ್ರೇಮವನ್ನು ವರ್ಣಿಸುವಾಗ ಅಂಥ ಜ್ಞಾನಿಗಳಾದ ವಸಿಷ್ಠರು ಕೂಡ ದುಃಖ- ಪ್ರೇಮಗಳಲ್ಲಿ ಮುಳುಗಿದರು. ಬಳಿಕ ವಸಿಷ್ಠರು ಅತ್ಯಂತ ಕನಿಕರದಿಂದ—"ಅಪ್ಪಾ ಭರತಾ ಕೇಳು. ಭವಿತವ್ಯತೆಯೇ ಪ್ರಬಲವಾಗಿರುವದು. ಲಾಭ-ಹಾನಿಗಳು, ಜನ್ಮ-ಮರಣಗಳು, ಯಶೋಪಯಶಗಳು ಪ್ರಾಕ್ತನದ ಅಧೀನವಾಗಿರುವವು. ಅಂದಬಳಿಕ ದೋಷವನ್ನಾದರೂ ಯಾರಮೇಲೆ ಹೊರಿಸಬೇಕು? ಸಂತಾಪಗೊಳ್ಳುವದಾದರೂ ಯಾರಮೇಲೆ? ಬಾಳಾ, ಭರತಾ, ನೀನೇ ಮನಸ್ಸಿನಲ್ಲಿ ವಿಚಾರಮಾಡಿನೋಡು. ದಶರಥರಾಜನು ಶೋಚನೀಯನಲ್ಲದ್ದರಿಂದ ಆತನ ವಿಷಯವಾಗಿ ಶೋಕಿಸುವದು ಯೋಗ್ಯವಲ್ಲವು. ಸ್ವಧರ್ಮವನ್ನು ತ್ಯಜಿಸಿ ವಿಷಯಲಂಪಟನಾಗಿ ವೇದಸಂಸ್ಕಾರರಹಿತನಾಗಿರುವ ಬ್ರಾಹ್ಮಣನು ಶೋಚನೀಯನು. ನೀತಿಜ್ಞನಲ್ಲದ, ಹಾಗು ಪ್ರಜೆಗಳು ಪ್ರಾಣಗಳಂತೆ ಪ್ರಿಯರಾಗಿ ತೋರದ ರಾಜನು ಶೋಕಾಸ್ಪದನಾಗಿರುವನು. ಧನವಂತನಾಗಿಯೂ ಕೃಪಣನಾಗಿರುವ, ಹಾಗು ಅತಿಥಿ-ಶಂಕರರಲ್ಲಿ ಭಕ್ತಿಯಿಲ್ಲದ ವೈಶ್ಯನು ಶೋಕಾಸ್ಪದನಾಗಿರುವನು. ಬ್ರಹ್ಮದ್ವೇಷಿಯೂ, ವಾಚಾಳನೂ, ಮಾನಕ್ಕಾಗಿ ಹಾತೊರೆಯುವವನೂ, ಜ್ಞಾನದದೊಡ್ಡಿಸ್ತನ ಮೆರಿಸುವವನೂ ಆದ ಶೂದ್ರನು ಶೋಚನೀಯನಾಗಿರುವನು. ಅಜ್ಞಾನವಶನಾಗಿ ಕರ್ಮಮಾರ್ಗವನ್ನು ತ್ಯಜಿಸುವ ಗೃಹಸ್ಥನೂ, ಪ್ರಪಂಚರಹಿತನಾಗಿ ವೈರಾಗ್ಯ-ವಿವೇಕ ಶೂನ್ಯನಾಗಿರುವ ಸನ್ಯಾಸಿಯೂ ಶೋಚನೀಯರಾಗಿರುವರು. ತಪಸ್ಸನ್ನು ಬಿಟ್ಟುಕೊಟ್ಟು ಭೋಗವಿಲಾಸಕ್ಕೆ ಮೆಚ್ಚಿದ ವಾನ ಪ್ರಸ್ಥನು ಶೋಚನೀಯನು. ಕಾರಣವಿಲ್ಲದೆ ಸಿಟ್ಟಾಗುವವರೂ, ತಂದೆ-ತಾಯಿ-ಬಂಧು-ಗುರು ಇವರನ್ನು ದ್ವೇಷಿಸುವವರೂ ಆದ ಪಿಶುನರು ಶೋಚನೀಯರಾಗಿರುವರು. ಪರಪೀಡಕನೂ, ಅತಿ ನಿರ್ದಯನೂ, ಕೇವಲ ಸ್ವಪಿಂಡಪೋಷಕನೂ ಆದವನು ಎಲ್ಲಬಗೆಯಿಂದಲೂ ಶೋಚನೀಯನಾಗಿರುವನು. ಕಪಟವನ್ನು ತ್ಯಜಿಸಿ ಭಗವದ್ಭಕ್ತಿರತನಾಗದವನು ಎಲ್ಲಬಗೆಯಿಂದ ಅಧಿಕವಾಗಿ ಶೋಚನೀಯನಾಗಿರುವನು; ಆದರೆ ಹದಿನಾಲ್ಕುಲೋಕಗಳಲ್ಲಿ ಪ್ರಭಾವವು ದಿಮಿಗುಟ್ಟುತ್ತಿರುವ ಕೋಸಲಾಧೀಶ್ವರನಾದ ದಶರಥರಾಜನು ಮಾತ್ರ ಶೋಚನೀಯನಲ್ಲವು. ಅಪ್ಪಾ ಭರತಾ, ನಿನ್ನ ತಂದೆಯಂಥ ರಾಜನು ಹಿಂದಕ್ಕೆ ಆಗಲಿಲ್ಲ, ಈಗ ಇರುವದಿಲ್ಲ, ಮುಂದೆ ಆಗುವ

ಹಾಗಿಲ್ಲ. ಬ್ರಹ್ಮ, ಹರಿ, ಹರ, ಇಂದ್ರ, ಲೋಕಪಾಲವೊದಲಾದವರು ದಶರಥನ ಗುಣಗಳ ಗಾಯನಮಾಡುತ್ತಿರುವರು. ಎಲೈ ತಾತನೇ, ರಾಮ-ಲಕ್ಷ್ಮಣ-ಭರತ-ಶತ್ರುಘ್ನರೆಂಬ ನಿಮ್ಮಂಥ ಪವಿತ್ರಪುತ್ರರಿರುವ ದಶರಥನ ಮಹತ್ವವನ್ನು ಯಾವನು ಯಾವಬಗೆಯಿಂದ ವರ್ಣಿಸಲು ಶಕ್ತನಾದಾನು ಹೇಳು ನೋಡೋಣ! ಆದ್ದರಿಂದ ಎಲ್ಲರೀತಿಯಿಂದಲೂ ದಶರಥನು ಮಹದ್ಭಾಗ್ಯಶಾಲಿಯಾಗಿರುವನು. ಆತನಸಲುವಾಗಿ ದುಃಖಿಸುವದು ವ್ಯರ್ಥವು; ಆದ್ದರಿಂದ ನನ್ನ ಮಾತನ್ನು ಲಕ್ಷಿಸಿ ದುಃಖವನ್ನು ತ್ಯಜಿಸಿ, ತಂದೆಯ ಅಪ್ಪಣೆಯನ್ನು ಶಿರಸಾವಂದ್ಯವಾಗಿ ತಿಳಿದು ಅದರಂತೆ ಆಚರಿಸು. ಅರಸನು ರಾಜ್ಯಪದವನ್ನು ನಿನಗೆ ಅರ್ಪಿಸಿರುವನು; ಆದ್ದರಿಂದ ತಂದೆಯ ಅಪ್ಪಣೆಯನ್ನು ನೀನು ಸತ್ಯವಾಗಿ ಮಾಡತಕ್ಕದ್ದು.

ಅಪ್ಪಾ ಭರತಾ, ತಂದೆಯ ಅಪ್ಪಣೆಯನ್ನು ಪಾಲಿಸುವದರಲ್ಲಿಯೇ ನಿನ್ನ ಕಲ್ಯಾಣವಿರುವದು. ಪರಶುರಾಮನು ತಂದೆಯ ಅಪ್ಪಣೆಯನ್ನು ಪಾಲಿಸುವದಕ್ಕಾಗಿ ತಾಯಿಯನ್ನು ಕೂಡ ಸಂಹರಿಸಿದನೆಂಬದಕ್ಕೆ ಜಗತ್ತೇಸಾಕ್ಷಿಯಾಗಿರುವದು. ಕಾರ್ಯಾಕಾರ್ಯದ ವಿಚಾರವನ್ನು ಒತ್ತಟ್ಟಿಗಿಟ್ಟು ತಂದೆಯ ಅಪ್ಪಣೆಯನ್ನು ಪಾಲಿಸುವವರೇ ಸುಖಕ್ಕೂ, ಸತ್ಕೀರ್ತಿಗೂ ಪಾತ್ರರಾಗುವರು; ಅವರಿಗೇ ಸ್ವರ್ಗದಲ್ಲಿ ಕುಳಿತುಕೊಳ್ಳಲಿಕ್ಕೆ ಸ್ಥಳವು ದೊರೆಯುವದು; ಆದ್ದರಿಂದ ಪಿತೃವಾಕ್ಯವನ್ನು ಅವಶ್ಯವೇವ ಸತ್ಯವಾಗಿ ಮಾಡಬೇಕು; ಪ್ರಜೆಗಳ ದುಃಖವನ್ನು ದೂರಮಾಡಿ ಅವರನ್ನು ರಕ್ಷಿಸಬೇಕು; ಆದ್ದರಿಂದ ಸ್ವರ್ಗದಲ್ಲಿ ತಂದೆಗೆ ಸುಖವಾಗಿ ನಿನಗೆ ದೋಷ ತಟ್ಟದೆ ಪುಣ್ಯವೂ-ಸತ್ಕೀರ್ತಿಯೂ ಪ್ರಾಪ್ತವಾಗುವವು. ತಂದೆಯು ಯಾವನಿಗೆ ರಾಜ್ಯಕೊಡುವನೋ, ಅವನೇ ರಾಜ್ಯಕ್ಕೆ ಅಧಿಕಾರಿಯೆಂಬದು ವೇದವಿಹಿತವೂ, ಸರ್ವಸಮ್ಮತವೂ ಆಗಿರುವದು. ಆದ್ದರಿಂದ ಭರತಾ, ನೀನು ಔದಾಸೀನ್ಯವನ್ನು ಬಿಟ್ಟು ರಾಜ್ಯಭಾರಮಾಡು. ಈ ನನ್ನ ಅಪ್ಪಣೆಯು ಹಿತಕರವೆಂದು ತಿಳಿದು ಅದರಂತೆ ನಡೆದುಕೊಳ್ಳು. ನೀನು ರಾಜ್ಯಭಾರಸಾಗಿಸುವದನ್ನು ಕೇಳಿ ಸೀತಾರಾಮರಿಬ್ಬರೂ ಆನಂದಪಡುವರು; ಮತ್ತು ತಿಳಿದವರಾರೂ ನಿನಗೆ ದೋಷವಿಡಲಾರರು. ಕೌಸಲ್ಯಾದಿ ಎಲ್ಲ ತಾಯಂದಿರಾದರೂ ಪ್ರಜೆಗಳ ಸುಖದಿಂದ ಸುಖಿಗಳೇ ಆಗುವರು. ನಿನ್ನ ಪ್ರೇಮವು ರಾಮನಿಗೆ ಗೊತ್ತೇ ಇರುವದು. ಆತನು ಎಲ್ಲಬಗೆಯಿಂದ ನಿನ್ನ ಗುಣಾನುವಾದವನ್ನೇ ಮಾಡುವನು. ಆತನು ತಿರುಗಿಬಂದಬಳಿಕ ಆತನಿಗೆ ರಾಜ್ಯವನ್ನು ಒಪ್ಪಿಸಿ, ನೀನು ಸ್ವತಃ ಪ್ರೇಮಲಭಾವದಿಂದ ಆತನ ಸೇವೆಯನ್ನು ಮಾಡುತ್ತಲಿರು;" ಎಂದು ಹೇಳಲು, ಮಂತ್ರಿಮಂಡಲವು ಕೈಜೋಡಿಸಿ—"ಗುರುಮಹಾರಾಜರವರ ಅಪ್ಪಣೆಯಂತೆ ಅವಶ್ಯವಾಗಿ ನಡೆದುಕೊಳ್ಳತಕ್ಕದ್ದು. ರಾಮಚಂದ್ರನು ತಿರುಗಿ ಬಂದಬಳಿಕ ಯೋಗ್ಯತೋರಿದ್ದನ್ನು ಮಾಡಬೇಕು." ಎಂದು ಹೇಳಿದರು. ಆಗ ಕೌಸಲ್ಯೆಯು ಧೈರ್ಯತಾಳಿ—"ಬಾಳಾ, ಗುರುಗಳ ಅಪ್ಪಣೆಯೇ ಪಥ್ಯಕರವಾಗಿರುವದು.

ಅದರಲ್ಲಿಯೇ ನಿನ್ನ ಕಲ್ಯಾಣವಿರುವದೆಂದು ತಿಳಿದು, ಪ್ರಸಂಗವನ್ನು ಲಕ್ಷಿಸಿ ದುಃಖವನ್ನು ತ್ಯಜಿಸಿ ಅಪ್ಪಣೆಯಂತೆ ನಡೆ” ಎಂದು ಹೇಳಿದಳು.

ವಸಿಷ್ಠಗುರುಗಳ ಭಾಷಣವನ್ನೂ, ಅವಕ್ಕೆ ದೊರೆತ ಸಚಿವರ ಅನುಮೋದನವನ್ನೂ, ಕೌಸಲ್ಯಾಮಾತೆಯ ಮಧುರವಾಣಿಯನ್ನೂ ಕೇಳಿ ಭರತನ ದುಃಖವು ಉತ್ತರಿಸಿ ಕಣ್ಣೀರುಗಳು ಉದುರಹತ್ತಿದವು. ಆಗಿನ ಆತನ ಸ್ಥಿತಿಯನ್ನು ನೋಡಿ—“ಸಹಜವಾದ ಪ್ರೇಮದ ಶಿಖರವಾಯಿತೆಂ”ದು ಜನರು ಶ್ಲಾಘಿಸತೊಡಗಿದರು. ಆಗ ಧೈರ್ಯಧುರಂಧರನಾದ ಭರತನು ಧೈರ್ಯತಾಳಿ ಕೈಜೋಡಿಸಿ ತನ್ನ ಅಮೃತಸಂಪ್ರುಟಿತವಾಣಿಯಿಂದ ಎಲ್ಲರಿಗೂ ಸಮರ್ಪಕ ಉತ್ತರಕೊಡುವದಕ್ಕಾಗಿ ನುಡಿದನೇನೆಂದರೆ—“ಗುರು ಮಹಾರಾಜರು ನನಗೆ ಮಾಡಿದ ಉಪದೇಶವು ಯೋಗ್ಯವಾದದ್ದಿರುವದು; ಮಂತ್ರಿಪ್ರಜೆಗಳು, ಸಚಿವರು ಮೊದಲಾದವರ ಸಮ್ಮತಿಯೂ ಅದಕ್ಕೆ ಇರುವದು. ತಾಯಿಯೂ ಆ ಉಪದೇಶವೇ ಯೋಗ್ಯವೆಂದು ಹೇಳಿ ಅದರಂತೆ ನಡೆಯಲು ಆಜ್ಞಾಪಿಸುವದರಿಂದ ನಾನು ಅದನ್ನು ಶಿರಸಾಮನ್ನಿಸಿ ಪಾಲಿಸಲೇಬೇಕಾಗುವದು; ಯಾಕಂದರೆ ತಾಯಿ-ತಂದೆಗಳು, ಗುರುಗಳು, ಸ್ವಾಮಿಯು ಇವರ ಹಿತಕರವಾಣಿಯನ್ನು ಕೇಳಿದ ಬಳಿಕ, ಅದರಲ್ಲಿಯೇ ನನ್ನ ಕಲ್ಯಾಣವಿರುವದೆಂದು ತಿಳಿದು, ನಾನು ಅದನ್ನು ಉಲ್ಲಾಸಪೂರ್ವಕವಾಗಿ ಪಾಲಿಸಲೇಬೇಕಾಗುವದು. ಯೋಗ್ಯಾಯೋಗ್ಯಗಳ ವಿಚಾರಮಾಡಿದರೆ, ಗುರುಗಳ ಆಜ್ಞೆಯನ್ನು ಪಾಲಿಸದೆಯಿದ್ದಪಕ್ಷದಲ್ಲಿ ಧರ್ಮದ ಲೋಪವಾಗುವದಲ್ಲದೆ ತಲೆಯಮೇಲೆ ಪಾಪದ ಪರ್ವತವು ಬೀಳಬಹುದು. ತಾವು ಮಾಡಿದ ಸರಲವಾದ ಉಪದೇಶದಂತೆ ನಾನು ನಡೆದಪಕ್ಷದಲ್ಲಿ ನನ್ನ ಕಲ್ಯಾಣವೇ ಆಗುವದೆಂಬದು ನನಗೆ ಗೊತ್ತಿದ್ದರೂ, ನನ್ನ ಜೀವಕ್ಕೆ ನಿಶ್ಚಿಂತತೆಯು ತೋರಲೊಲ್ಲದು; ಆದ್ದರಿಂದ ನನ್ನ ವಿನಂತಿಯನ್ನು ಕೇಳಿಕೊಂಡು ಯೋಗ್ಯವಾದ ಉಪದೇಶವನ್ನು ನನಗೆ ಮಾಡತಕ್ಕದ್ದು. ನಾನು ತಮಗೆ ಪ್ರತ್ಯುತ್ತರ ಕೊಡುವ ಅಪರಾಧಕ್ಕಾಗಿ ನನ್ನನ್ನು ಕ್ಷಮಿಸಬೇಕು. ದುಃಖಿತರ ಗುಣ-ದೋಷಗಳನ್ನು ಸಜ್ಜನರು ಮನಸ್ಸಿನಲ್ಲಿ ಎಣಿಸುವದಿಲ್ಲ. ಮಹಾರಾಜರು ಸ್ವರ್ಗವಾಸಿಗಳಾಗಿ, ಸೀತಾ-ರಾಮರು ವನಕ್ಕೆ ಹೋಗಿದ್ದರೂ ನನಗೆ ರಾಜ್ಯಭಾರಮಾಡಲು ಉಪದೇಶಿಸುವದನ್ನು ನೋಡಿದರೆ, ಅದರಲ್ಲಿ ತಾವು ನನ್ನ ಹಿತವನ್ನು ಸಾಧಿಸುವಿರೋ, ಅಥವಾ ತಾವು ತಮ್ಮದೇ ಒಂದು ದೊಡ್ಡ ಕಾರ್ಯವನ್ನು ಸಾಧಿಸಿಕೊಳ್ಳುವಿರೋ ಎಂಬದು ನನಗೆ ತಿಳಿಯದಾಗಿದೆ. ನನ್ನ ಹಿತವೆಂದರೆ ಸೀತಾ-ರಾಮರನ್ನು ಸೇವಿಸುವದು. ಅದಕ್ಕಂತು ತಾಯಿಯ ಕೌಟಿಲ್ಯದಿಂದ ನಾನು ಎರವಾದೆನು. ನಾನು ಮನಸ್ಸಿನಲ್ಲಿ ಬಹಳ ವಿಚಾರಮಾಡಿ ನೋಡಿದರೂ, ಸೀತಾರಾಮರ ಚರಣಸ್ಪರ್ಶನದ ಹೊರತು ನನಗೆ ನನ್ನ ಕಲ್ಯಾಣದ ಅನ್ಯಮಾರ್ಗವು ತೋರಲೊಲ್ಲದು. ನನ್ನ ಆ ಕಲ್ಯಾಣದ ಮಾರ್ಗದಮುಂದೆ ದುಃಖದ ಆಗರವಾದ ಈ ರಾಜ್ಯದ ಹಂಗೇ ನನಗಿಲ್ಲವು. ವಸ್ತ್ರವಿರಹಿತಅಲಂಕಾರ, ವೈರಾಗ್ಯವಿರಹಿತಬ್ರಹ್ಮ

ಮಾಡಿದಳು; ಸ್ವತಃ ವೈಧವ್ಯವನ್ನೂ, ಅಪಕೀರ್ತಿಯನ್ನೂ ಸಂಪಾದಿಸಿದಳು; ಪ್ರಜೆಗಳಿಗೆ ಕಷ್ಟ, ದುಃಖಗಳ ಜೋಡುಮಾಡಿಕೊಟ್ಟಳು. ನನ್ನ ಪದರಿನಲ್ಲಿಯೂ ಸುಖ—ಕೀರ್ತಿ—ಸುರಾಜ್ಯಗಳನ್ನು ಹಾಕಿದಳು; ಅಂದಬಳಿಕ ಇದಕ್ಕಿಂತ ಹೆಚ್ಚಿನ ನನ್ನ ಹಿತವೇನು ಆಗಬೇಕಾಗಿದೆ? ಮೇಲೆ ಈಗ ನೀವೂ ನನಗೆ ರಾಜ್ಯಕೊಡಬೇಕೆನ್ನುವಿರಿ. ಒಟ್ಟಿಗೆ ಕೈಕೇಯಿಯಹೊಟ್ಟೆಯಲ್ಲಿಹುಟ್ಟಿಬಂದಿದ್ದ ನನ್ನ ಸಂಬಂಧದಿಂದಾದರೂ ಇದು ಎಷ್ಟುಮಾತ್ರವೂ ಅಯೋಗ್ಯವಲ್ಲ. ಪರಮೇಶ್ವರನೇ ನನಗೆ ಎಲ್ಲ ಅನುಕೂಲತೆಗಳನ್ನು ಒದಗಿಸಿಕೊಟ್ಟಿರುವಾಗ ಲೋಕಪ್ರತಿನಿಧಿಗಳು ನೀವು ನನ್ನ ಪಕ್ಷಗಟ್ಟಿ ಮಾಡುವದಾದರೂ ಏನು? ಮೊದಲೇ ಗ್ರಹಗಳ ಸುತ್ತುಗಳಲ್ಲಿ ಸಿಕ್ಕವನು; ಅದರಲ್ಲಿ ಉನ್ಮತ್ತವಾಯುವು ಬಡಿದವನು; ಮೇಲೆ ಚೇಳುಕಡಿದವನು; ಇಂಥವನಿಗೆ ಸೆರೆಕುಡಿಸಿತು; ಅಂದಬಳಿಕ ಇನ್ನು ಉಪಚಾರವಾಗುವದೇನು ಉಳಿದಂತಾಯಿತು? ಕೈಕೇಯಿಗೆ ಒಪ್ಪುವಂಥ ಮಗನಸ್ಥಾನದಲ್ಲಿ ಚತುರನಾದ ಬ್ರಹ್ಮದೇವನು ನನ್ನ ಯೋಜನೆಯನ್ನು ಮಾಡಿರುವನು; ಆದರೆ ದಶರಥಪುತ್ರನು, ರಾಮನ ಕನಿಷ್ಠಬಂಧುವು ಎಂಬ ಮಾನವನ್ನು ಮಾತ್ರ ಆತನು ವ್ಯರ್ಥವಾಗಿ ನನಗೆ ಕೊಟ್ಟನು.

ನಾನು ಸ್ವತಃ ರಾಜ್ಯಾಭಿಷೇಕ ಮಾಡಿಸಿಕೊಳ್ಳಬೇಕೆಂದು ರಾಜಾಜ್ಞೆಯಿರುವದೆಂತಲೂ, ಅದೇ ಎಲ್ಲರಿಗೂ ಶ್ರೇಯಸ್ಕರವಾಗಿರುವದೆಂತಲೂ ನೀವು ಹೇಳುವಿರಿ; ನೀವು ಹೀಗೆಯೇ ಸಂತೋಷದಿಂದ ಹೇಳುತ್ತಲೇ ಇರ್ರಿ; ಆದರೆ ನಾನು ಯಾರ ಸಂಗಡಲೂ, ಯಾವ ಬಗೆಯಿಂದಲೂ ಈ ವಿಷಯವಾಗಿ ವಾದಿಸುತ್ತ ಕುಳಿತುಕೊಳ್ಳುವದಿಲ್ಲ. ನೀವು ಒಮ್ಮೆ ಈ ಮಾತನ್ನು ಬಾಯಿಬಿಟ್ಟು ಆಡಿಬಿಟ್ಟದ್ದು ನೆಟ್ಟಗಾಯಿತು; ಯಾಕಂದರೆ ನನ್ನ ಕುಟಿಲ ತಾಯಿಯು, ಹಾಗು ನಾನು, ಅಲ್ಲದೆ ಬೇರೆ ಯಾರು ಇಂಥ ಸತ್ಕೃತ್ಯ ಮಾಡುವವರು ಇರಬಹುದು! ಸೀತಾರಾಮನು ಪ್ರಾಣಪ್ರಿಯನಾಗದಿರುವ ನನ್ನಂಥ ಪ್ರಾಣಿಯು ಈ ಜಗತ್ತಿನಲ್ಲಿ ಬೇರೆ ಯಾವದಿರಬಹುದು? ರಾಮನ ವನವಾಸದಂಥ ದೊಡ್ಡ ಹಾನಿಯು ನಿಮ್ಮೆಲ್ಲರದು ಆಗಿದ್ದರೂ, ನನಗೆ ದೊಡ್ಡ ಲಾಭವಾಗಿರುವದೆಂಬ ಸಂಶಯವು ನಿಮಗೆ ಬಂದೇ ಇರಬಹುದು; ಆದರೆ ನನ್ನ ಮೇಲೆ ತಮ್ಮ ಪ್ರೇಮವಿರುವದರಿಂದಲೇ ರಾಜ್ಯಾಭಿಷೇಕದ ಸಂಬಂಧದಿಂದ ನೀವು ಆಡುವಮಾತು ಸರ್ವತೋಪರಿ ಉಚಿತವಾಗಿರುವದು. ಇದರಲ್ಲಿ ನಿಮ್ಮ ದೋಷವೇನೂ ಇಲ್ಲ, ನನ್ನ ದೈವವೇ ಪ್ರತಿಕೂಲವಾಗಿರುವದು. ಕೌಸಲ್ಯೆಗೆ ನಾನು ರಾಮನನ್ನು ಪ್ರೀತಿಸುತ್ತಿರಲಿಕ್ಕಿಲ್ಲವೆಂಬ ಸಂಶಯವು ಉಂಟಾಗಿರುವದಿಲ್ಲ; ಅಂದಬಳಿಕ ಆಕೆಯಾದರೂ ನನಗೆ—"ನೀನು ಪಟ್ಟಾಭಿಷೇಕವನ್ನು ಮಾಡಿಕೊಳ್ಳದೆ ರಾಮನ ಸನ್ನಿಧಿಗೆ ಹೋಗೆಂ" ದು ಹೇಳಬಹುದಾಗಿತ್ತು; ಆದರೆ ಆಕೆಯು ಭೋಳೇಸ್ವಭಾವದವಳು, ನನ್ನ ಮೇಲೆ ಆಕೆಯ ಪ್ರೇಮವು ಬಹಳ; ಅದ್ದರಿಂದಲೇ ಆಕೆಯ ಬಾಯಿಂದ ಇಂಥ ಮಾತು ಸಹಜವಾಗಿ ಹೊರಟುಹೋಗಿಬಿಟ್ಟಿತು. ನಮ್ಮ ಗುರುಗಳಾದ ವಸಿಷ್ಠ

ರಿಗೆ ಈ ವಿಶ್ವದ ಜ್ಞಾನವು ಕರತಲಾಮಲಕದಂತೆ ಇರುವದು; ಇದಲ್ಲದೆ, ಅವರು ಭುವನ ವಿಖ್ಯಾತವಾದ ವಿವೇಕದ ಸಾಗರವಾಗಿರುವರು; ಆದರೆ ಅಂಥವರೂ ನನಗೆ ರಾಜ್ಯ ತಿಲಕವನ್ನಿಡಲು ಸಿದ್ಧರಾಗಿರುವರಲ್ಲ! ಒಟ್ಟಿಗೆ ದೈವವು ವಿಪರೀತವಾದಾಗ ಎಲ್ಲರೂ ವಿಪರೀತರಾಗುವರೆಂಬ ಮಾತೇ ನಿಜವಾದದ್ದು. ಈ ಕಾರ್ಯದಲ್ಲಿ ನನ್ನ ಅಂಗವಿಲ್ಲ ವೆಂದು ಸೀತಾರಾಮರ ಹೊರತು ಈ ಜಗತ್ತಿನಲ್ಲಿ ಬೇರೆ ಯಾರೂ ಅನ್ನಲಾರರು; ಆದರೂ "ಭರತನು ಪಟ್ಟಾಭಿಷಿಕ್ತನಾಗಬೇಕೆ" ಂಬ ರಾಮನ ಮಾತನ್ನು ಕೇಳಿಅದನ್ನು ಆನಂದ ದಿಂದ ಸಹನ ಮಾಡುವೆನು. ಕಡೆಗೆ ಮಾತ್ರ ನೀರು ನಿಂತಲ್ಲಿಯೇ ಕೆಸರಾಗುವದೆಂಬ ಮಾತಿನ ಅನುಭವವು ಜಗತ್ತಿಗೆ ಬಂದೇ ಬರುವದು. ಜಗತ್ತು ನನಗೆ ಅಧಮನೆನ್ನುವದರ ಅಂಜಿಕೆಯು ನನಗಿರುವದಿಲ್ಲ. ಪರಲೋಕದ ಹಂಗಂತು ನನಗೆ ಇಲ್ಲವೇ ಇಲ್ಲ. ನನ್ನ ಸಲುವಾಗಿ ಸೀತಾರಾಮರು ದುಃಖವನ್ನು ಭೋಗಿಸುತ್ತಿರುವರೆಂಬದೊಂದೇ ಚಿಂತೆಯು ನನ್ನ ಅಂತಃಕರಣದಲ್ಲಿ ಅನಿವಾರವಾಗಿ ಪ್ರಜ್ವಲಿಸುತ್ತಿರುವದು. ಸರ್ವಸಂಗ ಪರಿತ್ಯಾಗ ಮಾಡಿ ರಾಮಚರಣದಲ್ಲಿಯೇ ಚಿತ್ತವನ್ನಿಟ್ಟು ಲಕ್ಷ್ಮಣನು ನಿಜವಾಗಿ ಜನ್ಮಸಾರ್ಥಕ ಮಾಡಿಕೊಂಡನು; ಆದರೆ ನನ್ನ ಜನ್ಮವೇ ರಘುನಾಥನ ವನವಾಸಕ್ಕಾಗಿ ಇರುತ್ತಿರು ವಾಗ, ಅಭಾಗಿಯಾದ ನಾನು ಸುಳ್ಳೇ ದುಃಖವನ್ನು ಪ್ರಕಟಮಾಡಿದರೆ ಪ್ರಯೋಜನ ವೇನು? ಈಗ ನಾನು ಎಲ್ಲರಮುಂದೆ ತಲೆ ಬಾಗಿಸಿ ನನ್ನ ಹೃದಯದೊಳಗಿನ ದಾರುಣ ದುಃಖವನ್ನು ಹೇಳುವೆನು. ರಘುನಾಥ–ಪಾದ–ದರ್ಶನದ ಹೊರತು ನನ್ನ ತಳಮಳವು ಇಲ್ಲದಂತಾಗದು; ಆದ್ದರಿಂದ ನಾಳೆ ಬೆಳಗಾಗುತ್ತಲೆ ಪ್ರಭುವಿನ ದರ್ಶನಕ್ಕಾಗಿ ಹೊರ ಡತಕ್ಕದ್ದು. ನಾನು ದುಷ್ಟನೂ, ಅಪರಾಧಿಯೂ ಇದ್ದರೂ, ಎಲ್ಲ ಅನರ್ಥಗಳು ನನ್ನಿಂದ ಲೇ ಆಗಿದ್ದರೂ ನಾನು ಶರಣಾಗತನಾದದ್ದನ್ನು ನೋಡಿ ಪ್ರಭುವು ನನ್ನ ಅಪರಾಧವನ್ನು ಕ್ಷಮಿಸಿ ನನ್ನ ಮೇಲೆ ವಿಶೇಷವಾಗಿ ಕೃಪೆಮಾಡುವನು; ಯಾಕೆಂದರೆ ಪ್ರಭುವು ಅತ್ಯಂತ ಸುಶೀಲನೂ, ಭಿಡೆಯ ಸ್ವಭಾವದವನೂ, ಸರಲನೂ, ದಯಾ–ಮಾಯೆಗಳ ಆಗರವೂ ಆಗಿ ರುವನು. ಪ್ರತ್ಯಕ್ಷ ವೈರಿಗಳಿಗೂ ಕೇಡು ಬಗೆದವನಲ್ಲ; ಅಂದಬಳಿಕ ನಾನು ಆತನಿಗೆ ಪ್ರತಿಕೂಲವಾಗಿ ನಡೆದಿದ್ದರೂ ನಾನು ಆತನ ಬಾಲಕನೂ, ಸೇವಕನೂ ಆಗಿರುವೆನು; ಆದ್ದರಿಂದ ನಿಮ್ಮಂಥ ಸನ್ಮಾನನೀಯರು ರಾಮದರ್ಶನಕ್ಕೆ ಹೋಗುವದಕ್ಕಾಗಿ ನನಗೆ ಅಪ್ಪಣೆಕೊಡಬೇಕು; ಮತ್ತು ನನ್ನ ವಿನಂತಿಗೆ ಕಿವಿಗೊಟ್ಟು ರಾಮನು ನನ್ನನ್ನು ದಾಸ ನೆಂದು ತಿಳಿದು ತಿರುಗಿ ಅಯೋಧ್ಯೆಗೆ ಬರುವಂತೆ ನನ್ನನ್ನು ಆಶೀರ್ವದಿಸಬೇಕು.

ರಾಮನ ವಿಷಯದ ಪ್ರೇಮದಿಂದ ತುಂಬಿ ತುಳುಕುತ್ತಿರುವ ಭರತನ ಮಾತುಗಳು ಎಲ್ಲರಿಗೂ ಪ್ರಿಯವಾದವು. ಈತನು "ರಾಮಭಕ್ತಿಯ ಪ್ರತ್ಯಕ್ಷ ಮೂರ್ತಿಯೆ" ಂದು ಅವರು ಭರತನನ್ನು ಶ್ಲಾಘಿಸಿ ಆತನನ್ನು ಕುರಿತು—ಭರತಾ, ಇಂಥ ಮಾತುಗಳು ನಿನ್ನ ಮುಖದಿಂದ ಹೊರಡದೆ ಹೇಗಿದ್ದಾವು? ರಾಮನಿಗೆ ನೀನು ಪ್ರಾಣಕ್ಕಿಂತ ಪ್ರಿಯನಾಗಿ

ರುವೆ. ಯಾವ ಪಾಮರನು ತನ್ನ ಮೂರ್ಖತನದಿಂದ, ಕೈಕೇಯಿಯು ಕೌಟಿಲ್ಯವನ್ನು ನಿನ್ನ ಮೇಲೆ ಹೊರಿಸುವನೋ, ಆ ಶಠನು ತನ್ನ ಕೋಟ್ಯವಧಿ ಪೂರ್ವಜರಿಂದ ಸಹಿತನಾಗಿ ನೂರಾರು ಕಲ್ಪಗಳವರೆಗೆ ನರಕದಲ್ಲಿ ಕೊಳೆಯುತ್ತ ಬೀಳುವನು. ಸರ್ಪದ ಪಾಪಗಳನ್ನೂ, ದುರ್ಗುಣಗಳನ್ನೂ ಅದರ ಶಿರಸ್ಸಿನಲ್ಲಿರುವ ಮಣಿಯು ಗ್ರಹಣ ಮಾಡದೆ, ತಿರುಗಿ ಸರ್ಪದ ವಿಷಹರಣ ಮಾಡಿ ದುಃಖ-ದಾರಿದ್ರ್ಯಗಳನ್ನು ಸುಟ್ಟುಬಿಡುವದು. ಅದರಂತೆ ಕೈಕೇಯಿಯ ದುಷ್ಟತನಕ್ಕೆ ನಿನ್ನ ಸಂಬಂಧವಿಲ್ಲ; ಅದ್ದರಿಂದ ಭರತನೇ, ನೀನು ಅವಶ್ಯವಾಗಿ ರಾಮನಬಳಿಗೆ ಹೊರಡು. ನೀನ ಉತ್ತಮವಾದ ಆಲೋಚನೆಯನ್ನು ಹೇಳಿದೆ. ಶೋಕಸಮುದ್ರದಲ್ಲಿ ಮುಳುಗುತ್ತಿದ್ದ ನಮ್ಮೆಲ್ಲರಿಗೆ ನೀನೇ ಆಧಾರವನ್ನಿತ್ತಹಾಗಾಯಿತು, ಎಂದು ನುಡಿದರು. ಅವರ ಮಾತುಗಳನ್ನು ಕೇಳಿ ಭರತನು ಸಂತೋಷಪಟ್ಟನು. ಬಳಿಕ ದರ್ಬಾರದೊಳಗಿನ ಯಾವತ್ತು ಜನರು ವಸಿಷ್ಠರನ್ನು ವಂದಿಸಿ ಭರತನಿಗೆ ನಮಸ್ಕಾರ ಮಾಡಿ ಆತನ ಶೀಲ-ಸ್ನೇಹಗಳನ್ನು ವರ್ಣಿಸುತ್ತ ತಮ್ಮತಮ್ಮ ಮನೆಗಳಿಗೆ ಹೋದರು. ಎಲ್ಲರೂ ರಾಮದರ್ಶನಕ್ಕೆ ಹೋಗಲು ಆತುರಪಟ್ಟರು. ಮನೆಯಲ್ಲಿ ಇರುವ ಪ್ರಸಂಗ ಬಂದವರಿಗೆ ಮರಣ ಶಿಕ್ಷೆ ವಿಧಿಸಿದಷ್ಟು ಅಸಮಾಧಾನವಾಯಿತು. ರಾಮದರ್ಶನಕ್ಕೆ ಹೋಗುವದಕ್ಕಾಗಿ ಮನೆ ಮನೆಗಳಲ್ಲಿ ಅನೇಕ ವಾಹನಗಳು ಸಿದ್ಧವಾಗತೊಡಗಿದವು. ಇತ್ತ ಭರತನು ತನ್ನ ಮನೆಗೆ ಹೋಗಿ, ತನ್ನ ಸ್ವಾಮಿಯಾದ ರಘುಪತಿಯು ಸೊತ್ತಾಗಿರುವ ನಗರ, ಆನೆ, ಕುದುರೆ, ರಾಜಮಂದಿರ, ಭಾಂಡಾರ ಮೊದಲಾದ ಸಂಪತ್ತಿನ ವ್ಯವಸ್ಥೆಯನ್ನುಮಾಡದೆ ಹಾಗೇಹೋದರೆ ತಾನು ಪಾಪಶಿರೋಮಣಿಯೂ, ಸ್ವಾಮಿದ್ರೋಹಿಯೂ ಆಗುವೆನೆಂದು ತಿಳಿದು, ತನ್ನ ಒಡೆಯನ ಹಿತಮಾಡುವವನೇ ನಿಜವಾದ ಸೇವಕನೆಂದು ಭಾವಿಸಿ, ಸ್ವಕರ್ತವ್ಯನಿಷ್ಠರಾದ ಪ್ರಾಮಾಣಿಕ ಸೇವಕರನ್ನು ಕರೆಸಿ ಅವರವರಿಗುಚಿತವಾದ ಅಧಿಕಾರಗಳ ಮೇಲೆ ಅವರವರನ್ನು ನಿಯಮಿಸಿ, ಅಲ್ಲಲ್ಲಿಯ ಕಾವಲುಗಾರರ ವ್ಯವಸ್ಥೆ ಮಾಡಿ ಆಮೇಲೆ ಕೌಸಲ್ಯೆಯ ಬಳಿಗೆ ಹೋದನು.

ಮರುದಿನ ಬೆಳಗಾಗಲು ಭರತನು ಯಾವತ್ತು ಸಚಿವರನ್ನು ಕರೆಸಿ—“ಅಭಿಷೇಕದ ಯಾವತ್ತು ಸಾಮಗ್ರಿಗಳನ್ನು ಸಿದ್ಧಪಡಿಸಿ ಸಂಗಡ ತೆಗೆದುಕೊಳ್ಳಿರಿ. ಗುರುಗಳು ವನದಲ್ಲಿಯೇ ರಾಮನಿಗೆ ಪಟ್ಟಗಟ್ಟಬಹುದು” ಎಂದು ಆಜ್ಞಾಪಿಸಿದನು. ಅಗ್ನಿಹೋತ್ರವನ್ನು ತಕ್ಕೊಂಡು ಅರುಂಧತಿಯೊಡನೆ ವಸಿಷ್ಠರು ರಥದಲ್ಲಿ ಕುಳಿತು ಎಲ್ಲರ ಮುಂದುಗಡೆಯಲ್ಲಿ ಸಾಗಿದರು. ಅವರ ಹಿಂದಿನಿಂದ ತಪಸ್ತೇಜನಿಧಾನವಾದ ವಿಪ್ರವೃಂದವು ಅನೇಕ ವಾಹನಗಳಲ್ಲಿ ಕುಳಿತು ಹೊರಟಿತು. ನಗರದೊಳಗಿನ ಯಾವತ್ತು ಜನರು ವಿವಿಧ ವಾಹನಗಳಲ್ಲಿ ಕುಳಿತು ಹೊರಟರು. ಅವರ್ಣನೀಯವಾದ ಸುಂದರ ಶಿಬಿಕೆಗಳಲ್ಲಿ ಕುಳಿತು ಯಾವತ್ತು ರಾಣಿಯರು ಹೊರಟರು. ಇವರೆಲ್ಲರ ಹಿಂದಿನಿಂದ ಭರತ-ಶತ್ರುಘ್ನರು ರಾಮಸ್ಮರಣ ಮಾಡುತ್ತ ಹೊರಟರು. ಶ್ರೀ ರಾಮನು ವನದಲ್ಲಿ ಸೀತಾ-

ಯನ್ನು ದಾಟಗೊಡಲಿಕ್ಕಿಲ್ಲ. ಯುದ್ಧದಲ್ಲಿ ಮರಣವು, ಮೇಲೆ ಗಂಗಾತಟಾಕವು, ರಾಮಕಾರ್ಯವು, ಕ್ಷಣಭಂಗುರ ಶರೀರವು, ರಾಮ ಬಂಧು ಭರತನು ರಾಜನು- ನಾನು ಯಃಕಶ್ಚಿತ ಜ್ಞಾತಿಹೀನನಾದ ಮನುಷ್ಯನು. ಇಂಥ ಮರಣದ ಯೋಗಾಯೋಗವು ಮಹದ್ಭಾಗ್ಯದಿಂದಲೇ ಪ್ರಾಪ್ತವಾಗಿರುವದು. ಸ್ವಾಮಿಕಾರ್ಯಕ್ಕಾಗಿ ರಣದಲ್ಲಿ ನಾನು ಅದ್ಭುತವಾಗಿ ಕಾದಿ ಹದಿನಾಲ್ಕು ಲೋಕಗಳನ್ನು ಯಶಸ್ಸಿನಿಂದ ತುಂಬಿ ರಾಘವಪ್ರೀತ್ಯರ್ಥವಾಗಿ ಪ್ರಾಣವನ್ನರ್ಪಿಸುವೆನು. ರಾಮಕಾರ್ಯದಲ್ಲಿ ದೇಹಪಾತವಾದರೆ ಸದ್ಗತಿಯು, ಉಳಿದರೆ ರಾಮಸೇವೆಯು ಯಶಸ್ಸು, ಹೀಗೆ ನನ್ನ ಎರಡೂ ಕೈಗಳಲ್ಲಿ ಆನಂದದ ಮೋದಕಗಳೇ ಬರುವವು, ಎಂದು ಯೋಚಿಸಿ, ತನ್ನ ಪರಿವಾರದೊಡನೆ ಧನುರ್ಬಾಣಗಳನ್ನೂ, ಕವಚ-ಶಿರಸ್ತ್ರಾಣಗಳನ್ನೂ. ವಿವಿಧವಾದ ಆಯುಧಗಳನ್ನೂ ಧರಿಸಿ ಯುದ್ಧಕ್ಕೆ ಸಿದ್ಧನಾದನು. ಹಲವರು ಖಡ್ಗಪ್ರಹಾರ ಮಾಡುವಲ್ಲಿ ಪ್ರವೀಣರಾಗಿದ್ದು, ಅವರು ಆಕಾಶದಲ್ಲಿ ಬಹುದೂರ ಉಡ್ಡಾಣಮಾಡುತ್ತಿದ್ದರು. ಅವರ ಆ ಹಾರಿಕೆಯನ್ನು ನೋಡಿದರೆ, ಇವರು ಭೂಮಿಯನ್ನು ಬಿಟ್ಟು ಹೋಗಿಬಿಟ್ಟರೆಂಬಂತೆ ತೋರುತ್ತಿತ್ತು. ಹೀಗೆ ತನ್ನ ಸೈನ್ಯವು ಯುದ್ಧ ಸನ್ನದ್ಧವಾಗಲು, ರಣವಾದ್ಯಗಳನ್ನು ಬಾರಿಸುತ್ತಿರುವಾಗ ಗುಹನು ಇನ್ನು ಯುದ್ಧಕ್ಕೆ ಅಪ್ಪಣೆ ಕೊಡತಕ್ಕವನು. ಅಷ್ಟರಲ್ಲಿ ಅತನಿಗೆ ಎಡಗಡೆಗೆ ಸೀನು ಬಂದಿತು. ಈ ಶಕುನದ ಫಲವು ಭರತನೊಡನೆ ಯುದ್ಧವಾಗದೆ ಸ್ನೇಹವಾಗುವದೆಂದು ಶಕುನಬಲ್ಲ ಹಿರಿಯರು ಹೇಳಲು, ಅವರ ಹೇಳಿಕೆಯಲ್ಲಿ ವಿಶ್ವಾಸವಿಟ್ಟು, ಭರತನ ಅಂತರ್ಬಾಹ್ಯಸ್ವರೂಪವನ್ನು ಅರಿತುಕೊಳ್ಳದೆ ಯುದ್ಧ ಮಾಡುವದು ಯೋಗ್ಯವಲ್ಲವೆಂದು ತಿಳಿದು, ಕಂದ, ಮೂಲ, ಫಲಾದಿಗಳನ್ನು ತೆಗೆದುಕೊಂಡು ಭರತನನ್ನು ಕಾಣುವದಕ್ಕಾಗಿ ಹೊರಟನು. ಆಗ ಮಂಗಲ ಶಕುನಗಳು ಅತನಿಗೆ ಆಗಹತ್ತಿದವು.

ಗುಹನು ವಸಿಷ್ಠರನ್ನು ನೋಡಿದ ಕೂಡಲೆ ತನ್ನ ಹೆಸರು ಹೇಳಿ ಸಾಷ್ಟಾಂಗವಾಗಿ ವಂದಿಸಿದನು. ಮುನಿವರ್ಯರು ಅತನನ್ನು ರಾಮಪ್ರಿಯನೆಂದು ತಿಳಿದು ಆಶೀರ್ವದಿಸಿ, ಅತನಿಗೆ ಭರತನ ಗುರುತು ಮಾಡಿಕೊಟ್ಟರು. “ರಾಮಸಖ” ನೆಂಬದಿಷ್ಟೇ ಶಬ್ದವು ಕಿವಿಗೆ ಬಿದ್ದ ಕೂಡಲೆ ಭರತನು ರಥದಿಂದ ಕೆಳಗಿಳಿದು ಪ್ರೇಮವು ಉಕ್ಕಿ ಹೊರಸೂಸುತ್ತಿರಲು, ಕಾಲಿನಿಂದಲೇ ನಡೆಯುತ್ತ ಗುಹನ ಬಳಿಗೆ ಬಂದನು. ಗುಹನು ತನ್ನ ಹೆಸರನ್ನೂ ಊರನ್ನೂ, ಜಾತಿಯನ್ನೂ ತಿಳಿಸಿ ನೆಲಕ್ಕೆ ಮಸ್ತಕವನ್ನು ಊರಿ ಜೋಹಾರಮಾಡಿದನು. ಅತನು ದೀರ್ಘದಂಡ ನಮಸ್ಕಾರ ಮಾಡುತ್ತಿರುವದನ್ನು ನೋಡಿದ ಕೂಡಲೆ ಭರತನು ಅವನನ್ನು ಹಿಡಿದೆತ್ತಿ ಆಲಿಂಗಿಸಲು, ಲಕ್ಷ್ಮಣನೇ ತನ್ನನ್ನು ಕಾಣಬಂದನೆಂಬಂತಾಗಿ ಭರತನ ಪ್ರೇಮವು ಅವನ ಹೃದಯದಲ್ಲಿ ಹಿಡಿಸದಾಯಿತು! ಭರತನ ಆಗಿನ ಪ್ರೇಮದ ಪ್ರಕಾರವನ್ನು ಜನರು ಹೊಗಳ ಹತ್ತಿದರು. “ಧನ್ಯ” “ಧನ್ಯ” ಎಂಬ ಮಂಗಲಕಾರಕ ಘೋಷದಿಂದ ದೇವತೆಗಳು ಭರತನನ್ನು ಹೊಗಳಿ ಹೂಮಳೆಗರೆಯ ಹತ್ತಿದರು.

*ವೇದದಲ್ಲಿಯೂ ಲೌಕಿಕ ಮೊದಲಾದ ಎಲ್ಲರೀತಿಯಲ್ಲಿಯೂ ನೀಚನೂ. ನೆರಳು ಬಿದ್ದಮಾತ್ರದಿಂದ ಸ್ನಾನಮಾಡುವಷ್ಟು ಅಪವಿತ್ರನೂ ಆದ ಗುಹನನ್ನು ರಾಮನ ತಮ್ಮನಾದ ಭರತನು ಪುಲಕ ಪ್ರಪೂರಿತಗಾತ್ರನಾಗಿ ಬಿಗಿದಪ್ಪಿಕೊಂಡನು! ಆಕಳಿಸುವಾಗ "ರಾಮ ರಾಮ" ಎಂದು ಉಚ್ಚರಿಸಿದ ಮಾತ್ರದಿಂದ ಪಾಪದ ಪರ್ವತವೂ ನಷ್ಟವಾಗುತ್ತಿರಲು, ಗುಹನನ್ನಂತು ಶ್ರೀರಾಮನು ಹಿಡಿದೆತ್ತಿ ಆಲಿಂಗಿಸಿ ಆತನ ಕುಲಸಹಿತವಾಗಿ ಆತನನ್ನು ಜಗತ್ತಿನಲ್ಲಿ ಪಾವನ ಮಾಡಿದ್ದನು; ಇಂದ ಒಳಿಕ ಭರತನು ಅಂಥ ಗುಹನನ್ನು ಆಲಿಂಗಿಸಿದ್ದೇನಾಶ್ಚರ್ಯವು? ಸ್ನಾನಮಾಡಿದ ಮಾತ್ರದಿಂದ ಸತ್ಕರ್ಮಗಳನ್ನು ನಾಶಗೊಳಿಸುವ "ಕರ್ಮನಾಶಾ" ನದಿಯು ಗಂಗೆಯನ್ನು ಕೂಡಿದಾಗ ಅದನ್ನು ಶಿರಸ್ಸಿನಲ್ಲಿ ಧರಿಸದೆ ಯಾರು ಇದ್ದಾರು? ರಾಮನಾಮವನ್ನು ತಿರುವುಮುರುವಾಗಿ ಉಚ್ಚರಿಸಿದ್ದರಿಂದ ವಾಲ್ಮೀಕಿಯು ಬ್ರಹ್ಮರೂಪನಾದದ್ದಕ್ಕೆ ಜಗತ್ತೇ ಸಾಕ್ಷಿಯಾಗಿರುವದು. ಚಾಂಡಾಲಾದಿ ಮಹಾಪಾಪಿಗಳು ರಾಮನಾಮೋಚ್ಚಾರದಿಂದ ತ್ರೈಲೋಕ್ಯವಿಖ್ಯಾತರಾಗುವರು." ಎಂದು ದೇವತೆಗಳು ಹೊಗಳಿದ್ದನ್ನು ಕೇಳಿ ಅಯೋಧ್ಯೆಯ ಜನರು ಆನಂದಮಯರಾದರು. ಭರತನು ಗುಹನ ಕ್ಷೇಮಸಮಾಚಾರವನ್ನು ವಿಚಾರಿಸಲು, ಅನಿಷಾದ ಪತಿಯು ಭರತನನ್ನು ಕುರಿತು—"ತಮ್ಮ ಈ ಕ್ಷೇಮಮೂಲಕ ಪದಕಮಲಗಳನ್ನು ನೋಡಿ ನಾನು ನನ್ನ ಮತದಿಂದ ತ್ರಿಕಾಲ ಕ್ಷೇಮಿಯಾದೆನು, ಪ್ರಭೋ, ಇನ್ನು ತಮ್ಮ ಪರಮಾನುಗ್ರಹದಿಂದ ಕೋಟಿಕುಲ ಸಹಿತವಾಗಿ ನನ್ನ ಮಂಗಲವೇ ಆಗುವದು. ನನ್ನ ಕುಲವ್ಯವಸಾಯ, ಪ್ರಭುವಿನ ಮಹಿಮೆ ಇವೆಲ್ಲವನ್ನು ಮನಸ್ಸಿನಲ್ಲಿ ವಿಚಾರಿಸಿಯೂ ರಾಮಪದವನ್ನು ಭಜಿಸದವನು ಈ ಜಗತ್ತಿನಲ್ಲಿ ನಿಜವಾಗಿಯೇ ದುರ್ದೈವಿಯೆಂದು ತಿಳಿಯಬೇಕು. ಕಪಟಿಯೂ, ಕುತ್ಸಿತನೂ, ದುಷ್ಟಬುದ್ಧಿಯುವನೂ, ಕುಲಹೀನನೂ, ಸರ್ವಪ್ರಕಾರದಿಂದಲೂ ಲೌಕಿಕ-ವೈದಿಕಬಾಹ್ಯನೂ ಆದ ನನ್ನನ್ನು ಶ್ರೀರಾಮನು ನನ್ನವನೆಂದು ಭಾವಿಸಿದಂದಿನಿಂದ ನಾನು ಜಗತ್ತಿನ ಭೂಷಣವೇ ಆಗಿ ಕುಳಿತುಕೊಂಡಿರುವೆನು.

ಗುಹನ ಈ ಜೀವಾಳದ ವಿನಯದ ಮಾತುಗಳನ್ನು ಕೇಳಿ ಶತ್ರುಘ್ನನೂ ಆತನನ್ನು ಕಂಡನು. ಆ ಮೇಲೆ ಗುಹನು ಮಧುರವಾಣಿಯಿಂದ ತನ್ನ ಹೆಸರು ಹೇಳಿ ಯಾವತ್ತು ರಾಣಿಯರಿಗೆ ಬಹು ವಿನಯದಿಂದ ಜೋಹಾರ ಮಾಡಿದನು. ಆತನನ್ನು ಲಕ್ಷ್ಮಣನಂತೆ ಭಾವಿಸಿ ರಾಣಿಯವರಾದರೂ— "ಚಿರಂಜೀವಿಯಾಗು, ಸುಖಿಯಾಗು" ಎಂದು ಆಶೀರ್ವದಿಸಿದರು. ಅಯೋಧ್ಯೆಯ ಜನರು ಗುಹನ ಪುಣ್ಯವನ್ನು ಶ್ಲಾಘಿಸತೊಡಗಿದರು. ಹೀಗೆ ಎಲ್ಲರೂ ತನ್ನ ಭಾಗ್ಯವ ವರ್ಣಿಸುವದನ್ನು ಕೇಳಿ ಅತಿ ಹರ್ಷಿತನಾದ ಗುಹನು ಎಲ್ಲರನ್ನು ಕರೆದುಕೊಂಡು ಹೊರಟನು. ಶೃಂಗವೇರಪುರವನ್ನು ನೋಡಿದ ಕೂಡಲೆ ಭರತನ ಸರ್ವಾಂಗವು ಪ್ರೇಮವಶವಾದದ್ದರಿಂದ ಶಿಥಿಲವಾಯಿತು. ಗುಹನ ಮೇಲೆ ಮೈಭಾರಹಾಕಿ ನಡೆಯುತ್ತಿರುವಾಗ ವಿನಯವೂ, ಪ್ರೇಮವೂ ಮೂರ್ತಿಮತ್ತಾಗಿ ಸಾಗಿರುವವೋ

ಎಂಬಂತೆ ತೋರಿತು. ಈ ವೇಳೆಗೆ ಭರತನು ಯಾಪಕ್ಷ. ಸ್ವಸ್ವರೊಡನೆ ಜಗತ್ಪಾವನೆಯಾದ ಗಂಗೆಯ ದರ್ಶನಕ್ಕೆ ಹೋದವನು ರಾಮಘಾಟಿಗೆ ನಮಸ್ಕಾರಮಾಡಿದ ಕೂಡಲೆ ರಾಮನನ್ನು ಕಂಡಂತೆ ಆತನ ಮನಸ್ಸು ತಲ್ಲೀನವಾಯಿತು. ಗಂಗಾ ಜಲವನ್ನು ನೋಡಿದ ಕೂಡಲೆ ಅಯೋಧ್ಯೆಯ ಸ್ತ್ರೀಪುರುಷರು ನಮಸ್ಕರಿಸಿ ಬ್ರಹ್ಮಾನಂದದಲ್ಲಿ ನಿಮಗ್ನರಾದರು. ಅವರು ಸ್ನಾನಮಾಡಿ ಕೈಜೋಡಿಸಿ ಗಂಗೆಯನ್ನು ಕುರಿತು— "ರಾಮಪದದಲ್ಲಿ ನಮ್ಮ ಅನುಪಮ ಪ್ರೇಮವಿರಲೆಂದು" ಪ್ರಾರ್ಥಿಸಿದರು. ಭರತನು "ಸೀತಾರಾಮರಲ್ಲಿ ಅಕೃತ್ರಿಮ ಪ್ರೇಮವಿರುವಂತೆ ವರವನ್ನು ಕೊಡೆಂದು" ಗಂಗೆಯನ್ನು ಕುರಿತು ಪ್ರಾರ್ಥಿಸಿ ಸ್ನಾನಮಾಡಿದನು. ಯಾವತ್ತು ತಾಯಿಂದಿರ ಸ್ನಾನವಾದದ್ದನ್ನು ಅರಿತು ವಸಿಷ್ಠರ ಅಪ್ಪಣೆಯಿಂದ ಆತನು ಅಲ್ಲಿಂದ ತಳಕಿತ್ತಿ, ತಾಯಿಂದಿರ ಯೋಗಕ್ಷೇಮಕ್ಕಾಗಿ ಶತ್ರುಘ್ನನನ್ನು ನಿಯಮಿಸಿ, ಸೀತಾರಾಮರು ಶಯನ ಮಾಡಿದ ಸ್ಥಳವನ್ನು ನೋಡುವದಕ್ಕಾಗಿ ಗುಹನೊಡನೆ ಹೊರಟನು.

ಪ್ರೇಮದಿಂದ ಶಿಥಿಲಗಾತ್ರನಾದ ಭರತನು ಗುಹನ ಹಿಂದಿನ ಸಾಗುತ್ತಿರುವಾಗ ಆತನನ್ನು ಕುರಿತು— "ಗುಹಾ, ಸೀತೆಯು, ರಾಮನು, ಲಕ್ಷ್ಮಣನು ರಾತ್ರಿಯಲ್ಲಿ ಮಲಗಿದ ಸ್ಥಳವನ್ನು ನನಗೆ ತೋರಿಸು. ಅದನ್ನು ನೋಡಿ ನನ್ನ ಮನಸ್ಸು-ಕಣ್ಣುಗಳ ತಾಪವನ್ನು ಶಾಂತಮಾಡಿಕೊಳ್ಳುವೆನು." ಎಂದು ನುಡಿಯುವಾಗ, ಭರತನ ಕಣ್ಣುಗಳು ಅಶ್ರುಪೂರ್ಣವಾದವು. ಭರತನ ಮಾತುಗಳನ್ನು ಕೇಳಿ ಗುಹನು ಉದ್ವಿಗ್ನಚಿತ್ತನಾಗಿ, ಕೂಡಲೆ ಶಿಂಶುಪಾವೃಕ್ಷದ ಬುಡದಲ್ಲಿ ಶ್ರೀರಾಮನು ವಿಶ್ರಮಿಸಿದ ಸ್ಥಳವನ್ನು ತೋರಿಸಿದನು. ಆಗ ಭರತನು ಅತ್ಯಂತ ಪ್ರೇಮಾದರಗಳಿಂದ ಆ ಸ್ಥಳಕ್ಕೆ ಸಾಷ್ಟಾಂಗ ನಮಸ್ಕಾರಮಾಡಿ, ಅಲ್ಲಿಯ ಮೃದುವಾದ ಕುಶಶಯ್ಯೆಗೆ ಪ್ರದಕ್ಷಿಣೆ ಮಾಡಿ ಸಾಷ್ಟಾಂಗವಾಗಿ ಎರಗಿದನು. ಅಲ್ಲಿಯ ರಾಮಪದಾಂಕಿತ ಧೂಳಿಯನ್ನು ತನ್ನ ಕಣ್ಣುಗಳಿಗೆ ಹಚ್ಚಿಕೊಳ್ಳುವಾಗ ಆತನ ಪ್ರೇಮವು ಉಕ್ಕಿಬಂದಿತು. ಆತನು ಗುಹನನ್ನು ಕುರಿತು — "ಗುಹಾ, ಈ ಸೀತಾ-ರಾಮ-ಲಕ್ಷ್ಮಣರ ಕುಶಶಯ್ಯೆಯನ್ನು ನೋಡಿಯೂ ನನ್ನ ಹೃದಯದ ವಿದಾರಣವಾಗದಿರುವಾಗ, ನನ್ನ ಈ ಹೃದಯವು ವಜ್ರಕ್ಕಿಂತಲೂ ಕಠೋರವಿರುವದೆಂದು ಹೇಳಬೇಕಾಗುವದು. ಪ್ರಾಣಕ್ಕಿಂತಲೂ ಪ್ರಿಯನಾಗಿರುವ ರಾಮಚಂದ್ರನಿಗೆ ಪ್ರತಿಕೂಲಳಾಗಿರುವ ಅಮಂಗಲ ಮೂಲಳಾದ ಕೈಕೇಯಿಗೆ ಧಿಕ್ಕಾರವು; ಸರ್ವಾನರ್ಥಗಳಿಗೂ ಕಾರಣನಾದವನೂ, ಪಾಪಸಮುದ್ರನೂ, ಹತಭಾಗ್ಯನೂ ಆದ ನನಗೆ ಶತಶಃ ಧಿಕ್ಕಾರವು," ಅನ್ನಲು, ಭರತನ ಈ ದುಃಖೋದ್ಗಾರಗಳನ್ನು ಕೇಳಿ ಗುಹನು—ಮಹಾರಾಜಾ, ಇನ್ನು ವ್ಯರ್ಥವಾಗಿ ಎಷ್ಟು ದುಃಖಮಾಡಬೇಕು! ರಾಮನು ನಿಮಗೆ ಪ್ರಿಯನೂ, ನೀವು ರಾಮನಿಗೆ ಪ್ರಿಯರೂ ಆಗಿರುವಿರೆಂಬದೊಂದೇ ಸಂಗತಿಯು ನಿರ್ದೋಷವಾದದ್ದು; ಉಳಿದ ಈ ಎಲ್ಲ ದೋಷವು ವಿಪರೀತ ದೈವದ್ದಾಗಿರುವದು. ಕೈಕೇಯಿಯು ಬುದ್ಧಿಯನ್ನು

ಭುಸ್ತಗಾಳಿಸುವ ದುಸ್ಸ್ವಪ್ನದ ಕೃತಿಯು ಬಹು ಕಠೋರವಾದದ್ದು. ಆದಿನ ರಾತ್ರಿ ಪ್ರಭು-
ಗಳು ನಿಮ್ಮನ್ನು ಮನಃಪೂರ್ವಕವಾಗಿ ಹೊಗಳಿದರು. ರಾಮನಿಗೆ ತಮ್ಮ ಹೊರತು
ಪ್ರಿಯವಾದವರ್‍ಯಾರೂ ಇರುವದಿಲ್ಲ. ಕಡೆಗೆ ಎಲ್ಲವೂ ಸರಿಯೇ ಆಗುವದೆಂದು ನಾನು
ಆಣೆಮಾಡಿ ಹೇಳುವೆನು. ಇದನ್ನರಿತು ತಾವು ಧೈರ್ಯತಾಳಬೇಕು,, ಎಂದು ಹೇಳಿದನು.
ಗುಹನ ಮಾತುಗಳಿಂದ ಭರತನು ಧೈರ್ಯತಾಳಿ ತನ್ನ ವಸತಿಸ್ಥಾನಕ್ಕೆ ಹೋಗಲು,
ಅಯೋಧ್ಯೆಯ ಜನರು ಈ ಸಂಗತಿಯನ್ನರಿತು ಶ್ರೀರಾಮನ ಶಯನ ಮಾಡಿದ ಸ್ಥಳದ
ದರ್ಶನ ಮಾಡಿಕೊಂಡು ಅದಕ್ಕೆ ನಮಸ್ಕರಿಸಿ ಕಣ್ಣೀರು ಸುರಿಸಿದರು.

ಮರುದಿವಸ ಬೆಳಗಾಗುತ್ತಲೆ ಭಾಗೀರಥಿ ನದಿಯು ದಾಟಿಹತ್ತಿ, ನಾಲ್ಕು ಘಳಿಗೆ-
ಯಲ್ಲಿ ಎಲ್ಲರೂ ಆಚೆಯ ದಂಡೆಗೆ ಹೋದರು. ಬಳಿಕ ಭರತನು ಎಲ್ಲರ ಸಮಾಚಾರವನ್ನು
ತಕ್ಕೊಂಡ. ನಿಷಾದಮಂಡಲಿಯೊಡನೆ ಎಲ್ಲರನ್ನು ಮುಂದಕ್ಕೆ ಕಳಿಸಿ ತಾನು ರಾಮ-
ಸ್ಮರಣಾಪೂರ್ವಕ ನಡೆಯಹತ್ತಿದನು. ಜೀನು ಹಾಕಿ ಸಿದ್ಧವಾಗಿದ್ದ ಆತನ ಕುದು-
ರೆಯು ಆತನ ಸಂಗಡ ಬರುತ್ತಲಿತ್ತು. ಸ್ವಾಮಿಗಳು ಸೇವಕರು ಕುದುರೆ ಹತ್ತ-
ಬೇಕೆಂದು ಭರತನನ್ನು ಬೇಡಿಕೊಳ್ಳಲು ಆತನು—"ರಾಮನು ಬರಿಗಾಲಿನಿಂದ ಅರ-
ಣ್ಯದಲ್ಲಿ ನಡೆಯುತ್ತಿರಲು ಕುದುರೆ-ಆನೆ-ರಥಗಳು ನನ್ನ ಸಲುವಾಗಿ ಮಾತ್ರ ಇರು-
ವವು. ನಿಜವಾಗಿಯೆಂದರೆ ನಾನು ತಲೆಯಿಂದ ನಡೆದು ಹೋಗುವದೇ ಯೋಗ್ಯವು.
ಎಲ್ಲಕ್ಕಿಂತ ಸೇವಾಧರ್ಮವೇ ಕಷ್ಟತರವಾಗಿರುವದು,, ಎಂದು ಹೇಳಿದನು. ಅದನ್ನು
ಕೇಳಿ ಆತನ ಸೇವಕರು ದುಃಖಿತರಾದರು. ಭರತನು—" ಸೀತಾರಾಮ,, "ಸೀತಾರಾಮ,,
ಎಂದು ಭಜನ ಮಾಡುತ್ತ ಪ್ರೇಮದ ಪ್ರವಾಹಕ್ಕೆ ಪ್ರವಾಹವೇ ನಡೆಯುತ್ತಿರುವಸ್ಥಿತಿ-
ಯಿಂದ ಮೂರನೆ ಪ್ರಹರದಲ್ಲಿ ಪ್ರಯಾಗ ಕ್ಷೇತ್ರವನ್ನು ಪ್ರವೇಶಿಸಿದನು. ಎಲ್ಲರ ಸ್ನಾನ
ವಾದದ್ದನ್ನು ಕೇಳಿ ಭರತನು ತ್ರಿವೇಣೀ ಸಂಗಮಕ್ಕೆ ಬಂದು ನಮಸ್ಕರಿಸಿ, ಸಂಗಮದ
ಶುಭ್ರ-ಶ್ಯಾಮ ಜಲದಲ್ಲಿ ವಿಧ್ಯುಕ್ತ ಸ್ನಾನಮಾಡಿ ದಾನಕೊಟ್ಟು ಬ್ರಾಹ್ಮಣರನ್ನು ಸನ್ಮಾನ-
ಸಿದನು. ಗಂಗಾ ಯಮುನೆಗಳ ಶುಭ್ರ-ಶ್ಯಾಮ ಪ್ರವಾಹಗಳನ್ನು ನೋಡಿ ಭರತನ
ಶರೀರವು ರೋಮಾಂಚಿತವಾಯಿತು. ಆತನು ಕೈ ಜೋಡಿಸಿ —"ಎಲೈ ತೀರ್ಥರಾಜನೇ,
ನೀನು ಯಾವತ್ತು ಬಯಕೆಗಳನ್ನು ಪೂರ್ಣಮಾಡುವವನಿರುತ್ತೀ. ನಿನ್ನ ಪ್ರಭಾವವು
ವೇದ ಪ್ರಸಿದ್ಧವಾಗಿದ್ದು, ಜಗತ್ತಿನಲ್ಲಿಯಂತೂ ಅದು ಪ್ರತ್ಯಕ್ಷವಾಗಿಯೇ ಕಾಣಿಸುವದು.
ನಾನು ನನ್ನ ಕ್ಷಾತ್ರಧರ್ಮಕ್ಕೆ ವಿರುದ್ಧವಾಗಿ ನಿನ್ನಲ್ಲಿ ಭಿಕ್ಷೆಬೇಡುತ್ತಿರುವೆನು. ದುಃಖ-
ಪೀಡಿತನಾದವನು ಯಾವ ದುಷ್ಕರ್ಮವನ್ನು ಮಾಡಲಿಕ್ಕಿಲ್ಲ! ಇದನ್ನು ಮನಸ್ಸಿನಲ್ಲಿ
ತಂದೇ ಜಗತ್ತಿನಲ್ಲಿ ಜ್ಞಾನಿಗಳೂ, ಉದಾರರೂ ಆದವರು ಯಾಚಕರ ಬೇಡಿಕೆಯನ್ನು
ಪೂರ್ಣಮಾಡುವರು. ನನಗೆ ಅರ್ಥದ ಅಪೇಕ್ಷೆಯಿಲ್ಲ, ಧರ್ಮ-ಕಾಮಗಳ ಹಂಗೂ
ಇಲ್ಲ, ಮೋಕ್ಷಪದವನ್ನು ನಾನು ಬಯಸುವದಿಲ್ಲ; ಆದರೆ ಜನ್ಮಜನ್ಮಾಂತರದಲ್ಲಿ

ನಾನು ರಾಮಪದದಲ್ಲಿ ಅನುರಕ್ತನಾಗಿರುವಂತೆ ನನಗೆ ವರಪ್ರದಾನಮಾಡು. ರಾಮನು ನನ್ನನ್ನು ಕುಟಿಲನೆಂದು ತಿಳಿಯಲಿ. ಜನರು ನನಗೆ ಗುರುದ್ರೋಹಿಯೂ, ಸ್ವಾಮಿದ್ರೋಹಿಯೂ ಎಂದು ಅನ್ನಲಿ; ಆದರೆ ನಿನ್ನ ಕೃಪೆಯಿಂದ ಸೀತಾರಾಮಚರಣದಲ್ಲಿನನ್ನ ಪ್ರೇಮವು ದಿನದಿನಕ್ಕೆ ಹೆಚ್ಚುತ್ತ ಹೋಗಲೆಂದರಾಯಿತು! „ ಅನ್ನಲು, ತ್ರಿವೇಣಿಯ ಮಧ್ಯದೊಳಗಿಂದ—“ಎಲೈ ತಾತಾ, ಭರತಾ, ನೀನು ಎಲ್ಲ ಬಗೆಯಿಂದಲೂ ಸೋಜ್ವಲನಾಗಿರುವೆ. ರಾಮಚರಣದಲ್ಲಿ ನಿನ್ನ ಪ್ರೇಮವು ಅನಂತವಾಗಿರುವದು. ನೀನು ಮನಸ್ಸಿನಲ್ಲಿ ಸುಮ್ಮನೆ ವಿಷಾದಪಡಬೇಡ. ನಿನ್ನಂಥ ಪ್ರಾಣ ಪ್ರಿಯನು ರಾಮನಿಗೆ ಮತ್ತೊಬ್ಬನಿಲ್ಲವು. „ ಎಂಬ ಮಂಗಲಧ್ವನಿಯು ಉತ್ಪನ್ನವಾಗಲು, ಅದನ್ನು ಕೇಳಿ ಭರತನ ಚಿತ್ತಕ್ಕೆ ಹರ್ಷವಾಗಿ, ಅವನ ದೇಹವು ಪುಲಕಿತವಾಯಿತು. ದೇವತೆಗಳು—“ಭರತನೇ, ಧನ್ಯನೋ ನೀನು ಧನ್ಯನು„ ಎಂದು ನುಡಿದು ಅವನ ಮೇಲೆ ಹೂಮಳೆಗರೆದರು. ಆಗಭರತನು ರಾಮನ ಗುಣಸಮೂಹವನ್ನು ಕೇಳುತ್ತ ಕೇಳುತ್ತ ಭರದ್ವಾಜಾಶ್ರಮಕ್ಕೆ ಬಂದನು.

ಭರತನು ಭರದ್ವಾಜಋಷಿಗಳಿಗೆ ಸಾಷ್ಟಾಂಗವೆರಗುವದನ್ನು ನೋಡಿದ ಕೂಡಲೆ ಅವರು ಆತನನ್ನು ತಮ್ಮ ಮೂರ್ತಿಮಂತ ಭಾಗ್ಯವೇ ಇರುವದೆಂದು ತಿಳಿದರು. ಅವರು ಭರತನನ್ನು ಹಿಡಿದೆತ್ತಿ ಆಲಿಂಗಿಸಿ ಆಶೀರ್ವದಿಸಿ ಆತನನ್ನು ಕೃತಾರ್ಥನಾಗಮಾಡಿದರು. ರಾಮನವನವಾಸದ ಸಂಬಂಧದಿಂದ ಮುನಿಗಳು ತನ್ನನ್ನು ಏನು ಕೇಳುವರೋ ಎಂದು ಭರತನು ಅಂಜಿಕೊಂಡಿರಲು, ಮುನಿಗಳು ಆತನ ಶೀಲವನ್ನೂ, ಸಂಕೋಚಸ್ವಭಾವವನ್ನೂ ಅರಿತು ಆತನನ್ನ ಕುರಿತು—“ಅಪ್ಪಾ ಭರತಾ, ಕೇಳು. ನಮಗೆ ಎಲ್ಲ ಸಂಗತಿಯು ಗೊತಾಗಿರುವದು. ಈಶ್ವರೀ ಘಟನೆಯಮುಂದೆ ಯಾರ ಆಟವೂ ನಡೆಯುವದಿಲ್ಲ. ಮಾಡಿದ್ದನ್ನೆಲ್ಲ ಕೈಕೇಯಿಯೇ ಮಾಡಿದಳೆಂದು ತಿಳಿದು ನೀನು ವ್ಯರ್ಥ ಶೋಕಪಡಬೇಡ. ಅಪ್ಪಾ, ಭರತಾ, ಕೈಕೇಯಿಯ ಕಡೆಗೆ ದೋಷವಿಲ್ಲ. ಸರಸ್ವತಿಯೇ ಆಕೆಯ ಬುದ್ಧಿಯನ್ನು ಪೂರಾನಷ್ಟಮಾಡಿಬಿಟ್ಟಿದ್ದಳು. ನನ್ನ ಈ ಮಾತನ್ನು ಬೇರೆಯವರು ಒಳ್ಳೆಯದೆಂದು ಒಪ್ಪಲಿಕ್ಕಿಲ್ಲ; ಆದರೆ ಸಿದ್ಧಾಂತ—ವ್ಯವಹಾರಗಳೆರಡೂ ಪಂಡಿತರಿಗೆ ಮಾನ್ಯವಾಗಿರುತ್ತವೆ; ಯಾಕಂದರೆ ಅವುಗಳ ಏಕವಾಕ್ಯತೆಯಜ್ಞಾನವು ಅವರಿಗೆ ಮಾತ್ರ ಇರುತ್ತದೆ. ಅಪ್ಪಾ, ಭರತಾ, ನಿನ್ನ ವಿಮಲಯಶಸ್ಸಿನ ಗಾಯನ ಮಾಡಿ ವೇದ ಸಿದ್ಧಾಂತಗಳೂ ವ್ಯವಹಾರದಲ್ಲಿ ಮಹತ್ವವನ್ನೇ ಹೊಂದಬಹದು. ತಂದೆಯು ಕೊಟ್ಟವನಿಗೆ ರಾಜ್ಯವು ದೊರೆಯತಕ್ಕದ್ದೆಂಬ ಮತವು ಶಾಸ್ತ್ರ —ರೂಢಿಗಳೆರಡಕ್ಕೂ ಸಮ್ಮತವಾಗಿರುವದು. ದಶರಥರಾಜನು ಸತ್ಯವ್ರತನಾದ್ದರಿಂದ ನಿನ್ನನ್ನು ಕರೆಸಿ ರಾಜ್ಯ, ಸುಖ, ಧರ್ಮ, ಶ್ರೇಷ್ಠತ್ವ ಇವನ್ನು ನಿನಗೇ ಕೊಡತಕ್ಕವನಿದ್ದನು. ಅನರ್ಥಕಾರಕವಾದ ರಾಮನ ವನವಾಸವು ಆಗತಕ್ಕದ್ದೇ ಎಂಬದು ನಿಶ್ಚಿತವಾಗಿತ್ತು. ಪಾಪ! ಕೈಕೇಯಿಯು ತಿಳುವಳಿಕೆ ಇಲ್ಲದವಳು, ಕುಚೇಷ್ಟೆಮಾಡಿದಳು; ಕಡೆಗೆ ಆಕೆಗೆ ಪಶ್ಚಾತ್ತಾಪ

ವಾಯಿತು. ಇದರಲ್ಲಿ ನಿನ್ನ ಅಪರಾಧವು ಲೇಶವಾದರೂ ಇರುತ್ತದೆಂದು ಯಾರಾದರೂ ಅಂದರೆ, ಅವರು ಅಧಮರೂ, ಅಜ್ಞಾನಿಗಳೂ, ದುಷ್ಟರೂ ಇರುವರೆಂದು ತಿಳಿಯತಕ್ಕದ್ದು. ನೀನು ರಾಜ್ಯಭಾರವನ್ನು ಮಾಡಿದ್ದರೂ ನಿನಗೆ ದೋಷತಟ್ಟದೆ, ರಾಮನಿಗೆ ಆನಂದವೇ ಆಗುತ್ತಿತ್ತು; ಆದರೆ ಈಗಂತು ನೀನು ಒಳ್ಳೆಯ ತನದ ಪರಮಾವಧಿಯನ್ನು ಮಾಡಿರುವೆ. ಭರತಾ, ಜಗತ್ತಿನಲ್ಲಿ ಸರ್ವಸುಮಂಗಲಗಳ ಅಧಿಷ್ಠಾನವೆಂದರೆ, ರಾಮಪದಪ್ರೇಮವು! ನಿನ್ನ ಈ ವಿಚಾರವು ನಿನಗೆ ಯೋಗ್ಯವಾದದ್ದೇ ಇರುವದು. ನಿನ್ನಂಥ ಭಾಗ್ಯಶಾಲಿಯು ಯಾವನಿರುವನು? ದಶರಥಪುತ್ರನೂ, ರಾಮನ ಪ್ರಿಯ ಬಂಧುವೂ ಆದ ನಿನಗೆ ಇದು ಆಶ್ಚರ್ಯವಲ್ಲಪ್ಪ.

ಎಲೈ ಭರತನೇ ಕೇಳು ರಘುಪತಿಯ ಮತದಿಂದ ನಿನ್ನಂಥ ಪ್ರೇಮಾಸ್ಪದನು ಯಾವನೂ ಇಲ್ಲ. ರಾಮ-ಲಕ್ಷ್ಮಣರೂ, ಸೀತೆಯೂ ಆದಿನ ರಾತ್ರಿಯನ್ನೆಲ್ಲ ಅತಿ ಪ್ರೇಮದಿಂದ ನಿನ್ನ ಪ್ರಸಂಶೆಮಾಡುವದರಲ್ಲಿಯೇ ಕಳೆದರು. ಜಗತ್ತಿನಲ್ಲಿ ಮೂಢರು ತಮ್ಮ ಪ್ರಾಣಗಳ ಮೇಲೆ ಲೋಭ ಮಾಡುತ್ತಿರುವಂತೆ, ರಾಮನು ನಿನ್ನ ಮೇಲೆ ಲೋಭ ಮಾಡುತ್ತಿರುವನು. ರಾಮನು ಶರಣಾಗತರ ಕುಟುಂಬವನ್ನು ರಕ್ಷಿಸುವನಾದ್ದರಿಂದ ಆತನಿಗೇನು ಒಂದು ಸ್ವಲ್ಪರಮೇಲೆ ಹೀಗೆ ಲೋಭಮಾಡುವದು ದೊಡ್ಡದಲ್ಲ. ಭರತಾ, ನನ್ನ ಮತದಿಂದಂತು ನೀನು ದೇಹಧಾರಿಯಾದ ರಾಮಸ್ನೇಹವೇ ಆಗಿರುತ್ತೀ. ಎಲೈ ರಾಮಬಂಧೋ, ನಾವು ಉದಾಸೀನರೂ, ತಪಸ್ವಿಗಳೂ, ವನದಲ್ಲಿರುವವರೂ ಆಗಿದ್ದು, ಎಂದೂ ಸುಳ್ಳು ಆಡುವವರಲ್ಲ. ಸರ್ವಸಾಧನಗಳ ಅಪೂರ್ವ ಫಲವೆಂದರೆ, ಸೀತಾರಾಮಲಕ್ಷ್ಮಣರ ದರ್ಶನವು; ಅಂಥ ದರ್ಶನವು ನಮಗೆ ಪ್ರಾಪ್ತವಾಯಿತು. ಆ ಮಹತ್ಫಲದ ಫಲವು ನಿನ್ನ ಈ ದರ್ಶನವು! ನಿನ್ನ ದರ್ಶನವಾದದ್ದು ಪ್ರಯಾಗಸಹಿತವಾಗಿ ನಮ್ಮೆಲ್ಲರ ಮಹದ್ಭಾಗ್ಯವಾಗಿರುವದು." ಎಂದುನುಡಿಯಲು, ಸಭಾಸದರು ಹರ್ಷಿತರಾದರು. ದೇವತೆಗಳು "ಸಾಧು" "ಸಾಧು" ಎಂದು ಶ್ಲಾಘಿಸಿ ಹೂಮಳೆ ಗರೆಯ ಹತ್ತಿದರು. ಯಾವತ್ತು ವಾತಾವರಣದಲ್ಲಿಯೂ, ಪ್ರಯಾಗದಲ್ಲಿಯೂ "ಧನ್ಯ ಧನ್ಯ" ಎಂಬ ಧ್ವನಿಯು ತುಂಬಿಕೊಂಡಿತು. ಅದನ್ನು ಮೇಲಿಂದ ಮೇಲೆ ಕೇಳಿ ಭರತನು ಪ್ರೇಮದಲ್ಲಿ ನಿಮಗ್ನನಾದನು; ಆತನದೇಹವು ರೋಮಾಂಚಿತವಾಯಿತು; ನೇತ್ರಗಳು ಅಶ್ರುಪೂರ್ಣವಾದವು; ಆತನ ಹೃದಯದಲ್ಲಿ ಸೀತಾರಾಮರು ಆವಿರ್ಭವಿಸಿದರು! ಭರತನು ಮುನಿವೃಂದಕ್ಕೆ ನಮಸ್ಕಾರ ಮಾಡಿ ಸದ್ಗದಿತವಾಣಿಯಿಂದ—"ಮುನಿಶ್ರೇಷ್ಠರೇ, ನನಗೆ ಯಾವ ಮಾತಿನ ಪಶ್ಚಾತ್ತಾಪವೂ ಆಗಿರುವದಿಲ್ಲ. ಸೀತಾ ರಾಮಲಕ್ಷ್ಮಣರು ಅಜಿನವಸ್ತ್ರಗಳನ್ನು ಧರಿಸಿ, ಫಲಗಳಮೇಲೆ ನಿರ್ವಾಹಸಾಗಿಸುತ್ತ, ನೆಲದ ಮೇಲೆ ಹಾಸಿರುವ ಹುಲ್ಲು ಎಲೆಗಳ ಹಾಸಿಗೆಯಮೇಲೆ ಮಲಗಿಕೊಂಡು, ಪರ್ಣಕುಟಿಯಲ್ಲಿ ವಾಸಿಸುತ್ತ, ಮುನಿವೇಷದಿಂದ ಬರಿಗಾಲಿನಲ್ಲಿ ಚಳಿ-ಮಳೆ-ಗಾಳಿ-ಬಿಸಿಲುಗಳನ್ನು ಯಾವಾಗಲೂ ಸಹಿಸುತ್ತ ಅಡವಿ

ಭರತನ ಈ ಪ್ರಭಾವವನ್ನು ನೋಡಿ ಇಂದ್ರನಿಗೆ ಚಿಂತೆಯು ಉತ್ಪನ್ನವಾಯಿತು. ಭರತನ ವಿಜ್ಞಾಪನೆಗೆಚಿತ್ತಗೊಟ್ಟು ಶ್ರೀರಾಮನು ಅಯೋಧ್ಯೆಗೆ ತಿರುಗಿ ಬಂದಪಕ್ಷದಲ್ಲಿ, ರಾವಣಾದಿ ಲೋಕಕಂಟಕರ ಸಂಹಾರಕ್ಕೆ ವಿಘ್ನವಾಗಿ ತನ್ನ ವೈಭವಪ್ರಾಪ್ತಿಗೆ ಆತಂಕ ವೆಲ್ಲಿ ಉಂಟಾಗುವದೋ, ಎಂದು ತಿಳಿದು ಆತನು ಗುರುಗಳಾದ ಬೃಹಸ್ಪತ್ಯಾಚಾರ್ಯ ರನ್ನು ಕುರಿತು— ಮಹಾರಾಜ, ಈಗ ನಾವು ಭರತ–ರಾಮರ ಭೆಟ್ಟಿಯೇ ಆಗದಂತೆ ಏನಾದರೂ ಉಪಾಯವನ್ನು ಯೋಚಿಸಬೇಕು; ಯಾಕಂದರೆ ರಾಮನು ಸಂಕೋಚಸ್ವ ಭಾವದವನೂ, ಪ್ರೇಮಕ್ಕೆ ಅಂಕಿತನಾಗುವವನೂ ಇದ್ದು, ಭರತನಂತು ಪ್ರೇಮದ ಸಾಗ ರವೇ ಆಗಿರುವನು. ತೀರಹಣ್ಣಿಗೆ ಬಂದಕೆಲಸವು ಕೆಟ್ಟು ಹೋದೀತು, ಅನ್ನಲು, ದೇವ ಗುರುವಿಗೆ ನಗೆ ಬಂದಿತು. ಇಂದ್ರನು ಸಹಸ್ರಾಕ್ಷನಿದ್ದು, ಅಂಧನಾಗಿರುವ ಹಾಗೆ ಅವ ರಿಗೆ ತೋರಿತು. ಅವರು ಆತನನ್ನು ಕುರಿತು—“ಸುಮ್ಮನೆ ಕ್ಷೋಭವನ್ನುಂಟುಮಾಡ ಬೇಡ ದೇವೇಂದ್ರ, ಮಾಯಾಪತಿಯು ಸೇವಕರ ಮೇಲೆ ಮಾಯೆಯ ಪ್ರಯೋಗ ಮಾಡಿದರೆ ಅದು ತಿರುಗಿ ನಿನ್ನ ಕೊರಳಿಗೇ ಬಿದ್ದೀತು! ಹಿಂದಕ್ಕೆ ಪಟ್ಟಾಭಿಷೇಕವಾಗುವ ಕಾಲಕ್ಕೆ ಶಾರದೆಯ ಮಾಯೆಯು ಕೇಳಿ ಕೇಳಿ ರಾಮನ ಮನಸ್ಸಿಗೆ ಬಂದದ್ದೇ ಆಗಿತ್ತು. ಅದರಂತೆ ಈ ಪ್ರಸಂಗದಲ್ಲಿ ನೀನು ಏನಾದರೂ ಹೆಚ್ಚುಕಡಿಮೆ ಮಾಡಹೋದರೆ ಹಾನಿ ಯಾದೀತು. ಎಲೈ ಸುರೇಶ್ವರನೇ, ರಘುಪತಿಯ ಸ್ವಭಾವವನ್ನು ಕೇಳು. ತನ್ನ ವಿಷ ಯವಾಗಿ ಯಾರಾದರೂ ಅಪರಾಧ ಮಾಡಿದರೆ ಆತನು ಸಿಟ್ಟಾಗುವದಿಲ್ಲ; ಆದರೆ ಭಕ್ತರ ಉಸಾಬರಿಗೆ ಯಾರಾದರೂ ಹೋದರೆ ರಾಮನ ಕ್ರೋಧಾಗ್ನಿಯು ಅವರನ್ನು ಸುಟ್ಟು ಬೂದಿಮಾಡುವದು. ಈ ಮಾತಿನ ಅನುಭವವು ಅಂಬರೀಷನನ್ನು ಛಲಿಸಿದ ದೂರ್ವಾಸ ಋಷಿಗಳಿಗೆ ಚನ್ನಾಗಿ ಬಂದಿರುವದು. ಜಗತ್ತು ರಾಮನಾಮವನ್ನು ಜಪಿಸುವದು, ಅಂಥ ರಾಮನು ಭರತನನ್ನು ಜಪಿಸುವನು, ಅಂದಬಳಿಕ ರಾಮನಿಗೆ ಭರತನಿಗಿಂತ ಪ್ರಿ ಯರಾದವರ್‍ಯಾರಿರುವರು? ಆದ್ದರಿಂದ ಅಮರಪತಿಯೇ, ರಘುವರನ ಭಕ್ತರ ಕಾರ್ಯ ದಲ್ಲಿ ವ್ಯತ್ಯಯ ಉಂಟುಮಾಡುವದನ್ನು ಮನಸ್ಸಿನಲ್ಲಿಯೂ ತರಬೇಡ. ತಂದರೆ ಇಹ ಲೋಕದಲ್ಲಿ ಅಪಕೀರ್ತಿಯೂ, ಪರಲೋಕದಲ್ಲಿ ದುಃಖಪರಂಪರೆಯೂ ಉಂಟಾಗುವವು. ಸುರೇಂದ್ರಾ, ನನ್ನ ಉಪದೇಶವನ್ನು ಕೇಳು. ರಾಮನಿಗೆ ಆತನ ಸೇವಕರು ಪಂಚಪ್ರಾಣ ವಾಗಿರುವದರಿಂದ ಆ ಸೇವಕರ ಸೇವೆಯನ್ನು ಮಾಡಿದರೆ ರಾಮನು ಪ್ರಸನ್ನನಾಗುವನು. ಆಸೇವಕರನ್ನು ದ್ವೇಷಿಸಿದರೆ ರಾಮನು ಹೆಚ್ಚು ದ್ವೇಷಮಾಡತೊಡಗುವನು. ರಾಮನು ಪಕ್ಷ ಪಾತರಹಿತನಾಗಿದ್ದರೂ, ಆತನಲ್ಲಿ ರಾಗ–ಲೋಭಗಳಿರದಿದ್ದರೂ, ಆತನನ್ನು ಗುಣದೋಷ– ಪಾಪ ಪುಣ್ಯಮೊದಲಾದ ಭೇದ ಭಾವಗಳು ಮುಟ್ಟದಿದ್ದರೂ, “ಮಾಡಿದ್ದು ಉಣ್ಣಬೇಕು,” ಎಂಬ ನ್ಯಾಯದಂತೆ ಸೃಷ್ಟಿಯಲ್ಲಿ ಕರ್ಮವನ್ನೇ ಆತನು ಪ್ರಧಾನ ಭೂತವಾಗಿ ಮಾಡಿ ಇಟ್ಟಿದ್ದರೂ ಭಕ್ತರ ಹಾಗು ಅಭಕ್ತರ ಹೃದಯದಂತೆ, ಆತನ ವ್ಯವಹಾರವು ಸಮವಿದ್ದದ್ದು

ವಿಷಮವೂ ಆಗುತ್ತಿರುವದು. ರಾಮನು ನಿರ್ಗುಣನೂ, ಅಲಕ್ಷನೂ, ನಿರಭಿಮಾನಿಯೂ, ಆನಂದೈಕರಸನೂ ಆಗಿದ್ದರೂ, ಭಕ್ತರ ಪ್ರೇಮಕ್ಕೆ ವಶನಾಗಿ ಆತನು ಸಗುಣನೂ ಆಗಿರುವನು. ರಾಮನು ಯಾವಾಗಲೂ ತನ್ನ ಭಕ್ತರ ಕೋರಿಕೆಗಳನ್ನು ಪೂರ್ಣಮಾಡುವನೆಂಬದಕ್ಕೆ ವೇದಗಳೂ, ಪುರಾಣಗಳೂ, ಸಂತರೂ, ನೀವು ದೇವತೆಗಳೂ ಕೂಡ ಸಾಕ್ಷಿಯನ್ನು ಹೇಳಬಹುದು. ಇದನ್ನೆಲ್ಲ ಮನಸ್ಸಿನಲ್ಲಿ ತಂದು ನಿನ್ನ ಕುಟಿಲತನವನ್ನು ಬಿಟ್ಟು ಭರತನ ಚರಣಗಳಲ್ಲಿ ಉತ್ಕೃಷ್ಟವಾ ಪ್ರೇಮಭಾವವನ್ನು ಇಡು. ರಾಮನ ಭಕ್ತರು ದಯಾಳುಗಳಾಗಿರುವದರಿಂದಅವರುಎರಡನೆಯವರ ದುಃಖದಿಂದ ದುಃಖಿತರಾಗುವವರೂ, ಎರಡನೆಯವರ ಕಲ್ಯಾಣಕ್ಕಾಗಿ ಜೀವದ ಹಂಗು ಇಡದೆ ಹೆಣಗುವವರೂ ಆಗಿರುವರು; ಅಂದಬಳಿಕ ಭರತನಂತು ಭಕ್ತರ ಮುಕುಟಮಣಿಯಾಗಿರುವನು. ಇಂದ್ರಾ, ನೀನು ಆತನ ಭಯವನ್ನೇ ಮನಸ್ಸಿನಲ್ಲಿ ಹಿಡಿಯಬೇಡ. ಪ್ರಭು-ರಾಮಚಂದ್ರನು ಸತ್ಯಪ್ರತಿಜ್ಞನೂ, ದೇವತೆಗಳ ಹಿತಕರ್ತೃವೂ ಆಗಿದ್ದು, ಭರತನು ರಾಮಾಜ್ಞೆಯನ್ನು ಅನುಸರಿಸುವವನಾಗಿರುವನು. ಹೀಗಿರಲು, ನೀವು ಕೇವಲ ಸ್ವಾರ್ಥಕ್ಕಾಗಿ ವಿಹ್ವಲರಾಗಿರುವಿರಿ. ಇದು ಭರತನ ದೋಷವಾಗಿರದೆ ನಿಮ್ಮದೇ ದೋಷವಾಗಿರುವದು.

ಗುರುವಿನ ಶ್ಲಾಘ್ಯವಾದ ಉಪದೇಶವನ್ನು ಕೇಳಿ ಇಂದ್ರನ ಮನಸ್ಸಿಗೆ ಅತ್ಯಾನಂದವಾಗಿ, ಆತನ ಮನಸ್ಸಿನ ಚಿಂತೆಯು ದೂರವಾಯಿತು. ಆ ಸುರಪತಿಯು ಭರತನ ಸದ್ಭಾವವನ್ನು ಶ್ಲಾಘಿಸಿ ಆತನ ಮೇಲೆ ಹೂಮಳೆಗರೆದನು. ಭರತನು ಮಧ್ಯದಲ್ಲಿ ಒಂದು ವಸತಿಯನ್ನು ಮಾಡಿ ಯಮುನಾತೀರಕ್ಕೆ ಬಂದನು. ಯಮುನೆಯ ಜಲದ ಬಣ್ಣವು ಅಚ್ಚ ಕಳೆಯದೆ ರಾಮನ ಮೈಬಣ್ಣದಂತೆ ಇರುವದನ್ನು ನೋಡಿ, ಭರತನು ತನ್ನ ಪರಿವಾರದೊಡನೆ ರಾಮವಿರಹ ದುಃಖದ ಸಮುದ್ರದಲ್ಲಿ ಮುಳುಗಿದ್ದರೂ ಆತನು ಕೂಡಲೆ ವಿವೇಕರೂಪ ನೌಕೆಯನ್ನು ಏರಿ ಆದಿನ ಯಮುನಾತೀರದಲ್ಲಿ ವಿಶ್ರಮಿಸಿದನು. ಅಂದು ರಾತ್ರಿ ಗುಹನು ನಾಲ್ಕೂ ಕಡೆಯ ನಾವೆಗಳನ್ನು ತರಿಸಲು, ಮರುದಿನ ಮುಂಜಾನೆ ಒಂದೇ ಸಾರಿಗೆ ಎಲ್ಲರೂ ಯಮುನೆಯನ್ನು ದಾಟಿಹೋದರು. ಈ ಸೇವೆಯು ಘಟಿಸಿದ್ದಕ್ಕಾಗಿ ಗುಹನಿಗೆ ಸಂತೋಷವಾಯಿತು. ಎಲ್ಲರೂ ಯಮುನೆಯ ಸ್ನಾನಾದಿಗಳನ್ನು ತೀರಿಸಿಕೊಂಡು ಮುಂದಕ್ಕೆ ಸಾಗಿದರು. ಈ ಸುದ್ದಿಯನ್ನು ಕೇಳಿ ಹಾದಿಯ ಮೇಲಿದ್ದ ಸ್ತ್ರೀಪುರುಷರು ತಮ್ಮ ಕೆಲಸಬೊಗಸೆಗಳನ್ನು ಬಿಟ್ಟು ಬಂದು ಭರತ-ಶತ್ರುಘ್ನರ ಸುಸ್ವರೂಪವನ್ನು ನೋಡಿ, ಎಲ್ಲರೂ ಪ್ರೇಮವಶರಾಗಿ, ತಮ್ಮ ಜನ್ಮದ ಸಾಫಲ್ಯವಾದಂತೆ ಹರ್ಷಿತರಾದರು. ಸ್ತ್ರೀಯರು ಮಹಾತ್ಮನಾದ ಭರತನನ್ನು ಕುರಿತು ತಮ್ಮೊಳಗೆ— "ಈತನು ತಂದೆ ಕೊಟ್ಟ ರಾಜ್ಯವನ್ನು ದೂಡಿಕೊಟ್ಟು, ಕೇವಲ ಫಲಗಳಿಂದ ಜೀವಿಸುತ್ತಿರುವ ರಘುವೀರನಿಗೆ ಹೇಳಿಕೊಳ್ಳುವದಕ್ಕಾಗಿ ಬರಿಗಾಲಿನಿಂದ ನಡೆಯುತ್ತ ಹೋಗುತ್ತಿರುವನು. ಈತನ ಬಂಧುಪ್ರೇಮದ, ಹಾಗು ಆಚರಣೆಯ ಚರ್ಚೆಯಿಂದಲೂ, ಅದರ ಶ್ರವಣದಿಂ

ದಲೂ ದುಃಖ-ಪಾತಕಗಳ ಕ್ಷಾಲನವಾಗಲೇ ಬೇಕು. ಈ ಬಂಧುಗಳಿಬ್ಬರ ದರ್ಶನ ದಿಂದ ನಮ್ಮ ಜನ್ಮವು ಸಫಲವಾಯಿತು. ಇವರ ತಾಯಿಯಾದ ಕೈಕೇಯಿಯು ದೋಷವೆ ಣಿಸುವದಕ್ಕಿಂತ, ನಮ್ಮ ಅನುಕೂಲ ದೈವವು ಈ ಸುಯೋಗವನ್ನು ಒದಗಿಸಿಕೊಟ್ಟಿದ್ದ ಕ್ಕಾಗಿ ಆನಂದ ಪಡತಕ್ಕದ್ದು. ಇಲ್ಲದಿದ್ದರೆ, ಶಾಸ್ತ್ರ-ವ್ಯವಹಾರಗಳಿಂದ ಹೀನರೂ, ಕುಲ ದಿಂದ ಹಾಗು ಇರುವಿಕೆಯಿಂದ ಮಲಿನರೂ ಆದ ನಮಗೆ ದುಷ್ಟಪ್ರದೇಶದ ಕುಗ್ರಾಮಗ ಳಲ್ಲಿ ಈ ಪುಣ್ಯಪಾವನನ ದರ್ಶನವು ಹೇಗಾಗುತ್ತಿತ್ತು? ಎಂದು ಮಾತನಾಡಿಕೊಳ್ಳು ತ್ತಿದ್ದರು.

ಈರೀತಿಗೆ ತನ್ನ ಗುಣಗಳಿಂದ ಸಹಿತವಾಗಿ ರಾಮನ ಗುಣಗಳನ್ನು ಕೇಳುತ್ತ ಕೇಳುತ್ತ, ರಾಮಸ್ಮರಣ ಮಾಡುತ್ತ ಮಾಡುತ್ತ ಭರತನು ಹೋಗುತ್ತಿರುವಾಗ, ಹಾದಿಯಲ್ಲಿ ತೀರ್ಥ ಗಳು, ಮುನಿಗಳ ಆಶ್ರಮಗಳು, ದೇವಸ್ಥಾನಗಳು ಇವುಗಳ ದರ್ಶನವಾದ ಕೂಡಲೆ ಆತನು ಸ್ನಾನಮಾಡಿ ಸಾಷ್ಟಾಂಗವೆರಗಿ— "ಸೀತಾರಾಮರ ಚರಣಗಳಲ್ಲಿ ನನ್ನ ಭಕ್ತಿ ಯಿರಲಿ"ಎಂದು ಪ್ರಾರ್ಥಿಸುತ್ತಲಿದ್ದನು. ವನದಲ್ಲಿ ಕಣ್ಣಿಗೆಬಿದ್ದ ವಾನಪ್ರಸ್ಥರು, ಬ್ರಹ್ಮ ಚಾರಿಗಳು, ಯತಿಗಳು, ಉದಾಸಿಗಳು, ಭಿಲ್ಲರು, ಕೋಳೀ ಜನರು ಮೊದಲಾದವರನ್ನು ಪ್ರತ್ಯೇಕವಾಗಿ ನಮಸ್ಕರಿಸಿ, ಸೀತಾರಾಮ-ಲಕ್ಷ್ಮಣರು ಯಾವ ವನದಲ್ಲಿರುವರೆಂದು ಕೇಳಲು, ಅವರು, ಸೀತಾ-ರಾಮ-ಲಕ್ಷ್ಮಣರು ಇಂಥವನದಲ್ಲಿರುವರೆಂದು ಹೇಳಿ, ಅವರ ಕ್ಷೇಮವಾರ್ತೆಯನ್ನು ತಿಳಿಸುವಾಗ, ಅವರು ಭರತನಿಗೆ ಲಕ್ಷ್ಮಣನ ಹಾಗೆ ತೋರುತ್ತಿದ್ದರು. ಹೀಗೆ ಭರತನು ಮಾರ್ಗಕ್ರಮಣಮಾಡುತ್ತಿರುವಾಗ ರಾಮ ದರ್ಶನದ ವಿಷಯವಾಗಿ ಅತ್ಯಂತ ಉತ್ಕಂಠಿತನಾಗಿದ್ದನು. ಎಲ್ಲರಿಗೂ ಶುಭಶಕುನಗಳಾಗತೊಡಗಿದವು. ಅಷ್ಟ ರಲ್ಲಿ ಪಯಸ್ವಿನೀ ತೀರದಲ್ಲಿರುವ, ಹಾಗು ರಾಮನ ವಾಸಸ್ಥಳವಾಗಿದ್ದ ಸಹಜ ಶೋಭೆಯ ಶೈಲಶಿರೋಮಣಿ ಚಿತ್ರಕೂಟಪರ್ವತವನ್ನು ಗುಹನು ಅವರಿಗೆ ತೋರಿಸಿದನು. ಅದನ್ನು ನೋಡಿದ ಕೂಡಲೆ ಎಲ್ಲರೂ "ಜಯ ಜಾನಕೀ ಜೀವನ ರಾಮಾ" ಎಂದು ಸಾಷ್ಟಾಂಗ ನಮ ಸ್ಕಾರ ಮಾಡಿದರು. ಆಗಿನ ಆನಂದದ ಭರದಲ್ಲಿ ರಘುರಾಜನು ಅಯೋಧ್ಯೆಗೇ ತಿರುಗಿ ಬರುತ್ತಿರುವನೆಂಬಂತೆ ಎಲ್ಲರಿಗೂ ತೋರಿತು. ಆಗಿನ ಕಾಲದ ಭರತನ ಪ್ರೇಮವು, ಅಹಂಮಮತ್ವಗಳಿಂದ ಕಲುಷಿತವಾಗಿರುವ ಜೀವಕ್ಕೆ ಬ್ರಹ್ಮಸುಖವು ಅತರ್ಕ್ಯವಾಗಿರ ವಂತೆ, ಕವಿಕಲ್ಪನೆಗೆ ಅತರ್ಕ್ಯವಾಗಿತ್ತು. ಹೀಗೆ ರಘುರಾಜನ ವಿಶುದ್ಧ ಪ್ರೇಮದಿಂದ ಎಲ್ಲರೂ ಶಿಥಿಲರಾದದ್ದರಿಂದ, ಎರಡು ಹರದಾರಿ ಹೋಗುವದರೊಳಗೆ ಹೊತ್ತು ಹೋಗಿ ಬಿಟ್ಟಿತು. ಆಗ ಕಾಲಹೊಳೆ ನೋಡಿ ವಸತಿಮಾಡಿ ಮರುದಿನ ಬೆಳಗಾಗುತ್ತಲೆ ಆ ರಾಮಭಕ್ತ ಸಮೂಹವು ಮುಂದಕ್ಕೆ ಸಾಗಿತು.

ಇತ್ತ ಶ್ರೀರಾಮನು ಉತ್ತರರಾತ್ರಿಯಲ್ಲಿ ಎಚ್ಚತ್ತನು. ಅದೇ ದಿನ ರಾತ್ರಿ ಸೀತೆಗೆ ಸ್ವಪ್ನದಲ್ಲಿ— "ನಾಥನ ವಿಯೋಗತಾಪದಿಂದ ತಪ್ತನಾದ ಭರತನು ಪರಿವಾರಸಹಿತ

ಬಂದಂತೆ ಆಯಿತು. ಆಕೆಗೆ ಎಲ್ಲರೂ ಉದಾಸೀನರೂ, ದೀನರೂ ಆಗಿ ತೋರಿದರು. ಅತ್ತೆಯರಂತು ಹೇಗೆ ಹೇಗೋ ತೋರಿದರು. ಈ ಸ್ವಪ್ನವನ್ನು ಕೇಳಿ, ಜಗತ್ತಿನ ಶೋಕ ಹರಣಮಾಡುವ ಶ್ರೀರಾಮನು ಸ್ವತಃ ಶೋಕಗ್ರಸ್ತನಾಗಲು, ಆತನ ನೇತ್ರಗಳು ಅಶ್ರುಪೂರ್ಣವಾದವು. ಆತನು ಲಕ್ಷ್ಮಣನನ್ನು ಕುರಿತು—"ಲಕ್ಷ್ಮಣಾ, ಈ ಸ್ವಪ್ನವು ಒಳ್ಳೆಯದಲ್ಲ. ಯಾರಾದರೂ ಏನಾದರೂ ನಮಗೆ ಬೇಡಾಗಿರುವ ಸುದ್ದಿಯನ್ನು ಹೇಳುವರು," ಎಂದುಹೇಳಿ, ಸ್ನಾನಮಾಡಿ ಶಿವಾರ್ಚನೆಯನ್ನು ತೀರಿಸಿ ಸಂತರನ್ನು ಸತ್ಕರಿಸಿ ಕುಳಿತುಕೊಂಡಿದ್ದನು. ಅಷ್ಟರಲ್ಲಿ ಉತ್ತರದಕಡೆಯಲ್ಲಿ ಧೂಳಿ ಎದ್ದು, ಖಗ-ಮೃಗಗಳು ಧಾವಿಸಿ ಆಶ್ರಮದ ಕಡೆಗೆ ಬರತೊಡಗಿದವು. ಆಗ ರಾಮನು ಎದ್ದು ಇದೇನೆಂದು ನೋಡಿ ಬೆರಗಾಗುತ್ತಿರಲು, ಕಿರಾತರು ಬಂದು ಪ್ರಭುವಿಗೆ ಎಲ್ಲ ಸುದ್ದಿಯನ್ನು ಹೇಳಿದರು. ಆ ಅತ್ಯಂತ ಶುಭವಾರ್ತೆಯನ್ನು ಕೇಳಿದ ಕೂಡಲೆ, ಪ್ರಭುವಿನ ಹೃದಯವು ಆನಂದಪೂರ್ಣವಾಯಿತು; ನೇತ್ರಗಳು ಪ್ರೇಮಾಶ್ರುಪೂರ್ಣವಾದವು; ಭರತನು ಬರುವ ಪ್ರಯೋಜನವೇನೆಂಬವಿಚಾರವು ಆತನ ಮನಸ್ಸಿನಲ್ಲಿ ಬರಲು, ಆಸೀತಾರಾಮನು ಚಿಂತಾಮಗ್ನನಾದನು. ಭರತನು ಚತುರಂಗ ಸೈನ್ಯದೊಡನೆ ಬಂದಿರುವದನ್ನು ಕೇಳಿ, ಒತ್ತಟ್ಟಿಗೆ ತಂದೆಯ ಅಪ್ಪಣೆಯು, ಒತ್ತಟ್ಟಿಗೆ ಭರತನಭಿಡೆಯು ಹೀಗೆ ಇಬ್ಬಗೆಯ ಚಿಂತೆಗಳು ಶ್ರೀರಾಮನಿಗೆ ಉತ್ಪನ್ನವಾದವು. ಮನಸ್ಸಿನಲ್ಲಿ ಭರತನ ಸ್ವಭಾವದ ಕಲ್ಪನೆಯಾಗಲು, ರಘುಪತಿಯ ಚಿತ್ತಕ್ಕೆ ಚನ್ನಾಗಿ ಸ್ವಾಸ್ಥ್ಯವು ಉಂಟಾಗಲೊಲ್ಲದು; ಆದರೆ ಭರತನು ಶ್ರದ್ಧೆಮಾತುವಿಯರಪವನೂ, ಸುಜ್ಞನೂ, ಸಮಂಜಸವೂ ಇರುವನೆಂಬದು ಮನಸ್ಸಿನಲ್ಲಿ ಬಂದಕೂಡಲೆ ಆತನಿಗೆ ಸಮಾಧಾನವಾಯಿತು.

ಹೀಗೆ ಪ್ರಭುವಿನ ಮನಸ್ಸು ಚಂಚಲವಾದದ್ದನ್ನು ನೋಡಿ ಲಕ್ಷ್ಮಣನು ಪ್ರಾಸಂಗಿಕ ಇತಿಕರ್ತವ್ಯತೆಯ ವಿಚಾರಗಳನ್ನು ಕುರಿತು ಮಾತಾಡತೊಡಗಿದನು.—"ಮಹಾರಾಜ ನಾನು ಕೇಳದೆ ಮಾತಾಡುತ್ತಿರುವೆನು. ಸ್ವಾಮಿನಿಷ್ಠೆಯು ಸ್ಪಷ್ಟತನವು ಉದ್ಧತತನವಲ್ಲ. ಸ್ವಾಮಿನ್, ತಾವು ಸರ್ವಜ್ಞ ಶಿಖಾಮಣಿಗಳೇ ಇರುವಿರಿ; ಆದರೆ ಸೇವಕನು ನಾನು ನನ್ನ ತಿಳುವಳಿಕೆಯಂತೆ ಸೂಚಿಸುವೆನು. ಎಲೈ ನಾಥನೇ, ನೀನು ಸ್ವತಃ ಒಳ್ಳೆಯ ಮನಸ್ಸಿನವನೂ, ಸರಳನೂ ಇದ್ದು, ಶೀಲ-ಸ್ನೇಹಗಳ ಕೇವಲ ಆಗರವಾಗಿರುತ್ತೀ. ಎಲ್ಲರ ಮೇಲೆ ನಿನ್ನ ಪ್ರೇಮ-ವಿಶ್ವಾಸಗಳಿರುವದರಿಂದ ನೀನು ಎಲ್ಲರನ್ನು ನಿನ್ನಂತೆಯೇ ತಿಳಿಯುತ್ತಿರುವೆ; ಆದರೆ ವಿಷಯಾಂಧ ಪ್ರಾಣಿಗಳು ಮಾತ್ರ ಪ್ರಭುತ್ವವು ಪ್ರಾಪ್ತವಾದ ಕೂಡಲೆ ಮೂಢರೂ, ಮೋಹವಶರೂ ಆಗಿ ಅನ್ಯರಿಗೆ ಬಾಧಕರಾಗುವರು; ಆದರೂ ಭರತನು ಸಾಧುವೂ, ಸುಜ್ಞನೂ, ನೀತಿತತ್ಪರನೂ ಇದ್ದು, ಪ್ರಭುಪದದಲ್ಲಿರುವ ಆತನ ಪ್ರೇಮವು ಯಾವತ್ತು ಜಗತ್ತಿಗೆ ಗೊತ್ತಿರುವದು; ಹೀಗಿದ್ದೂ, ಆತನು ಇಂದು ರಾಜ್ಯಪದವು ದೊರೆತ ಕೂಡಲೆ ಧರ್ಮಮರ್ಯಾದೆಯ ಉಲ್ಲಂಘನಮಾಡುವದಕ್ಕಾಗಿ ಹೊರಟ

ಶುವನು. ನಮ್ಮವನೇ ಆದ ದುಷ್ಟತನದ ಈ ಕುಟಿಲ ಬಂಧುವು ನನಗೊದಗಿದ ಹೀನಪ್ರಸಂಗವನ್ನರಿತು, ರಾಮನು ವನವಾಸಿಯೂ, ಏಕಾಕಿಯೂ ಆಗಿರುವನೆಂದು ತಿಳಿದು ನಿಷ್ಕಂಟಕರಾಜ್ಯವಾಳುವದಕ್ಕಾಗಿ ನಮ್ಮನ್ನು ಘಾತಿಸುವ ಹೇತುವಿನಿಂದ ಸೈನ್ಯದೊಡನೆ ಬಂದಿರುವನು ಹಾಗಿರದಿದ್ದರೆ ಈ ಚತುರಂಗಬಲದ ಆಡಂಬರವೇಕೆ ಬೇಕಾಗಿತ್ತು? ಭರತನಿಗೇ ನಾನು ದೋಷವಿಡುವೆನಂತಲ್ಲ, ರಾಜ್ಯಪದವು ಪ್ರಾಪ್ತವಾದ ಕೂಡಲೆ ಜಗತ್ತೇ ಉಚ್ಛೃಂಖಲವಾಗುತ್ತದೆಂಬದಕ್ಕೆ ಚಂದ್ರನು ಗುರುಪತ್ನೀರತನಾದದ್ದೂ, ನಹುಷನ ಬ್ರಾಹ್ಮಣರಿಂದ ಪಲ್ಲಕ್ಕಿಯನ್ನು ಹೊರಿಸಿದ್ದೂ ಸಾಕ್ಷಿಯಾಗಿರುವವು. ವೇನನ ಅಧಮತನವಂತು ಜಗಪ್ರಸಿದ್ಧವಾಗಿರುವದು. ಸಹಸ್ರಾರ್ಜುನ, ದೇವೇಂದ್ರ, ತ್ರಿಶಂಕು ಇವರಲ್ಲಿ ಯಾರನ್ನು ರಾಜ್ಯಮದವು ಕಲಂಕಿತವಾಗಿ ಮಾಡಿರುವದಿಲ್ಲ? ಶತ್ರುವನ್ನೂ, ಸಾಲವನ್ನೂ ಸ್ವಲ್ಪವೂ ಉಳಿಸಕೂಡದೆಂಬ ನೀತಿಯಂತೆ, ಭರತನು ಸರಿಯಿಲ್ಲದ ಉಪಾಯವನ್ನು ಯೋಚಿಸಿರುವನು! ಆದರೆ ರಾಮನು ಒಬ್ಬನೇ ಇರುವನೆಂಬ ತಿಳುವಳಿಕೆಯಿಂದ ಆತನನ್ನು ಧಿಕ್ಕರಿಸಿದ್ದು ಮಾತ್ರ ಯೋಗ್ಯವಲ್ಲ. ಸಮರಾಂಗಣದಲ್ಲಿ ರಾಮನ ಸಕ್ರೋಧಮೂರ್ತಿಯನ್ನು ನೋಡಿ. ಇಂದೇ ಆತನಿಗೆ ವಿಶೇಷತರದ ಅನುಭವವು ಬಂದೀತು.

ಈ ಮೇರೆಗೆ ನುಡಿಯುತ್ತ ಲಕ್ಷ್ಮಣನು ನೀತಿತತ್ವವನ್ನು ಮರೆತು ಪ್ರಭುಪದಗಳಿಗೆ ವಂದಿಸಿ, ಅವುಗಳ ಧೂಲಿಯನ್ನು ಮಸ್ತಕದಲ್ಲಿ ಧಾರಣಮಾಡಿ, ತನ್ನ ನಿಸರ್ಗಸಿದ್ಧವಾದ ಬಲವನ್ನು ಹೇಳಿಕೊಳ್ಳುತ್ತ ಪ್ರತಿಜ್ಞೆಮಾಡಿದನೇನಂದರೆ—"ಪ್ರಭುಗಳು ನನ್ನ ಮಾತನ್ನು ಅನುಚಿತವೆಂದು ತಿಳಿಯಬಾರದು. ಭರತನು ನಮ್ಮ ಸಂಭಾವನೆಯನ್ನು ಅಲ್ಪಸ್ವಲ್ಪ ಮಾಡಿಸುವದಿಲ್ಲ. ನನ್ನ ಒಡೆಯನು ನನ್ನ ಬೆನ್ನಮೇಲಿದ್ದು, ನನ್ನ ಕೈಯಲ್ಲಿ ಧನುಷ್ಯಬಾಣಗಳಿರುವಾಗ ನಾನು ಎಲ್ಲಿಯವರೆಗೆ ಸಹನಮಾಡಬೇಕು? ಮತ್ತು ಸಿಮರ್ಗಲಮನಸ್ಸಿನಿಂದ ಎಲ್ಲಿಯವರೆಗೆ ಇರಬೇಕು? ನಾನು ಜಾತಿವಂತಕ್ಷತ್ರಿಯನಿದ್ದು, ರಘುಕುಲದಲ್ಲಿ ಜನಿಸಿರುವೆನು; ಮತ್ತು ರಾಮನಬೆನ್ನಿನಲ್ಲಿಬಿದ್ದ ತಮ್ಮನೆಂಬದು ಜಗತ್ತಿಗೆ ಪ್ರಸಿದ್ಧವಾಗಿರುವದು. ಧೂಲಿಯಂಥ ನೀಚವಸ್ತುವು ಯಾವದಿರುವದು! ಅದುಕೂಡ ಕಾಲಿನಿಂದ ಒಮ್ಮೆ ತುಳಿಯುವವನ ತಲೆಯಮೇಲೆ ಕುಳಿತುಕೊಳ್ಳುವದು; ಅಂದಬಳಿಕ ನನ್ನಂಥವನು ಅಪಮಾನವನ್ನು ಸಹಿಸುವದು ಹೇಗೆ!" ಎಂದು ನುಡಿದು ಲಕ್ಷ್ಮಣನು ಎದ್ದು, ತಲೆಯ ಮೇಲಿನ ಜಟಾಭಾರವನ್ನು ಸಾವರಿಸಿಕೊಂಡು, ಟೊಂಕಕ್ಕೆ ಬತ್ತಳಿಕೆಯನ್ನು ಕಟ್ಟಿ ಕೈಯಲ್ಲಿ ಧನುರ್ಬಾಣಗಳನ್ನು ಸಜ್ಜುಮಾಡಿ ರಾಮನಮುಂದೆ ಕೈಜೋಡಿಸಿ ನಿಂತು ಅಪ್ಪಣೆಯನ್ನು ಕೇಳಿದನು. ಆ ಕಾಲದಲ್ಲಿ ಲಕ್ಷ್ಮಣನು ಗೊರಿಕೆಹೊಡೆಯುತ್ತ ಬಿದ್ದುಕೊಂಡಿದ್ದ ವೀರನೇ ಗಡಬಡಿಸಿ ಎದ್ದಂತೆ ತೋರಿದನು. ಆತನು ಶ್ರೀರಾಮನನ್ನು ಕುರಿತು—ಇಂದು ನಾನು ರಾಮನ ಅಮರ್ಯಾದೆಯ ಫಲವನ್ನು ಆ ಭರತ-ಶತ್ರುಘ್ನರಿಬ್ಬರ ಉಡಿಯಲ್ಲಿ ಕಟ್ಟಿ, ಅವರಿಬ್ಬರನ್ನು ಸಮರಶಯ್ಯೆಯಲ್ಲಿ ಮಲಗಿಸುವೆನು. ಸಿಂಹವು

ಬಾಣಸಮೂಹವನ್ನು ಎರಗಿ ಸಂಹರಿಸುವಂತೆ, ಸೈನ್ಯದೊಡನೆ ಇರುವ ಭರತನಮೇಲೆಬಿದ್ದು ರಣಮಂಡಲದಲ್ಲಿ ತುಳಿದು, ಆತನನ್ನು ಸಂಹರಿಸುವೆನು. ಆ ಭರತನ ಸಹಾಯಕ್ಕೆ ಪ್ರತ್ಯಕ್ಷ ಶ್ರೀಶಂಕರನು ಧಾವಿಸಿಬಂದರೂ, ರಾಮನಸಾಕ್ಷಿಯಿಂದ ಆತನನ್ನೂ ಸಮರಭೂಮಿಯಲ್ಲಿ ಹೊರಳಿಸುವೆನು.

ಈಮೇರೆಗೆ ಸಿಟ್ಟಿನಿಂದ ಮೈಮರೆತ ಲಕ್ಷ್ಮಣನನ್ನು ನೋಡಿ, ಆತನು ಶಪಥಪೂರ್ವಕವಾಗಿ ಮಾಡಿದ ಪ್ರತಿಜ್ಞೆಯನ್ನು ಕೇಳಿ, ಎಲ್ಲ ಲೋಕಪಾಲಕರು ನಡುಗಹತ್ತಿ ತಮ್ಮ ತಮ್ಮ ಲೋಕಗಳನ್ನು ಬಿಟ್ಟು ಓಡಿಹೋಗುವ ಹವಣಿಕೆಯಲ್ಲಿದ್ದರು. ಆಗ ಆಕಾಶವಾಣಿಯು ಲಕ್ಷ್ಮಣನಬಾಹುಬಲವನ್ನು ವರ್ಣಿಸುತ್ತ ಆತನನ್ನುಕುರಿತು–'ಅಪ್ಪಾ ಲಕ್ಷ್ಮಣಾ, ನಿನ್ನ ಪ್ರತಾಪವೂ ಪ್ರಭಾವವೂ ಯಾರಿಗೆ ತಿಳಿಯುವದು! ಅವುಗಳ ವರ್ಣನವನ್ನಾದರೂ ಯಾರು ಮಾಡುವರು! ಯಾವದೊಂದು ಇಷ್ಟಾನಿಷ್ಟಕಾರ್ಯವನ್ನೂ, ಅದರಸ್ವರೂಪವನ್ನೂ ತಿಳಿದು ಮಾಡುವವರಿಗೆ ಜನರು ಒಳ್ಳೆಯವನೆಂದು ಅನ್ನುವರು. ಸಾಹಸಮಾಡಿ ಹಿಂದಿನಿಂದ ಪಶ್ಚಾತ್ತಾಪ ಪಡುವವರು ಸುಜ್ಞರಲ್ಲವೆಂದು ಶಾಸ್ತ್ರದ ಹಾಗು ವಿದ್ವಾಂಸರ ಸಿದ್ಧಾಂತವಿರುವದು. ಎಂದು ಅನ್ನಲು, ಲಕ್ಷ್ಮಣನು ನಾಚಿ ಸೀತಾರಾಮರ ಚರಣಕ್ಕೆರಗಿದನು. ಆಗ ಶ್ರೀರಾಮನು—ಅಪ್ಪಾ ಲಕ್ಷ್ಮಣಾ, ನೀನು ಉತ್ಕೃಷ್ಟವಾದ ರಾಜನೀತಿಯನ್ನು ಹೇಳಿದೆ. ಬಂಧುವೇ, ರಾಜಮದವು ಎಲ್ಲಕ್ಕಿಂತಲೂ ದುರ್ಧರವಾಗಿರುವದು; ಆದರೆ ಸತ್ಸಂಗಮಾಡದಿರುವ ರಾಜರೇ ರಾಜ್ಯದ ಸೇವನದಿಂದ ಉನ್ಮತ್ತರಾಗುವರು-ಲಕ್ಷ್ಮಣನೇ, ಕೇಳು. ಭರತನಂಥ ಸಜ್ಜನನು ಯಾವತ್ತು ಬ್ರಹ್ಮಸೃಷ್ಟಿಯಲ್ಲಿ ಕೇಳಿಕೆಯಲ್ಲಿಯೂ ಇಲ್ಲ, ನೋಡುವಿಕೆಯಲ್ಲಿಯೂ ಇಲ್ಲ. ಭರತನು ಬ್ರಹ್ಮ-ವಿಷ್ಣು-ಮಹೇಶ್ವರ ಅಧಿಕಾರಕ್ಕೆ ಏರಿದರೂ ಆತನಿಗೆ ರಾಜ್ಯಮದವು ಉಂಟಾಗುವದು ಶಕ್ಯವಿಲ್ಲ-ಗಂಜಿಯ ತುಂತುರ್ವನಿಯಿಂದ ಕ್ಷೀರಸಮುದ್ರವು ಎಂದಾದರೂ ಕೆಟ್ಟೀತೇನು! ಕತ್ತಲೆಯು ನಡುವಗಲ ಮಾರ್ತಂಡನನ್ನು ನುಂಗಬಹುದು, ಆಕಳಖುರದ ತಗ್ಗಿನೊಳಗಿನ ನೀರಿನಲ್ಲಿ ಅಗಸ್ತ್ಯಋಷಿಯು ಮುಣುಗಿಹೋಗಬಹುದು, ನೊಣವು ಊದಿದ ಮಾತ್ರದಿಂದ ಮೇರುಪರ್ವತವು ಹಾರಿಹೋಗಬಹುದು; ಆದರೆ ಎಲೈ ಬಂಧೂ ಲಕ್ಷ್ಮಣಾ, ಭರತನಿಗೆ ರಾಜ್ಯಮದವು ಉಂಟಾಗಲಾರದು. ಲಕ್ಷ್ಮಣಾ, ನಾನು ನಿನ್ನ, ಹಾಗು ತಂದೆಯ ಆಣೆಮಾಡಿ ಹೇಳುತ್ತೇನೆ, ಭರತನನ್ನು ಹೋಲುವ ಪವಿತ್ರ ಪ್ರೇಮಳಬಂಧುವು ಇಲ್ಲವೇ ಇಲ್ಲ. ತಾಳಾ, ಬ್ರಹ್ಮನು ಈ ಪ್ರಪಂಚದ ರಚನೆಯನ್ನು ಗುಣ-ದೋಷಗಳೆಂಬ ಹಾಲು-ನೀರುಗಳ ಬೆರಿಕೆಯಿಂದ ಮಾಡಿರುವನು. ಈ ಗುಣಾವಗುಣಗಳ ಪೃಥಕ್ಕರಣವನ್ನು ಯಾವನಾದರೂ ಮಾಡಿದ್ದರೆ, ನಮ್ಮ ಈ ರಘುವಂಶರೂಪ ಮಾನಸಸರೋವರದಲ್ಲಿ ಹುಟ್ಟಿಬಂದಿರುವ ಭರತನೇ ಮಾಡಿರುವನೆಂದು ತಿಳಿ. ಗುಣರೂಪ ಹಾಲನ್ನು ಸ್ವೀಕಾರಮಾಡಿ ದೋಷಗಳೆಂಬ ನೀರನ್ನು ಬಿಟ್ಟುಕೊಟ್ಟು ಆತನು ತನ್ನ ಯಶಸ್ಸಿನಿಂದ ಈ ಜಗತ್ತನ್ನು ಪ್ರಕಾ

ಶಮಾನವಾಗಿ ಮಾಡಿಬಿಟ್ಟಿರುವನು." ಎಂದು ಹೇಳಿದನು. ರಘುವರನ ಈ ವಾಣಿಯನ್ನು ಕೇಳಿ ದೇವತೆಗಳು "ರಾಮನಂಥ ದಯಾಘನ ಪ್ರಭುವು ಯಾವನಿರುವನೆಂ"ದು ಸ್ತುತಿಸಿ ಆತನನ್ನು ಕುರಿತು— ಭರತನ ಜನ್ಮವೇ ಈ ಜಗತ್ತಿನಲ್ಲಿ ಆಗದಿದ್ದರೆ, ಪೃಥ್ವಿಯಲ್ಲಿ ಯಾವತ್ತು ಧರ್ಮಗಳ ಧುರೀಣತ್ವವನ್ನು ಯಾವನು ಧಾರಣಮಾಡುತ್ತಿದ್ದನು? ಭರತನ ಗುಣವರ್ಣನವು ಕವಿಗಳಿಗೂ ಅಗಮ್ಯವಾಗಿರುವದು. ಎಲೈ ರಘುನಾಥನೇ, ನಿನ್ನಹೊರತು ಭರತನ ಆಗುಣಗಳನ್ನು ಯಾವನು ತಿಳಿದಾನು? ಎಂದು ನುಡಿಯಲು, ಅದನ್ನು ಕೇಳಿ ಸೀತಾರಾಮಲಕ್ಷ್ಮಣರಿಗಾದ ಆನಂದವನ್ನು ವರ್ಣಿಸಲು ಶಕ್ಯವಲ್ಲ.

ಇತ್ತ ಭರತನು ಯಾವತ್ತು ಪರಿವಾರದೊಡನೆ ಪವಿತ್ರ ಮಂದಾಕಿನಿಯಲ್ಲಿ ಯಥೇಚ್ಛಸ್ನಾನಮಾಡಿ, ಎಲ್ಲರಿಗೂ ಅಲ್ಲಿಯೇ ಸಮೀಪದಲ್ಲಿ ಇರಹೇಳಿ, ತಾಯಂದಿರು, ಗುರುಗಳು, ಸಚಿವರು ಇವರ ಅಪ್ಪಣೆಪಡೆದು ಶತ್ರುಘ್ನ—ಗುಹರೊಡನೆ ಸೀತಾರಾಮರು ಇರುವಸ್ಥಾನಕ್ಕೆ ಹೊರಟನು. ಹೋಗಹೋಗುತ್ತ ತನ್ನ ತಾಯಿಯ ಕೌಟಿಲ್ಯವು ಮನಸ್ಸಿನಲ್ಲಿ ಬರಲು, ಆತನ ಮನಸ್ಸುನೊಂದು ಸಂಶಯಗ್ರಸ್ತವಾಯಿತು. ಆತನು ಮನಸ್ಸಿನಲ್ಲಿ— ನನ್ನ ಹೆಸರು ಕೇಳಿದಕೂಡಲೆ ರಾಮ—ಲಕ್ಷ್ಮಣ—ಸೀತೆಯರು ತಮ್ಮ ಸ್ಥಳವನ್ನು ಬಿಟ್ಟು ಎರಡನೆಯಕಡೆಗೆ ಹೋಗಲಿಕ್ಕಿಲ್ಲವಷ್ಟೆ? ನಾನು ತಾಯಿಯ ಒಳಸಂಚಿನವನೆಂದು ಅವರು ತಿಳಿದಿದ್ದರೆ ಮಾತ್ರ ಅವರು ನನಗೆ ಏನುಅಂದರೂ ಸ್ವಲ್ಪವೇ ಇರುವದು; ಆದರೆ ನಾನು ತಮ್ಮ ಪಕ್ಷದವನೆಂದು ಅವರು ಮನಸ್ಸಿನಲ್ಲಿತಂದರೆ, ನನ್ನ ಪಾಪಗಳನ್ನೂ, ದುರ್ಗುಣಗಳನ್ನೂ ಕ್ಷಮಿಸಿ ನನ್ನನ್ನು ಹತ್ತರ ಕರಕೊಳ್ಳಬಹುದು. ಅವರು ನನ್ನನ್ನು ಕೃಷ್ಣಹೃದಯನೆಂದು ತ್ಯಜಿಸಲಿ, ಸೇವಕನೆಂದು ಅಂಗೀಕರಿಸಲಿ ನಾನುಮಾತ್ರ ರಾಮನಪಾದುಕೆಗಳಿಗೇ ಶರಣುಹೋಗುವವನು! ನನ್ನ ದೋಷಗಳೆಲ್ಲ ಅವರಿಗೆ ತಿಳಿದುಹೋಗಿದ್ದರೂ ರಾಮನು ದೊಡ್ಡಮನಸ್ಸಿನ ಒಡೆಯನಾದದ್ದರಿಂದ ನನ್ನನ್ನು ಕ್ಷಮಿಸಿಯೇ ಕ್ಷಮಿಸುವನು" ಇತ್ಯಾದಿ ವಿಚಾರಗಳು ಮನಸ್ಸಿನಲ್ಲಿ ಸುಳಿದಾಡಹತ್ತಿದ್ದರಿಂದ, ಅವನ ಕಾಲುಗಳು ಏಳದಾದವು; ಆದರೆ ಆ ಧೈರ್ಯಧುರಂಧರನು ತನ್ನ ಭಕ್ತಿಯಬಲದಿಂದ ಮುಂದಕ್ಕೆ ಸಾಗುತ್ತಿದ್ದನು. ರಾಮನ ಸ್ವಭಾವದ ವಿಚಾರವು ಆತನ ಮನಸ್ಸಿನಲ್ಲಿ ಬಂದಾಗ ಆತನ ಕಾಲುಗಳು ಬಡಬಡಬೀಳುತ್ತಿದ್ದವು. ಹಾದಿಯಲ್ಲಿ ಶುಭಶಕುನಗಳು ಆಗತೊಡಗಲು, ಅವುಗಳ ವಿಚಾರಮಾಡಿ ಗುಹನು ಭರತನನ್ನು ಕುರಿತು—ಸದ್ಯಕ್ಕೆ ದುಃಖನಿವಾರಣವಾಗಿ ಹರ್ಷವುಂಟಾಗುವದು; ಆದರೆ ತಿರುಗಿ ಕಡೆಗೆ ದುಃಖವೇ ಆಗುವದೆಂಬಹಾಗೆ ತೋರುತ್ತದೆ. ಎಂದು ಹೇಳಲು, ಗುಹನ ಈ ಭವಿಷ್ಯವು ಭರತನಿಗೆ ಅಕ್ಷರಶಃ ಅನುಭವಕ್ಕೆ ಬಂದಿತು. ಹೋಗಹೋಗುತ್ತ ಅವರು ಆಶ್ರಮದ ಸಮೀಪಕ್ಕೆ ಹೋಗಲು, ಈತಿ, ಭೀತಿ, ತ್ರಿವಿಧ ತಾಪ, ದುರ್ಧರ ಗ್ರಹದಶೆ ಇವುಗಳಿಂದ ಪೀಡಿತರಾದ ಪ್ರಜೆಗಳು, ಉತ್ತಮಪ್ರದೇಶದಲ್ಲಿಯ ಸುರಾಜ್ಯದಲ್ಲಿ ಹೋಗಿ ಸುಖಿಗಳಾಗುವಂತೆ ಭರತನ ಸ್ಥಿತಿಯಾಯಿತು.

ಚಿತ್ರಕೂಟದ ರಾಜ್ಯದಲ್ಲಿ "ವಿವೇಕ" ವು ಅರಸನಾಗಿದ್ದು, ವೈರಾಗ್ಯವೇ ಆತನ ಮಂತ್ರಿಯಾಗಿದ್ದನು. ಸುಂದರವಾದ ಅರಣ್ಯವೇ ಆ ಅರಸನ ಪವಿತ್ರ ದೇಶವಾಗಿರುವದು, ಯಮ-ನಿಯಮಾದಿಕರೇ ಆ ಅರಸನ ವೀರರು. ಚಿತ್ರಕೂಟಪರ್ವತವೇ ಆತನ ರಾಜಧಾನಿಯು. ಶಾಂತಿ-ಸುಮತಿ ಎಂಬವರಿಬ್ಬರು ಆ ರಾಜನ ಸುಂದರ-ಸಾಧ್ವೀ ರಾಣಿಯರು. ಇಂಥ ಆ ಸರ್ವಾಂಗಸಂಪನ್ನನಾದ ವಿವೇಕ ರಾಜನು ರಾಮಚರಣಗಳ ಆಶ್ರಿತನಾದದ್ದರಿಂದ ಅಲ್ಲಿ ಪ್ರಸನ್ನಚಿತ್ತದಿಂದ ಇರುತ್ತಿದ್ದನು. ಆತನು ಮೋಹರೂಪ ರಾಜನನ್ನು ಸಸೈನ್ಯ ಗೆದ್ದು, ನಿಷ್ಕಂಟಕ ರಾಜ್ಯವನ್ನು ಆಳುತ್ತಿದ್ದದ್ದರಿಂದ ಅಲ್ಲಿ ಸುಖ-ಸಂಪತ್ತುಗಳ ಸುಕಾಲವಾಗಿತ್ತು. ವನಪ್ರದೇಶಗಳೂ, ಮುನಿಗಳ ಆಶ್ರಮಗಳೂ ಇವೇ ಆ ಸುರಾಜ್ಯದಲ್ಲಿಯ ಪುರಗಳು-ನಗರಗಳು-ಪಟ್ಟಣಗಳು-ಹಳ್ಳಿಗಳು ಆಗಿದ್ದವು. ನಾನಾ ಪ್ರಕಾರದ ಹಾಗು ಚಿತ್ರವಿಚಿತ್ರವಾದ ಮೃಗ-ಪಕ್ಷಿಗಳ ಸಮೂಹವೇ ಆ ರಾಜ್ಯದಲ್ಲಿಯ ಪ್ರಜೆಗಳಾಗಿದ್ದು, ಅವರು ಪರಸ್ಪರ ವೈರಭಾವವಿಲ್ಲದೆ, ಪರಸ್ಪರ ಸಮ್ಮಿಳಿತರಾಗಿ ಆನಂದದಿಂದಿರುವದನ್ನು ನೋಡಿದರೆ ನಾಲ್ಕೂ ದಿಕ್ಕುಗಳಿಂದ ಸುರಾಜ್ಯದೊಳಗಿನ ಆನಂದವು ಹರಿದು ಬರುತ್ತಿರುವಂತೆ ತೋರುತ್ತಿತ್ತು. ಒಟ್ಟಿಗೆ ಆ ಸುರಾಜ್ಯದ ನೋಟವು ಆನಂದವನ್ನೂ, ಮಂಗಲವನ್ನೂ ಉತ್ಪನ್ನಮಾಡುತ್ತಿತ್ತು. ತಪಃಫಲಪ್ರಾಪ್ತಿಯಾದದ್ದರಿಂದ ವ್ರತ-ನಿಯಮಾದಿಗಳ ಪರಿಸಮಾಪ್ತಿಯಾಗಿ ತಪಸ್ವಿಯು ಆನಂದನಿಮಗ್ನನಾಗುವಂತೆ, ರಾಮಶೈಲವಾದ ಚಿತ್ರಕೂಟದ ಶೋಭೆಯನ್ನು ನೋಡಿ ಭರತನ ಹೃದಯವು ಅತ್ಯಂತ ಪ್ರೇಮಪರಿಪ್ಲುತವಾಯಿತು. ಆಗ ಗುಹನು ಬಹಳ ದಿನ್ನೆಯನ್ನೇರಿ ಕೈಮೋಡಿಕೊಂಡು ಭರತನನ್ನು ಕುರಿತು—ಮಹಾರಾಜ, ಈ ಅತ್ಯುನ್ನತವಾದ ಮಾವು, ನೇರಲ, ಹಲಸು ಮೊದಲಾದ ವೃಕ್ಷಗಳನ್ನು ನೋಡಿರಿ. ಅದೋ ಆ ವೃಕ್ಷಗಳ ಗುಂಪಿನಲ್ಲಿ ಬಹು ಉನ್ನತವಾದ ದಟ್ಟನೆಂಳಿನ ದೊಡ್ಡ ಆಲದಗಿಡವಿರುವದಲ್ಲ, ಅದು ಕೆಂಪು ಹಣ್ಣುಗಳಿಂದ ಒಪ್ಪುತ್ತಿರುವದು; ಅಗೋ ಆ ಗಿಡದ ಬುಡದಲ್ಲಿಯೋ ನದಿಯ ದಂಡೆಯಲ್ಲಿ ಶ್ರೀ ರಾಮನ ಪರ್ಣಶಾಲೆಯಿರುವದು. ಅಲ್ಲಿ ನಾನಾಪ್ರಕಾರದ ಸುಂದರ ತುಲಸೀ ಗಿಡಗಳು ಹಚ್ಚಿರುವವು. ಅವುಗಳಲ್ಲಿ ಕೆಲವನ್ನು ಲಕ್ಷ್ಮಣನು ಹಚ್ಚಿರುವನು, ಕೆಲವನ್ನು ಸೀತೆಯು ಹಚ್ಚಿರುವಳು. ವಟವೃಕ್ಷದ ನೆರಳಿನಲ್ಲಿ ಸೀತೆಯು ಕೈಮುಟ್ಟಿ ಒಂದು ಸುಂದರವಾದ ಕಟ್ಟೆಯನ್ನು ಹಾಕಿರುವಳು. ಸರ್ವಜ್ಞಶಿರೋಮಣಿ ರಾಮನು ಅದರ ಮೇಲೆ ಮುನಿಗಣದೊಡನೆ ಕುಳಿತು ನಿತ್ಯದಲ್ಲಿ ಯಾವತ್ತು ವೇದ, ಆಗಮ, ಪುರಾಣ, ಇತಿಹಾಸ ಮೊದಲಾದವುಗಳ ಚರ್ಚೆಯನ್ನು ಕೇಳುತ್ತಿರುವನು.

ಈ ಮೇರೆಗೆ ಗುಹನು ಆಡಿದ ಮಾತುಗಳನ್ನು ಕೇಳಿ ಭರತನ ನೇತ್ರಗಳು ಪ್ರೇಮಾಶ್ರುಪೂರ್ಣವಾದವು. ಇಬ್ಬರೂ ಬಂಧುಗಳು ವೃಕ್ಷವನ್ನು ನಮಸ್ಕರಿಸಿ ಮುಂದಕ್ಕೆ ಸಾಗಹತ್ತಿದರು. ದಾರಿಯಲ್ಲಿ ಅವರು ಗಳು ದೇಖಿದಂತೆ ಅವರು ರಾಮನ ಚಿಹ್ನಗ

ಳನ್ನು ಲಕ್ಷಿಸಿ ಹರ್ಷಭರಿತರಾಗಿ ಆಧೂಲಿಯನ್ನು ಶಿರಸ್ಸಿನಲ್ಲಿ, ಹೃದಯದಲ್ಲಿ ಧರಿಸಿ ಕಣ್ಣುಗಳಿಗೆ ಹಚ್ಚಿಕೊಳ್ಳುವಾಗ ಪ್ರತ್ಯಕ್ಷ ರಾಮನನ್ನು ಕಂಡಂತೆ ಅವರಿಗೆ ಸಂತೋಷವಾಗುತ್ತಿತ್ತು. ಅವರ ನಿಷ್ಕಲಂಕ ಪ್ರೇಮವನ್ನೂ, ಭಕ್ತಿಯನ್ನೂ ನೋಡಿ ಸಿದ್ಧರೂ, ಸಾಧಕರೂ ಕೂಡ ಧನ್ಯವಾದ ಮಾಡುತ್ತ—"ಭೂತಲದಲ್ಲಿ ಭರತನ ಭಾವವು ಉತ್ಪನ್ನವಾಗದಿದ್ದರೆ ಅಚರತ್ವಕ್ಕೆ ಚರತ್ವವನ್ನೂ, ಚರತ್ವಕ್ಕೆ ಅಚರತ್ವವನ್ನೂ ಯಾರು ಉಂಟುಮಾಡುತ್ತಿದ್ದರು?" ಎಂದು ಮಾತನಾಡಿಕೊಳ್ಳುತ್ತಿದ್ದರು; ಅಂದರೆ ಅಚರಳಾದ, ಅಂದರೆ ಗೌತಮ ಶಾಪದಿಂದ ಶಿಲಾರೂಪಿಯಾದ ಅಹಲ್ಯೆಯಲ್ಲಿ ಆ ಗೌತಮ ಶಾಪಯೋಗದಿಂದಲೇ ರಾಮಭಕ್ತಿರೂಪ ಭರತಭಾವವು ಉತ್ಪನ್ನವಾಗಲು, ಆಕೆಯು ಪುನಃ ಸ್ತ್ರೀರೂಪವನ್ನು ಹೊಂದಿ ಚರಳಾದವಳು. ಹೀಗೆ ಚರಳಾದ ಅಹಲ್ಯೆಯಲ್ಲಿ ಪ್ರತ್ಯಕ್ಷ ರಾಮದರ್ಶನದ ಯೋಗದಿಂದ ಪುನಃ ರಾಮಭಕ್ತಿರೂಪ ಭರತಭಾವವು ಉತ್ಪನ್ನವಾಗಲು, ಆ ಅಹಲ್ಯೆಯು ವಿದೇಹ ಸ್ಥಿತಿರೂಪ ಅಚರರೂಪವನ್ನು ಹೊಂದಿದಳು; ಆದರೆ ಮೂಲತಃ ರಾಮಭಕ್ತಿರೂಪ ಭರತಭಾವವೇ ಅಹಲ್ಯೆಯಲ್ಲಿ ಉತ್ಪನ್ನವಾಗದಿದ್ದರೆ, ಈ ಚರಾಚರ ಘಟನಾಕಾರ್ಯಗಳನ್ನು ಯಾರು ಮಾಡುತ್ತಿದ್ದರು! ಎಂಬ ತಾತ್ಪರ್ಯವು. ಇರಲಿ. ಕೃಪಾಸಿಂಧುವಾದ ರಘುವೀರನು ದೇವತೆಗಳ ಹಾಗು ಸಂತರ ಹಿತಕ್ಕಾಗಿ ಭರತನೆಂಬ ಅಗಾಧ ಸಮುದ್ರವನ್ನು ವಿರಹರೂಪ ಮಂದರಾಚಲದಿಂದ ಮಂಥನಮಾಡಿ ಪ್ರೇಮರೂಪ ಅಮೃತವನ್ನು ನಿರ್ಮಿಸಿದನು. ದಟ್ಟವಾದ ಗಿಡಗಳ ಮರೆಯಲ್ಲಿ ಗುಹನಿಂದ ಸಹಿತರಾದ ಭರತ–ಶತ್ರುಘ್ನರು ಲಕ್ಷ್ಮಣನಿಗೆ ಕಾಣಲಿಲ್ಲ. ಆದರೆ ಸುಮಂಗಲದ ಆಗರವಾದ ಪ್ರಭುವಿನ ಸುಂದರ ಪವಿತ್ರಾಶ್ರಮವು ಮಾತ್ರ ಭರತನಿಗೆ ಕಾಣಿಸಿತು. ಅಲ್ಲಿ ಹೋದಕೂಡಲೆ ಯೋಗಿಗೆ ಪರಮಾರ್ಥ ಪ್ರಾಪ್ತಿಯಾದಂತೆ ಭರತನ ದುಃಖಾಗ್ನಿಯು ಶಾಂತವಾಯಿತು. ಮಸ್ತಕದಲ್ಲಿ ಜಟಾಜೂಟವುಳ್ಳ, ಸೊಂಟಕ್ಕೆ ಮುನಿವಲ್ಕಲವನ್ನು ಸುತ್ತಿರುವ, ಬತ್ತಳಿಕೆಯನ್ನೇರಿಸಿ ಕೈಯಲ್ಲಿ ಬಾಣವನ್ನೂ, ಹೆಗಲಮೇಲೆ ಧನುಸ್ಸನ್ನೂ ಧರಿಸಿರುವ, ಪ್ರಭುವಿನ ಅಗ್ರಭಾಗದಲ್ಲಿ ಆತನ ಅಪ್ಪಣೆಯನ್ನು ಕೇಳಿಕೊಳ್ಳುತ್ತಿರುವಾಗ ಪ್ರಭುವು ಪ್ರೇಮದಿಂದ ಹೇಳುವ ಮಾತುಗಳನ್ನು ಕೇಳುತ್ತಿರುವ ಲಕ್ಷ್ಮಣನನ್ನು ಭರತನು ನೋಡಿದನು. ಕಟ್ಟೆಯಮೇಲೆ ಮುನಿಗಳ–ಸಂತರ ಮಧ್ಯದಲ್ಲಿ ವಲ್ಕಲಪರಿಧಾನಮಾಡಿ ಕುಳಿತಿರುವ, ಮಸ್ತಕದಲ್ಲಿ ಜಟಾಜೂಟವುಳ್ಳ, ಕರಕಮಲದಿಂದ ಧನುಷ್ಯ–ಬಾಣಗಳನ್ನು ತಿರುಗಿಸುತ್ತಿರುವ, ಹಾಸ್ಯ–ನೇತ್ರಕಟಾಕ್ಷಗಳಿಂದ ಜೀವರ ಸಂಸಾರ–ತಾಪವನ್ನು ಹರಣಮಾಡುತ್ತಿರುವ, ಸೀತಾರಾಮರು ರತಿಮದನರೇ ಮುನಿವೇಷ ಧಾರಣಮಾಡಿರುವಂತೆ ಭರತನಿಗೆ ತೋರಿದರು. ಕೂಡಲೆ ಭರತನು ಭಕ್ತಿಪರವಶನಾಗಿ—" ಹೇ ನಾಥ, ಹೇ ಸ್ವಾಮಿನ್! ಪಾಹಿಮಾಂ, ಪಾಹಿಮಾಂ" ಎಂದು ನುಡಿಯುತ್ತ ಶುಷ್ಕ ಕಾಷ್ಠದಂತೆ ಭೂಮಿಯ

ಮೇಲೆ ಬಿದ್ದನು! ಆ ಪ್ರೇಮೋದ್ದಾರದ ಗುರುತು ಲಕ್ಷ್ಮಣನಿಗೆ ಹತ್ತಿ, ಭರತನೇ ನಮಸ್ಕಾರಮಾಡುವನೆಂಬ ನಂಬಿಗೆಯು ಆತನಿಗಾಯಿತು. ಒತ್ತಟ್ಟಿಗೆ ಬಂಧು ಪ್ರೇಮದ ಆತುರತೆಯು, ಒತ್ತಟ್ಟಿಗೆ ಬಲವತ್ತರವಾದ ಸ್ವಾಮಿಸೇವೆಯು, ಹೀಗಾಗಿ ಲಕ್ಷ್ಮಣನು ಭರತನನ್ನು ಕಾಣಲು ಹೋಗದಾದನು, ಕಾಣದೆಯೂ ಇರದಾದನು. ಕಡೆಗೆ ಪ್ರಭು ಸೇವೆಯನ್ನೇ ಮಹತ್ವದ್ದಾಗಿ ಎಣಿಸಿ ಲಕ್ಷ್ಮಣನು ಭೂಮಿಗೆ ತಲೆಬಾಗಿ ಶ್ರೀ ರಾಮನನ್ನು ಕುರಿತು ಪ್ರೇಮದಿಂದ —"ಎಲೈ ರಘುನಾಥನೆ, ಭರತನು ನಮಸ್ಕರಿಸುತ್ತಿರುವನು" ಎಂದು ಹೇಳಿದನು. ಅದನ್ನು ಕೇಳಿದ ಕೂಡಲೆ ಶ್ರೀರಾಮನು ಪ್ರೇಮದ ಆತುರದಿಂದ, ಎಲ್ಲಿಯವಸ್ತ್ರಗಳು—ಎಲ್ಲಿಯಬತ್ತಳಿಕೆಯು—ಎಲ್ಲಿಯ ಬಿಲ್ಲುಬಾಣಗಳು ಎಂಬಂತೆ ಹಾಗೆಯೇ ಎದ್ದುಹೋಗಿ ಭರತನನ್ನು ಒತ್ತಾಯದಿಂದ ಹಿಡಿದೆತ್ತಿಎದೆಗವಚಿಕೊಂಡನು. ರಾಮ ಭರತರ ಈ ಕಾಣುವಿಕೆಯನ್ನು ನೋಡಿಎಲ್ಲರ ದೇಹಸ್ಮೃತಿಯುಹಾರಿತು. ರಾಮಭರತರ ಪ್ರೇಮವು ಅಗಮ್ಯವಾದದ್ದು, ಅದು ತ್ರಿಮೂರ್ತಿಗಳ ಮನಸ್ಸಿಗೂ ನಿಲುಕದಿರುವಾಗ ಮಂದಮತಿ, ತುಲಸೀ ದಾಸನು ನಾನು ಏನು ವರ್ಣಿಸಲಿ?

ಬಳಿಕ ಶ್ರೀರಾಮನು ಶತ್ರುಘ್ನ - ಗುಹರನ್ನು ಪ್ರೇಮದಿಂದ ಕಾಣಿಸಿಕೊಂಡನು. ಭರತನು ಲಕ್ಷ್ಮಣನನ್ನು ಆಲಿಂಗಿಸಲು, ಲಕ್ಷ್ಮಣನು ಭರತನಿಗೆ ನಮಸ್ಕಾರಮಾಡಿದನು. ಆಮೇಲೆ ಭರತ—ಶತ್ರುಘ್ನರು ಸೀತೆಯನ್ನು ಪುನಃ ಪುನಃ ನಮಸ್ಕರಿಸುವಾಗ, ಆಕೆಯು ಅವರನ್ನು ಹಿಡಿದೆತ್ತಿ ಅವರ ಮಸ್ತಕಗಳ ಮೇಲೆ ಕಮಲ ಹಸ್ತವನ್ನಿಟ್ಟು ಮನಸ್ಸಿನಿಂದ ಆಶೀರ್ವದಿಸುತ್ತ ಕೃತಾರ್ಥರಿಸಿದಳು. ಎಲ್ಲಬಗೆಯಿಂದ ಸೀತೆಯು ಪ್ರಸನ್ನಳಾಗಿರುವದನ್ನು ನೋಡಿ, ಭರತಶತ್ರುಘ್ನರು ನಿಶ್ಚಿಂತರಾದರು. ಯಾರೂ ಯಾರೊಡನೆ ಮಾತಾಡದಾದರು. ಯಾರೂ ಯಾರನ್ನು ಕೇಳದಾದರು. ಆಗ ಗುಹನು ಧೈರ್ಯಮಾಡಿ ಕೈ ಜೋಡಿಸಿ ವಿನಂತಿಪೂರ್ವಕವಾಗಿ —"ಪ್ರಭೋ, ಮುನಿನಾಥನೊಡನೆ ಯಾವತ್ತು ತಮ್ಮಂದಿರು, ಪುರಜನರು, ಸೇವಕರು, ಸೈನಿಕರು, ಸಚಿವಪ್ರಭೃತಿಗಳೆಲ್ಲರು ವಿರಹವ್ಯಾಕುಲರಾಗಿ ಬಂದಿರುವರು." ಎಂದು ಹೇಳಿದ ಕೂಡಲೆ, ಶೀಲಸಾಗರನೂ, ಧೈರ್ಯಶಾಲಿಯೂ, ಧರ್ಮಧುರಂಧರನೂ, ದೀನದಯಾಲುವೂ ಆದ ಶ್ರೀರಾಮನು ಗುರುಗಳ ದರ್ಶನೋತ್ಕಂಠಿತನಾಗಿ, ಸೀತೆಯ ಸಂರಕ್ಷಣಕ್ಕಾಗಿ ಶತ್ರುಘ್ನನನ್ನಿಟ್ಟು, ಕೂಡಲೆ ಬಹಳ ಅವಸರದಿಂದ ಹೊರಟನು. ಗುರುಗಳನ್ನು ನೋಡಿದಕೂಡಲೆ ಲಕ್ಷ್ಮಣನಿಂದ ಸಹಿತನಾಗಿ ಪ್ರಭುರಾಮಚಂದ್ರನು ಅನುರಾಗಯುಕ್ತನಾಗಿ ಸಾಷ್ಟಾಂಗ ವೆರಗಹೋಗುತ್ತಿರಲು, ಮುನಿಗಳುಧಾವಿಸಿ ಹೋಗಿ ಇಬ್ಬರು ಬಂಧುಗಳನ್ನೂ ಹಿಡಿದೆತ್ತಿ ಆಲಿಂಗಿಸಿದರು. ಆಗ ಗುಹನು ಪ್ರೇಮ ಪುಲಕಿತನಾಗಿ ತನ್ನ ನಾಮೋಚ್ಚಾರವನ್ನು ಮಾಡುತ್ತ ದೂರದಿಂದಲೇ ವಸಿಷ್ಠರಿಗೆ ಸಾಷ್ಟಾಂಗ ನಮಸ್ಕಾರಮಾಡಿದನು. ಅವನು ರಾಮನ ಸಖನೆಂದು ತಿಳಿದು, ಮುನಿವರನು ಭೂಮಿಯಮೇಲೆ ಉರುಳಾಡುತ್ತಿರುವ

ಪ್ರೇಮವನ್ನೇ ಒಟ್ಟುಗೂಡಿಸುವಂತೆ ಆತನನ್ನು ಬಿಗಿದಪ್ಪಿದನು. ಆಗ ದೇವತೆಗಳು ಗುಹನಮೇಲೆ ಹೂ ಮಳೆಗರೆದು—"ರಘುಪತಿಯ ಭಕ್ತಿಯು ಸುಮಂಗಲದ ಜನ್ಮದ ಒಂದುಅದ್ವಿತೀಯ ಸ್ಥಾನವಾಗಿರುವದು; ಯಾಕಂದರೆಜಗತ್ತಿನಲ್ಲಿ ಗುಹನಂಥನೀಚರೂ ವಸಿಷ್ಠರಂಥ ಶ್ರೇಷ್ಠರೂ ಯಾರೂ ಇದಿರುವಾಗ, ಅವರಿಬ್ಬರ ಆಲಿಂಗನವು ಆಶ್ಚರ್ಯಕರವಲ್ಲವೇ? ಎಂದು ಅಭಿನಂದಿಸಿದರು. ಮುನಿರಾಜನು ಲಕ್ಷ್ಮಣನಿಗಿಂತಲೂ ವಿಶೇಷವಾದ ಆನಂದ ದಿಂದ ಗುಹನನ್ನು ಅಪ್ಪಿಕೊಂಡನು. ಈ ಪ್ರತಾಪವೂ, ಪ್ರಭಾವವೂ ಕೇವಲ ಜಾನ ಕೀಜೀವನನ ಭಜನದ್ದೇ ಎಂಬದು ಪ್ರತ್ಯಕ್ಷ ಸಿದ್ಧವಾಗುವದು. ಲಕ್ಷ್ಮಣನೊಡನೆ ಶ್ರೀರಾಮನು ಒಂದು ಕ್ಷಣದಲ್ಲಿ ಎಲ್ಲರನ್ನೂ ಕಾಣಿಸಿಕೊಂಡು ಅವರವರ ಭಾವನೆಯಂತೆ ಅವರವರ ವಾಸನಾಗಳನ್ನು ಪೂರ್ಣಮಾಡಿ ಎಲ್ಲರನ್ನು ಸಮಾಧಾನ ಪಡಿಸಿದನು. ಕೋಟ್ಯವಧಿ ಘಟಗಳಲ್ಲಿ ಸೂರ್ಯನು ಏಕಸಮಯಾವಚ್ಛೇದದಿಂದ ಸಮಸಮಾನ ವಾಗಿ ಪ್ರತಿಬಿಂಬಿಸುವಂತೆ, ಶ್ರೀರಾಮನು ಹೀಗೆ ಎಲ್ಲರನ್ನು ಕಾಣಿಸಿಕೊಂಡು ಸಮಾಧಾನ ಪಡಿಸಿದ್ದೇನು ಆಶ್ಚರ್ಯವಲ್ಲ. ಯಾವತ್ತೂ ತಾಯಂದಿರು ದುಃಖಿತರಾಗಿರುವದನ್ನು ರಾಮನು ನೋಡಿದನು. ಆತನು ಎಲ್ಲಕ್ಕೂ ಮೊದಲು ಸರಳಮನಸ್ಸಿನಿಂದಲೂ, ಪ್ರೇಮ ಬುದ್ಧಿಯಿಂದಲೂ ಕೈಕೇಯಿಯನ್ನು ಕಂಡು ನಮಸ್ಕರಿಸಿ ಆಕೆಯ ದೋಷವನ್ನು ಕಾಲ-ಕರ್ಮ-ಪ್ರಾರಬ್ಧಗಳ ತಲೆಯಮೇಲೆ ಹಾಕಿ, ಆಕೆಯನ್ನು ಬೋಧಿಸಿದನು. ಯಾವತ್ತು ತಾಯಂದಿರು ರಘುವರನನ್ನು ಕಾಣಲು, ಆತನು ಅವರೆಲ್ಲರನ್ನು ಕುರಿತು—ತಾಯಂದಿರಾ, ಜಗತ್ತೆಲ್ಲವೂ ಪರಮೇಶ್ವರಾಧೀನವಾಗಿರುವದರಿಂದ, ಯಾರಿಗೂ ದೋಷವಿಡಬಾರದು, ಎಂದು ಹೇಳಿ, ಅರುಂಧತಿಯನ್ನೂ, ಆಕೆಯೊಡನೆ ಬಂದಿರುವ ಬೇರೆ ಬ್ರಾಹ್ಮಣಸ್ತ್ರೀಯರನ್ನೂ ರಾಮಲಕ್ಷ್ಮಣರು ನಮಸ್ಕರಿಸಿ, ಅವರೆಲ್ಲರನ್ನು ಗಂಗಾಗೌರಿಯರನ್ನಂತೆ ಸನ್ಮಾನಿಸಿದರು. ಅವರಾದರೂ ಆನಂದದಿಂದಲೂ, ಮೃದುವಾಣಿಯಿಂದಲೂ ರಾಮಲಕ್ಷ್ಮಣರನ್ನು ಆಶೀರ್ವದಿಸಿದರು. ಬಳಿಕ ಸುಮಿತ್ರೆಯನ್ನೂ, ಕೌಸಲ್ಯೆಯನ್ನೂ ರಾಮಲಕ್ಷ್ಮಣರು ಕಂಡರು. ರಾಮನು ವಸಿಷ್ಠರನ್ನು ಕುರಿತು—"ಆಶ್ರಮಕ್ಕೆ ಚರಣಸ್ಪರ್ಶವಾಗಲೇಬೇಕೆಂ"ದು ಪ್ರಾರ್ಥಿಸಿದನು. ಆಗ ವಸಿಷ್ಠರ ಅಪ್ಪಣೆಯಿಂದ ಎಲ್ಲರೂ ಕಾಲು ಹೊಳೆನೋಡಿ ನದಿದಾಟಹತ್ತಿದರು. ಭರತ-ರಾಮ-ಲಕ್ಷ್ಮಣರು ಬ್ರಾಹ್ಮಣರನ್ನೂ, ಮಂತ್ರಿಗಳನ್ನೂ, ತಾಯಂದಿರನ್ನೂ, ಗುರುಗಳನ್ನೂ, ಕೆಲವು ಮುಖ್ಯಮುಖ್ಯಜನರನ್ನೂ ಸಂಗಡ ಕರಕೊಂಡು, ತಮ್ಮ ಪವಿತ್ರವಾದ ಆಶ್ರಮಕ್ಕೆ ಹೋದರು.

ಆಶ್ರಮಕ್ಕೆ ಬಂದಬಳಿಕ ಸೀತೆಯು ವಸಿಷ್ಠರನ್ನೂ, ಮುನಿಪತ್ನಿಯರೊಡನೆ ಗುರುಪತ್ನಿ ಅರುಂಧತಿಯನ್ನೂ ನಮಸ್ಕರಿಸಿ, ಇಷ್ಟವಾದ ಆಶೀರ್ವಾದಪಡೆದಳು. ಎಲ್ಲ ಅತ್ತೆಯುವರ ಸ್ಥಿತಿಯನ್ನು ನೋಡಿ ಸೀತೆಗೆ ಬಹಳ ದುಃಖವಾಯಿತು. ಆಕೆಯು ಕಣ್ಣೀರು ಸುರಿಸುತ್ತ ಯಾವತ್ತು ಅತ್ತೆಯವರಿಗೆ ನಮಸ್ಕಾರಮಾಡಿದಳು. ಆಗ ಎಲ್ಲರ ದುಃಖವು

ಸಿತ್ತರಿಸಿ ಆಸ್ಥಾನವು ಆಗ ಕಾರುಣ್ಯರಸದಿಂದ ವ್ಯಾಪ್ತವಾದಂತೆ ತೋರಿತು. ಯಾವತ್ತು ರಾಣಿಯರು ಮನಸ್ಸಿನಲ್ಲಿ ಸೀತೆಯನ್ನು 'ಅಖಂಡ ಸೌಭಾಗ್ಯವತಿಯಾಗೆಂದು,' ಆಶೀರ್ವದಿಸಿದರು. ಹೀಗೆ ಸೀತೆಯೂ, ಯಾವತ್ತು ರಾಣಿಯರೂ ಸ್ನೇಹವಿಕಲರಾಗಿರುವದನ್ನು ನೋಡಿ ವಸಿಷ್ಠರು ಎಲ್ಲರಿಗೂ ಕುಳಿತುಕೊಳ್ಳಿರೆಂದು ಹೇಳಿದರು. ಬಳಿಕ ಅವರು—"ಜಗತ್ತಿನ ಈ ಯಾವತ್ತು ಖಟಾಟೋಪವು, ಮಾಯೆಯು ಪ್ರಸಾರವಿರುತ್ತದೆಂದು ಹೇಳಿ, ಬ್ರಹ್ಮಜ್ಞಾನದ ಉಪದೇಶವನ್ನು ಸ್ವಲ್ಪವಟ್ಟಿಗೆ ಮಾಡಿದರು. ಬಳಿಕ ಅವರು ದಶರಥನ ನಿರ್ಯಾಣವನ್ನು ತಿಳಿಸಲು, ರಾಮನಿಗೆ ಅಸಹ್ಯವಾದ ದುಃಖವಾಯಿತು. ತನ್ನ ಮೇಲಿನ ಪ್ರೇಮವೇ ದಶರಥನ ಮರಣಕ್ಕೆ ಕಾರಣವಾಯಿತೆಂದು ಆ ಧೈರ್ಯಧುರಂಧರನು ಅತ್ಯಂತ ವಿಹ್ವಲನಾದನು. ವಜ್ರದಂತೆ ಕಠೋರವಾದ ಈ ಕಟುವಾಣಿಯನ್ನು ಕೇಳಿ, ಸೀತೆಯೂ,ಲಕ್ಷ್ಮಣನೂ ದುಃಖಿಸತೊಡಗಿದರು. ಆಗ ಯಾವತ್ತು ರಾಣಿಯರೂ, ಯಾವತ್ತು ಸಮಾಜವೂ ಶೋಕಾಕುಲವಾಗಲು, ದಶರಥನ ಮರಣವು ಇಂದೇ ಆಗಿರುವಂತೆ ತೋರಿತು. ಮುನಿವರನು ಬಹುವಿಧದಿಂದ ರಾಮನನ್ನು ಬೋಧಿಸಿ ಸಮಾಧಾನ ಪಡಿಸಿ ಅವನಕೈಯಿಂದ ದಶರಥನ ಔರ್ಧ್ವದೇಹಿಕಕರ್ಮಗಳನ್ನು ಮಾಡಿಸಿದನು. ವೇದವಿಧಿಯಂತೆ ತಂದೆಯ ಕ್ರಿಯೆಯನ್ನು ಮಾಡಿ, ಅಪಾತಕರೂಪ ಕತ್ತಲೆಯ ಸೂರ್ಯನು ಮೂರನೇದಿನ ಶುದ್ಧನಾದನು. ಹೀಗೆ ರಾಮನು ಶುದ್ಧನಾದದ್ದು, ಸಾಧುಗಳ ಮತದಂತೆ, ಮೊದಲೇ ಎಲ್ಲತೀರ್ಥಗಳನ್ನು ಒಳಕೊಂಡಿರುವ ಗಂಗೆಯಲ್ಲಿ ತೀರ್ಥಗಳ ಆವಾಹನ ಮಾಡಿದಂತಾಯಿತು! ಹೀಗೆ ಶ್ರೀರಾಮನು ಲೋಕಶಿಕ್ಷಾರ್ಥವಾಗಿ ಶುದ್ಧನಾದ ಬಳಿಕ ಗುರುಗಳನ್ನು ಕುರಿತು—"ಮಹಾರಾಜ,ಯಾವತ್ತು ಜನರು ಮೊದಲೇ ದುಃಖದಿಂದ ಪೀಡಿತರಾಗಿರುವರು. ಅದರಲ್ಲಿ ಅವರು ಇಲ್ಲಿ ಕಂದ-ಮೂಲ-ಫಲ-ಉದಕಗಳಿಂದಲೇ ನಿರ್ವಾಹವನ್ನು ಸಾಗಿಸಿಕೊಳ್ಳಬೇಕಾಗುವದು. ಬಂಧುವಿನೊಡನೆ ಈ ಭರತನನ್ನೂ, ಈ ಸಚಿವನನ್ನೂ, ಯಾವತ್ತು ಬಾಂಧವರನ್ನೂ ನೋಡಿಯಂತೂ ನನಗೆ ಪ್ರತಿಒಂದು ಕ್ಷಣವು ಯುಗದಂತೆ ಹೋಗುತ್ತಿರುವದು. ಆದ್ದರಿಂದ ತಾವು ಎಲ್ಲರೊಡನೆ ಅಯೋಧ್ಯೆಗೆ ತಿರುಗಿಹೋಗಬೇಕು. ತಂದೆ ಇಲ್ಲ, ಅವನು ಸ್ವರ್ಗವಾಸಿಯು! ನಾನು ಮಹಾರಾಜರ ಮುಂದೆ ಮಾತಾಡುವದೆಂದರೆ ಹೆಚ್ಚಿನ ಕೆಲಸವು; ಅದ್ದರಿಂದ ತಮಗೆ ಯೋಗ್ಯವಾಗಿತೋರಿದಂತೆ ವ್ಯವಸ್ಥೆ ಮಾಡತಕ್ಕದ್ದು, ಎಂದು ವಿಜ್ಞಾಪಿಸಿಕೊಂಡನು. ಆಗ ವಸಿಷ್ಠರು— ರಾಮಾ, ನೀನು ಧರ್ಮದ ಕೇವಲ ಸೇತುವೂ, ಕರುಣೆಯ ಸಾಗರನೂ ಆಗಿರುವೆ. ಅಂದಬಳಿಕ ನೀನು ಹೀಗೆ ಹೇಳದೆ ಹೇಗೆ ಇದ್ದೀಳಿಆದರೆಪಾಪ! ದುಃಖದಿಂದ ಕಂಗೆಟ್ಟಿರುವ ಈ ಜನರು ನೀನು ಇರಗೊಟ್ಟರೆ ಎರಡು ದಿನ ನಿನ್ನ ದರ್ಶನಮಾಡಿಕೊಂಡು ವಿಶ್ರಮಿಸಿಯಾದರೂ ವಿಶ್ರಮಿಸುವರು. ಅನ್ನಲು, ರಾಮನ ಮಾತುಗಳನ್ನು ಕೇಳಿ ಭಯಭೀತರಾಗಿದ್ದ ಜನರು ವಸಿಷ್ಠರ ಮಾತುಗಳಿಂದ ಧೈರ್ಯಗೊಂಡರು; ಯಾವತ್ತು

ಜನರು ದರ್ಶನಮಾತ್ರದಿಂದ ಪಾಪವೃತ್ತಿಯು ನಾಶವಾಗುವ ಆ ಪವಿತ್ರಮಂದಾಕಿನಿಯಲ್ಲಿ ತ್ರಿಕಾಲ ಸ್ನಾನಮಾಡಬೇಕು, ಮಂಗಲಮೂರ್ತಿಯಾದ ರಾಮನನ್ನು ಕಣ್ಣತುಂಬ ನೋಡಿ ಆನಂದದಿಂದ ಪುನಃ ಪುನಃ ಆತನಿಗೆ ಸಾಷ್ಟಾಂಗನಮಸ್ಕಾರ ಮಾಡಬೇಕು, ದುಃಖದಹೆಸರು ಇಲ್ಲದ ಸುಖಮಯವಾದ ರಾಮನ ಪರ್ವತದ ಮೇಲಿನ ವನಗಳನ್ನು ನೋಡಬೇಕು; ಹೀಗೆ ಆನಂದದಿಂದ ಎಲ್ಲರೂ ಕಾಲಹರಣಮಾಡಹತ್ತಿದರು.

ರಾಮನ ಪರಿವಾರವು ವನಪ್ರದೇಶಗಳನ್ನು ನೋಡಲಿಕ್ಕೆ ಹೋದಾಗ, ಕಿರಾತರು, ಭಿಲ್ಲರು, ವನವಾಸಿಗಳು ಕಂದಮೂಲಗಳನ್ನೂ, ಕೋಮಲವಾದ ಚಿಗುರುಗಳನ್ನೂ ಎಲೆಗಳ ದೊನ್ನೆಗಳಲ್ಲಿ ವ್ಯವಸ್ಥೆಯಿಂದ ಇಟ್ಟುಕೊಂಡು, ಅವುಗಳ ರುಚಿಗಳನ್ನೂ, ಗುಣಗಳನ್ನೂ, ಹೆಸರುಗಳನ್ನೂ ಹೇಳುತ್ತ ಅತ್ಯಂತ ವಿನಯದಿಂದ ಅವನ್ನು ಅವರಿಗೆ ಕಾಣಿಕೆಯಾಗಿ ಅರ್ಪಿಸುತ್ತಿದ್ದರು. ಜನರು ಅವುಗಳಿಗಾಗಿ ಬಹಳ ಬೆಲೆಕೊಡಹೋಗಲು, ಆ ಪರ್ವತವಾಸಿಗಳು ರಾಮನಆಣೆಯಿಟ್ಟು ಬೆಲೆತಿರುಗಿಕೊಟ್ಟು ಸಲಿಗೆಯಿಂದ—'ಪ್ರೇಮನೋಡಿ ಸಂತರು ಸೇವೆಗೆ ಮಾನಕೊಡಲೇಬೇಕು. ತಾವು ಪುಣ್ಯವಂತರು, ನಾವು ನೀಚರಾದ ಹಿಂಸಕರು. ಕೇವಲ ರಾಮಕೃಪೆಯಿಂದಲೇ ನಮಗೆ ತಮ್ಮ ದರ್ಶನವಾಯಿತು. ಇಲ್ಲದಿದ್ದರೆ ಮಾರವಾಡದೊಳಗಿನ ವೃಕ್ಷಪ್ರದೇಶದಲ್ಲಿ ಗಂಗೆಯ ಪ್ರವಾಹದಂತೆ ನಿಮ್ಮ ದರ್ಶನವು ನಮಗೆ ಅತ್ಯಂತ ದುರ್ಲಭವೇಸರಿ. ದಯಾಳುವಾದ ರಾಮನು ನಿಷಾದರಾದ ನಮ್ಮನ್ನು ರಕ್ಷಿಸುವನು; ಅಂದಬಳಿಕ ರಾಜನಂತೆ ಪ್ರಜೆಗಳೂ, ಪರಿಜನರೂ ನಡೆಯ್ತಲೇಬೇಕು. ಮಹಾರಾಜ, ನಾವು ತಮಗೆ ಕೊಡುವದಾದರೂ ಏನು? ನಮ್ಮ ಸಂಪತ್ತೆಲ್ಲ ಕಟ್ಟಿಗೆ-ಚಿಗುರುಗಳದು! ನಾವು ನಿಮ್ಮಹಾಸಿಗೆ ಹುಪ್ಪಡಿಎತ್ತಿಹಾಕದೆ ಇರುವದೇ ಒಂದು ದೊಡ್ಡ ಸೇವೆ ಮಾಡಿದಹಾಗೆಂದು ತಿಳಿಯಿರಿ. ನಾವು ಹಗಲುರಾತ್ರಿ ಚೌರ್ಯಹಿಂಸಾದಿಹಲವು ಪಾಪಕೃತ್ಯಗಳನ್ನು ಮಾಡಿಯೂ ನಮಗೆ ಮೈತುಂಬ ಅರಿವೆ, ಹೊಟ್ಟೆತುಂಬ ಅನ್ನ ಸಿಗುವದಿಲ್ಲ. ಧರ್ಮಬುದ್ಧಿಯೆಂದರೇನೆಂಬುದು ನಮಗೆ ಕನಸಿನಲ್ಲಿಯೂ ಗೊತ್ತಿಲ್ಲ! ಆದರೆ ರಘುನಂದನನ ಚರಣಕಮಲಗಳ ದರ್ಶನದ ಪ್ರಭಾವದಿಂದ ನಮ್ಮ ದುಃಸಹದೋಷಗಳೂ, ದುಃಖಗಳೂ ಈಗ ಲಯವಾಗಿ ಹೋಗಿರುವವು.' ಎಂದು ನುಡಿಯಲು, ರಾಮನ ಮೇಲಿನ ಆನಿಷಾದರ ಭಕ್ತಿಯನ್ನು ನೋಡಿ ಅಯೋಧ್ಯೆಯಜನರು ತಮ್ಮ ರಾಮನ ವಿಷಯದ ಭಕ್ತಿಯನ್ನು ಆನಿಷಾದರ ಭಕ್ತಿಯಮುಂದೆ ತುಚ್ಛವೆಂದು ಭಾವಿಸಿದರು. ಅಪ್ಪಾ ತುಳಸೀದಾಸಾ, ರಘುವಂಶಮಣಿಯ ಕೃಪೆಯಿಂದ ಕಟ್ಟಿಗೆಯ ನಾವೆಯು ಕಬ್ಬಿಣವನ್ನು ತಕ್ಕೊಂಡು ಆಚೆಯದಂಡೆಗೆ ಹೋಗುವದು; ಅಂದರೆ ನಿಷಾದರ ಪ್ರೇಮವು ಅಯೋಧ್ಯೆಯ ಜನರನ್ನಾದರೂ ರಾಮಭಕ್ತಿಯ ಮಾರ್ಗದಿಂದ ಕರೆದೊಯ್ಯುತ್ತಿರುವದು. ರಾಮನಕೃಪೆಯೇ ಎಂಬ ತಾತ್ಪರ್ಯವು; ಅಥವಾ, ಅಯೋಧ್ಯೆಯ ಜನರು ರಾಮನ ಜನ್ಮಭೂಮಿಯಲ್ಲಿದ್ದು, ಆತನೊಡನೆ ಅಸ್ತಿತ್ವವನ್ನು ಬಳಿಸಿ ಆತನೊಡನೆ

ವ್ಯವಹರಿಸುವವರಾದದ್ದರಿಂದ ತೇಲುವ ಸಂಬಂಧದಿಂದ ಕಟ್ಟಿಗೆಯು ನಾವೆಯುಂತಾದರು-ನಿಷಾದರು ರಾಮನ ಸಂಬಂಧವಿಲ್ಲದ ಧರ್ಮಹೀನರಾದದ್ದರಿಂದ ಕಬ್ಬಿಣದಂತೆ ಅದರು; ಆದರೆ ರಾಮನ ಕೃಪೆಯು ಇಬ್ಬರನ್ನೂ ಭವಸಾಗರದಿಂದ ಪಾರಮಾಡುವದು! ಹೇಗಂದರೆ, ನಾವು ಕಬ್ಬಿಣದೊಡನೆ ಆಚೆಯುದಂಡೆಗೆ ಹೋಗುವದು. ಅಥವಾನಾವೆಯುರಾಮನ ಕೃಪೆಯು; ಅದು ಕಬ್ಬಿಣದಂತೆ ಇರುವ ನಿಷಾದರನ್ನೂ ದಾಟಿಸುವದೆಂಬ ತಾತ್ಪರ್ಯವು.

ಸೀತೆಯು ತನ್ನ ಅತ್ತೆಯಂದಿರ ಸಂಖ್ಯೆಯಷ್ಟು ರೂಪಗಳನ್ನು ಧರಿಸಿ ಒಳ್ಳೆಯ ಭಕ್ತಿಯಿಂದ ಒಂದೇಸವನೆ ಅವರ ಸೇವೆಯನ್ನು ಆರಂಭಿಸಿ ಅವರನ್ನು ಪ್ರಸನ್ನೀಕರಿಸಿಕೊಂಡು ಅವರಿಂದ ಉಪದೇಶವನ್ನೂ, ಆಶೀರ್ವಾದವನ್ನೂ ಸಂಪಾದಿಸಿದಳು. ಈ ಮರ್ಮವನ್ನು ರಾಮನಹೊರತು ಬೇರೆ ಯಾರೂ ತಿಳಿಯಲಿಲ್ಲ. ಮಾಯೆಗಳೆನ್ನುವವಷ್ಟು, ಅಂದರೆ, ಮನುಷ್ಯಮಾಯಾ, ರಾಕ್ಷಸಮಾಯಾ, ದೈತ್ಯಮಾಯಾ ಮೊದಲಾದವುಗಳೆಲ್ಲವೂ ಸೀತೆಯ ಮಾಯೆಯೊಳಗಿನವಾಗಿರುವದರಿಂದ, ಆಕೆಗೆ ಯಾವದು ತಾನೇ ಅಸಾಧ್ಯವು? ಸೀತೆಯಿಂದ ಸಹಿತವಾಗಿ ರಾಮಲಕ್ಷ್ಮಣರಿಬ್ಬರೂ ತನ್ನೊಡನೆ ಸರಳತನದಿಂದ ನಡೆದುಕೊಳ್ಳುವದನ್ನು ನೋಡಿ ಕೈಕೇಯಿಗೆ ಬಹಳ ಪಶ್ಚಾತ್ತಾಪವಾಯಿತು. ಆಕೆಯು ಭೂದೇವಿಯನ್ನೂ, ಯಮನನ್ನೂ ಕುರಿತು—ಎಲೈ ವಸುಂಧರೇ, ನೀನೂ ನನ್ನನ್ನು ನಿನ್ನ ಹೊಟ್ಟೆಯಲ್ಲಿ ಹಾಕಿಕೊಳ್ಳುವದಿಲ್ಲವೇ? ಅಪ್ಪಾ ಯಮಾ, ನನ್ನ ದುರ್ದೈವದಿಂದ ನೀನು ಸಹ ನನ್ನನ್ನು ಹತ್ತರ ಕರೆದುಕೊಳ್ಳಲೊಲ್ಲೆಯಲ್ಲ! ರಾಮನ ವೈರಿಗಳಿಗೆ ನರಕದಲ್ಲಿಯೂ ಸ್ಥಳದೊರೆಯುವದಿಲ್ಲವೆಂದು ಶಾಸ್ತ್ರದಲ್ಲಿಯೂ, ವ್ಯವಹಾರದಲ್ಲಿಯೂ ಪ್ರಸಿದ್ಧವಿರುವದು. ಕವಿಗಳ ಹೇಳುವಿಕೆಯಾದರೂ ಹೀಗೆಯೇ ಇರುವದು. ಎಂದು ದೂರಿಕೊಳ್ಳತೊಡಗಿದಳು. ತಮ್ಮ ದುರ್ದೈವದಿಂದ ರಾಮನು ಅಯೋಧ್ಯೆಗೆ ತಿರುಗಿ ಬರುವನೋ ಇಲ್ಲವೋ ಎಂಬ ಸಂಶಯವು ಎಲ್ಲರಿಗೂ ಉತ್ಪನ್ನವಾಯಿತು. ಭರತನಿಗಂತು ರಾತ್ರಿ ನಿದ್ದೆ ಬಾರದಂತಾಯಿತು; ಹಗಲು ಹಸಿವೆಯಾಗದಂತಾಯಿತು. ಅತನು ಮನಸ್ಸಿನಲ್ಲಿ—ತಾಯಿಯುನೆವದಿಂದ ಕಾಲಗತಿಯೇ ಈ ಅನರ್ಥವನ್ನುಂಟುಮಾಡಿರುವದು. ಬತ್ತವು ಕೊಯ್ಯುವದಕ್ಕೆ ಬಂದಾಗ ಅತಿವೃಷ್ಟಿಯಿಂದ ಘಾತವಾಗುವಂತೆ ಇದು ಆಯಿತು. ರಾಮನಿಗೆ ಅಭಿಷೇಕವು ಯಾವರೀತಿಯಿಂದಾದೀತು? ನನಗಂತೂ ಒಂದೂ ಮಾರ್ಗವು ತೋರಲೊಲ್ಲದು. ಗುರುಗಳ ಅಪ್ಪಣೆಯಿಂದ ರಾಮನು ಅವಶ್ಯವಾಗಿ ತಿರುಗಿ ಅಯೋಧ್ಯೆಗೆ ಬರಬಹುದು; ಆದರೆ ಅವರು ರಾಮನ ಮನಸ್ಸಿನ ಒಲವು ನೋಡಿ ಮಾತಾಡತಕ್ಕವರು. ಕೌಸಲ್ಯೆಯು ಹೇಳಿದರೆ, ಆತನು ಹಿಂದಿರುಗಬಹುದು; ಆದರೆ ಆಕೆಯು ರಾಮನ ತಾಯಿಯೇ ಆದದ್ದರಿಂದ ಹೀಗೆ ಹಟವನ್ನು ಎಂದಾದರೂ ಹಿಡಿದಾಳೆ? ನನ್ನ ಸೇವಕವರ್ಗದ ಹಂಗಾದರೂರಾಮನಿಗೆ ಎಷ್ಟು? ಅದರಲ್ಲಿ ನನಗೆ ಪ್ರತಿಕೂಲ ಕಾಲವಿದ್ದು,

ದೈವವೂ ನನಗೆಪ್ರತಿಕೂಲವಾಗಿರುವದು! ಇನ್ನು ನಾನೇ ರಾಮನಿಗೆ ದುಂಬಾಲುಬಿದ್ದರೆ ಹಟಮಾರಿತನದ ಪರಮಾವಧಿಯಾಗಿ, ಸೇವಾ ಧರ್ಮಕ್ಕೆ ಬಾಧೆಬರುವದು; ಯಾಕಂದರೆ ಸೇವಾಧರ್ಮವು ನಡೆದುಕೊಳ್ಳಲಿಕ್ಕೆ ಕೈಲಾಸಪರ್ವತಕ್ಕಿಂತ ಗಹನವಾಗಿರುವದು. ಎಂದು ವಿಚಾರಮಾಡುತ್ತಿರುವಾಗ ಒಂದರ ನಿಶ್ಚಯವೂ ಆಗಲಿಲ್ಲ. ಇದೇ ಆಲೋಚನೆಯಲ್ಲಿ ಭರತನು ರಾತ್ರಿಯನ್ನೆಲ್ಲ ಕಳೆದು, ಬೆಳಗಾದ ಕೂಡಲೆ ಸ್ನಾನಮಾಡಿ ರಾಮಚಂದ್ರನನ್ನು ನಮಸ್ಕರಿಸಿ ಕುಳಿತುಕೊಂಡಿರಲು, ಗುರುಗಳಾದ ವಸಿಷ್ಠರು ಆತನನ್ನು ಕರೆಕಳುಹಿದರು.

ಭರತನು ಗುರುಗಳಬಳಿಗೆ ಹೋಗಿ ಅವರ ಪಾದಕಮಲಗಳನ್ನು ವಂದಿಸಿ ಅವರ ಅಪ್ಪಣೆಯಿಂದ ಕುಳಿತುಕೊಳ್ಳುತ್ತಿರಲು, ಯಾವತ್ತೂ ಬ್ರಾಹ್ಮಣರೂ, ಸರದಾರರೂ ಮೊದಲಾದ ಎಲ್ಲ ಸಭಾಸದರು ಬಂದು ದರ್ಬಾರವು ನೆರೆಯಿತು. ಪ್ರಸಂಗವನ್ನನುಸರಿಸಿ ಮುನಿಶ್ರೇಷ್ಠನು ಎಲ್ಲರನ್ನುದ್ದೇಶಿಸಿ—ಎಲೈ ಸಭಾಸದರೇ, ಎಲೈ ಸುಜ್ಞನಾದ ಭರತನೇ, ಧರ್ಮಧುರಂಧರನೂ, ಸೂರ್ಯಕುಲದೊಳಗಿನ ಸೂರ್ಯನೂ ಆದ ಈ ರಾಮರಾಜನು ಪ್ರತ್ಯಕ್ಷ ಸ್ವತಂತ್ರ ಭಗವಂತನಾಗಿರುವನು. ಈತನು ಸತ್ಯಪ್ರತಿಜ್ಞನಿದ್ದು, ಶ್ರುತಿಯೆಂಬ ಸೇತುವೆಯ ರಕ್ಷಕನಾಗಿರುವನು. ರಾಮನ ಅವತಾರವು ಕೇವಲ ಜಗತ್ತಿನ ಉದ್ಧಾರಕ್ಕಾಗಿ ಆಗಿರುವದು. ಗುರುಗಳು, ತಂದೆತಾಯಿಗಳು ಇವರ ಅಪ್ಪಣೆಯನ್ನು ಪಾಲಿಸುವಂಥ, ದುಷ್ಟರ ಸೈನ್ಯವನ್ನು ನಾಶಗೊಳಿಸುವಂಥ, ದೇವತೆಗಳ ಕಲ್ಯಾಣಮಾಡುವಂಥ ರಾಮನು ಸ್ವಾರ್ಥ, ಪರಾರ್ಥ, ನೀತಿ, ಪ್ರೀತಿ ಇವುಗಳ ರಹಸ್ಯವನ್ನು ತಿಳಿಯುವಂತೆ ವಸ್ತುತ: ಬೇರೆ ಯಾರೂ ತಿಳಿಯಲಾರರು. ಬ್ರಹ್ಮ, ವಿಷ್ಣು, ಶಿವ, ಚಂದ್ರ, ಸೂರ್ಯ, ದಿಕ್ಪಾಲರು, ಮಾಯಾ, ಜೀವ,ಕರ್ಮ,ಕಲಿಕಾಲ, ಸರ್ಪರಾಜನಾದ ಶೇಷ, ಅರಸು ಮೊದಲಾದವರ ಪ್ರಭುತ್ವಗಳ ತಲೆಯಮೇಲೆಯೂ, ವೇದಶಾಸ್ತ್ರಗಳು ವರ್ಣಿಸುವ ಯೋಗ ಹಾಗು ಸಿದ್ಧಿ ಇವುಗಳ ತಲೆಯಮೇಲೆಯೂ ರಾಮನ ಆಜ್ಞೆಯೇ ಇರುತ್ತದೆಂಬದು ವಿಚಾರಾಂತದಲ್ಲಿ ನಿಮ್ಮೆಲ್ಲರಿಗೆ ಗೊತ್ತಾಗಬಹುದು. ರಾಮನ ಇಚ್ಛೆಯನ್ನೂ, ಅಪ್ಪಣೆಯನ್ನೂ ಪಾಲಿಸುವದರಲ್ಲಿಯೇ ನಮ್ಮೆಲ್ಲರ ಹಿತವಿರುತ್ತದೆಂಬದನ್ನು ಎಲ್ಲ ಸುಜ್ಞರು ವಿಚಾರಿಸಿ ಸರ್ವಾನುಮತದಿಂದ ಮುಂದಿನ ಕರ್ತವ್ಯವನ್ನು ನಿಶ್ಚಯಿಸತಕ್ಕದ್ದು. ರಾಮನಿಗೆ ರಾಜ್ಯಾಭಿಷೇಕವಾಗುವದೇ ಸುಖಪ್ರದವಾಗಿದ್ದು, ಕಲ್ಯಾಣಕ್ಕೂ ಆನಂದಕ್ಕೂ ಕಾರಣವಾಗುವದೊಂದು ಮಾರ್ಗವಿರುವದು. ರಾಮನು ಅಯೋಧ್ಯೆಗೆ ಯಾವ ಉಪಾಯದಿಂದ ಬಂದಾನೆಂಬದನ್ನು ಮನನ ಪೂರ್ವಕವಾಗಿ ಸೂಚಿಸಿದರೆ, ಆದರಂತೆಯೂ ಮಾಡಬಹುದು.

ನೀತಿ, ಪರಮಾರ್ಥ, ಸ್ವಾರ್ಥಗಳಿಂದ ತುಂಬಿತುಳುಕುವ ವಸಿಷ್ಠರ ಮಾತುಗಳನ್ನು ಸಭಾಸದರು ಆದರಪೂರ್ವಕವಾಗಿ ಕೇಳಿಕೊಂಡರು; ಆದರೆ ಅವರ ಮಾತುಗಳಿಗೆ

ಉತ್ತರವು ಮಾತ್ರ ಯಾರಿಂದಲೂ ಬಾರದಾಯಿತು. ಯಾವತತ್ತು ಸಭಾಸದರು ಏನೂ ತೋಚದೆ ಕುಳಿತುಬಿಟ್ಟರು. ಆಗ ತಲೆಬಾಗಿ ಕೈಜೋಡಿಸಿ ಭರತನು—"ಈ ಸೂರ್ಯ ವಂಶದಲ್ಲಿ ಒಬ್ಬರಿಗಿಂತ ಒಬ್ಬರು ಶ್ರೇಷ್ಠರಾಗಿ ಬಹುಜನ ರಾಜರು ಆಗಿಹೋದರು. ಇವ ರೆಲ್ಲರ ತಾಯಿತಂದೆಗಳು ಕೇವಲ ಜನ್ಮಕ್ಕೆ ನಿಮಿತ್ತಮಾತ್ರರಾಗಿದ್ದು, ಅವರ ಶುಭಾಶುಭ ಕರ್ಮಗಳನ್ನು ಕೊಡುವವನು ಒಬ್ಬ ಬ್ರಹ್ಮದೇವನಾಗಿರುವನು; ಆದರೆ ಅಶುಭಕರ್ಮ ಗಳನ್ನು ಕಲ್ಯಾಣಕಾರಕಗಳಾಗಿಮಾಡುವ ಅದ್ಭುತ ಸಾಮರ್ಥ್ಯವು ಯಾವ ಶ್ರೇಷ್ಠರ ಆಶೀರ್ವಾದದಲ್ಲಿರುವದೆಂದು ಯಾವತತ್ತು ಜಗತ್ತು ಸಾಕ್ಷಿಯನ್ನು ನುಡಿಯಬಹುದೋ, ಅಂಥ ಆ ಬ್ರಹ್ಮಲಿಖಿತವನ್ನು ಅಳಿಸಿಬಿಡುವ ಈ ನಮ್ಮ ಗುರು ಮಹಾರಾಜರು ಈದಿನ ಒಂದು ಪ್ರತಿಜ್ಞೆಯನ್ನು ಮಾಡಿದರೆ ಅದನ್ನು ಭಂಗಗೊಳಿಸುವ ಸಾಮರ್ಥ್ಯವು ಯಾರಲ್ಲಿ ರುತ್ತದೆ! ಹೀಗಿದ್ದು, ಇಂಥ ಪ್ರಸಂಗದಲ್ಲಿ ಮಹಾರಾಜರು ನನ್ನ ಆಲೋಚನೆಯನ್ನು ಕೇಳುತ್ತಿರುವದು ನನ್ನ ದುರ್ಭಾಗ್ಯವೇ ಸರಿ, ಎನ್ನಲು, ಭರತನ ಈ ಭಕ್ತಿಪೂರ್ಣವಾದ ಭಾಷ ಣವನ್ನು ಕೇಳಿ ಗುರುಮಹಾರಾಜರವರ ಹೃದಯದಲ್ಲಿ ಪ್ರೇಮವು ತುಂಬಿತುಳುಕಹ ತ್ತಿತು. ಅವರು ಭರತನನ್ನು ಕುರಿತು——ಎಲ್ಲಮಾತು ನಿಜವಿರುತ್ತದೆ, ಆದರೆ ಅವಕಾಶ ದರೂ ರಾಮನ ಕೃಪೆಯೇ ಕಾರಣವಿರುತ್ತದೆಂದು ತಿಳಿ. ರಾಮನ ಸದಿಚ್ಛೆ ವಿರೋಧಬಳಿ ಸಿದಬಳಿಕ ಸಿದ್ಧಿಯು, ಅಂದರೆ ಆಶೀರ್ವಾದದ ಫಲದೊರೆಸತಕ್ಕ ಆಸೆಯನ್ನು ಸ್ವಪ್ನದ ಲ್ಲಿಯೂ ಮಾಡತಕ್ಕದ್ದಲ್ಲ. ಆದ್ದರಿಂದ, ಇದಕ್ಕೊಂದು ಉಪಾಯವಿರುವದು, ಅದನ್ನು ಹೇಳ ಲಿಕ್ಕೆ ಸಂಕೋಚವಾದರೂ ಹೇಳಿಬಿಡುವೆನು ಕೇಳು. ಭರತ-ಶತ್ರುಘ್ನರು ನೀವಿಬ್ಬರು ಅಣ್ಣತಮ್ಮಂದಿರು ವನವಾಸಕ್ಕೆ ಹೋಗಿ ಸೀತಾರಾಮ ಲಕ್ಷ್ಮಣರನ್ನು ಹಿಂದಿರುಗಿಸಬೇಕು.

ಮುನಿಯ ಈ ಮಧುರ ವಚನಗಳನ್ನು ಕೇಳಿದಕೂಡಲೆ ಇಬ್ಬರು ಬಂಧುಗಳೂ ಹರ್ಷಿತರಾದರು. ರಾಮನು ರಾಜ್ಯಾರೂಢನಾದಂತೆ ಅವರ ಅಂತಃಕರಣಕ್ಕೆ ತೋರಿತು. ಉಳಿದ ಪರಿವಾರದವರಿಗೆ ಅಲ್ಪಹಾನಿಯಾಗಿ ಬಹಳ ಲಾಭವಾದಂತೆ ಆಯಿತು. ರಾಣಿ ಯವರಿಗೆ ಮಾತ್ರ ಸುಖ ದುಃಖಗಳು ಸಮಾನವಾಗಿ ಅವರು ರೋದನ ಮಾಡತೊಡಗಿ ದರು. ಆಗ ಭರತನು——"ಮುನಿರಾಯನು ಅಡಿದಂತೆ ಮಾಡಿದರೆ ಜಗತ್ತಿನೊಳಗಿನ ಜೀವಮಾತ್ರರಿಗೆ ಆತನು ಅಭೀಷ್ಟ ಸಿದ್ಧಿಯನ್ನು ಒದಗಿಸಿ ಕೊಟ್ಟಂತೆ ಆಗುವದು. ಬೇಕಾದರೆ ನನ್ನ ಜನ್ಮವಿರುವವರೆಗೂ ನಾನು ಅರಣ್ಯದಲ್ಲಿರುವೆನು. ಇದಕ್ಕಿಂತಲೂ ನನಗೆ ಹೆಚ್ಚು ಪಥ್ಯಕರವಾದದ್ದು ಯಾವದೂ ಇರುವದಿಲ್ಲ. ಸೀತಾರಾಮನು ಅಂತ ರ್ಯಾಮಿ ಯಾಗಿರುವನು, ತಾವಾದರೂ ಸರ್ವಜ್ಞರೂ, ಸುಜ್ಞರೂ ಆಗಿರುವಿರಿ; ಆದ್ದ ರಿಂದ ನಾನಾಡಿದ ಮಾತು ನಿಜವಿದ್ದರೆ, ಮಹಾರಾಜರು ತಮ್ಮ ವಚನವನ್ನು ನಿಜವಾಗಿ ಮಾಡಿ ತೋರಿಸುವರು, ಅನ್ನಲು ಭರತನ ಮಾತುಗಳನ್ನು ಕೇಳಿ ಆತನ ಭಕ್ತಿಯನ್ನು ನೋಡಿ ಸಭಾಸದರಿಂದ ಸಹಿತವಾಗಿ ಮುನಿರಾಜನು ಮೈಮರೆತನು; ಭರತನ ಮಹಿ

ಮೆಯು ಮುನಿವರನಿಗೂ ತಿಳಿಯದಾಯಿತು. ಅಂದಬಳಿಕ ಅದನ್ನು ವರ್ಣಿಸಲು ಅನ್ಯರಿಗೆ ಯಾರಿಗೆ ಶಕ್ಯವು? ಭರತನು ವಸಿಷ್ಠಮುನಿಯ ಅಂತರಂಗದಲ್ಲಿ ಪ್ರವಿಷ್ಟನಾದನು. ಬಳಿಕ ಆ ಮುನಿವರನು ಸಮಾಜದೊಡನೆ ರಾಮನ ಬಳಿಗೆ ಹೋಗಲು, ಪ್ರಭುವು ನಮಸ್ಕಾರಮಾಡಿ ಯೋಗ್ಯ ಆಸನವನ್ನು ಕೊಟ್ಟನು. ಮುನಿವರನ ಅಪ್ಪಣೆಯಿಂದ ಎಲ್ಲರೂ ಕುಳಿತುಕೊಂಡರು. ದೇಶ-ಕಾಲ-ವರ್ತಮಾನವನ್ನನುಸರಿಸಿ ಮುನಿವರನು ವಿಚಾರಪೂರ್ವಕವಾಗಿ ರಾಮನನ್ನು ಕುರಿತು—ಹೇ ಸರ್ವಜ್ಞಾ, ಸುಜ್ಞಾ, ಧರ್ಮನೀತಿಗುಣಜ್ಞಾನನಿಧಾನಾ, ರಾಮಾ ಕೇಳು. ಎಲ್ಲರ ಅಂತರಂಗದಲ್ಲಿಯೂ ನಿನ್ನ ವಾಸವಿರುವದು. ನಿನಗೆ ಎಲ್ಲರ ಸದಸದ್ಹೇತುವಿನ ಜ್ಞಾನವಿರುತ್ತದೆ; ಆದ್ದರಿಂದ ಪುರಜನರು, ತಾಯಂದಿರು ಇವರೆಲ್ಲರ ಸರ್ವಸಾಧಾರಣ ಹಿತವಾಗುವಂತೆ ಏನು ಮಾಡಬೇಕೆಂಬವನ್ನು ನೀನೇ ಹೇಳಬೇಕು. ದುಃಖಿತರ ಭಾಷಣವು ವಿಚಾರಪೂರ್ವಕವಾಗಿ ಎಂದೂ ಇರುವದಿಲ್ಲ. ಜೂಜುಗಾರನಿಗೆ ತನ್ನ ಆಟವು ಒಂದೇ ಕಾಣುತ್ತದೆ, ಎಂದು ವಸಿಷ್ಠರು ನುಡಿಯಲು, ರಾಮನು—ಎಲೈ ನಾಥನೇ, ಉಪಾಯವು ಕೇವಲ ನಿಮ್ಮ ಕೈಯಲ್ಲಿಯೇ ಇರುತ್ತದೆ. ಮಹಾರಾಜರ ಅನುವರ್ತನ ಮಾಡುವದರಲ್ಲಿಯೇ ಎಲ್ಲರ ಹಿತವೂ, ಅಪ್ಪಣೆ ಪಾಲಿಸುವದರಲ್ಲಿಯೇ ಎಲ್ಲರ ಆನಂದವೂ ಇರುವದೆಂದು ನಾನು ಪ್ರತಿಜ್ಞಾಪೂರ್ವಕವಾಗಿ ಹೇಳುವೆನು. ಮೊದಲು ನಾನು ತಮ್ಮ ಅಪ್ಪಣೆಯನ್ನು ಶಿರಸಾವಹಿಸಿ, ಅದರಂತೆ ನಡೆದುಕೊಳ್ಳುವೆನು. ಆಮೇಲೆಸ್ವಾಮಿಯವರು ಯಾರಯಾರಿಗೆ ಏನೇನು ಅಪ್ಪಣೆಮಾಡುವಿರೋ ಆ ಆ ಪ್ರಕಾರ ಅವರವರು ನಡೆದುಕೊಳ್ಳುವರು, ಎಂದುಹೇಳಿದನು. ಅದನ್ನುಕೇಳಿ ವಸಿಷ್ಠರು—ರಾಮಾ, ನೀನು ಮಾತಾಡಿದ್ದು ಸತ್ಯವು; ಆದರೆ ಭರತನ ಪ್ರೇಮದ ವಿಚಾರವನ್ನು ಮಾತ್ರ ನೀನು ಮಾಡಲಿಲ್ಲ; ಆದ್ದರಿಂದ ನಾನು ಪುನಃ ಪುನಃ ಹೇಳುವೆನೇನಂದರೆ, ಭರತನ ಭಕ್ತಿಯು ನನ್ನನ್ನು ಬಾಗಿಸಿಬಿಟ್ಟದ್ದರಿಂದ ನನ್ನ ಬುದ್ಧಿಯು ತೀರ ಹುಚ್ಚಾಗಿ ಹೋಗಿರುವದು. ಶಂಕರನ ಸಾಕ್ಷಿಯಿಂದ ನಾನು ಹೇಳುವೆನು, ನನ್ನ ತಿಳುವಳಿಕೆಯಂತೆಯೆಂದರೆ, ಭರತನ ಇಚ್ಛೆಯಂತೆ ಮಾಡುವದೇ ಶ್ರೇಯಸ್ಕರವೆಂದು ನನಗೆ ತೋರುತ್ತದೆ. ಭರತನ ವಿನಂತಿಯನ್ನು ಮನೋಭಾವನೆಯಿಂದ ಕೇಳಿಕೊಂಡು, ಆಮೇಲೆ ವಿಚಾರಮಾಡಿ ಸಂತಸಮ್ಮತವಾಗುವಂತೆ, ಲೋಕಸಮ್ಮತವಾಗುವಂತೆ, ರಾಜನೀತಿ-ಶ್ರುತಿ ಇವುಗಳಿಗೆ ಸಾರಭೂತವಾಗುವಂತೆ ಮಾಡತಕ್ಕದ್ದನ್ನು ಮಾಡಬೇಕು. ಅನ್ನಲು, ಭರತನಮೇಲಿನ ಮುನಿಗಳ ಪ್ರೇಮವನ್ನು ನೋಡಿ ರಾಮನಿಗೆ ವಿಶೇಷ ಆನಂದವಾಯಿತು. ಭರತನನ್ನು ಧರ್ಮಧುರಂಧರನೆಂತಲೂ, ತನುಮನೋವಾಣಿಗಳಿಂದ ನಿಜ ಸೇವಕನೆಂತಲೂ ತಿಳಿದು ಗುರುಗಳ ಅಪ್ಪಣೆಯನ್ನನುಸರಿಸಿ ಮಂಜುಲವೂ, ಮೃದುವೂ ಆದ ಮಂಗಲಮೂಲ ವಾಣಿಯಿಂದ ರಾಮಚಂದ್ರನು—“ಮಹಾರಾಜರ, ಹಾಗು ತಂದೆಯ ಆಣೆಮಾಡಿ ಹೇಳುತ್ತೇನೆ, ಭರತನಂಥ ಬಂಧುವು ಜಗತ್ತಿನಲ್ಲಿಲ್ಲವು. ಗುರುಪದ ಕಮಲದಲ್ಲಿ ಭಕ್ತಿಯು

ನ್ನಿಡುವವರೇ ವ್ಯವಹಾರದ ಹಾಗು ಶಾಸ್ತ್ರದ ದೃಷ್ಟಿಯಿಂದ ಮಹದ್ಭಾಗ್ಯಶಾಲಿಗಳಾಗಿರು ವರು. ಮಹಾರಾಜರ ಪ್ರೇಮಕ್ಕೆ ಪಾತ್ರನಾದ ಭರತನ ಭಾಗ್ಯವನ್ನು ವರ್ಣಿಸಲು ಯಾವನು ಸಮರ್ಥನು? ಭರತನು ನನ್ನ ತಮ್ಮನಾಗಿದ್ದು ಆತನ ಮೋರೆಯ ಮುಂದೆಯೇ ನಾನು ಆತನ ಸ್ತುತಿ ಮಾಡುವೆನೆಂಬ ಮಾತು ಲಕ್ಷದಲ್ಲಿ ಬಂದಕೂಡಲೆ ನನ್ನ ಮನಸ್ಸಿಗೆ ಸಂಕೋಚವಾಗುತ್ತದೆ. ಭರತನು ಅಂದಂತೆಯೇ ಮಾಡುವದರಲ್ಲಿ ಒಳಿತಿರುತ್ತದೆ, ಎಂದು ನುಡಿದು ಪ್ರಭುವು ಸುಮ್ಮನೆ ಕುಳಿತನು.

ಭರತನ ಉದಾತ್ತತೆ—ಶ್ರೀರಾಮನ ಈ ಮಾತುಗಳನ್ನು ಕೇಳಿ ಮುನಿಯು ಭರತನಿಗೆ—ವತ್ಸಾ, ಎಲ್ಲ ಸಂಕೋಚಗಳನ್ನು ಬಿಟ್ಟು, ಈ ಕೃಪಾಸಾಗರನಾದ ಪ್ರಿಯಬಂಧುವಿನ ಬಳಿಯಲ್ಲಿ ನಿನ್ನ ಮನಸ್ಸಿನಲ್ಲಿ ಇದ್ದದ್ದನ್ನು ಹೇಳು. ಅನ್ನಲು, ಭರತನು ತನ್ನ ಮೇಲೆಯೇ ಯಾವತ್ತು ಭಾರವು ಬಿದ್ದದ್ದನ್ನು ಅರಿತು ಏನೂ ಮಾತಾಡದಾದನು. ಅವನು ಬರಿಯ ವಿಚಾರವನ್ನೇ ಮಾಡುತ್ತ ನಿಂತುಕೊಂಡನು. ಕಡೆಗೆ ಭರತನು ಪುಲಕಿತ ಗಾತ್ರನಾಗಿ ಸಭೆಯಲ್ಲಿ ಎದ್ದುನಿಂತನು. ಆತನ ಕಮಲನೇತ್ರಗಳಲ್ಲಿ ಪ್ರೇಮಾಶ್ರುಗಳು ಹರಿಯಹತ್ತಿದವು. ಆಗ ಆತನು ಮುನಿವರನನ್ನು ಕುರಿತು—ಮುನಿರಾಜರು ಮೊದಲೇ ನನ್ನ ವಿಚಾರವನ್ನು ಒಪ್ಪಿಕೊಂಡಿರುವರು. ಅದಕ್ಕಿಂತ ಹೆಚ್ಚಿಗೆ ನಾನೇನು ಹೇಳಲಿ! ಅಪರಾಧಿಗಳಮೇಲೆಯೂ ಎಂದೂ ಸಿಟ್ಟಾಗದ ನನ್ನ ಪ್ರಭುವಿನ ಸ್ವಭಾವವನ್ನು ನಾನು ಅರಿತಿರುವೆನು. ನನ್ನ ಮೇಲೆಯಂತೂ ಆತನ ಕೃಪೆಯು ವಿಶೇಷವಾಗಿಯೇ ಇರುವದು. ಆಡುತ್ತಿರುವಾಗೂ ನನ್ನಮೇಲೆ ಸಿಟ್ಟಾಗಿದ್ದದ್ದನ್ನು ನಾನು ಎಂದೂ ನೋಡಿರುವದಿಲ್ಲ. ಪ್ರಭುವಿನ ಪ್ರೇಮಬುದ್ಧಿಯು ನನ್ನ ಹೃದಯಕ್ಕೆ ಗೊತ್ತಿರುವದು. ನಾನು ಆಟದಲ್ಲಿ ಸೋತರೂ ಕಡೆಗೆ ನಾನೇ ಗೆದ್ದಂತೆ ಆತನು ಮಾಡುತ್ತಿದ್ದನು. ನಾನಾದರೂ ಸ್ವಾಮಿಯ ಪ್ರೇಮಸಂಕೋಚಕ್ಕಾಗಿ ಆತನ ಎದುರಿಗೆ ಒಂದು ಅಕ್ಷರವಾದರೂ ಮಾತಾಡಿರುವದಿಲ್ಲ. ಈವರೆಗಾದರೂ ಆತನ ದರ್ಶನದ ವಿಷಯದ ಇಚ್ಛೆಯು ತೃಪ್ತವಾಗದೆ ಈ ನನ್ನ ಕಣ್ಣುಗಳು ಪ್ರೇಮದಿಂದ ಆತನಲ್ಲಿ ನಟ್ಟುಹೋಗಿರುತ್ತವೆ. ನನ್ನಮೇಲಿನ ಪ್ರಭುವಿನ ಇಂಥ ಸ್ನೇಹವನ್ನು ನೋಡಿ ಸಹಿಸಲಾರದೆ ದುರ್ದೈವವು ನನ್ನ ನಡುವೆ ತಾಯನಿಮಿತ್ತವನ್ನುಂಟುಮಾಡಿತು. ಹೀಗನ್ನುವದು ಇಂದು ನನಗೆ ಶೋಭಿಸುವದಿಲ್ಲ; ಯಾಕಂದರೆ ಸ್ವಂತದ ಮತದಿಂದ ಯಾವನು ಸಾಧುವೆಂತಲೂ, ಪವಿತ್ರನೆಂತಲೂ ನಿರ್ಧರಿಸಲ್ಪಟ್ಟಾನು? ತಾಯಿಯು ದುಷ್ಟಳು, ನಾನುಮಾತ್ರ ಸಾಧುವೂ, ಸಜ್ಜನನೂ ಎಂದುನಾನು ಅನ್ನುವದನ್ನು ಮನಸ್ಸಿನಲ್ಲಿ ತಂದಕೂಡಲೆ, ನನ್ನ ದುಷ್ಕೃತನವನ್ನು ಪರಮಾವಧಿಗೆ ಮುಟ್ಟಿಸಿದಂತೆಯಾಗುವದೇ ಸರಿ. ನನ್ನ ದುಃಖದ ಸಂಬಂಧದಿಂದ ಯಾರ ಕಡೆಗೂ ದೋಷವಿರುವದಿಲ್ಲ. ನನ್ನ ದುರ್ದೈವವೆಂಬದು ಅಗಾಧವಾದ ಸಮುದ್ರವಿರುವದು. ಇದೆಲ್ಲ ನನ್ನ ಪಾಪದ ಫಲವಾಗಿದ್ದು, ಅದನ್ನರಿಯದೆ ನನ್ನ ತಾಯಿಗೆ ಕೆಟ್ಟಮಾತುಗಳನ್ನಾಡುವ

ದಿಯೂ ಮಹಾರಾಜನು ಸತ್ಯವನ್ನು ಪಾಲಿಸಿದನು; ತನ್ನ ಪ್ರೇಮಪ್ರತಿಜ್ಞೆಗಾಗಿ ತನ್ನ ದೇಹವನ್ನೂ ತ್ಯಜಿಸಿದನು. ಅಂಥವನ ಅಪ್ಪಣೆಯನ್ನು ಮೀರಲಿಕ್ಕೆ ನನಗೆ ಮನಃಪೂರ್ವಕವಾಗಿ ಕೆಡಕೆನಿಸುತ್ತಿದ್ದರೂ, ಅದಕ್ಕಿಂತಲೂ ನಿನ್ನ ವಿಷಯವಾಗಿ ನನಗೆ ಹೆಚ್ಚು ಸಂಕೋಚವಾಗುವದು. ಇವರಮೇಲೆಯೂ ಗುರುಮಹಾರಾಜರು ಆಜ್ಞಾಪಿಸಿಯೇ ಇರುವರು; ಆದ್ದರಿಂದ ನೀನು ಹೇಳಿದಂತೆಯೇ ನಾನು ಮಾಡಲೇಬೇಕು. ಮನಸ್ಸನ್ನು ಪ್ರಸನ್ನವಾಗಿ ಮಾಡಿಕೊಂಡು ಸಂಕೋಚಪಡದೆ ನೀನು ಮಾತಾಡುಮಾತ್ರ, ನಾನು ಅದರಂತೆಯೇ ಈಗಲೆ ನಡೆಯುವೆನು.

ಸತ್ಯಪ್ರತಿಜ್ಞನಾದ ರಘುವರನ ಈ ಮಾತುಗಳನ್ನು ಕೇಳಿ ಯಾವತ್ತು ಜನರಿಗೆ ಆನಂದವಾಯಿತು; ಆದರೆ ದೇವತೆಗಳುಮಾತ್ರ ರಾಮನು ಎಲ್ಲಿ ಅಯೋಧ್ಯೆಗೆ ಹೋಗುವನೋ ಎಂದು ಚಿಂತಿಸಿ ವಿಘ್ನವನ್ನುಂಟುಮಾಡಬೇಕೆಂದು ಯೋಚಿಸಿದರು; ಆದರೆ ಉಪಾಯವು ತೋಚದ್ದರಿಂದ ರಾಮಭಕ್ತನಾದ ಭರತನಿಗೇ ಶರಣುಹೋಗಿ ತಮ್ಮ ಕಾರ್ಯಮಾಡಬೇಕೆಂದು ಅವರು ನಿಶ್ಚಯಿಸಿದರು; ಯಾಕಂದರೆ ರಾಮನು ಭಕ್ತಾಧೀನನೆಂಬದನ್ನು ಅವರು ಅರಿತಿದ್ದರು. ಇಂದ್ರಾದಿದೇವತೆಗಳ ಈ ನಿಶ್ಚಯವನ್ನು ಕೇಳಿ—"ನಿಮ್ಮ ಭಾಗ್ಯವು ಧನ್ಯವು, ಧನ್ಯವಾದದ್ದು! ಭರತ ಚರಣದಲ್ಲಿ ಪ್ರೇಮವಿರುವದೇ ಜಗತ್ತಿನಲ್ಲಿ ಎಲ್ಲ ಸುಮಂಗಲಗಳ ಮೂಲವಾಗಿರುವದು. ಸೀತಾಪತಿಯು ಸೇವಕರ ಸೇವೆಯೇ ಶತ ಕಾಮಧೇನುಗಳಂತೆ ಶ್ರೇಯಸ್ಕರವಾದದ್ದು. ಆದ್ದರಿಂದ ದೇವತೆಗಳಿರಾ, ಭರತನನ್ನೇ ರಾಮನ ಅಪರ ಪ್ರತಿಮೆಯೆಂದು ತಿಳಿಯಿರಿ, ಅಂದರೆ ನಿಮಗೆ ಭಯವೇ ಇಲ್ಲದಾಗುವದು, ಎಂದು ಹೇಳಿದನು. ಈಮೆರೆಗೆ ದೇವತೆಗಳ ಹಾಗು ದೇವಗುರುವಿನ ಐಕಮತ್ಯವನ್ನೂ, ದೇವತೆಗಳ ದುಃಖವನ್ನೂ ಕೇಳಿ, ಅಂತರ್ಯಾಮಿಯಾದ ಪ್ರಭುವಿಗೆ ಸಂಕೋಚವಾಯಿತು. ತನ್ನ ತಲೆಯಮೇಲೆಯೇ ಭಾರವಿರುವದೆಂದು ಭರತನು ಕೋಟ್ಯವಧಿ ಕಲ್ಪನೆಗಳನ್ನು ಮಾಡತೊಡಗಿದನು. ವಿಚಾರಮಾಡುತ್ತಮಾಡುತ್ತ ಆತನು ಮನಸ್ಸಿನಲ್ಲಿ—ರಾಮನ ಆಜ್ಞೆಯಲ್ಲಿಯೇ ನನ್ನ ಕಲ್ಯಾಣವಿರುವದು. ಶ್ರೀರಾಮನು ತನ್ನ ಪ್ರತಿಜ್ಞೆಯನ್ನು ಬಿಟ್ಟುಕೊಟ್ಟು ನನ್ನ ಪ್ರತಿಜ್ಞೆಯನ್ನೇ ಕೊನೆಗಾಣಿಸಿದ ಆತನ ಪ್ರೇಮದ ಹಾಗು ಅಚ್ಛೆಯ ಕೃತ್ಯವು ಅಲ್ಪಸ್ವಲ್ಪವಾದದ್ದಲ್ಲ. ಎಂದು ವಿಚಾರಮಾಡಿ ಕಮಲಹಸ್ತಯುಗಲವನ್ನು ಜೋಡಿಸಿ ಪ್ರಣಾಮಪೂರ್ವಕವಾಗಿ ಮಾತಾಡತೊಡಗಿದನು.—ಎಲೈ ದಯಾಸಾಗರನಾದ ಅಂತರ್ಯಾಮಿ ಪ್ರಭುವೇ, ಇನ್ನು ಮಾತಾಡುವದಾದರೂ ಏನು? ಗುರುವು ಪ್ರಸನ್ನನು, ಒಡೆಯನು ಅನುಕೂಲನು, ಅಂದಬಳಿಕ ನನ್ನ ಮನಃಕಲ್ಪಿತ ದಾರುಣದುಃಖದ ಅಂತವಾಯಿತು. ಇನ್ನು ಲೋಕಕಲ್ಯಾಣವಾಗಿ, ಪ್ರಭುವಿನ ಚಿತ್ತವು ಕ್ಷೋಭಿಸದಂತೆ ದಯಾವಂತನು ನಡೆದುಕೊಳ್ಳತಕ್ಕದ್ದು. ಕೇವಲ ಸ್ವಾರ್ಥಬುದ್ಧಿಯಿಂದ ಒಡೆಯನಿಗೆ ಭಿಡೆಗೆ ಹಾಕುವ ಸೇವಕನ ಬುದ್ಧಿಯು ನೀಚವೆಂದು ತಿಳಿಯಬೇಕು. ಸೇವ

ಕನ ಸ್ವಾರ್ಥವೆಂದರೆ ಒಡೆಯನ ಸೇವೆಯು. ಆ ಸೇವೆಯನ್ನು ಆತನು ಅವಾಂತರ ಸ್ವಾರ್ಥಗಳನ್ನೆಲ್ಲ ಕಾಲಿಲಿ ಒದೆದು ಮಾಡಬೇಕು. ನಾಥನು ತಿರುಗಿ ಅಯೋಧ್ಯೆಗೆ ಬರು ವಲ್ಲಿ ಎಲ್ಲರ ಸ್ವಾರ್ಥವಿರುತ್ತದೆ; ಆದರೆ ಆತನ ಅಪ್ಪಣೆಯನ್ನು ಪಾಲಿಸುವದು ಅದಕ್ಕಿಂತ ಕೋಟಿಪಟ್ಟು ಶ್ರೇಷ್ಠವಾಗಿರುವದು. ನನ್ನ ಮತದಿಂದ ಸ್ವಾರ್ಥದ ಹಾಗು ಪರಮಾ ರ್ಥವ ನಿಷ್ಕರ್ಷವು ಹೀಗೆಯೇ ಇರುವದು. ಅದೇ ಸುಕೃತಗಳ ಫಲವೂ, ಸದ್ಗತಿಯ ಶೃಂಗಾರವೂ ಆಗಿರುವದು. ಭಗವನ್, ನನ್ನ ಪ್ರಾರ್ಥನೆಯನ್ನು ಕೇಳಿ ಆಮೇಲೆ ತಮ್ಮ ಮನಸ್ಸಿಗೆ ಉಚಿತವಾಗಿ ತೋರಿದಂತೆ ಮಾಡಬೇಕು. ಅಭಿಷೇಕದ ಯಾವತ್ತು ಸಾಮಗ್ರಿ ಗಳನ್ನು ಸಿದ್ಧಮಾಡಿ ತಂದಿರುವದು. ಪ್ರಭುವಿನ ಮನಸ್ಸಿಗೆ ಬಂದರೆ ಅವನ್ನು ಸಫಲ ವಾಗಿ ಮಾಡಬೇಕು. ಶತ್ರುಘ್ನನೊಡನೆ ನನ್ನನ್ನು ವನಕ್ಕೆ ಕಳಿಸಿ ಎಲ್ಲರನ್ನೂ ಸನಾಥ ರಾಗ ಮಾಡಬೇಕು. ಇಲ್ಲದಿದ್ದರೆ ಲಕ್ಷ್ಮಣ-ಶತ್ರುಘ್ನರಿಬ್ಬರನ್ನೂ ಹಿಂದಿರುಗಿ ಕಳಿಸಿ ನನ್ನ ನ್ನು ಸಂಗಡ ಕರಕೊಂಡು ಹೋಗಬೇಕು. ಇಲ್ಲದಿದ್ದರೆ ನಾವು ಮೂವರೂ ಬಂಧು ಗಳು ವನಕ್ಕೆ ಹೋಗುವೆವು. ಜಾನಕೀ ಸಹಿತವಾಗಿ ರಘುನಾಥನು ಹಿಂದಿರುಗಬೇಕು. ಒಟ್ಟಿಗೆ ಕರುಣಾರ್ಣವ ಪ್ರಭುವಿನ ಮನಸ್ಸು ಸುಪ್ರಸನ್ನವಾಗುವಂತೆ ಮಾಡಬೇಕು. ಪ್ರಭುವು ನನ್ನ ತಲೆಯಮೇಲೆ ಎಲ್ಲ ಭಾರವನ್ನು ಹಾಕಿದನು; ಆದರೆ ನನಗಂತು ಧರ್ಮ ನೀತಿಗಳ ಕಲ್ಪನೆಯೇ ಮೂಲತಃ ಇರುವದಿಲ್ಲ. ನಾನು ಮಾತಾಡುವದನ್ನೆಲ್ಲ ಸ್ವಾರ್ಥಬು ದ್ಧಿಯಿಂದಲೇ ಮಾತಾಡುವವನು; ಯಾಕಂದರೆ ಆರ್ತರ ಚಿತ್ತದಲ್ಲಿ ಸದಸದ್ವಿಚಾರಶಕ್ತಿಯು ಉಳಿಯುವದಿಲ್ಲ ಎಲೈ ದಯಾನಿಧಿಯೇ, ಪ್ರಭುವಿನ ಮನಸ್ಸಿಗೆ ಸಂಕೋಚವಾಗದ ಮತವೇ ನನಗೆ ಮಾನ್ಯವಾಗಿರುವದು. ಪ್ರಭುಗಳ ಪಾದಸಾಕ್ಷಿಯಿಂದ ನಾನು ನಿಜವಾಗಿ ಹೇಳುವೆನು, ಪ್ರಭುಗಳು ಪ್ರಸನ್ನಮನಸ್ಸಿನಿಂದ ಸಂಕೋಚವಿಲ್ಲದೆ ಲೋಕಕಲ್ಯಾಣವು ಸಾಧಿಸುವಂತೆ ಎಲ್ಲರನ್ನು ಆಜ್ಞಾಪಿಸಬೇಕು. ಅದರಿಂದಲೇ ದೂರವಾಗದ ದುಃಖಗಳು ದೂರವಾಗುವವು.

ಭರತನ ಈ ಪವಿತ್ರವಾಣಿಯನ್ನು ಕೇಳಿದೇವತೆಗಳಿಗೆ ಆನಂದವಾಗಿ "ಸಾಧು" "ಸಾಧು" ಎಂದು ಧನ್ಯವಾದವನ್ನು ಮಾಡಿ ಹೂ ಮಳೆಗರೆದರು. ಅಯೋಧ್ಯಾವಾಸಿಗಳು ಮುಂದು ಗಾಣದಾದರು. ತಪಸ್ವಿಗಳ ಹಾಗು ವನವಾಸಿಗಳ ಮನಸ್ಸಿಗೆ ಅತ್ಯಾನಂದವಾಯಿತು. ರಘುವರನಿಗೆ ಸಂಕೋಚವಾಗಿ ಸುಮ್ಮನೆ ಕುಳಿತನು. ಪ್ರಭುವಿನ ಆ ಸ್ಥಿತಿಯನ್ನು ನೋಡಿ ಯಾವತ್ತು ಸಭೆಗೆ ಶೋಕವಾಯಿತು. ಇದೇ ಸಂಧಿಯಲ್ಲಿ ಜನಕರಾಜನು ರಾಮದರ್ಶನಕ್ಕಾಗಿ ಬಂದ ವರ್ತಮಾನವನ್ನು ದೂತರು ಹೇಳಿದರು. ಆಗ ವಸಿಷ್ಠರು ಜನಕನ ಕ್ಷೇಮಸಮಾಚಾರವನ್ನು ವಿಚಾರಿಸಲು, ದೂತರು—"ಮಹಾರಾಜ, ಸರಕಾರಸ ವಾರಿಯ ಕ್ಷೇಮವನ್ನು ತಾವು ಇಷ್ಟು ಕನಿಕರದಿಂದ ಕೇಳುತ್ತಿರುವದೇ ಅವರ ಕ್ಷೇಮದ ದೊಡ್ಡ ಕಾರಣವಾಗಿರುತ್ತದೆ. ದಶರಥಮಹಾರಾಜರು ದಿವಂಗತರಾದ ದಿವಸವೇ ಎಲ್ಲರ

ಶ್ರೀಮುಸವಡಿಚಾರವು ಮುಗಿಯಿತು. ಮಹಾರಾಜರ ಮರಣವಾರ್ತೆಯನ್ನು ಕೇಳಿದ ಕೂಡಲೆ ಜನಕನ ರಾಜ್ಯದೊಳಗಿನ ಜನರೆಲ್ಲ ದುಃಖದಿಂದ ಹುಚ್ಚಾಗಿ ಹೋದರು. ಆಗಿನ ಕಾಲದ ಜನರ ಸ್ಥಿತಿಯನ್ನು ನೋಡಿದವರಿಗೆ ಆತನ "ವಿದೇಹ,, ಎಂಬ ಹೆಸರು ಸಾರ್ಥಕವಾಗಿ ತೋರಿರಲಿಕ್ಕಿಲ್ಲ. ರಾಣಿಯು ಕೌಟಿಲ್ಯವನ್ನು ಕೇಳಿ ಆತನಿಗೆ ಏನೂ ತೋಚದಾಯಿತು. ರಘುವರನಿಗೆ ವನವಾಸವು, ಭರತನಿಗೆ ರಾಜ್ಯವು ಎಂಬದನ್ನು ಕೇಳಿ ಜನಕನ ಮನಸ್ಸಿನಲ್ಲಿ ದುಃಖವು ಬಾಧಿಸತೊಡಗಿತು. ಈ ಸಂಬಂಧದಿಂದ ಜನಕನು ತನ್ನ ಸಚಿವರೊಡನೆ ಆಲೋಚಿಸಿ ಅಯೋಧ್ಯೆಗೆ ಚತುರರಾದ ನಾಲ್ಕುಜನ ಗೂಢಚಾರರನ್ನು ಕಳಿಸಿದನು. ಆ ದೂತರು ಅಲ್ಲಿಯ ಸಂಗತಿಯನ್ನೆಲ್ಲ ಅರಿತು ಕಣ್ಣುಮುಟ್ಟಿ ನೋಡಿ ಬಂದು ಭರತನ ಸ್ಥಿತಿಯನ್ನೂ ಕೃತಿಯನ್ನೂ ಹೇಳಲು, ಜನಕನೇ ಮೊದಲಾದವರು ದುಃಖದಿಂದಲೂ, ಪ್ರೇಮದಿಂದಲೂ ವಿಹ್ವಲರಾದರು. ಜನಕನು ಧೈರ್ಯ ತಾಳಿ ಭರತನ ದೊಡ್ಡಿಸ್ತನವನ್ನು ಹೊಗಳಹತ್ತಿದನು. ಆತನು ರಾಜ್ಯದ ಹಾಗು ರಾಜಧಾನಿಯ ವ್ಯವಸ್ಥೆಯನ್ನು ಮಾಡಿ ಪರಿವಾರದೊಡನೆ ಮಿಥಿಲೆಯಿಂದ ಹೊರಟು ಹಾದಿಯಲ್ಲಿ ಎಲ್ಲಿಯೂ ನಿಲ್ಲದೆ ಈದಿನ ಪ್ರಾತಃಕಾಲದಲ್ಲಿ ಪ್ರಯಾಗದಲ್ಲಿ ಸ್ನಾನಮಾಡಿ ಎಲ್ಲರೂ ಯಮುನೆಯನ್ನು ದಾಟಹತ್ತಿರು, ನಾವು ಸುದ್ದಿಯನ್ನು ಹೇಳಲಿಕ್ಕೆ ಬಂದೆವು. ಎಂದು ಕೇಳಿ ವಿನಯದಿಂದ ಮುಜರೆ ಮಾಡಿದರು. ಆಗ ವಸಿಷ್ಠರು ಏಳೆಂಟುಜನ ಭಿಲ್ಲರನ್ನು ಸಂಗಡಕೊಟ್ಟು ಆ ದೂತರನ್ನು ಕಳಿಸಿದರು. ಜನಕನ ಆಗಮನವನ್ನು ಕೇಳಿ ಅಯೋಧ್ಯೆಯ ಜನರಿಗೆಲ್ಲ ಆನಂದವಾಯಿತು; ಆದರೆ ರಘುರಾಜನಿಗೆ ಮಾತ್ರ ಸಂಕಟವು ಉತ್ಪನ್ನವಾಯಿತು. ಕುಟಿಲಕೈಕೇಯಿಯು ಪಶ್ಚಾತ್ತಾಪದಿಂದ ಕೊರಗಹತ್ತಿದಳು. ಜನಕನು ಪರಿವಾರದೊಡನೆ ಪಯಸ್ವಿನೀತೀರಕ್ಕೆ ಬಂದ ಸುದ್ದಿಯನ್ನು ದೂತರು ಹೇಳಲು, ಶ್ರೀರಾಮನು ಶತ್ರುಘ್ನನನ್ನು ಸೀತೆಯ ಸಂರಕ್ಷಣಕ್ಕಾಗಿ ನಿಯಮಿಸಿ, ವಸಿಷ್ಠರನ್ನು ಮುಂದೆಮಾಡಿಕೊಂಡು ಜನಕನನ್ನು ಕರೆತರುವದಕ್ಕಾಗಿ ಹೊರಟನು. ಉಭಯ ಪಕ್ಷದವರೂ ತಾರತಮ್ಯದಂತೆ ಒಬ್ಬರನ್ನೊಬ್ಬರು ಕಾಣಲು, ದಶರಥನ ಮರಣದ ದುಃಖವು ಎಲ್ಲರನ್ನು ಆವರಿಸಿತು. ಜನಕನು ರಾಮನ ಆಶ್ರಮಕ್ಕೆ ಪರಿವಾರದೊಡನೆ ಬಂದು ದಶರಥನ ರಾಣಿಯರನ್ನು ಕಂಡನು. ಆಗಿನ ಕರುಣಾಮಯ ಸ್ಥಿತಿಯನ್ನು ವರ್ಣಿಸುವದು ಶಕ್ಯವಲ್ಲ.

ಇಂಥ ದುಃಖಮಯ ಪ್ರಸಂಗದಲ್ಲಿ ವಸಿಷ್ಠರು ಜನಕನನ್ನು ಕುರಿತು— ರಾಜಾ! ಯಾವನ ಜ್ಞಾನ ಸೂರ್ಯನು ಭವಸಾಗರ ರೂಪ ರಾತ್ರಿಯನ್ನು ನಾಶಗೊಳಿಸಿ ತನ್ನ ವಚನರೂಪ ಕಿರಣಗಳಿಂದ ಮುನಿರೂಪ ಕಮಲಗಳನ್ನು ಅರಳಿಸುವನೋ, ಅಂಥ ನಿನ್ನ ನೆರಳಿಗಾದರೂ ಮಮತೆಯು ನಿಲ್ಲಬಹುದೋ? ಆದರೆ ಎಲ್ಲವೂ ಸೀತಾರಾಮ-ಪ್ರೇಮದ ಪ್ರಭಾವವಿರುವದು. ವಿಷಯಿಗಳು, ಸಾಧಕರು, ಜ್ಞಾನನಿಷ್ಠರಾದ ಸಿದ್ಧರು ಎಂಬ ತ್ರಿವಿಧ ಜೀವರು ಜಗತ್ತಿನಲ್ಲಿ ಇರುವರೆಂದು ವೇದದಲ್ಲಿ ಹೇಳಿರುವದು; ಆದರೆ ರಾಮನ

ಪ್ರೇಮದಲ್ಲಿ ಯಾರ ಮನಸ್ಸು ಗುಂಗಾಗಿ ಹೋಗಿರುವದೋ, ಅವರಿಗೆಮಾತ್ರ ಸಂತ ಮಂಡಲದಲ್ಲಿ ಮಾನವಿರುವದು. ನಾವಿಕನಿಲ್ಲದ ನಾವಿನಂತೆ ರಾಮಪ್ರೇಮ ವಿರಹಿತರ ಜ್ಞಾನವು ಶೋಭಿಸುವದಿಲ್ಲವು, ಎಂದು ಹೇಳಿ ಆತನನ್ನು ಹಲವು ಬಗೆಯಾಗಿ ಸಮಾಧಾನಪಡಿಸಿದರು. ಬಳಿಕ ರಾಮಘಾಟಿನಲ್ಲಿ ಎಲ್ಲರ ಸ್ನಾನವಾಯಿತು. ಯಾವತ್ತು ಸ್ತ್ರೀಪುರುಷರು ಶೋಕಗ್ರಸ್ತರಾಡದ್ದರಿಂದ ಅವರೆಲ್ಲರು ಆ ದಿನವನ್ನು ನಿರ್ಜಲ ಉಪೋಷಣದಿಂದ ಕಳೆದರು. ಸೂರ್ಯವಂಶದ ಗುರುಗಳಾದ ವಸಿಷ್ಠರೂ, ಜನಕನ ಪುರೋಹಿತರಾದ ಶತಾನಂದರೂ, ಪರಮಾರ್ಥವ ಶೋಧಮಾಡಿರುವಂಥ ಅಯೋಧ್ಯೆಯೊಳಗಿನ ಹಾಗು ಮಿಥಿಲೆಯೊಳಗಿನ ಬ್ರಾಹ್ಮಣರೂ ವಟವೃಕ್ಷದ ಬುಡದಲ್ಲಿ ಸ್ನಾನಮಾಡಿ ಕೂತಿರುವ ಜನರನ್ನು ಕುರಿತು ಧರ್ಮ-ನೀತಿ-ವೈರಾಗ್ಯ-ವಿವೇಕಪರವಾದ ಅನೇಕ ಉಪದೇಶಗಳನ್ನು ಮಾಡಿದರು. ವಿಶ್ವಾಮಿತ್ರನು ತನ್ನ ಸುಂದರವಾಣಿಯಿಂದ ಪುರಾಣೇತಿಹಾಸಗಳ ವ್ಯಾಖ್ಯಸಮಾಡಿ ಸಭೆಯನ್ನು ಸಮಾಧಾನಗೊಳಿಸಿದನು. ಹೊತ್ತು ಬಹಳವಾದದ್ದರಿಂದ ಶ್ರೀರಾಮಚಂದ್ರನು-ಮಹಾರಾಜ, ನಿನ್ನೆ ಜನರು ಅಖಂಡ ಉಪೋಷಣ ಮಾಡಿರುವರು, ಎಂದು ಸೂಚಿಸಲು, ವಿಶ್ವಾಮಿತ್ರರು—ಅಹುದು, ರಘುರಾಜನ ಮಾತು ಸತ್ಯವು. ಎರಡುವರೆಪ್ರಹರ ಹೊತ್ತಾಯಿತು ಎಂದು ಹೇಳಿದರು. ಜನಕರಾಜನು ವಿಶ್ವಾಮಿತ್ರನ ಧೋರಣವನ್ನರಿತು— "ಇಲ್ಲಿ ಅನ್ನಾಹಾರವು ಪ್ರಶಸ್ತವಲ್ಲವೆಂ"ದು ಹೇಳಿದನು. ಅದು ಎಲ್ಲರಿಗೂ ಮಾನ್ಯವಾಗಿ ಜನರು ಸ್ನಾನಕ್ಕೆ ಎದ್ದರು. ಅಷ್ಟರಲ್ಲಿ ವನದಲ್ಲಿರುವ ಭಿಲ್ಲರೇ ಮೊದಲಾದವರು ಫಲಮೂಲಾದಿಗಳನ್ನು ತಕ್ಕೊಂಡು ಬಂದರು. ಎಲ್ಲರ ಸ್ನಾನಾದಿಗಳು ತೀರಿದ ಬಳಿಕ ರಾಮ-ಜನಕ-ವಸಿಷ್ಠರ ಅಪ್ಪಣೆಪಡೆದು ದಟ್ಟವಾದ ನೆರಳು ನೋಡಿ ಜನರು ಅಲ್ಲಲ್ಲಿ ಆನಂದದಿಂದ ಇಳಿದುಕೊಳ್ಳಹತ್ತಿದರು. ಅಷ್ಟರಲ್ಲಿ ರಾಮಗುರುವಾದ ವಸಿಷ್ಠಋಷಿಗಳು ಪವಿತ್ರವೂ, ಸುಂದರವೂ, ಅಮೃತದಂತೆ ಮಧುರವೂ ಆದ ಅನೇಕ ಪ್ರಕಾರದ ಕಂದ ಮೂಲ ಫಲಗಳನ್ನೂ, ಕಾಯಿಪಲ್ಲೆಗಳನ್ನೂ ಮೊಟ್ಟೆ ಮೊಟ್ಟೆಯಾಗಿ ಎಲ್ಲರ ಕಡೆಗೆ ಅವರದಿಂದ ಕಳಿಸಲು, ಜನರು ದೇವ, ಪಿತೃ, ಆಚಾರ್ಯ, ಅತಿಥಿ ಇವರ ಪೂಜನಮಾಡಿ ಫಲಾಹಾರವನ್ನು ಮಾಡತೊಡಗಿದರು.

ಈ ಮೇರೆಗೆ ನಾಲ್ಕು ದಿನಗಳು ಕಳೆದು ಹೋದವು. ನಿತ್ಯ ರಾಮದರ್ಶನದಿಂದ ಜನರು ಸುಖಿಗಳಾಗುತ್ತಿದ್ದರು. ಸೀತಾರಾಮರನ್ನು ಅಗಲಿ ಹೋಗಬಾರದೆಂದು ಉಭಯ ಪಕ್ಷದ ಜನರೂ ಇಚ್ಛಿಸುತ್ತಿದ್ದರು. ಸೀತಾರಾಮರ ಸಹವಾಸದಲ್ಲಿ ವನವಾಸವೂ ಕೋಟ್ಯವಧಿ ಸ್ವರ್ಗಗಳಿಗಿಂತ ಸುಖಕರವಾಗಿರುವದು. ಸೀತಾರಾಮರನ್ನು ಅಗಲಿ ಹೋಗಲಿಚ್ಛಿಸುವವರು ದುರ್ದೈವಿಗಳೇ ಸರಿ. ದೈವಾನುಕೂಲವಿದ್ದರೆಯೋ ರಾಮನೊಡನೆ ವನ ವಸ್ತಿಯುವದಕ್ಕೆ ಅಸ್ಪದವು ದೊರೆತೀತು. ತ್ರಿಕಾಲ ಗಂಗಾಸ್ನಾನ, ರಾಮದರ್ಶನದ

ಆನಂದೋತ್ಸವಮಾಲಿಕೆಯು, ರಾಮಪರ್ವತದೊಳಗಿನ ಅರಣ್ಯಗಳಲ್ಲಿಯೂ, ತಪಸ್ವಿಗಳ ಆಶ್ರಮದಲ್ಲಿಯೂ ಸಂಚಾರ, ಅಮೃತತುಲ್ಯವಾದ ಕಂದಮೂಲ ಫಲಗಳ ಆಹಾರ ಈ ಎಲ್ಲ ಬಗೆಯ ಸುಖಗಳಲ್ಲಿ ಹದಿನಾಲ್ಕು ವರ್ಷಗಳು ಒಂದು ಪಳದಂತೆ ಆಗಿ, ಅವು ಯಾವಾಗ ಕಳೆದುಹೋದಾವೆಂಬದು ಕೂಡ ಲಕ್ಷಕ್ಕೆ ಬರಲಿಕ್ಕಿಲ್ಲವೆಂದು ಉಭಯ ಪಕ್ಷದ ಜನರು ಆಡಿಕೊಳ್ಳುತ್ತಿದ್ದರು; ಆದರೆ ಇಂಥ ಸುಖಕ್ಕೆ ಎಲ್ಲರೂ ಹೇಗೆ ಪಾತ್ರರಾಗಬೇಕು?

ಹೀಗೆ ಶ್ರೀರಾಮ ಚರಣದಲ್ಲಿ ಅನುರಕ್ತರಾದದ್ದರಿಂದ ಎರಡೂ ಸಮಾಜದ ಜನರಲ್ಲಿ ಸಹಜವಾಗಿ ಈ ಬಗೆಯ ಉದ್ಗಾರಗಳು ಹೊರಡುತ್ತಿದ್ದವು. ಆ ಕಾಲಕ್ಕೆ ಸೀತೆಯ ತಾಯಿಯಾದ ಸುಲೋಚನೆಯು ಅವಸರ ನೋಡಿ ರಾಮನ ತಾಯಂದಿರನ್ನು ಕಾಣುವದಕ್ಕಾಗಿ ಹೋದಳು. ಆಗ ಯಾವತ್ತು ಸ್ತ್ರೀಯರು ಅತ್ತಕಡೆಗೆ ಹೊರಳಿದರು. ಆಗ ಕೌಸಲ್ಯೆಯು ಅವರ ಆದರ ಸತ್ಕಾರವನ್ನುಮಾಡಿ ಕುಳಿತುಕೊಳ್ಳಲಿಕ್ಕೆ ಪ್ರಸಂಗಾನುಸಾರವಾಗಿಆಸನಗಳನ್ನು ಕೊಟ್ಟಳು. ಆಗಿನಕಾಲದ ಉಭಯ ಪಕ್ಷದವರ ಶೀಲವನ್ನೂ,ಪ್ರೇಮಾದರಗಳನ್ನೂ ನೋಡಿ ಕಠೋರವಾದ ವಜ್ರವು ಕೂಡ ಕರಗಿರಬಹುದು. ದಶರಥ ಪತ್ನಿಯರ ದುಃಖದ ಸ್ಥಿತಿಯನ್ನು ನೋಡಿ ಆ ಜನಕ ಪತ್ನಿಯೇ ಮೊದಲಾದವರಿಗೆ ಬಹಳ ದುಃಖವಾಯಿತು. ಆಗ ಜನಕ ಪತ್ನಿಯು ಬ್ರಹ್ಮನ ವಿಲಕ್ಷಣವಾದ ಸೃಷ್ಟಿಯ ಕ್ರಮವನ್ನು ಕುರಿತು ಮಾತಾಡಲು, ಸುಮಿತ್ರಾ ರಾಣಿಯು— "ಈ ಬ್ರಹ್ಮದೇವನ ಕೃತಿಗಳು ಅತಿವಿಚಿತ್ರಗಳೂ, ವಿಪರೀತಗಳೂ ಆಗಿರುವವು. ಆತನು ಸ್ವತಃ ಹುಟ್ಟಿಸುವನು; ಸ್ವತಃ ರಕ್ಷಿಸುವನು; ಸಂಹಾರವನ್ನಾದರೂ ಸ್ವತಃ ತಾನೇ ಮಾಡುವನು. ಹುಡುಗರ ಆಟದಂತೆ ಬ್ರಹ್ಮನ ಈ ಕೃತಿಯಿರುವದು," ಎಂದು ಹೇಳಿದಳು. ಆಗ ರಾಮಜನನಿಯಾದ ಕೌಸಲ್ಯೆಯು—"ಇದರಲ್ಲಿ ದೋಷವು ಯಾರ ಕಡೆಗೂ ಇರುವದಿಲ್ಲ. ಸುಖ—ದುಃಖ—ಲಾಭ—ಹಾನಿಗಳು ದೈವಾಧೀನವಾಗಿರುವವು. ಕರ್ಮದ ಗತಿಯು ವಿಚಿತ್ರವಾಗಿದ್ದು, ಬ್ರಹ್ಮನಿಗೆ ಅದರ ಜ್ಞಾನವಿರುವದರಿಂದ ಅದಕ್ಕನುಸರಿಸಿ ಎಲ್ಲ ಶುಭಾಶುಭ ಫಲಗಳನ್ನು ಮಾತ್ರ ಆತನು ಕೊಡುತ್ತಿರುವನು. ಮೂಲತಃ ಪರಮೇಶ್ವರೀ ಇಚ್ಛೆಯೇ ಎಲ್ಲರ ತಲೆಯಮೇಲಿರುವದರಿಂದ, ಉತ್ಪತ್ತಿ—ಸ್ಥಿತಿ—ಲಯಗಳು ಒಳ್ಳೆಯವರಿಗೂ ಇರುತ್ತವೆ, ಕೆಟ್ಟವರಿಗೂ ಇರುತ್ತವೆ; ಆದ್ದರಿಂದ ದೇವೀ ಸುನಯನೇ, ಮಾಯಾ ಜಾಲದಲ್ಲಿ ಸಿಕ್ಕು ತಳಮಳಿಸುವದು ವ್ಯರ್ಥವು. ಬ್ರಹ್ಮದೇವನ ಈ ಸೃಷ್ಟಿಕ್ರಮವು ಅನಾದಿಕಾಲದಿಂದ್ದ ಹೀಗೆಯೇ ಅವಿಶ್ರಾಂತವಾಗಿ ನಡೆದು ಬಂದಿರುತ್ತದೆ. ಅವ್ವಾ, ಯಜಮಾನರ ಜೀವಂತಸ್ಥಿತಿಯನ್ನೂ ಸಾವನ್ನೂ ಮನಸ್ಸಿನಲ್ಲಿ ತಂದು ಶೋಕಮಾಡುವದು ಕೇವಲ ತನ್ನ ಹಾನಿಗಾಗಿಯೇ ಸರಿ! ರಾಮ—ಲಕ್ಷ್ಮಣ—ಸೀತೆಯರು ಸಂತೋಷದಿಂದ ವನಕ್ಕೆ ಹೋಗಲಿ; ಆದರೆ ರಾಮನಮೇಲಿರುವ ಭರತನ ಅಕೃತ್ರಿಮವಾದ ಅಪಾರ ಪ್ರೇಮವನ್ನು ನೋಡಿದರೆ, ರಾಮನ ಈ

ವನವಾಸದಿಂದ ಭರತನ ಗತಿಯು ಏನಾಗುವದೋ ಎಂಬದೊಂದೇ ಚಿಂತೆಯು ನನಗಿರು ತ್ತದೆ. ದೇವರ ದಯದಿಂದಲೂ, ನಿಮ್ಮೆಲ್ಲರ ಆಶೀರ್ವಾದದಿಂದಲೂ ನಮ್ಮ ಮಕ್ಕಳೂ ಸೊಸೆಂದಿರೂ ಗಂಗಾಜಲದಂತೆ ನಿರ್ಮಲರಾಗಿರುವರು. ಅವ್ವಾ, ನಾನು ರಾಮನ ಆಣೆಯನ್ನು ಎಂದೂ ಇಟ್ಟುಕೊಳ್ಳುವದಿಲ್ಲ; ಆದರೆ ಅದನ್ನೂ ಈಗ ಇಟ್ಟುಕೊಂಡು ಸತ್ಯವಾಗಿ ಹೇಳುತ್ತೇನೆ, ಭರತನ ಶೀಲ ಗುಣ, ವಿನಯ, ತೊಡ್ಡಿಸ್ತಿಕೆ, ಬಂಧುಪ್ರೇಮ, ವಿಶ್ವಾಸ, ಸೌಜನ್ಯಗಳನ್ನು ವರ್ಣಿಸುವಾಗ ಸರಸ್ವತಿಯು ಬುದ್ಧಿಯು ಕುಂಠಿತವಾದೀತು. ನಮ್ಮ ಭರತನು ಕುಲದೀಪಕನಾಗುವನು. ಯಜಮಾನರಾ ದರೂ ಮೇಲೆ ಮೇಲೆ ಹೀಗೆಯೇ ಅನ್ನುತ್ತಿದ್ದರು ಒರೆಗೆ ಹಚ್ಚುವ ಪ್ರಸಂಗ ಬಂದಾಗಲೇ ಭರತನ ಬೆಲೆಯು ಗೊತ್ತಾಗುವದೆಂದು ಅವರು ಹೇಳುತ್ತಿದ್ದರು. ಈ ಮಾತನ್ನು ನಾನು ಬಾಯಿಂದ ಆಡಿತೋರಿಸುವದು ಅನುಚಿತವೇ ಸರಿ; ಆದರೆ ದುಃಖಪ್ರೇಮಗಳ ಮುಂದೆ ಜಾಣತನದ ಆಟವೇನು ನಡೆಯುವದಿಲ್ಲವು. ಹೇ ರಾಣೀ, ಮಿಥಿಲೇಶ್ವರೀ, ವಿವೇಕಸಾಗರನಾದ ಜನಕರಾಜನು ನಿನ್ನ ಪ್ರಾಣೇಶ್ವರನಾಗಿರಲು, ನಾನು ಹೆಚ್ಚಿಗೆ ಹೇಳುವದೇನು? ನೀನು ಸಂಧಿಸಾಧಿಸಿ ನಿಮ್ಮ ಯಜಮಾನರಿಗೆ ಹೇಳಿ, ಲಕ್ಷ್ಮಣನನ್ನು ಇಟ್ಟುಕೊಂಡು ಭರತನನ್ನು ರಾಮನ ಸಂಗಡ ವನವಾಸಕ್ಕೆ ಕಳಿಸುವಂತೆ ಮಾಡಿರಿ; ಯಾಕಂದರೆ ರಾಮನನ್ನು ಅಗಲಿದರೆ ಭರತನಗತಿಯು ಏನಾಗುವದೋ ಎಂಬಚಿಂತೆಯು ನನಗೆ ಬಹಳ ಇರುತ್ತದೆ. ಆತನು ರಾಮನನ್ನು ಅಗಲಿಇರುವದು ನನಗಂತು ನೆಟ್ಟಗೆ ಕಾಣುವದಿಲ್ಲ. ಅನ್ನಲು. ಕೌಸಲ್ಯೆಯ ಈ ಪ್ರೇಮವನ್ನು ನೋಡಿ ಆಕೆಯ ಕನಿಕರದ ಮಾತುಗಳನ್ನು ಕೇಳಿ ಯಾವತ್ತು ಅಂತಃಪುರವು ಕರುಣಾರಸದಲ್ಲಿ ನಿಮಗ್ನವಾ ಯಿತು. ಸಿದ್ಧರೂ, ಯೋಗಿಗಳೂ, ಮುನಿಗಳೂ ಕೂಡ ಸ್ನೇಹಶಿಥಿಲರಾದರು. ಆಕಾ ಶದಿಂದ ಪುಷ್ಪವೃಷ್ಟಿಯಾಗಿ "ಧನ್ಯ,, "ಧನ್ಯ,, ಎಂಬ ಧ್ವನಿಯು ಉಂಟಾಗಹತ್ತಿತು. ಆಗ ಸುಮಿತ್ರೆಯು ಧೈರ್ಯದಿಂದ ಸುನಯನೆಯನ್ನು ಕುರಿತು—" ದೇವೀ, ಈಗ ಎರಡುವ ಹರರಾತ್ರಿಯು ಮೀರಿ ಹೋಯಿತು.,, ಅನ್ನಲು, ಕೌಸಲ್ಯೆಯು ಪ್ರೇಮಪೂ ರ್ವಕವಾಗಿ ಎದ್ದು— ಇನ್ನು ನೀವು ನಿಮ್ಮ ಸ್ಥಳಗಳಿಗೆ ಹೋಗಲೇಬೇಕು. ಇನ್ನು ನಮಗೆ ಗತಿಯು ಪರಮೇಶ್ವರನೂ, ಸಹಾಯಕನು ಮಿಥಿಲೇಶ್ವರನೂ ಆಗಿರುವರು. ಅನ್ನಲು, ಸುನಯನೆಯು ಆಕೆಯ ಚರಣಕ್ಕೆರಗಿ—ದೇವೀ, ದಶರಥರಾಜನ ಸಹಧರ್ಮಚಾರಿ ಣಿಯೂ, ರಾಮನ ಜನನಿಯೂ ಆದ ನಿನಗೆ ಈ ನಮ್ರತೆಯು ಯೋಗ್ಯವಾಗಿಯೇ ಇರುವದು. ಸಮರ್ಥರಾದವರು ತಮಗಿಂತ ನೀಚರಾದವರ ಆದರವನ್ನೇ ಮಾಡುವರು. ಅಗ್ನಿಯು ಹೊಗೆಯನ್ನೂ, ಪರ್ವತವು ಹುಲ್ಲನ್ನೂ ಮಸ್ತಕದ ಮೇಲೆ ಧಾರಣಮಾಡಿರುವ ದಿಲ್ಲವೇ? ನಮ್ಮ ಯಜಮಾನರು ತ್ರಿಕರಣಪೂರ್ವಕವಾಗಿ ನಿಮ್ಮ ಸೇವಕರಿರುವರು. ಯಾವಾ ಗಲೂ ಶಂಕರ–ಪಾರ್ವತಿಯರ ಸಹಾಯವು ನಿಮಗಿರುವದು. ನಿಮಗೆ ಸಹಾಯಕ

ಹಾಗಲಿಕ್ಕೆ ಒಪ್ಪುವಂಥವರು ಈ ಜಗತ್ತಿನಲ್ಲಿಯಾದರೂ ಯಾರಿರುವರು? ದೀಪದ ಸಹಾಯದಿಂದ ಸೂರ್ಯನಿಗೆ ಹೆಚ್ಚಿನ ಶೋಭೆಯುಂಟಾಗಬಹುದೇ? "ರಾಮನು ವನಕ್ಕೆ ಹೋಗಿ ದೇವಕಾರ್ಯವನ್ನು ಮಾಡಿ ಅಯೋಧ್ಯೆಯಲ್ಲಿ ಸುಖದಿಂದ ರಾಜ್ಯವಾಳುವನೆಂತಲೂ, ಆತನ ಬಾಹುಬಲದಿಂದ ದೇವ, ನಾಗ, ನರರು ತಮ್ಮ ತಮ್ಮ ಸ್ಥಳಗಳಲ್ಲಿ ಸುಖದಿಂದ ಕಾಲಕ್ರಮಣ ಮಾಡುವರೆಂತಲೂ ಯಾಜ್ಞವಲ್ಕ್ಯರು ಮೊದಲೇ ಭವಿಷ್ಯವನ್ನು ಹೇಳಿರುವರು. ದೇವೀ, ಮುನಿಗಳ ಭವಿಷ್ಯವು ಎಂದಾದರೂ ಸುಳ್ಳಾಗಬಹುದೇ? ಎಂದು ನುಡಿದು ಸುನಯನೆಯು ಪುನಃ ಕೌಸಲ್ಯೆಯ ಚರಣಕ್ಕೆರಗಿದಳು. ಆಕೆಯು ತನ್ನ ಸ್ಥಳಕ್ಕೆ ಹೋಗುವಾಗ ಕೌಸಲ್ಯೆಯ ಒಪ್ಪಿಗೆಯಿಂದ ಸೀತೆಯನ್ನು ಕರೆದುಕೊಂಡು ಹೋದಳು. ಅಷ್ಟರಲ್ಲಿ ಜನಕರಾಜನು ವಸಿಷ್ಠರ ಅಪ್ಪಣೆಯಿಂದ ಮನೆಗೆ ಬಂದಿದ್ದನು. ಆತನು ಸೀತೆಯ ತಾಪಸವೇಷವನ್ನು ನೋಡಿ ವಿಶೇಷವಾಗಿ ಪ್ರೇಮಸಂತುಷ್ಟನಾಗಿ ಆಕೆಯನ್ನು ಕುರಿತು—ಮಗಳೇ, ನೀನು ಉಭಯಕುಲಗಳನ್ನೂ ಪವಿತ್ರವಾಗಮಾಡಿದೆ. ನಿನ್ನ ಸತ್ಕೀರ್ತಿಯಿಂದಲೇ ಜಗತ್ತು ಬೆಳಗುವದೆಂದು ಯಾವತ್ತು ಜನರು ಅನ್ನುತ್ತಿರುವರು. ನಿನ್ನ ಕೀರ್ತಿರೂಪವಾದ ನದಿಯು ದೇವಗಂಗಾನದಿಯನ್ನು ಗೆದ್ದು ಕೋಟ್ಯವಧಿ ಬ್ರಹ್ಮಾಂಡಗಳನ್ನು ವ್ಯಾಪಿಸಿಬಿಟ್ಟಿರುವದು. ಗಂಗೆಯು ಯಾವತ್ತು ತ್ರೈಲೋಕ್ಯಗಳಿಗೆ ಮಾತ್ರ ಮಹತ್ವವನ್ನುಂಟುಮಾಡಿದಳು. ಆದರೆ ನಿನ್ನ ಯಶೋರೂಪ ನದಿಯು ಅಸಂಖ್ಯ ಸಂತಸಮಾಜಕ್ಕೆ ಪ್ರತಿಷ್ಠೆಯನ್ನುಂಟುಮಾಡಿದಳು., ಎಂದು ನುಡಿಯಲು, ಸೀತೆಯು ಬಹಳವಾಗಿ ಸಂಕೋಚಪಟ್ಟಳು. ಜನಕನು ಆಕೆಯನ್ನು ಅತ್ಯಂತ ವಾತ್ಸಲ್ಯದಿಂದ ಪುನಃ ಪುನಃ ಅಪ್ಪಿಕೊಂಡು ಸುಂದರವಾದ ಹಿತೋಪದೇಶವನ್ನು ಮಾಡಿದನು. ಸಂಕೋಚದ ಮೂಲಕವಾಗಿ ಸೀತೆಯು ಮಾಡತಾದಳು; ಆದರೆ ರಾತ್ರಿ ಇಲ್ಲಿ ಇರುವದು ನೆಟ್ಟಗಲ್ಲವೆಂದು ಆಕೆಗೆ ತೋರಹತ್ತಿತು. ಆಕೆಯ ಭಾವವನ್ನರಿತು ಸುಲೋಚನೆಯು ಜನಕರಾಜನಿಗೆ ತಿಳಿಸಲು, ಆಗಂತು ಜನಕನು ಆಕೆಯ ಶೀಲಸ್ವಭಾವಗಳನ್ನು ಬಹಳವಾಗಿ ಹೊಗಳಿದನು. ಆಗ ಸೀತೆಯು ತಾಯಿತಂದೆಗಳನ್ನು ಪುನಃ ಪುನಃ ಬಿಗಿಯಾಗಿ ಅಪ್ಪಿಕೊಂಡಳು. ಆ ಮೇಲೆ ಅವರು ಆದರದಿಂದ ಆಕೆಯನ್ನು ಮನೆಗೆ ಕಳಿಸಿಕೊಟ್ಟರು.

ಬಳಿಕ ಸುನಯನೆಯು ಯೋಗ್ಯ ಕಾಲವನ್ನು ನೋಡಿ ಭರತನ ಸಂಬಂಧದಿಂದ ತನ್ನ ಪತಿಯನ್ನು ಕುರಿತು ಕುಶಲತೆಯಿಂದ ಪ್ರಸ್ತಾಪಿಸಿದಾಗ, ಭರತನ ಸಂಬಂಧದ ಅಮೃತದಂಥ ಮಾತುಗಳನ್ನು ಕೇಳಿ ಜನಕರಾಜನ ಕಣ್ಣುಗಳಲ್ಲಿ ನೀರು ಬರಲು, ಅವನು ಅವನ್ನು ಹತ್ತಿಕ್ಕಿಕೊಂಡನು. ಆತನು ಪ್ರಸನ್ನ ಚಿತ್ತದಿಂದ ಹೆಂಡತಿಯನ್ನು ಕುರಿತು—"ಎಲೈ ಸುಮುಖೀ, ಸುನಯನೇ, ಚಿತ್ತಗೊಟ್ಟು ಕೇಳು. ಭರತನ ಈ ಕಥೆಯು ಭವಸಾಗರದಿಂದ ಮುಕ್ತ ಮಾಡುವಂತಹದಾಗಿರುವದು. ಧರ್ಮಶಾಸ್ತ್ರ, ರಾಜನೀತಿಶಾಸ್ತ್ರ

ವೇದಾಂತ ಶಾಸ್ತ್ರ ಇವುಗಳಲ್ಲಿ ಯಥಾಶಕ್ತಿ ನನ್ನ ಬುದ್ಧಿಯು ಪ್ರವೇಶವು ಇರುವದು. ಅಂಥ ಆ ನನ್ನ ಬುದ್ಧಿಯು ಭರತನ ಮಾಹಾತ್ಮ್ಯದ ನೆರಳಿನಲ್ಲಿಯೂ ಅಂಜುತ್ತಂಜುತ್ತಾದರೂ ಪ್ರವೇಶಿಸುವದು ಶಕ್ಯವಿಲ್ಲ. ಬ್ರಹ್ಮದೇವ, ಶ್ರೀ ಶಂಕರ ಮೊದಲಾದವರಿಗೂ ಆತನ ಚರಿತ್ರ, ಆತನ ಕೀರ್ತಿ, ಆತನ ಕೃತಿ, ಆತನ ಧರ್ಮತತ್ವ, ಆತನ ಶೀಲ ಮೊದಲಾದವುಗಳು ಶ್ರವಣ-ಮನನಗಳಿಗೆ ಸುಖದಾಯಕಗಳಾಗಿ ತೋರುವವು. ಪ್ರತ್ಯಕ್ಷ ಶ್ರೀ ರಾಮನು ಭರತನ ದೊಡ್ಡಸ್ತಿಕೆಯನ್ನು ತಿಳಿಯುತ್ತಿದ್ದರೂ, ಅದನ್ನು ವರ್ಣಿಸಲು ಆತನು ಅಸಮರ್ಥನಾಗಿರುವನೆಂಬದನ್ನು ನೀನು ತಿಳಿದಿರು. ನೀನು ಹೇಳಿದಂತೆ ಲಕ್ಷ್ಮಣನನ್ನು ಇಟ್ಟುಕೊಂಡು ಭರತನನ್ನು ರಾಮನ ಸಂಗಡ ವನವಾಸಕ್ಕೆ ಕಳಿಸುವದರಿಂದ ಎಲ್ಲರ ಕಲ್ಯಾಣವೂ ಆಗುವದೆಂಬದು ಎಲ್ಲರ ಮನಸ್ಸಿನಲ್ಲಿಯೂ ಇರುತ್ತದೆ. ಆದರೆ ಪರಮಾರ್ಥದ ಅಥವಾ ಸ್ವಾರ್ಥದ ಅಲ್ಪ ಸುಖದ ಕಡೆಗಾದರೂ ಭರತನು ಸ್ವಪ್ನದಲ್ಲಿ ಕೂಡ ಹಣಕಿ ನೋಡುವವನಲ್ಲ. ರಾಮಚರಣದಲ್ಲಿ ಪ್ರೇಮವಿಡುವದೇ ಸಾಧನವೂ, ಸಿದ್ಧಿಯೂ ಇರುವನೆಂಬದು ನನಗೆ ಕಂಡು ಬಂದಿರುತ್ತದೆ. ಅಂದಬಳಿಕ ಆಜ್ಞಾಪಾಲನವೇ ಭಕ್ತಿಯ ಲಕ್ಷಣವಾಗಿದ್ದು, ಇಂಥ ಭರತನು ತಿಳಿದೂ ತಿಳಿದೂ ರಾಮಾಜ್ಞೆಯನ್ನು ಉಲ್ಲಂಘಿಸುವದು ಶಕ್ಯವಿರುವದಿಲ್ಲ; ಅದ್ದರಿಂದ ನೀವು ಪ್ರೇಮವಶರಾಗಿ ಸುಮ್ಮನೆ ಚಿಂತಿಸಬೇಡಿರಿ, ಎಂದು ಕನಿಕರದಿಂದ ಹೇಳಿದನು.

ಇತ್ತ ಶ್ರೀ ರಾಮನು ಮರುದಿನ ಬೆಳಗಾಗುತ್ತಲೆ ಸ್ನಾನಮಾಡಿ ಗುರುಗಳ ಕಡೆಗೆ ಹೋಗಿ ಅವರನ್ನು ಕುರಿತು—ಎಲೈ ನಾಥನೇ, ಭರತನೂ, ತಾಯಂದಿರೂ, ಪುರಜನರೂ ಮೊದಲೇ ಶೋಕಾಕುಲರಾಗಿದ್ದು, ಅವರು ವನವಾಸದಿಂದ ದುಃಖಿತರಾಗಿರುವರು; ಜನಕ ರಾಜನಾದರೂ ಪರಿವಾರದಿಂದ ಸಹಿತನಾಗಿ ಕಷ್ಟಪಡುತ್ತಿರುವನು, ಆದ್ದರಿಂದ ತಮಗೆ ಉಚಿತವಾಗಿ ತೋರಿದಂತೆ ತಾವೇ ಮಾಡಬೇಕು. ಎಲ್ಲರ ಹಿತವು ತಮ್ಮ ಕೈಯಲ್ಲಿಯೇ ಇರುತ್ತದೆ, ಅನ್ನಲು, ವಸಿಷ್ಠರು ರಾಮನ ಶೀಲ-ಸ್ವಭಾವಾದಿಗಳಿಗಾಗಿ ರೋಮಾಂಚಿತರಾಗಿ ಆತನನ್ನು ಕುರಿತು—ರಾಮಾ, ನೀನಿಲ್ಲದೆ ಉಭಯ ಸಮಾಜಗಳಿಗೆ ಎಲ್ಲ ಸುಖಗಳ ಸಮೃದ್ಧಿಯಾದರೂ ಅದು ನರಕಕ್ಕೆ ಸಮಾನವೇ ಸರಿ. ನೀನು ಪ್ರಾಣದ ಪ್ರಾಣವೂ, ಜೀವದ ಜೀವವೂ, ಸುಖದ ಸುಖವೂ ಆಗಿರುತ್ತೀ. ನಿನ್ನನ್ನು ಬಿಟ್ಟು ಮನೆಮಾರುಗಳಲ್ಲಿ ಆಸಕ್ತರಾದವರ ಪ್ರಾಕ್ತನವು ವಿಪರೀತವಾದದ್ದೆಂದು ತಿಳಿಯಬೇಕು. ರಾಮಾ ನಿನ್ನ ಪದಕಮಲದಲ್ಲಿ ಭಕ್ತಿಯಿಲ್ಲದ ಆ ಸುಖಕ್ಕೆ, ಆ ಧರ್ಮಕ್ಕೆ ಬೆಂಕಿಹಚ್ಚಲಿ! ನಿನ್ನ ಅಧಿಷ್ಠಾನವಿಲ್ಲದ ಯೋಗವು ಕುಯೋಗವಾಗಿದ್ದು, ಅಂಥ ಜ್ಞಾನವಾದರೂ ಅಜ್ಞಾನವೇ ಆಗಿರುವದು. ನಿನ್ನನ್ನು ಬಿಟ್ಟು ಇರುವವರೇ ದುಃಖಿಗಳು, ನಿನ್ನಲ್ಲಿ ಸಲ್ಲಗ್ನವಾಗಿರುವವರೇ ಸುಖಿಗಳು. ಪ್ರತಿಯೊಬ್ಬನ ಹೃದ್ಗತವನ್ನು ತಿಳಿಯುವವನು ನೀನೊಬ್ಬನೇ ಇರುತ್ತೀ. ಸಮರ್ಥನಾದ ನಿನ್ನ ಆಜ್ಞೆಯು ಎಲ್ಲರ ತಲೆಯ ಮೇಲೆಯೂ ಇರು

ತ್ತದೆ. ದಯಾಘನನಾದ ನಿನಗೇ ಎಲ್ಲ ಭವಿತವ್ಯತೆಯು ಜ್ಞಾನವಿರುತ್ತದೆ. ಇನ್ನು ನೀನು ಆಶ್ರಮಕ್ಕೆ ಹೋಗಬೇಕು, ಎಂದು ರಾಮನನ್ನು ಕಳುಹಿ ವಸಿಷ್ಠರು ಜನಕರಾಜನ ಬಳಿಗೆ ಬಂದು, ರಾಮನ ಅಭಿಪ್ರಾಯವನ್ನು ತಿಳಿಸಿ, ಆತನನ್ನು ಕುರಿತು—ಎಲೈ ರಾಜಶ್ರೇಷ್ಠನೇ. ಧರ್ಮದೊಡನೆ ಎಲ್ಲರ ಕಲ್ಯಾಣವಾಗುವಂತೆ ನೀನೇ ಏನಾದರೂ ಮಾಡಬೇಕು. ನೀನು ಜ್ಞಾನನಿಧಿಯೂ, ಸುಜ್ಞನೂ, ಶುಚಿಷ್ಮಂತನೂ ಅವ ಧರ್ಮಧುರಂಧರ ಭೂಪಾಲನಿರುತ್ತೀ. ಈ ಪ್ರಸಂಗದ ಕಗ್ಗಂಟನ್ನು ಬಿಚ್ಚಲಿಕ್ಕೆ ನಿನ್ನ ಹೊರತು ಬೇರೆಯವರು ಯಾರು ಸಮರ್ಥರಿರುವರು? ಎಂದು ಹೇಳಿದನು.

ಮುನಿವರನ ಈ ಮಾತುಗಳನ್ನು ಕೇಳಿ ಜನಕನು ಪ್ರೇಮದಲ್ಲಿ ತಲ್ಲೀನನಾದನು. ಆತನ ಈ ಸ್ಥಿತಿಯನ್ನು ನೋಡಿ, ಆತನ ಜ್ಞಾನ-ವೈರಾಗ್ಯಗಳೂ ವಿರಕ್ತವಾದವು. ಆತನು ಮನಸ್ಸಿನಲ್ಲಿ—ನಾನು ಇಲ್ಲಿಗೆ ಬಂದದ್ದೇನು ನಟ್ಟಗಾಗಲಿಲ್ಲ. ದಶರಥರಾಜನು ವನಕ್ಕೆ ಹೋಗಲು ರಾಮನನ್ನು ಆಜ್ಞಾಪಿಸಿದನು; ಆದರೆ ತನಗೆ ರಾಮನ ಪ್ರೇಮವೇ ಪ್ರಿಯವಾದದ್ದೆಂದು ಕಡೆಗೆ ದೇಹತ್ಯಾಗದಿಂದ ಸಿದ್ಧ ಮಾಡಿ ತೋರಿಸಿದನು. ಇನ್ನು ನಾನು ಮಾತ್ರ ರಾಮನನ್ನು ಅಡವಡವಿ ತಿರುಗಹಚ್ಚಿ, ನನ್ನ ಜಾಣತನದ ಡೌಲು ಮೆರಿಸುತ್ತ ಆನಂದದಿಂದ ತಿರುಗಿ ಹೋಗುವನು, ಎಂದು ಪಶ್ಚಾತ್ತಾಪಪಡುತ್ತ, ಪ್ರಸಂಗವನರಿತು, ಧೈರ್ಯದಿಂದ ವಸಿಷ್ಠರ ಯಾವತ್ತು ಪರಿವಾರದೊಡನೆ ಭರತನಲ್ಲಿಗೆ ಹೋದನು. ಆಗ ಭರತನು ಆ ನೃಪವರನನ್ನು ಎದುರ್ಗೊಂಡು ಸ್ವಾಗತ ಮಾಡಿ, ಪ್ರಸಂಗಕ್ಕನುಸರಿಸಿ ಕೂಡಲಿಕ್ಕೆ ಆಸನವನ್ನು ಕೊಟ್ಟನು. ಆಗ ಜನಕನು ಭರತನನ್ನು ಕುರಿತು—ಅಪ್ಪಾ ಭರತಾ, ರಘುವೀರನ ಸ್ವಭಾವವು ನಿನಗೆ ಗೊತ್ತೇ ಇರುವದು. ರಾಮನು ಸತ್ಯವ್ರತನೂ, ಧರ್ಮರತನೂ ಆಗಿದ್ದು, ಆತನಿಗೆ ಎಲ್ಲರ ಪ್ರೇಮಸ್ನೇಹಗಳ ಆಗತ್ಯವಿರುವದು; ಆದ್ದರಿಂದ ಹೀಗೆಯೇ ಮಾಡುರೆಂದು ಆತನು ಯಾರಿಗೂ ಹೇಳಲಾರದೆ ಸಂಕೋಚಪಡುತ್ತ ತನ್ನೊಳಗೇ ಸಂಕಟವನ್ನು ಸಹನ ಮಾಡುತ್ತಿರುವನು; ಆದ್ದರಿಂದ ಈ ಪ್ರಸಂಗದಲ್ಲಿ ನೀನೇ ಅಪ್ಪಣೆ ಏನು ಮಾಡುತ್ತೀಯಾ? ಅದನ್ನು ರಾಮನಿಗೆ ತಿಳಿಸಬೇಕು, ಅನ್ನಲು, ಅದನ್ನು ಕೇಳಿದಕೂಡಲೆ ಭರತನ ಮೈಮೇಲಿನ ಕೂದಲುಗಳು ನೆಟ್ಟಗಾಗಿ ಆತನ ಕಣ್ಣುಗಳಲ್ಲಿ ಅಶ್ರುಗಳುಂಟಾದವು. ಆತನು ಒಳ್ಳೇ ಧೈರ್ಯದಿಂದ—ತಾವು ನನಗೆ ಪ್ರಭುಗಳೂ, ಪ್ರಿಯರೂ, ತಂದೆಯಂತೆ ಪೂಜ್ಯರೂ ಆಗಿರುವಿರಿ. ಈ ಗುರುಗಳಂತೆ ತಾಯಿ ತಂದೆಗಳೂ ಹಿತಚಿಂತಕರಲ್ಲ. ಈ ಕೌಶಿಕಾದಿ ಮುನೀಶ್ವರರು, ಈ ಸಚಿವ ಮಂಡಲವು, ತಾವೆಲ್ಲರು ಜ್ಞಾನ ಸಾಗರರಿರುವಿರಿ. ಮಹಾರಾಜ, ನಾನು ತಮ್ಮ ಆಜ್ಞಾಂಕಿತ ಬಾಲಕನೂ, ಸೇವಕನೂ ಎಂದು ತಿಳಿದು ಈ ಪ್ರಸಂಗದಲ್ಲಿ ಏನು ಮಾಡಬೇಕೆಂಬದನ್ನು ನನಗೆ ಕಲಿಸಬೇಕು. ಈ ಸಮಾಜದಲ್ಲಿ, ಹಾಗು ಇಂಥ ಸ್ಥಳದಲ್ಲಿ ಮಹಾರಾಜರು ನನ್ನನ್ನು ಕೇಳುವದರಿಂದ ಮೂಕನೂ, ಮಲಿನನೂ, ಹುಚ್ಚನೂ ಆದ

ನಾನು ಮಾತಾಡಲೇಬೇಕಾಗಿರುವದು. ಇದಕ್ಕಾಗಿ ನನ್ನ ದುಸ್ಸಾಹಸವನ್ನು ಲಕ್ಷಿಸಿ, ನನ್ನನ್ನು ಕ್ಷಮಿಸಬೇಕು. ಸೇವಾಧರ್ಮವು ಕಠಿಣವೆಂಬದು ನಿಗಮಾಗಮಗಳಲ್ಲಿಯೂ, ಪುರಾಣಗಳಲ್ಲಿಯೂ ಪ್ರಸಿದ್ಧವಾಗಿರುವದಲ್ಲದೆ, ಎಲ್ಲರಿಗೂ ಆ ಮಾತು ಗೊತ್ತಿರುವದು. ಸ್ವಾಮಿಯಧರ್ಮ, ಸೇವಕನಸ್ವಾರ್ಥ ಇವುಗಳಲ್ಲಿ ಪರಸ್ಪರ ವಿರೋಧವಿರುವದು. ವೈರಾಂಧರಲ್ಲಿ ಹಾಗು ಪ್ರೇಮಾಂಧರಲ್ಲಿ ಪರಸ್ಪರ ಸಹಾನುಭೂತಿಯು ಉಂಟಾಗುವದು ಶಕ್ಯವೇ ಇಲ್ಲವು. ರಾಮನ ಬಲವು, ಆತನ ಧರ್ಮ, ಆತನ ವ್ರತ ಇವುಗಳಿಗೆ ಅನ್ನುಸರದೆ, ನಾನು ಕೇವಲ ಪರತಂತ್ರನೆಂಬದನ್ನು ಲಕ್ಷದಲ್ಲಿಟ್ಟು, ಸರ್ವಸಮ್ಮತವೂ, ಸರ್ವಹಿತಕರವೂ ಆಗುವಂತೆ ಮಾಡತಕ್ಕದ್ದನ್ನು ಮಾಡಬೇಕು.

ಈ ಮೇರೆಗೆ ಭರತನ ಅದ್ಭುತವಾಣಿಯನ್ನು ಕೇಳಿ ಜನಕರಾಜನು ಆತನನ್ನು ಹೊಗಳಹತ್ತಿ ಭರತ, ವಶಿಷ್ಠ, ಮುನಿವೃಂದ ಮೊದಲಾದವರನ್ನು ಕೂಡಿಕೊಂಡು ಶ್ರೀ ರಾಮಚಂದ್ರನ ಬಳಿಗೆ ಹೋದನು. ಆಗ ಇಂದ್ರಾದಿ ದೇವತೆಗಳು, ಶ್ರೀ ರಾಮನು ಎಲ್ಲಿ ತಿರುಗಿ ಅಯೋಧ್ಯೆಗೆ ಹೋಗುವನೋ ಎಂದು ಚಿಂತಾತುರರಾಗಿ ಶಾರದೆಯನ್ನು ಕರೆದು—ತಾಯಿ, ದೇವತೆಗಳು ನಾವು ನಿನಗೆ ಶರಣುಬಂದಿದ್ದೇವೆ, ನಮ್ಮನ್ನು ರಕ್ಷಿಸು. ನೀನು ನಿನ್ನ ಮಾಯೆಯಿಂದ ಭರತನ ಬುದ್ಧಿಭ್ರಂಶಮಾಡಿ, ಆತನ ಆಶ್ರಯದಿಂದ ದೇವಕುಲವನ್ನು ಉಳಿಸು. ಎಂದು ಪ್ರಾರ್ಥಿಸಲು, ದೇವೇಂದ್ರನು ಸ್ವಾರ್ಥಿಯೂ, ಶಠಮೂರ್ಖನೂ ಎಂದು ತಿಳಿದು ಪರಮವಿದುಷಿ ವಾಗ್ದೇವಿಯು ಆತನನ್ನು ಕುರಿತ—ದೇವೇಂದ್ರಾ, ಭರತನ ಬುದ್ಧಿಭ್ರಂಶಮಾಡೆಂದು ನನಗೆ ನೀನು ಹೇಳುವೆಯಾ? ನೀನು ಸಹಸ್ರಾಕ್ಷನಿದ್ದೂ ಪ್ರಚಂಡ ಮೇರು ಪರ್ವತವು ನಿನಗೆ ಹೇಗೆ ಕಾಣಿಸಲೊಲ್ಲದು? ವಿಧಿಹರಿಹರರ ಅಮೋಘವಾದ ಬಲವತ್ತರ ಮಾಯೆಯು ಕೂಡ ಭರತನ ಬುದ್ಧಿಯನ್ನು ಅವಲೋಕಿಸಲು ಅಸಮರ್ಥವಾಗಿರುವಾಗ, ಅಂಥಬುದ್ಧಿಯನ್ನು ಕಡಿಸಲಿಕ್ಕೆ ನನಗೆ ಹೇಳಕೊಳ್ಳುವೆಯಾ? ಭರತನ ಹೃದಯದಲ್ಲಿ ಸೀತಾರಾಮರು ಅಖಂಡವಾಗಿ ವಾಸಿಸುತ್ತಿರುವರು; ಅಂದಬಳಿಕ ಸೂರ್ಯ—ಪ್ರಕಾಶವಿದ್ದಲ್ಲಿ ಕತ್ತಲೆಯು ಬೀಳುವದಾದರೂ ಹೇಗೆ? ಎಂದು ಹೇಳಿ ಬ್ರಹ್ಮಲೋಕವನ್ನು ಕುರಿತು ಹೊರಟುಹೋದಳು. ಇತ್ತ ಜನಕರಾಜನು ಯಾವತ್ತು ಪರಿವಾರದೊಡನೆ ರಘುರಾಜನಬಳಿಗೆ ಬರಲು, ಆತನು ಎಲ್ಲರನ್ನು ಸನ್ಮಾನಿಸಿದನು. ಬಳಿಕ ವಶಿಷ್ಠರು ಜನಕ—ಭರತರ ಸಂವಾದವನ್ನು ಶ್ರೀ ರಾಮನಿಗೆ ತಿಳಿಸಿ, ಭರತನ ಮತಕ್ಕೆತನ್ನ ಅನುಕೂಲತೆಯಿರುವದೆಂದು ತಿಳಿಸುವದಕ್ಕಾಗಿ ರಾಮನನ್ನು ಕುರಿತು—ಅಪ್ಪಾ ರಾಮಾ, ನೀನೇ ಅಪ್ಪಣೆ ಕೊಡಬೇಕು, ಎಲ್ಲರೂ ಅದರಂತೆ ನಡೆದುಕೊಳ್ಳಬೇಕು, ಎಂದು ನನ್ನ ಮತವಿರುವದು. ಎಂದು ಹೇಳಿದರು. ಅದನ್ನು ಕೇಳಿ ಶ್ರೀ ರಾಮನು ಕೈಜೋಡಿಸಿ ಮೃದುವಾಣಿಯಿಂದ—ತಾವು, ಮಿಥಿಲೇಶ್ವರರೂ ಇರುತ್ತಿರಲು ನಾನು ಮಾತಾಡುವದು ಸಂಪೂರ್ಣ ಅನುಚಿತವಾಗಿರುವದು. ನಾನು ನಿಮ್ಮ ಸಾಕ್ಷಿ

ಯಿಂದ ಹೇಳುವೆನು, ತಾವೂ ಮಹಾರಾಜರೂ ಮಾಡಿದ ಆಜ್ಞೆಯು ನನಗೆ ಶಿರಸಾ ವಂದ್ಯವಾಗಿರುವದು.

ರಾಮನ ಈ ಪ್ರತಿಜ್ಞೆಯನ್ನು ಕೇಳಿ ಯಾವತ್ತು ಸಮಾಜದೊಡನೆ ವಸಿಷ್ಠರಿಗೂ, ಜನಕನಿಗೂ ಸಂಕೋಚವಾಯಿತು ಆತನಿಗೆ ಏನು ಉತ್ತರಕೊಡಬೇಕೆಂಬದು ತೋಚದೆ, ಎಲ್ಲರೂ ಭರತನ ಮೋರೆಯ ಕಡೆಗೆ ನೋಡತೊಡಗಿದರು. ಸಭೆಯು ಸಂಕಟಗ್ರಸ್ತವಾಗಿರುವದನ್ನು ನೋಡಿ ರಾಮಬಂಧುವಾದ ಭರತನು ಅತ್ಯಂತ ಧೈರ್ಯ ಶಾಲಿ, ಪ್ರೇಮದ ದುಷ್ಪರಿಣಾಮವುಂಟಾಗುತ್ತದೆಂದು ತಿಳಿದು ಅದನ್ನು ಸಾವರಿಸಿ ಕೊಂಡು, ರಾಮಚಂದ್ರನನ್ನೂ, ಜನಕನನ್ನೂ, ವಸಿಷ್ಠರನ್ನೂ, ಸಂತವೃಂದ ವನ್ನೂ ಕೈಜೋಡಿಸಿ ನಮಸ್ಕರಿಸಿ—"ಈ ಕೋಮಲ ಮುಖದಿಂದ ಇಂದು ನಾನು ಕಠೋರ ಮಾತುಗಳಾಡುವ ತಪ್ಪಿಗಾಗಿ ನನ್ನನ್ನು ಕ್ಷಮಿಸಬೇಕು." ಎಂದು ಪ್ರಾರ್ಥಿಸಿ ಹೃದಯದಲ್ಲಿ ಶಾರದೆಯನ್ನು ಪ್ರೇಮಪೂರ್ವಕವಾಗಿ ಚಿಂತಿಸಲು, ಆಕೆಯು ಆತನ ಮನೋರೂಪ ಮಾನಸಸರೋವರದೊಳಗಿಂದ ಹೊರಟು ಆತನ ಮುಖ ಕಮಲದಲ್ಲಿ ಕುಳಿತು, ವಿವೇಕ, ಧರ್ಮ, ನೀತಿ,ಶಾಲೀನತೆ ಇವುಗಳಿಂದ ಯುಕ್ತಳಾಗಿ ಹಂಸಪಕ್ಷಿಯಂತೆ ತೋರಹತ್ತಿದಳು. ಆಗ ಭರತನು ತನ್ನ ವಿವೇಕನೇತ್ರಗಳಿಂದ ಆ ಸ್ನೇಹಶಿಥಿಲಸಮಾಜವನ್ನು ನೋಡಿ ಸೀತಾರಾಮಚಂದ್ರರನ್ನು ಧ್ಯಾನಿಸಿ ಪ್ರಣಾ ಮಪೂರ್ವಕವಾಗಿ ನುಡಿಯತೊಡಗಿದನೇನಂದರೆ— ಎಲೈ ಪ್ರಭುವೇ, ತಾಯಿತಂದೆ ಗಳು, ಸುಹೃದನು, ಗುರುವು, ಸ್ವಾಮಿಯು, ಪೂಜ್ಯನು, ಪರಮಹಿತೈಷಿಯು, ಅಂತ ರ್ಯಾಮಿಯು, ಸರಲನು, ಶೀಲನಿಧಾನನು, ಪ್ರಣತಪಾಲನು, ಸರ್ವಜ್ಞನು, ಸುಜ್ಞನು, ಸಮರ್ಥನು, ಶರಣಾಗತಹಿತಚಿಂತಕನು, ಗುಣಗ್ರಾಹಕನು, ದುರ್ಗುಣಪಾಪಹಾರ ಕನು ಆದ ಸರ್ವಶ್ರೇಷ್ಠ ಒಡೆಯನು ನೀನು ಒಬ್ಬನೇ ಒಬ್ಬನಾಗಿರುವೆ. ಪ್ರಭೋ, ನಿನ್ನ ಆಣೆಯನ್ನೇ ಮಾಡಿ ಹೇಳುವೆನು, ನಿನ್ನಂಥ ಸ್ವಾಮಿಯು ನೀನೇ, ಹಾಗು ನನ್ನಂಥ ಸೇವಕನು ನಾನೇ. ಪ್ರಭುವಿನ, ಹಾಗು ತಂದೆಯ ಅಪ್ಪಣೆಯನ್ನು ಹಟ ದಿಂದ ಮುರಿದು ಒಳ್ಳೇ ಬಡಿವಾರದಿಂದ ನಾನು ಇಲ್ಲಿಗೆ ಬಂದೆನು. ಜಗತ್ತಿನಲ್ಲಿ ಒಳಿತು-ಕೆಡಕು, ಉಚ್ಚ-ನೀಚ, ಅಮೃತ-ವಿಷ, ಸ್ವರ್ಗ-ನರಕ, ಹೀಗೆ ಪರಸ್ಪರ ವಿರುದ್ಧವಾದ ವಸ್ತುಗಳು ಇರುವವು; ಆದರೆ ರಾಮಾಜ್ಞೆಯನ್ನು ಮನಸ್ಸಿನಿಂದಾದರೂ ಉಲ್ಲಂಘಿಸುವವನು ಯಾವನೂ, ಎಲ್ಲಿಯೂ ಇದ್ದದ್ದನ್ನು ನೋಡಿಯೂ ಇಲ್ಲ, ಕೇಳಿಯೂ ಇಲ್ಲ. ಹೀಗೆ ನಾನು ರಾಮಾಜ್ಞೆಯನ್ನು ಉಲ್ಲಂಘಿಸಿ ದೊಡ್ಡ ಅಪರಾಧಿಯಾಗಿದ್ದರೂ ಅದನ್ನು ಪ್ರಭುವು ಪ್ರೇಮಲ ಸೇವೆಯೆಂದೇ ತಿಳಿದುಕೊಂಡನು. ಎಲೈ ನಾಥನೇ, ನನ್ನ ದೋಷಗಳನ್ನು ಅಲಂಕಾರವಾಗಿ ತಿಳಿದದ್ದು ನನ್ನ ಕೀರ್ತಿಯನ್ನು ಮೂರೂ ಲೋಕಗ ಳಲ್ಲಿ ಪ್ರಸಿದ್ಧಮಾಡಿದ್ದು, ನಿನ್ನ ಕೃಪೆಯು ಹಾಗು ಸೌಜನ್ಯದ ಸಾಕ್ಷಿಯಾಗಿರು

ವದು. ಕ್ರೂರರು, ಕುಟಿಲರು, ದುಷ್ಟರು, ಕುಮತಿಗಳು, ಕಲಂಕಿಗಳು, ನೀಚರು, ಕುಲಹೀನರು, ನಾಸ್ತಿಕರು, ನಿರ್ಲಜ್ಜರು, ಇಂಥವರು ಕೂಡ ಒಮ್ಮೆ—"ನಾವು ನಿನಗೆ ಶರಣು ಬಂದಿದ್ದೇವೆ. ನಮಸ್ಕರಿಸುತ್ತೇವೆ" ಎಂದು ಅಂದದ್ದನ್ನು ಕೇಳುತ್ತಲೆ ನೀನು ಅವರನ್ನು ಉಡಿಯಲ್ಲಿ ಹಾಕಿಕೊಂಡು, ಅವರ ಯಾವದೋಷಗಳನ್ನೂ ಎಣಿಸದೆ ಸಂತ ಸಮಾಜದಲ್ಲಿ ಅವರ ಗುಣಗಳಗಾಯನವನ್ನೇ ಮಾಡಿರುವೆ. ತನ್ನಂತೆಯೇ ಸೇವಕರ ಯಾವತ್ತು ವ್ಯವಸ್ಥೆಯನ್ನಿಡುವ, ಸ್ವತಃ ಮಾಡಿದ ಉಪಕಾರವನ್ನು ಕನಸಿನಲ್ಲಿಯೂ ನೆನಪು ಮಾಡದಿರುವ, ಸೇವಕರ ಸಂಕೋಚಕ್ಕಾಗಿ ಸ್ವತಃ ಮನಸ್ಸಿನಲ್ಲಿ ಚಿಂತಿಸುವ ಪ್ರಭುವು ಅನ್ಯರಾರಿರುವರು? ಪ್ರೇಮದಿಂದ, ಅಥವಾ ಶೋಕದಿಂದ, ಅಥವಾ ಹುಡು ಗತನದಿಂದ ನಾನು ಬಂದದ್ದು ಮಾತ್ರ ಪ್ರಭುವಿನ ಅಜ್ಞೆಯುಉಲ್ಲಂಘನ ಮಾಡಿದಂತೆಯೇ ಸರಿ; ಆದರೂ ದಯಾಳುವು ತನ್ನಲ್ಲಿಯೇ ಲಕ್ಷವಿಟ್ಟು ನನ್ನನ್ನು ಎಲ್ಲಬಗೆಯಿಂದ ಒಳ್ಳೆಯವನನ್ನಾಗಿಯೇ ಭಾವಿಸುವನು. ನಾನು ಇಲ್ಲಿಗೆ ಬಂದದ್ದರಿಂದ ಎಲ್ಲಬಗೆಯಿಂದ ನನ್ನ ಹಾನಿಯೇನು ಆಗಲಿಲ್ಲ; ಸರ್ವೋತ್ಕೃಷ್ಟ ಕಲ್ಯಾಣದ ಮೂಲಸ್ಥಾನವಾದ ರಘುನಾ ಥನ ಈಚರಣಗಳನ್ನು ನೋಡಿದೆನು. ನನ್ನ ಒಡೆಯನು ನನ್ನ ಮೇಲೆ ಸ್ವಾಭಾವಿಕವಾ ಗಿಯೇ ಸಂತುಷ್ಟನಾಗಿರುವನೆಂಬದರ ನಂಬಿಗೆಯು ನನಗಾಯಿತು; ನಾನು ಇಷ್ಟು ದೊಡ್ಡ ತಪ್ಪುಮಾಡಿದರೂ ಒಡೆಯನು ನನ್ನ ವಿಷಯವಾಗಿ ಇಷ್ಟುಕನಿಕರಪಡುವನೆಂಬ ನನ್ನ ಭಾಗ್ಯವು, ಈ ಪ್ರಚಂಡವಾದ ಸಮಾಜದಲ್ಲಿ ನನ್ನನಿದರ್ಶನಕ್ಕೆ ಬಂದುಹೋಯಿತು. ಈ ಮೇರೆಗೆ ನಾಥನು ಮಾಡಿದ ಕೃಪೆಯಿಂದಲೂ, ಪ್ರಸಾದದಿಂದಲೂ ನನ್ನ ಸರ್ವಾಂಗವು ಶಾಂತವಾಯಿತು. ಎಲೈ ಪ್ರಭುವೇ, ನಾನು ಹಿರಿಯರ ಮಾತುಕೇಳದೆ ಬಹಳ ಎಟ್ಟತನ ಮಾಡಿದ್ದರೂ, ದುಃಖಾರ್ತನೆಂದು ತಿಳಿದು ನನ್ನನ್ನು ಕ್ಷಮಿಸಬೇಕು. ನನಗೆ ಪ್ರಭುಪಾದದ ಸೇವೆಯು ಹೊರತು ಬೇರಿಯಾತರ ಆಶೆಯೂ ಇರುವದಿಲ್ಲವೆಂಬದನ್ನು ಪ್ರಭುಚರಣ ಸಾಕ್ಷಿಯಿಂದಲೂ, ಸತ್ಯ—ಸುಕೃತ—ಸುಖಗಳ ಅತಿಯ ಸೀಮೆಯ ಸಾಕ್ಷಿ ಯಿಂದಲೂ ಹೇಳುತ್ತೇನೆ; ಆದರೆ ಒಡೆಯನ ಅಜ್ಞೆಯ ಹೊರತು ಬೇರೆ ಸೇವೆಯೇ ಇಲ್ಲದ್ದರಿಂದ ಆ ಆಜ್ಞೆಯ ಪ್ರಸಾದವು ಪ್ರಭುಗಳಿಂದ ನನಗೆ ದೊರೆಯಬೇಕು.

ಈ ಮೇರೆಗೆ ನುಡಿದಕೂಡಲೆ ಭರತನು ಪ್ರೇಮದಿಂದ ಅತ್ಯಂತ ವಿಹ್ವಲನಾದನು. ಆತನ ಶರೀರದಲ್ಲಿ ರೋಮಾಂಚಗಳೆದ್ದು, ಆತನ ಕಣ್ಣುಗಳು ಅಶ್ರುಪೂರ್ಣವಾದವು. ಅಸಮಾಧಾನವನ್ನು ಸಹಿಸಲಾರದೆ ಆತನು ಪ್ರಭುವಿನ ಚರಣಗಳಿಗೆರಗಿದನು. ಶ್ರೀ ರಾಮನು ಪ್ರೇಮಲ ಭಾಷಣದಿಂದ ಆತನನ್ನು ಗೌರವಿಸಿ ಹತ್ತಿರ ಕುಳ್ಳಿರಿಸಿಕೊಂಡನು. ಭರತನ ಈ ವಿನಯವನ್ನೂ, ಸದ್ಭಾವವನ್ನೂ ನೋಡಿ ರಘುರಾಜನೊಡನೆ ಯಾವತ್ತೂ ಸಭೆಯೂ ಸ್ನೇಹಶಿಥಿಲವಾಯಿತು. ದೇವತೆಗಳು ಮೂಲತಃ ಕುಟಿಲ ಸ್ವಭಾವದವರಾಗಿ ದ್ದರೂ ಭರತನನ್ನು ಹೊಗಳಿ ಆತನ ಮೇಲೆ ಹೂಮಳೆಗರೆಯತೊಡಗಿದರು; ಅವರೆ ಕಪ

ಟದ ಹಾಗು ದುಷ್ಟತನದ ಪರಮಾವಧಿಯಾದ ಇಂದ್ರನು ಸ್ವಾರ್ಥವನ್ನು ಸಾಧಿಸುವದಕ್ಕಾಗಿ ಉಚ್ಚಾಟನದ ಪ್ರಯೋಗವನ್ನು ಎಲ್ಲರ ಮೇಲೆ ಮಾಡಿದನು. ಆ ಇಂದ್ರ ಜಾಲದಿಂದ ಎಲ್ಲರಿಗ ಮೋಹವು ಉತ್ಪನ್ನವಾಯಿತು; ಆದರೆ ರಾಮನ ಪ್ರೇಮಾಧಿಕ್ಯದಿಂದ ಮಾತ್ರ ಅವರು ಉಚ್ಛೃಂಖಲರಾಗಲಿಲ್ಲ. ಜನರ ಮನಸ್ಸುಗಳು ಚಂಚಲವಾಗಿ ಕ್ಷಣದಲ್ಲಿ ವನದ ಇಚ್ಛೆಯೂ, ಕ್ಷಣದಲ್ಲಿ ಮನೆ ಮಾರುಗಳ ಮೇಲಿನ ಪ್ರೇಮವು ಅವರ ಮನಸ್ಸಿನಲ್ಲಿ ಉಂಟಾಗತೊಡಗಿದವು. ಮನಸ್ಸಿನ ಈ ಚಾಂಚಲ್ಯದಿಂದ ಅವರಿಗೆ ಎಲ್ಲಿಯೂ ಸಮಾಧಾನವಾಗದಾಯಿತು. ಇದನ್ನೆಲ್ಲ ಅರಿತು ಕೃಪಾನಿಧಾನನಾದ ರಾಮನು ಮನಸ್ಸಿನಲ್ಲಿ ನಕ್ಕು, ಮಾಯೆಯು, ಇಂದ್ರನು, ತರುಣನು ಇವರೆಲ್ಲ ಒಂದೇ ಮಾಲಿಕೆಯೊಳಗಿನವರೆಂದು ತಿಳಿದುಕೊಂಡನು! ಭರತನು, ಜನಕರಾಜನು, ಮುನಿವರರು, ಸಚಿವರು, ಸಂತರು, ಆಶ್ರಿತರು ಮೊದಲಾದವರನ್ನು ಬಿಟ್ಟು ದೇವಮಾಯೆಯು ಅವರವರ ಯೋಗ್ಯತೆಯಂತೆ ಎಲ್ಲರನ್ನೂ ಬಾಧಿಸಿತು. ಆಗ ಎಲ್ಲರೂ ರಾಮನ ಮುಖವನ್ನು ನೋಡತೊಡಗಿದರು. ಆಗ ಶ್ರೀರಾಮನು--ಅಪ್ಪಾ ಭರತಾ, ಧರ್ಮಧುರೀಣನೂ, ವೇದ-ವ್ಯವಹಾರಗಳಲ್ಲಿ ಅತ್ಯಂತಪ್ರವೀಣನೂ ಆದವನು ನೀನು ಒಬ್ಬನೇ ಇರುವೆ. ತ್ರಿಕರಣಗಳಿಂದ ನಿನ್ನಂಥ ಪವಿತ್ರನೂ ನೀನೇ ಇರುವೆ. ಈ ಗುರುಸಮಾಜದಲ್ಲಿ, ಅದರಲ್ಲಿಯೂ ಇಂಥ ಸಂಕಟ ಸಮಯದಲ್ಲಿ ತಮ್ಮನ ಗುಣವರ್ಣನವನ್ನು ಮಾಡಿ ತೋರಿಸಲಿಕ್ಕೆ ಹೇಗೆ ಬಂದೀತು? ಎಲೈ ತಾತನೇ, ನಮ್ಮ ಸೂರ್ಯಕುಲದ ಸತ್ಯಸಂಧತೆಯು ವಿಷಯದ ಸನಾತನವಾದ ರೀತಿಯೂ, ಅದರ ವಿಷಯವಾಗಿ ಇದ್ದ ನಮ್ಮ ತಂದೆಯ ಪ್ರೀತಿಯೂ-ಕೀರ್ತಿಯೂ ನಿನಗೆ ಗೊತ್ತೇ ಇರುವವು. ಪ್ರಸಂಗ, ಸಮಾಜ, ಗುರುಜನರ ಮರ್ಯಾದೆ, ತಮ್ಮ ಶತ್ರು-ಮಿತ್ರ-ಉದಾಸೀನರ ಮನೋಗತ, ಸಮೈಕ್ಯದ ಹಾಗು ವ್ಯಕ್ತಿಶಃ ನನ್ನ ಪರಮಹಿತ ಇವೆಲ್ಲವುಗಳ ರಹಸ್ಯವು ನಿನಗೆ ತಿಳಿದೇ ಇರುವದು. ನನಗಂತು ಸಂಪೂರ್ಣವಾಗಿ ನಿನ್ನ ನಂಬಿಗೆಯೇ ಇರುವದು; ಆದರೂ ಪ್ರಸಂಗಕ್ಕನುಸರಿಸಿ ನಾನು ಮಾತಾಡಬೇಕಾಗಿರುವದು. ಬಾಳಾ, ತಂದೆಯ ಪಶ್ಚಾತ್ ನಮ್ಮ ಗೌರವವು ಕೇವಲ ಈ ಗುರುಜನರ ಕೃಪೆಯಿಂದಲೇ ಉಳಿದಿರುವದು. ಇಲ್ಲದಿದ್ದರೆ ನಿಮ್ಮನಮ್ಮೊಡನೆ ಎಲ್ಲ ಪ್ರಜೆಗಳೂ, ಪುರಜನರೂ, ಪರಿವಾರವೂ ದುಃಖಮಗ್ನರಾಗುತ್ತಿದ್ದೆವು. ರಾಜಕಾರಣವು, ಎಲ್ಲ ಬಗೆಯ ಲಕ್ಷ್ಮಿ, ಪ್ರತಿಷ್ಠೆ, ಧರ್ಮ, ರಾಷ್ಟ್ರ, ಧನ, ಮನೆಮಾರು ಇವೆಲ್ಲವುಗಳ ರಕ್ಷಣವನ್ನು ಗುರುಪ್ರಭಾವವೇ ಮಾಡುವದು; ಮತ್ತು ಅದರ ಯೋಗದಿಂದಕಡೆಗೆ ನಮ್ಮ ಕಲ್ಯಾಣವೇ ಆಗುವದು. ಸಮಾಜಸಹಿತವಾಗಿ ಮನೆಯಲ್ಲಿ ನಿನ್ನ ಹಾಗು ವನದಲ್ಲಿ ನನ್ನ ಸಂರಕ್ಷಣವು ಯಾವಾಗಲೂ ಗುರುಪ್ರಸಾದದಿಂದಲೇ ಆಗುವದು. ತಂದೆ-ತಾಯಿಗಳು, ಗುರುಗಳು, ಸ್ವಾಮಿಯು ಇವರ ಆಜ್ಞೆಯಲ್ಲಿಯೇ ಎಲ್ಲ ಧರ್ಮಗಳು ಒಟ್ಟುಗೂಡಿರುವವು; ಮತ್ತು ಅದೇ ಆಜ್ಞೆಯೇ ಶೇಷನಂತೆ ಪೃಥ್ವಿಗೆ ಆಧಾರ ಭೂತ

ವಾಗಿರುವದು. ಆ ತಂದೆಯು ಅಪ್ಪಣೆಯನ್ನು ನೀನು ಶಿರಸಾವಹಿಸಿ ನನ್ನ ಕೈಯಿಂದಲೂ ಆಜ್ಞಾಪಾಲನವಾಗುವಂತೆ ಮಾಡಿ, ಸೂರ್ಯಕುಲವನ್ನು ಸಂರಕ್ಷಿಸು. ಯಾವತ್ತು ಸಿದ್ಧಿಗಳನ್ನೂ, ಕೀರ್ತಿಯನ್ನೂ, ಸದ್ಗತಿಯನ್ನೂ, ಐಶ್ವರ್ಯವನ್ನೂ ಸಾಧಿಸಿಕೊಡುವ ಸಾಧನವು ಆಜ್ಞಾಪಾಲನವು ಒಂದೇ ಆಗಿರುವದೆಂಬದನ್ನು ವಿಚಾರಿಸಿ, ಈ ಅಘೋರವಾದ ಸಂಕಟಕ್ಕೆ ಎದೆಗೊಟ್ಟು ಪ್ರಜೆಗಳನ್ನೂ, ಪರಿವಾರವನ್ನೂ ಸುಖಿಯಾಗ ಮಾಡು. ನಿನಗೆ ಮಾತ್ರ ಹದಿನಾಲ್ಕು ವರ್ಷಗಳವರೆಗೆ ವಿಪತ್ತು ಭೋಗಿಸುವದು ಕಠಿಣವಾಗುವದು. ನಿನ್ನ ಕೋಮಲ ಅಂತಃಕರಣವನ್ನು ನಾನು ಅರಿತಿದ್ದರೂ, ಹೀಗೆ ಕಠೋರ ಮಾತುಗಳನ್ನಾಡುವೆನು. ಆದರೆ ಪ್ರಸಂಗವನ್ನರಿತು ನನ್ನ ಮಾತುಗಳನ್ನು ಅನುಚಿತವೆಂದು ತಿಳಿಯಬೇಡ. ಸಂಕಟಸಮಯದಲ್ಲಿ ಪ್ರಿಯಬಂಧುವೇ ಉಪಯೋಗಕ್ಕೆ ಬೀಳುವನು. ಖಡ್ಗದ ಪೆಟ್ಟನ್ನು ಕೈಯೇ ತಪ್ಪಿಸುವದಲ್ಲವೆ? ಸೇವಕನು ಹಸ್ತ, ಪಾದ, ನೇತ್ರ ಮೊದಲಾದ ಅವಯವಗಳಂತೆ ಇದ್ದು, ಸ್ವಾಮಿಯು ಮುಖವಾಗಿರುವನು.

ರಘುವರನ ಈ ಮಾತುಗಳನ್ನು ಕೇಳಿ ಯಾವತ್ತು ಸಭೆಯು ಪ್ರೇಮಸಾಗರ ಜನ್ಯ ಅಮೃತದಲ್ಲಿ ಮುಳುಗಿ ಪ್ರೇಮಸಮಾಧಿಯಲ್ಲಿ ಮಗ್ನವಾದಂತೆ ತೋರಿತು. ದುಃಖದೋಷವು ಇಲ್ಲದಂತೆ ಆಗಿ ಸ್ವಾಮಿಯು ತನಗೆ ಸನ್ಮುಖನಾದದ್ದನ್ನು ನೋಡಿ ಭರತನಿಗೆ ಪರಮಾನಂದವಾಯಿತು. ಮುಖಕಮಲವು ಅರಳಿತು, ಭರತನ ಮನಸ್ಸಿನ ಚಡಪಡಿಕೆಯೂ ಇಲ್ಲದಂತಾಗಿ ಅತನ ಚಿತ್ತವು ಪ್ರಸನ್ನವಾಯಿತು. ಮತ್ತೆ ಅತನು ಪ್ರೇಮಪೂರ್ವಕ ನಮಸ್ಕಾರಮಾಡಿ ಕೈಜೋಡಿಸಿ ಶ್ರೀರಾಮನನ್ನು ಕುರಿತು— ಎಲೈ ಪ್ರಭುವೇ, ನಿನ್ನ ಸಂಗಡ ಬರುವ ಸುಖವನ್ನು ನಾನು ಅನುಭವಿಸಿದೆನು. ಇಹಲೋಕದಲ್ಲಿ ಜನ್ಮವೆತ್ತಿದ್ದರ ಪೂರ್ಣ ಸಾರ್ಥಕವಾಯಿತು. ದಯಾಳುವೇ, ಇನ್ನು ನಾನು ನಿನ್ನ ಅಪ್ಪಣೆಯನ್ನು ಮಸ್ತಕದಲ್ಲಿ ಧರಿಸಿ ಅದರಂತೆ ಆದರದಿಂದ ನಡೆದುಕೊಳ್ಳುತ್ತ ಹೋಗುವೆನು; ಆದರೆ ಪ್ರಭುವು ನನಗೊಂದು ಏನಾದರೂ ಆಧಾರಕೊಟ್ಟರೆ, ಅವರ ಸಂರಕ್ಷಣ ಮಾಡುತ್ತ ಹದಿನಾಲ್ಕು ವರ್ಷಗಳನ್ನು ಕಳೆಯುವೆನು. ಪ್ರಭುವೇ, ಗುರುಗಳ ಅಪ್ಪಣೆಯಂತೆ ಮಹಾರಾಜರ ಅಭಿಷೇಕಕ್ಕಾಗಿ ಯಾವತ್ತು ತೀರ್ಥೋದಕಗಳನ್ನು ತಂದಿರುವೆನು. ಅದರ ಸಂಬಂಧದಿಂದ ನನಗೆ ಏನಾದರೂ ಅಪ್ಪಣೆಯಾಗಬೇಕು. ಪ್ರಭೋ, ನನ್ನದೊಂದು ಮಾತಿನ ಉತ್ಸಾಹವು ಬಹಳ ಇರುತ್ತದೆ; ಅಪ್ಪಣೆಯಾದರೆ ನಿವೇದಿಸುವೆನು, ಅನ್ನಲು, ರಾಮನು— ಅವಶ್ಯವಾಗಿಹೇಳು ಎಂದು ಹೇಳಿದನು. ಆಗ ಭರತನು ಸ್ನೇಹಸುಭಗವಾಣಿಯಿಂದ— ಈ ಚಿತ್ರಕೂಟದೊಳಗಿನ ಮುನಿಜನರು, ಅವರ ಆಶ್ರಮಗಳು, ತೀರ್ಥಗಳು, ಮೃಗಗಳು, ನದಿಗಳು, ಸರೋವರಗಳು, ನಿರ್ಝರಗಳು, ಗುಡ್ಡಗಳ ಸಾಲುಗಳು ಇವೇ ಮೊದಲಾದ ಪ್ರಭುಪದ ಮಂಡಿತ ವಿಶಿಷ್ಟ ಸ್ಥಳಗಳನ್ನು ಪ್ರಭುಗಳ ಅಪ್ಪಣೆಯಾದರೆ ನೋಡಿಬರುವೆನು, ಎಂದು ಹೇಳಿದನು. ಅದನ್ನು ಕೇಳಿ ರಾಮಚಂದ್ರನು— ಬಾಳಾ, ಅತ್ರಿಮಹಾರಾಜರ ಅಪ್ಪ.

ಕೆಯನ್ನು ಶಿರಸಾವಂದ್ಯವಾಗಿ ತಿಳಿದು ಅರಣ್ಯದಲ್ಲಿ ನಿರ್ಬಂಧವಿಲ್ಲದೆ ಸಂಚಾರ ಮಾಡು. ಬಂಧುವೇ, ಪರಮಪಾವನವೂ, ಸುಂದರವೂ ಆದ ವನವು ಮುನಿಗಳ ಕೃಪೆಯಿಂದ ನಿನಗೆ ಮಂಗಲಪ್ರದವೇ ಆಗುವದು. ಋಷಿಶ್ರೇಷ್ಠರು ಆಜ್ಞಾಪಿಸಿದಲ್ಲಿ ಈ ತೀರ್ಥ ಜಲಗಳನ್ನು ಸ್ಥಾಪಿಸು, ಎಂದು ಹೇಳಿದನು.

ಈಮೆರೆಗೆ ಆಡಿದ ಪ್ರಭುವಿನ ವಚನಗಳನ್ನು ಕೇಳಿ ಭರತನಿಗೆ ಆನಂದವಾಯಿತು. ಆತನು ಅತ್ರಿಮುನಿಗಳ ಚರಣಕ್ಕೆರಗಿದನು. ಭರತ-ರಾಮಚಂದ್ರರ ಮನೋಹರವೂ, ಆನಂದಕಾರಕವೂ ಆದ ಸಂವಾದವನ್ನು ಕೇಳಿ, ಸ್ವಾರ್ಥಪರಾಯಣರಾದ ದೇವತೆಗಳು ಸೂರ್ಯಕುಲವನ್ನು ಹೊಗಳಿ ಪ್ರಸನ್ನಚಿತ್ತದಿಂದ ಹೂಮಳೆಗರೆದರು. ವಸಿಷ್ಠ, ಜಾನಕ ಮೊದಲಾದವರಿಗೆಲ್ಲ ಭರತನ ಮಾತುಗಳನ್ನು ಕೇಳಿ ಪರಮಾಲ್ಹಾದವಾಯಿತು. ಕೌಸ ಲ್ಯೆಯು ಸುಖದುಃಖಗಳು ಸಮಾನವಾಗಿ, ಆಕೆಯು ಗುಣಗಳನ್ನು ವರ್ಣಿಸಿಉಳಿದ ರಾಣಿ ಯರ ಸಮಾಧಾನಮಾಡತೊಡಗಿದಳು. ಆಗ ಅತ್ರಿಋಷಿಗಳು ಭರತನಿಗೆ—ಎಲೈ ಭರ ತನೇ, ಈ ಪರ್ವತದ ಸಮೀಪದಲ್ಲಿ ಪವಿತ್ರವೂ, ಅಮೃತದಂತೆ ಅನುಪಮವೂ ಆದ ಒಂದು ಉತ್ತಮೋತ್ತಮ ಕೂಪವಿರುವದು, ಅದರಲ್ಲಿ ಈ ತೀರ್ಥಜಲಗಳನ್ನು ಸ್ಥಾಪಿಸು, ಎಂದು ಹೇಳಿದರು. ಆಗ ಭರತನು ತೀರ್ಥಜಲಗಳನ್ನು ಆ ಕೂಪದ ಕಡೆಗೆ ಕಳಿಸಿ, ಶತ್ರುಘ್ನ, ಅತ್ರಿ, ವಸಿಷ್ಠ, ಮುನಿಮಂಡಲ ಇವರೊಡನೆ ತಾನು ಆ ಅಗಾಧಕೂಪಕ್ಕೆ ಹೋಗುವದಕ್ಕಾಗಿ ಹೊರಟನು. ಆ ಪುಣ್ಯಸ್ಥಳದಲ್ಲಿ ತೀರ್ಥಗಳನ್ನು ಸ್ಥಾಪಿಸಿದ ಬಳಿಕ ಅತ್ರಿಮುನಿಗಳು ಪ್ರೇಮಹರ್ಷಿತರಾಗಿ—ಬಾಳಾ, ಭರತಾ, ಈ ಸ್ಥಳವು ಅನಾದಿ ಸಿದ್ಧ ವಾದದ್ದು. ಕಾಲಮಾನದಿಂದ ಅದು ಲುಪ್ತವಾಗಿರುವದರಿಂದ ಈಗ ಯಾರಿಗೂ ಗೊತ್ತಿಲ್ಲದಾಗಿರುವದು. ನಿನ್ನ ಸೇವಕರು ಜವಳು ಪ್ರದೇಶವೆಂದು ತಿಳಿದು ನಿನ್ನ ತೀರ್ಥೋದಕಗಳಿಗಾಗಿ ತೋಡಿ ಸಿದ್ಧಪಡಿಸಿರುವರು. ವಿಧಿವಶದಿಂದ ಜಗತ್ತಿನಮೇಲೆ ಇದೊಂದು ಉಪಕಾರವೇ ಆಯಿತು. ಇನ್ನು ಮುಂದೆ ಇದು "ಭರತಕೂಪ"ವೆಂಬ ಹೆಸ ರಿನಿಂದ ಪ್ರಸಿದ್ಧವಾಗುವದು. ತೀರ್ಥಜಲದ ಯೋಗದಿಂದ ಇದು ಅತ್ಯಂತ ಪವಿತ್ರ ವಾಗಿರುವದು. ಯಾರು ಈಕೂಪದಲ್ಲಿ ಪ್ರೇಮದಿಂದ ನೇಮದಿಂದ ಸ್ನಾನಮಾಡುವರೋ ಅವರು ಶರೀರ, ವಾಣಿ, ಮನಸ್ಸುಗಳಿಂದ ಶುದ್ಧವಾಗುವರು, ಎಂದು ಕೂಪದ ಮಹತ್ವ ವನ್ನು ವರ್ಣಿಸುತ್ತಿರಲು, ಎಲ್ಲರೂ ಶ್ರೀರಾಮನಬಳಿಗೆ ಬಂದರು. ಅತ್ರಿಮುನಿಗಳು ರಘುವರ ನಿಗೂ ಭರತಕೂಪತೀರ್ಥದ ಪುಣ್ಯಪ್ರಭಾವವನ್ನು ನಿವೇದಿಸಿದರು. ಜನರು ಧಾರ್ಮಿಕ ಹಾಗು ಐತಿಹಾಸಿಕ ಕಥೆಗಳನ್ನು ಹೇಳುತ್ತಿರಲು, ಅಂದಿನ ರಾತ್ರಿಯು ಹೋಗಿ ಬೆಳಗಾ ಯಿತು. ಭರತನು ನಿತ್ಯಕರ್ಮಗಳನ್ನು ಮಾಡಿ ರಾಮ, ಅತ್ರಿಮುನಿಗಳು, ವಸಿಷ್ಠರು ಇವರ ಅಪ್ಪಣೆಪಡೆದು ಶತ್ರುಘ್ನನೊಡನೆ ಯಾವತ್ತು ಪರಿವಾರವನ್ನು ಕೂಡಿಕೊಂಡು ಕಾಮವನ-ವಿಹಾರಾರ್ಥವಾಗಿ ಕಾಲನಡಿಗೆಯಿಂದ ಹೊರಟನು. ಋಷಿವರ್ಯರು ಹರ್ಷಿ

ಶಾಂತ:ಕರಣದಿಂದ ಆಯಾಸ್ಥಳದ ಹೇತುವನ್ನೂ, ಹೆಸರನ್ನೂ, ಗುಣಗಳನ್ನೂ, ಪಾವಿತ್ರ್ಯವನ್ನೂ, ಮಾಹಾತ್ಮ್ಯವನ್ನೂ ವರ್ಣಿಸುತ್ತಿದ್ದರು. ಭರತನು ಎಲ್ಲಿ ಸ್ನಾನಮಾಡುವನು, ಎಲ್ಲಿ ನಮಸ್ಕರಿಸುವನು, ರಮಣೀಯವಾಗಿ ತೋರಲು ಎಲ್ಲಿ ನೋಡುತ್ತನಿಂತುಕೊಳ್ಳುವನು, ಎಲ್ಲಿ ಮುನಿಗಳ ಅಪ್ಪಣೆಪಡೆದು ಸೀತಾರಾಮರ ಧ್ಯಾನಮಾಡುತ್ತ ಕುಳಿತುಕೊಳ್ಳುವನು; ಆತನು ಎರಡುಪ್ರಹರ ಹೊತ್ತಾದಕೂಡಲೆ ಆಶ್ರಮಕ್ಕೆ ಬಂದುಪ್ರಭುಪದಗಳನ್ನು ವಂದಿಸುವನು. ಹೀಗೆ ಭರತನು ಯಾವತ್ತೂ ತೀರ್ಥಗಳನ್ನೂ, ಸ್ಥಳಗಳನ್ನೂ ಐದು ದಿವಸಗಳಲ್ಲಿ ನೋಡಿದನು.

ಶ್ರೀರಾಮನ ಮನಸ್ಸಿನಲ್ಲಿ,ಇನ್ನು ಯಾವತ್ತು ಜನರು ತಮ್ಮ ತಮ್ಮ ಸ್ಥಳಗಳಿಗೆ ಹೋಗಬೇಕೆಂದು ಇತ್ತು; ಆದರೆ ಆತನು ಭರತ, ಜನಕ, ವಸಿಷ್ಠ ಮೊದಲಾದವರ ಸಂಕೋಚದಿಂದ ಅದನ್ನು ಬಾಯಿಬಿಟ್ಟು ಹೇಳದಾದನು. ಆಗ ಭರತನು ಸ್ವಾಮಿಯ ಈ ಹೃದ್ಗತವನ್ನು ಅರಿತು ವಿಶೇಷವಾದ ಧೈರ್ಯದಿಂದ ಎದ್ದು ದೀರ್ಘದಂಡ ನಮಸ್ಕಾರಮಾಡಿ ಕೈಜೋಡಿಸಿ—ಮಹಾರಾಜರು ನನ್ನ ಸಲುವಾಗಿ ದುಃಖವನ್ನು ಭೋಗಿಸಬೇಕಾಯಿತು. ಸ್ವಾಮಿನ್, ಇನ್ನು ನನಗೆ ಅಪ್ಪಣೆಯನ್ನು ಕೊಡಬೇಕು- ನಾನು ಹೋಗಿ ಅವಧಿಯು ಮುಗಿಯುವವರೆಗೆ ಅಯೋಧ್ಯೆಯ ಸೇವೆಯನ್ನು ಮಾಡುವೆನು; ಆದರೆ ದಯಾನಿಧಾನನಾದ ಅಯೋಧ್ಯಾನಾಥನು ಹದಿನಾಲ್ಕುವರ್ಷಗಳಮೇಲೆ ಯಾವ ಉಪಾಯದಿಂದ ಈ ಚರಣಗಳು ದಾಸನ ಕಣ್ಣಿಗೆ ಬಿದ್ದಾವೆಂಬ ವಿಷಯವಾಗಿ ಅಪ್ಪಣೆ ದಯಪಾಲಿಸಬೇಕು, ಎಂದು ಪ್ರಾರ್ಥಿಸಲು, ಶ್ರೀರಾಮನು—ಎಲೈ ತಾತನೇ, ನನ್ನ ನಿನ್ನ ಹಾಗು ಪರಿಜನರ ಚಿಂತೆಯು ಗುರುಮಹಾರಾಜರಿಗೂ, ಮಿಥಿಲೇಶ್ವರನಿಗೂ ಇದ್ದೇ ಇರುವದು. ವಸಿಷ್ಠ, ವಿಶ್ವಾಮಿತ್ರ, ಮಿಥಿಲೇಶ ಇವರ ಕೃಪಾಛತ್ರವು ನಮ್ಮ ತಲೆಯಮೇಲಿರಲು, ನಿಮಗನಮಗೆ ಸ್ವಪ್ನದಲ್ಲಿಯೂ ದುಃಖವು ಉಂಟಾಗಲಾರದು. ನನ್ನ ಹಾಗು ನಿನ್ನ ಪರಮಪುರುಷಾರ್ಥ, ಸ್ವಾರ್ಥ, ಸತ್ಯ, ಧರ್ಮ, ಪರಮಾರ್ಥ ಇವೆಲ್ಲ ನಾವು ಇಬ್ಬರೂ ಬಂಧುಗಳು ಪಿತ್ರಾಜ್ಞಾಪಾಲನಮಾಡುವದರಲ್ಲಿಯೇ ಇರುತ್ತವೆ. ಈ ಮಾತು ವೇದಕ್ಕೂ, ಲೌಕಿಕಕ್ಕೂ ಸಮ್ಮತವಾಗಿದ್ದು, ಅದರಲ್ಲಿಯೇ ನಮ್ಮ ತಂದೆಯ ಕಲ್ಯಾಣವೂ ಇರುವದು. ಗುರು, ತಾಯಿತಂದೆಗಳು, ಸ್ವಾಮಿಯು ಇವರ ಅಪ್ಪಣೆಯನ್ನು ಪಾಲಿಸುವವನು ಅಡ್ಡಹಾದಿಯಿಂದ ನಡೆದರೂ, ಅವನು ಕಾಲುಜಾರಿ ಬೀಳಲಾರನೆಂಬದನ್ನು ವಿಚಾರಿಸಿ ಎಲ್ಲ ದುಃಖಗಳನ್ನು ತ್ಯಜಿಸಿ ಅವಧಿಯು ಮುಗಿಯುವವರೆಗೆ ರಾಜ್ಯಮಾಡು- ದೇಶ, ಕೋಶ, ಪುರಜನ, ಪರಿವಾರ ಇವುಗಳ ಭಾರವನ್ನೆಲ್ಲ ಗುರುಪದರಜಸ್ಸಿಗೆ ಒಪ್ಪಿಸಿ, ಸ್ವತಃ ನೀನು—ಗುರುವು, ತಾಯಂದಿರು, ಸಚಿವರು ಇವರ ಅಪ್ಪಣೆಯಂತೆ ನಡೆದು ಪೃಥ್ವಿಯನ್ನೂ, ಪ್ರಜೆಗಳನ್ನೂ, ರಾಜಧಾನಿಯನ್ನೂ ಪಾಲಿಸು- ಮುಖ್ಯನು ಮುಖದಂತೆ ಇರಬೇಕು. ತಿನ್ನುಣ್ಣುವದಕ್ಕೆ ಆ ಮುಖವು

ಹಿಂದೇ ಇದ್ದರೂ, ಅದು ಸರ್ವಾಂಗದ ಪಾಲನಪೋಷಣಗಳನ್ನು, "ಮನಸ್ಸು ತನ್ನ ವಿಚಾರಗಳನ್ನು ಮುಚ್ಚಿ ಸುರಕ್ಷಿತವಾಗಿ ಇಡುವಂತೆ, ವಿಚಾರಪೂರ್ವಕವಾಗಿ ಮಾಡಬೇಕಾಗುವದು. ರಾಜನೀತಿಯ ಮೂಲತತ್ವವು ಇಷ್ಟೇ ಇರುವದು.

ಈ ಮೇರೆಗೆ ರಾಮಚಂದ್ರನು ಬಗೆಬಗೆಯಿಂದ ಭರತನನ್ನು ಸಮಾಧಾನಗೊಳಿಸಿದರೂ, ಭರತನಿಗೆ ರಾಮನಿಂದೇನಾದರೂ ಆಧಾರವು ದೊರೆಯದೆ ಸಮಾಧಾನವಾಗಲೊಲ್ಲದು. ಆಗ ಪ್ರಭುವು ಕೃಪೆಮಾಡಿ ತನ್ನ ಪಾದುಕೆಗಳನ್ನು ಕೊಡಲು, ಭರತನು ಆದರದಿಂದ ಅವುಗಳನ್ನು ಮಸ್ತಕದಲ್ಲಿ ಧರಿಸಿದನು. ಮಹಾಪುರುಷನ ಆ ಚರಣಪೀಠಗಳು ಪ್ರಜೆಗಳ ಪ್ರಾಣಗಳ ಇಬ್ಬರು ಆತ್ಮರಕ್ಷಕರಂತೆಯೂ, ಭರತನ ಭಕ್ತಿರತ್ನದ ಎರಡು ಪೆಟ್ಟಿಗೆಗಳಂತೆಯೂ, ಜೀವದ ಮೋಕ್ಷಸಾಧನದ ಎರಡು ಬೀಜಾಕ್ಷರಗಳಂತೆಯೂ, ಸೂರ್ಯಕುಲದ ಕಪಾಟುಗಳಂತೆಯೂ, ಕರ್ಮಕಾಂಡದ ಎರಡು ಹಸ್ತಗಳಂತೆಯೂ, ಸೇವಾಧರ್ಮದ ವಿಮಲ ನೇತ್ರಗಳಂತೆಯೂ ಇದ್ದವು. ಪಾದುಕೆಗಳು ದೊರೆತದ್ದರಿಂದ ಭರತನಿಗೆ ಅಯೋಧ್ಯೆಯಲ್ಲಿ ಸೀತಾರಾಮರಿದ್ದರೆ ಆಗತಕ್ಕ ಸುಖವು ಪ್ರಾಪ್ತವಾಯಿತು. ಭರತನು ಅಪ್ಪಣೆಯನ್ನು ಕೇಳಿಕೊಳ್ಳಲು, ರಾಮನು ಆತನನ್ನು ಎದೆಗವಚಿಕೊಂಡನು. ಈ ಸಂಧಿಯನ್ನು ಸಾಧಿಸಿ ಇಂದ್ರನು ಜನರ ಮನಸ್ಸುಗಳನ್ನು ಉಚ್ಚಾಟನಗೊಳಿಸಿದನು. ಇದರಿಂದ ಹದಿನಾಲ್ಕುವರ್ಷಗಳ ವರೆಗೆ ರಾಮನ ಪುನರಾಗಮನದ ಆಶೆಯಿಂದ ಪ್ರಜೆಗಳ ಪ್ರಾಣರಕ್ಷಣಕ್ಕೆ ಮಾರ್ಗವಾಯಿತು, ಇಲ್ಲದಿದ್ದರೆ ಸೀತಾರಾಮಲಕ್ಷ್ಮಣರ ವಿರಹರೂಪ ದುರ್ಧರರೋಗದಿಂದ ಯಾವತ್ತು ಜನರು ತಳಮಳಿಸಿ ಪ್ರಾಣಬಿಡುತ್ತಿದ್ದರು; ಆದರೆ ಶ್ರೀರಾಮನ ಕೃಪೆಯಿಂದಲೇ ಈ ಅತಿಪ್ರಸಂಗದ ನಿವಾರಣವಾಗಿ, ದೇವತೆಗಳ ಕುಟಿಲತನವು, ಸಹಾಯಕವೂ, ಹಿತಕರವೂ ಆಯಿತು. ಬಳಿಕ ಶ್ರೀರಾಮನು ಶತ್ರುಘ್ನನನ್ನು ಅಪ್ಪಿಕೊಂಡು ಅಯೋಧ್ಯೆಗೆ ಹೋಗಲು ಆ ಇಬ್ಬರು ಬಂಧುಗಳಿಗೆ ಅಪ್ಪಣೆಕೊಟ್ಟನು. ಸೇವಕರೂ, ಸಚಿವರೂ ಭರತನ ಅಪ್ಪಣೆಯನ್ನು ಪಡೆದು ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಿದರು.

ವಸಿಷ್ಠ, ವಿಶ್ವಾಮಿತ್ರಾದಿ ಋಷಿಗಳೂ, ಮಿಥಿಲೇಶ್ವರ-ಜನಕರೂ, ಗುಹನೂ ಉಳಿದ ಉಭಯಪಕ್ಷದ ಪರಿವಾರವೂ ಶಾಂತಮನ್ಯದಂತೆ ರಾಮನ ಅನುಜ್ಞೆಯನ್ನು ಪಡೆದು ಅಯೋಧ್ಯೆಗೆ ಪ್ರಯಾಣಬೆಳಿಸಿದರು. ಗಜಾಶ್ವಾದಿಗಳು ಕೂಡ ರಾಮನನ್ನು ಅಗಲಿ ಹೋಗಲಾರದೆ ಚಡಪಡಿಸಹತ್ತಿದವು; ರಾವಣಾದಿಗಳ ಬಾಧೆಯಿಂದ ದುಃಖಿತರಾದ ದೇವತೆಗಳು ತಮ್ಮ ಕಷ್ಟಗಳನ್ನು ತೋಡಿಕೊಳ್ಳಲು, ಪ್ರಭುವು ಅವರನ್ನು ನಮಸ್ಕರಿಸಿ ಅವರಿಗೆ ಅಭಯವಿತ್ತದ್ದರಿಂದ ಅವರು ಸಂತೋಷದಿಂದ ಹೋದರು. ಅಯೋಧ್ಯೆಯ ಹಾಗು ಮಿಥಿಲೆಯ ಉಭಯ ಪರಿವಾರವು ಆದಿನ ಯಮುನೆಯನ್ನು ದಾಟಿ ಹೋಯಿತು. ಆದಿನ ಯಾರಿಗೂ ಊಟವಾಗಲಿಲ್ಲ. ಅವರು ಭಾಗೀರಥಿಯನ್ನು ದಾಟಿ ಎರಡನೆಯ

ವಸ್ತಿಯನ್ನು ಮಾಡಿದರು. ಗುಹನು ಎಲ್ಲ ಅನುಕೂಲತೆಯನ್ನು ಒದಗಿಸಿಕೊಟ್ಟನು. ಶರಯೂ ನದಿಯನ್ನು ದಾಟಿ ಗೋಮತಿಯು ಸ್ನಾನಮಾಡಿ ಎಲ್ಲರೂ ನಾಲ್ಕನೆಯ ದಿವಸ ಅಯೋಧ್ಯೆಗೆ ಬಂದರು. ಜನಕರಾಜನು ಅಯೋಧ್ಯೆಯಲ್ಲಿ ನಾಲ್ಕುದಿವಸ ಇದ್ದು ರಾಜಕಾರಣವನ್ನೆಲ್ಲ ವ್ಯವಸ್ಥೆಗೊಳಿಸಿ, ಸಚಿವ-ವಸಿಷ್ಠ-ಭರತರಿಗೆ ಯಾವತ್ತು ಕಾರಭಾರವನ್ನು ಒಪ್ಪಿಸಿ, ತನ್ನ ಯಾವತ್ತು ಪರಿವಾರದೊಡನೆ ತನ್ನ ರಾಜಧಾನಿಗೆ ಹೊರಟನು. ಭರತನು ಸಚಿವರನ್ನೂ, ಸ್ವಾಮಿನಿಷ್ಠ ಸೇವಕರನ್ನೂ ಸಮಾಧಾನಗೊಳಿಸಿದನು. ಅವರು ತಮ್ಮ ತಮ್ಮ ಕಾರ್ಯವನ್ನು ಕೈಕೊಂಡು ಭರತನ ಅಪ್ಪಣೆಯನ್ನು ಪಾಲಿಸಹತ್ತಿದರು. ಆಮೇಲೆ ಭರತನು ಶತ್ರುಘ್ನನನ್ನು ಬೋಧಿಸಿ, ಆತನಿಗೆ ತಾಯಂದಿರ ಸೇವೆಯನ್ನು ಒಪ್ಪಿಸಿದನು. ಭರತನು ಬ್ರಾಹ್ಮಣರನ್ನು ಕರೆಸಿ ಕೈಮುಗಿದು ನಮಸ್ಕರಿಸಿ, ಶುದ್ಧ ವಿನಯದಿಂದ—"ಉಚ್ಚ-ನೀಚ, ಒಳಿತು-ಕೆಡಕು ಎಂಥ ಕಾರ್ಯಗಳಿದ್ದರೂ ಅವುಗಳ ಸಂಬಂಧದಿಂದ ನನ್ನನ್ನು ಆಜ್ಞಾಪಿಸಲಿಕ್ಕೆ ಮಾತ್ರ ಸಂಕೋಚಪಡಬಾರದು" ಎಂದು ಪ್ರಾರ್ಥಿಸಿದನು. ಆಮೇಲೆ ಪುರಜನ-ಪರಿಜನರನ್ನೂ ಕರೆಸಿ ಅವರನ್ನು ಸಮಾಧಾನಪಡಿಸಿ, ಅವರ ಸುಯಂತ್ರಿತ ವ್ಯವಸ್ಥೆಯನ್ನು ಮಾಡಿದನು. ಆಮೇಲೆ ಶತ್ರುಘ್ನನನ್ನು ಕರೆಕೊಂಡು ಗುರುಗೃಹಕ್ಕೆ ಹೋಗಿ ಸಾಷ್ಟಾಂಗವೆರಗಿ ಕೈಜೋಡಿಸಿಕೊಂಡು—"ತಮ್ಮ ಅಪ್ಪಣೆಯಂತೆ ನಾನೂ ವ್ರತಸ್ಥನಾಗಿರುವೆನು" ಎಂದು ಪ್ರಾರ್ಥಿಸಲು, ವಸಿಷ್ಠರು ಪ್ರೇಮಪುಲಕಿತಗಾತ್ರರಾಗಿ ಭರತನನ್ನು ಕುರಿತು—ಅಪ್ಪಾ ಭರತಾ, ಜಗತ್ತಿನೊಳಗಿರುವ ಧರ್ಮದ ಸಾರವನ್ನೇ ನೀನು ಮನಸ್ಸಿನಲ್ಲಿ ತರುವೆ, ಅದನ್ನೇ ನುಡಿಯುವೆ, ಅದರಂತೆಯೇ ಆಚರಿಸುವೆ" ಎಂದು ಹೇಳಿದರು. ಹೀಗೆ ಭರತನು ಗುರುಗಳ ಬೋಧಗ್ರಹಣಮಾಡಿ, ಅವರ ಆಶೀರ್ವಾದ ಪಡೆದು ಜ್ಯೋತಿಷಿಗಳಿಂದ ಉತ್ತಮ ಮುಹೂರ್ತವನ್ನು ತೆಗೆಸಿ, ಆದಿನ ಪ್ರಭುವಿನ ಪಾದುಕೆಗಳನ್ನು ಸಿಂಹಾಸನದಲ್ಲಿ ಸ್ಥಾಪಿಸಿದನು.

ಭರತನು ಯಾವತ್ತೂ ತಾಯಂದಿರ ಹಾಗು ಗುರುಗಳ ಚರಣಗಳಿಗೆರಗಿ, ಪ್ರಭುವಿನ ಪಾದುಕೆಗಳ ಅಪ್ಪಣೆಪಡೆದು ನಂದಿಗ್ರಾಮದಲ್ಲಿ ಒಂದು ಪರ್ಣಕುಟೀರವನ್ನು ಕಟ್ಟಿಸಿ ಅಲ್ಲಿ ಆ ಧರ್ಮಧುರಂಧರನು ಇರಹತ್ತಿದನು. ಆತನು ತಲೆಯಲ್ಲಿ ಜಡೆಗಳನ್ನು ಬಿಡಿಸಿ, ಮುನಿವಸ್ತ್ರಗಳನ್ನುಟ್ಟುಕೊಂಡನು. ಭೂಮಿಯಲ್ಲಿ ತಗ್ಗಮಾಡಿ ಅಲ್ಲಿ ದರ್ಭಾಸನವನ್ನು ಹಾಕಿದನು. ಖಾದ್ಯ-ವಸ್ತ್ರ-ಪಾತ್ರಗಳ ಸಂಬಂಧದಿಂದ ವ್ರತನಿಯಮಗಳನ್ನು ಆರಂಭಿಸಿದನು. ಹೀಗೆ ಪ್ರೇಮಪುರಸ್ಸರವಾಗಿ ಆತನು ಮುನಿವ್ರತವನ್ನು ಪಾಲಿಸತೊಡಗಿದನು. ಅಲಂಕಾರಗಳನ್ನೂ, ವಸ್ತ್ರಗಳನ್ನೂ, ಭೋಗವಿಲಾಸಗಳನ್ನೂ ತ್ರಿಕರಣಪೂರ್ವಕವಾಗಿ ಹುಲ್ಲಿನಂತೆ ತ್ಯಜಿಸಿದನು. ಅಯೋಧ್ಯೆಯ ರಾಜ್ಯವನ್ನು ದೇವೇಂದ್ರನು ಕೂಡ ಹೊಗಳಹತ್ತಿದನು. ದಶರಥನ ಸಂಪತ್ತನ್ನು ಕೇಳಿ ಕುಬೇರನು ನಾಚಿದನು. ಆದರೆ ಅಂಥ ರಾಜ್ಯವನ್ನೂ, ಸಂಪತ್ತನ್ನೂ ಭರತನು ಲಕ್ಷಿಸದೆ ಚಂಪಕವನದಲ್ಲಿ ಭ್ರಮರನ

ಇರುವಂತೆ, ಆತನು ಅಯೋಧ್ಯಾನಗರದಲ್ಲಿ ಅನಾಸಕ್ತಿಯಿಂದ ಇರತೊಡಗಿದನು. ರಾಮನಲ್ಲಿ ಅನುರಕ್ತರಾಗಿ ಲಕ್ಷ್ಮಿಯ ವಿಲಾಸಗಳನ್ನು ಕಾರಿಕೆಯಂತೆ ತ್ಯಾಗಮಾಡುವ ಭಕ್ತರೇ ಮಹಾ ಭಾಗ್ಯಶಾಲಿಗಳಾಗಿರುವರು. ಭರತನ ದೇಹವು ದಿನದಿನಕ್ಕೆ ಅಶಕ್ತವಾಗತೊಡಗಿದರೂ, ಆತನ ಮುಖಶ್ರೀಯು ಇದ್ದಕ್ಕಿದ್ದಹಾಗೆಯೇ ಇದ್ದು, ಆತನ ತೇಜೋಬಲಗಳು ವೃದ್ಧಿಂಗತವಾಗತೊಡಗಿದವು. ಆತನು ದಿನದಿನಕ್ಕೆ ರಾಮಪ್ರೇಮದ ನಿರ್ಧಾರದಿಂದ ತುಷ್ಟನಾಗತೊಡಗಿದನು. ಆತನ ಧರ್ಮರೂಪದ ದಳದ ಅಭಿವೃದ್ಧಿಯಾಗತೊಡಗಿ, ಆತನ ಮನಸ್ಸು ಪ್ರಸನ್ನವಾಗತೊಡಗಿತು. ಭರತನ ಶುದ್ಧ ಹೃದಯಾಕಾಶದಲ್ಲಿ ಶಮ, ದಮ, ಸಂಯಮ, ನಿಯಮ, ಉಪವಾಸಗಳೆಂಬ ನಕ್ಷತ್ರಗಳೂ, ವಿಶ್ವಾಸವೆಂಬ ಧ್ರುವತಾರೆಯೂ, ಹದಿನಾಲ್ಕುವರ್ಷದ ಅವಧಿಯೆಂಬ ಚಂದ್ರಕಿರಣಗಳೂ, ಸ್ವಾಮಿಸ್ಮರಣರೂಪ ಆಕಾಶಗಂಗೆಯೂ ಪ್ರಕಾಶಿಸತೊಡಗಿದವು. ಅಕ್ಷಯ್ಯನೂ, ನಿರ್ದೋಷನೂ ಆದ ರಾಮಪ್ರೇಮರೂಪಚಂದ್ರಮನು ತಾರಾಗಣದೊಡನೆ ದೇದೀಪ್ಯಮಾನವಾಗಿ ಶೋಭಿಸತೊಡಗಿದನು. ಭರತನ ಹೃದಯದಲ್ಲಿ ಪ್ರೇಮವು ಹಿಡಿಸದಾಗಿ ಆತನು ನಿತ್ಯದಲ್ಲಿ ಪ್ರಭುವಿನ ಪಾದುಕೆಗಳನ್ನು ಪೂಜಿಸಿ, ಅವುಗಳ ಅಪ್ಪಣೆ ಕೇಳಿಕೇಳಿ ರಾಜಕಾರಣಗಳನ್ನು ನಡಿಸುತ್ತಿದ್ದನು. ಭರತನ ದೇಹದಲ್ಲಿ ರೋಮಾಂಚಗಳು, ಹೃದಯದಲ್ಲಿ ಸೀತಾರಾಮಮೂರ್ತಿಯು, ಜಿಹ್ವಾಗ್ರದಲ್ಲಿ ರಾಮನಾಮದ ಜಪವು, ನೇತ್ರಗಳಲ್ಲಿ ಅಶ್ರುಗಳು ಒಪ್ಪುತ್ತಲಿದ್ದವು. ಸೀತಾರಾಮಲಕ್ಷ್ಮಣರು ವನದಲ್ಲಿದ್ದು ದೇಹವನ್ನು ಕಷ್ಟಪಡಿಸುತ್ತಿದ್ದರು; ಆದರೆ ಭರತನು ಮನೆಯಲ್ಲಿದ್ದೇ ಅದನ್ನೆಲ್ಲ ಮಾಡುತ್ತಿದ್ದನು. ಇವೆರಡೂ ಪಕ್ಷಗಳನ್ನು ಹೋಲಿಸಿನೋಡಿ, ಭರತನೇ ಎಲ್ಲರೀತಿಯಿಂದ ಪ್ರಶಂಸನೀಯನೆಂದು ಜನರು ಅನ್ನುತ್ತಿದ್ದರು. ಆತನ ವ್ರತನಿಯಮಾದಿಗಳನ್ನು ನೋಡಿ ಸಂತಜನರೂ ಸಂಕೋಚಪಡುತ್ತಿದ್ದರು. ಆತನ ಮೈಯಿಂದ ನಿರ್ಧಾರವನ್ನು ನೋಡಿ ಮುನಿರಾಜ-ವಸಿಷ್ಠರು ಕೂಡ ನಾಚುತ್ತಿದ್ದರು. ಮಧುರವೂ, ಸುಂದರವೂ, ಪರಮಪವಿತ್ರವೂ ಆದ ಭರತನ ಆಚರಣೆಯು ಆನಂದಮಂಗಲಗಳನ್ನು ಕೊಡುವಂತಹದಿರುವದು; ಅದು ಕಲಿಸಂಬಂಧದ ಪಾಪ-ದುಃಖಗಳನ್ನು ಪೂರ್ಣ ನಾಶಮಾಡುವಂತಹದಾಗಿದ್ದು, ಗಾಢವಾದ ಮೋಹರೂಪರಾತ್ರಿಯನ್ನು ನಾಶಮಾಡುವ ಸೂರ್ಯನಂತೆ ಇರುವದು. ಅದು ಪಾಪರೂಪವಾದ ಆನೆಗೆ ಸಿಂಹನಂತೆ ಇದ್ದು, ಯಾವತ್ತು ಸಂತಸಮುಚ್ಚಯವನ್ನು ಸಮಾಧಾನಗೊಳಿಸುವಂತಹದಾಗಿರುವದು. ಅದು ಜನರನ್ನು ರಂಜಿಸುವಂತಹದೂ, ಭವಭಾರವನ್ನು ಭಂಜಿಸುವಂತಹದೂ ಆಗಿದ್ದು, ರಾಮಪ್ರೇಮರೂಪಚಂದ್ರನ ಸತ್ವವಾಗಿರುವದು. ಸೀತಾರಾಮರ ಪ್ರೇಮಾಮೃತದಿಂದ ಪೂರ್ಣನಾದ ಭರತನ ಜನ್ಮವಾಗದಿದ್ದರೆ, ಮುನಿಗಳ ಮನಸ್ಸಿಗೂ ಅಗಮ್ಯವಾದ

ಯಮ-ನಿಯಮ-ಶಮ-ದಮ ಮೊದಲಾದ ದುರ್ಧರವ್ರತಗಳನ್ನು ಯಾರು ಆಚರಿಸುತ್ತಿದ್ದರು? ದುಃಖಾಗ್ನಿ, ದಾರಿದ್ರ್ಯ, ದಂಭ ಇತ್ಯಾದಿ ದೋಷಗಳನ್ನು ತಮ್ಮ ಸದ್ಯಶದ ಸೆವದಿಂದ ಯಾರು ನಿವಾರಿಸುತ್ತಿದ್ದರು? ಅದರಂತೆ ಈ ಕಾಲದಲ್ಲಿ ತುಲಸೀದಾಸನಂಥ ಶಠನನ್ನು ಒತ್ತಾಯದಿಂದ ರಾಮನೆದುರಿಗೆ ಯಾರು ತಂದು ನಿಲ್ಲಿಸುತ್ತಿದ್ದರು? ತುಲಸೀದಾಸರು ಹೇಳುವರೇನಂದರೆ—ಭರತನ ಚರಿತವನ್ನು ನಿಯಮಪೂರ್ವಕವಾಗಿ ಆದರದಿಂದ ಶ್ರವಣಮಾಡುವವರು ಭವರಸದಿಂದ ವಿರಕ್ತರಾಗಿ, ಅವಶ್ಯವಾಗಿ ಸೀತಾರಾಮಚರಣದಲ್ಲಿ ಪ್ರೇಮವಿಡಬಹುದು.



॥ ಶ್ರೀ ಗಣೇಶಾಯ ನಮಃ ॥

ಶ್ರೀ ಜಾನಕೀವಲ್ಲಭೋ ವಿಜಯತೇ.

# ರಾಮಚರಿತ-ಮಾನಸ

## ಶ್ರೀ ತುಲಸೀ-

# ರಾಮಾಯಣಾಮೃತ



# ತೃತೀಯ ಸೋಪಾನ

## - ಅರಣ್ಯಕಾಂಡ -

ಶ್ರೀ ಶಂಕರನು ಪಾರ್ವತಿಯನ್ನು ಕುರಿತು—ಎಲೈ ಪಾರ್ವತೀ, ರಾಮಚಂದ್ರನ ಗುಣಗಳು ಗೂಢವಾಗಿರುವವು. ಅವುಗಳ ಸಮಾಲೋಚನದಿಂದ ಪಂಡಿತರಿಗೂ, ಮುನಿಜನರಿಗೂ ವೈರಾಗ್ಯಪ್ರಾಪ್ತಿಯಾಗುವದು. ಧರ್ಮಶ್ರದ್ಧೆಯಿಲ್ಲದವರಿಗೂ, ಹರಿವಿಮುಖರಾದವರಿಗೂ ಮಾತ್ರ ಮೋಹವು ಉತ್ಪನ್ನವಾಗುವದು. ಪ್ರಭುವಿನ ವಿಷಯದಲ್ಲಿರುವ ಪುರಜನರ, ಹಾಗು ಭರತನ ವಿಷಯದ, ಅನುಪಮವೂ, ಸ್ಪೃಹಣೀಯವೂ ಆದ ಪ್ರೇಮವನ್ನು ಯಥಾಮತಿಯಾಗಿ ವರ್ಣಿಸಿದೆನು. ಇನ್ನು ಸುರ-ನರ-ಮುನಿಗಳ ಸುಖ ಸಂತೋಷಗಳಿಗಾಗಿ ಪ್ರಭುವು ಮಾಡಿದ ಅರಣ್ಯದೊಳಗಿನ ಪವಿತ್ರ ಚರಿತ್ರಗಳನ್ನು ಹೇಳುವೆನು ಕೇಳು. ಒಂದು ದಿನ ಶ್ರೀ ರಾಮನು ಸುಂದರವಾದ ಹೂಗಳನ್ನು ಎತ್ತಿ ಸ್ವಹಸ್ತಗಳಿಂದ ಅವುಗಳ ಅಲಂಕಾರಗಳನ್ನು ಮಾಡಿ ಅವುಗಳನ್ನು ಅತ್ಯಂತ ಪ್ರೇಮದಿಂದ ಸೀತೆಗೆ ಇಡಿಸಿದನು. ಆ ಕಾಲದಲ್ಲಿ ಅವರು ಒಂದು ಸುಂದರವಾದ ಸ್ಫಟಿಕಶಿಲೆಗಳ ಮೇಲೆ ಕುಳಿತಿದ್ದರು. ಆಗ ಮಹಾ ಮಂದಮತಿಯಾದ ಇಂದ್ರಪುತ್ರ ಜಯಂತನು, ಸಮುದ್ರದ ನೆಲೆಗಾಣಲಿಚ್ಛಿಸುವ ಇರುವೆಯಂತೆ, ಕಾಗೆಯ ರೂಪವನ್ನು ಧರಿಸಿ ಶ್ರೀ ರಾಮನ ಬಲವನ್ನು ಪರೀಕ್ಷಿಸುವದಕ್ಕಾಗಿ ಸೀತೆಯ ಕಾಲಿಗೆ ಚುಂಚುವಿನಿಂದ ಚುಚ್ಚಿ ಓಡಿಹೋದನು. ಆಗ ಸೀತೆಯ ಕಾಲಿನಿಂದ ಒಂದೇಸವನೆ ರಕ್ತವು ಸೋರಹತ್ತಿತು. ಅದನ್ನು ನೋಡಿ ಶ್ರೀರಾಮನು

ಹುಲ್ಲಕಡ್ಡಿಯದೊಂದು ಧನುಷ್ಯವನ್ನು ಮಾಡಿ, ಅದಕ್ಕೆ ಹುಲ್ಲಕಡ್ಡಿಯದೇ ಒಂದು ಬಾಣವನ್ನು ಹೂಡಿ ಅಭಿಮಂತ್ರಿಸಿ ಬಿಟ್ಟನು. ಮಂತ್ರಪ್ರೇರಣೆಯಿಂದ ಆ ಹುಲ್ಲಕಡ್ಡಿಯು ಬ್ರಹ್ಮಾಸ್ತ್ರವಾಗಿ ಅದು ಆ ಕಾಕರೂಪದ ಜಯಂತನ ಬೆನ್ನಟ್ಟಿಹೋಯಿತು. ಆಗ ಜಯಂತನು ತನ್ನ ಮೂಲಸ್ವರೂಪವನ್ನು ಧರಿಸಿ ತಂದೆಯಾದ ಇಂದ್ರನಬಳಿಗೆ ಹೋದನು; ಆದರೆ ರಾಮದ್ರೋಹಿಯೆಂದು ತಿಳಿದು ಇಂದ್ರನು ತನ್ನ ಆ ಮಗನನ್ನು ರಕ್ಷಿಸಲಿಲ್ಲ. ಆಗ ಜಯಂತನು, "ಸುದರ್ಶನ ಚಕ್ರದ ಭಯದಿಂದ ಓಡುವ ದೂರ್ವಾಸನಂತೆ" ಸತ್ಯಲೋಕ, ಕೈಲಾಸ ಮೊದಲಾದ ಸ್ಥಾನಗಳಿಗೆ ಓಡಿಹೋಗಿ, ತನ್ನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದನು; ಆದರೆ ಆತನಿಗೆ "ಕುಳಿತುಕೋ" ಎಂದು ಸಹ ಯಾರೂ ಅನ್ನಲಿಲ್ಲ; ಯಾಕೆಂದರೆ ರಾಮಶತ್ರುವನ್ನು ರಕ್ಷಿಸಲು ಯಾರು ಸಮರ್ಥರಾದಾರು? ಎಲೈ ಗರುಡನೇ ಕೇಳು. ರಾಮಶತ್ರುವಿಗೆ ಸಾಕ್ಷಾತ್ ತಾಯಿಯು ಕೂಡ ಮೃತ್ಯುಸಮಾನಳಾಗಿ ತಂದೆಯು ಯಮನಂತೆ ಆಗುವನು; ಅಮೃತವು ವಿಷವಾಗುವದು; ಮಿತ್ರನು ನೂರು ಜನ ಶತ್ರುಗಳಂತೆ ಕೃತಿಮಾಡತೊಡಗುವನು; ಗಂಗಾ ನದಿಯು ವೈತರಣೀ ನದಿಯಂತೆ ಪೀಡಿಸುವದು. ಒಟ್ಟಿಗೆ, ಯಾವತ್ತು ಬ್ರಹ್ಮಾಂಡವು ರಾಮವಿಮುಖನಿಗೆ ಅಗ್ನಿಯಂತೆ ತೋರುವದು.

ಹೀಗೆ ಜಯಂತನು ಓಡಹತ್ತಿದಂತೆ ರಾಮಬಾಣವು ಬಹು ಚಾಪಲ್ಯದಿಂದ ಆತನ ಬೆನ್ನು ಹತ್ತಿತು. ಜಯಂತನ ದುಃಖವನ್ನು ನೋಡಿ ನಾರದರಿಗೆ ದಯವು ಉತ್ಪನ್ನವಾಯಿತು; ಯಾಕೆಂದರೆ ಸಂತರ ಅಂತಃಕರಣವು ಬಹು ಮೃದುವಾಗಿರುವದು. ನಾರದರು ಜಯಂತನಿಗೆ—"ಶರಣಾಗತ ವತ್ಸಲಾ, ನನ್ನನ್ನು ರಕ್ಷಿಸು" ಎಂದು ಪ್ರಾರ್ಥಿಸುವದಕ್ಕೆ ಕಲಿಸಿ, ರಾಮನಬಳಿಗೆ ಕಳಿಸಿದರು. ಆಗ ಜಯಂತನು—"ದಯಾಲುವಾದ ರಾಮನೇ, ತ್ರಾಹಿ ತ್ರಾಹಿ" ಎಂದು ನುಡಿಯುತ್ತ ಆತುರತೆಯಿಂದ, ಆದರೆ ಅಂಜುತ್ತಂಜುತ್ತ ರಾಮನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡು—ಪ್ರಭುವೇ, ನಿನ್ನ ಅತುಲಬಲವನ್ನೂ, ಅಸಾಧಾರಣ ಪ್ರಭಾವವನ್ನೂ ಮಂದಮತಿಯಾದ ನಾನು ತಿಳಿಯಲಾರದೆನು. ನನ್ನ ಕರ್ಮದ ಫಲವನ್ನು ನಾನು ಭೋಗಿಸಿದೆನು. ಪ್ರಭೋ, ನನ್ನನ್ನು ರಕ್ಷಿಸಬೇಕು, ನಾನು ನಿನಗೆ ಶರಣು ಬಂದಿದ್ದೇನೆ. ಎಂದು ಪ್ರಾರ್ಥಿಸುವನು. ಜಯಂತನ ಆರ್ತವಾಣಿಯನ್ನು ಕೇಳಿ ದಯಾಘನನಾದ ರಾಮಚಂದ್ರನು, ಆ ಕಾಕರೂಪ ಜಯಂತನನ್ನು ಏಕಾಕ್ಷನನ್ನಾಗಿ ಮಾಡಿ ಬಿಟ್ಟು ಕೊಟ್ಟನು. ಮೋಹವಶನಾಗಿ ದ್ರೋಹ ಬಗೆದದ್ದರಿಂದ ಆ ಜಯಂತನು ವಧಾರ್ಹನಾಗಿದ್ದರೂ ಪ್ರಭುವು ಆತನನ್ನು ಕರುಣಿಸಿ ಬಿಟ್ಟುಬಿಟ್ಟನು. ರಘುವೀರನಂಥ ದಯಾಳುವು ಅನ್ಯರು ಯಾರಿರುವರು? ಹೀಗೆ ಚಿತ್ರಕೂಟದಲ್ಲಿರುವಾಗ ಶ್ರೀ ರಾಮನು ಇಂತಹ ಅಮೃತತುಲ್ಯವಾದ ಅನೇಕ ಚರಿತ್ರಗಳನ್ನು ಮಾಡಿದನು. ಆತನು ಮನಸ್ಸಿನಲ್ಲಿ——ಎಲ್ಲರೂ ನನ್ನನ್ನು ಗುರುತಿಸುವದರಿಂದ ಇನ್ನುಮುಂದೆ ಇಲ್ಲಿ ಜನರ

ಗದ್ದಲವು ಬಹಳವಾಗುವದು. ಆದ್ದರಿಂದ ನಾನು ಯಾವತ್ತು ಋಷಿಗಳ ಅನುಜ್ಞೆ ಪಡೆದು ಎರಡನೆಯ ಅರಣ್ಯಕ್ಕೆ ಹೋಗಬೇಕು, ಎಂದು ಯೋಚಿಸಿ ಪ್ರಭುವು ಸೀತಾ ಲಕ್ಷ್ಮಣರೊಡನೆ ಅಲ್ಲಿಂದ ಹೊರಟನು. ಆತನು ಅತ್ರಿ ಋಷಿಗಳ ಆಶ್ರಮಕ್ಕೆ ಬರಲು, ಅವರು ರೋಮಸಂಚಿತರಾಗಿ ಧಾವಿಸಿ ರಾಮನಿಗೆ ಎದುರಾಗಿ ಬರತೊಡಗಿದರು. ಅವರನ್ನು ನೋಡಿ ರಾಮನೂ ವೇಗವಾಗಿ ನಡೆದು ಲಕ್ಷ್ಮಣನೊಡನೆ ಋಷಿಗಳಿಗೆ ಸಾಷ್ಟಾಂಗ ವೆರಗಿದನು. ಆಗ ಅತ್ರಿ ಋಷಿಗಳು ಅವರಿಬ್ಬರನ್ನು ಬಿಗಿದಪ್ಪಿ ಪ್ರೇಮಾಶ್ರುಗಳಿಂದ ಅವರಿಗೆ ಸ್ನಾನ ಮಾಡಿಸಿದರು. ರಾಮರೂಪವನ್ನು ನೋಡಿ ಋಷಿಗಳ ನೇತ್ರಗಳು ತೃಪ್ತವಾದವು. ಬಳಿಕ ಅವರು ಆದರದಿಂದ ಸೀತಾ ರಾಮಲಕ್ಷ್ಮಣರನ್ನು ತಮ್ಮ ಆಶ್ರಮಕ್ಕೆ ಕರತಂದು ಪೂಜಿಸಿ, ಮೃದುಭಾಷಣಗಳನ್ನಾಡಿ ಅವರಿಗೆ ಫಲಮೂಲಾದಿಗಳನ್ನುಸಮರ್ಪಿಸಿದರು. ಅದರಿಂದ ಪ್ರಭುವಿಗೆ ಸಂತೋಷವಾಯಿತು. ಆಸನದಲ್ಲಿ ವಿರಾಜಮಾನನಾಗಿರುವ ಪ್ರಭುವನ್ನು ಕಣ್ಣುತುಂಬ ನೋಡಿ ಚತುರರಾದ ಅತ್ರಿಮುನಿಗಳು ಕೈಜೋಡಿಸಿ—ಎಲೈ ಪ್ರಭುವೇ, ನೀನು ಅದ್ವಿತೀಯನೂ, ಅದ್ಭುತನೂ, ನಿಷ್ಕಾಮನೂ, ಈಶ್ವರನೂ, ವ್ಯಾಪಕನೂ, ಜಗದ್ಗುರುವೂ, ಅವಸ್ಥಾತೀತನೂ, ಅಸಾಧಾರಣನೂ, ಭಕ್ತಿಪ್ರಿಯನೂ, ದುರ್ಬುದ್ಧಿಯ ಜನರಿಗೆ ದುಷ್ಪ್ರಾಪ್ಯನೂ, ಸ್ವಭಕ್ತರ ಕಲ್ಪವೃಕ್ಷವೂ, ಸಮದರ್ಶಿಯೂ, ಸಜ್ಜನ ಸೇವಿತನೂ ಆಗಿರುವೆ. ಇಂಥ ನಿನ್ನನ್ನು ನಾನು ನಮಸ್ಕರಿಸುವೆನು. ನಿನ್ನ ಚರಣಕಮಲದ ಭಕ್ತಿಯನ್ನು ನನಗೆ ಕೊಡು. ನನ್ನ ಬುದ್ಧಿಯು ನಿನ್ನ ಚರಣಾರವಿಂದವನ್ನು ಎಂದೂ ತ್ಯಜಿಸಬಾರದು, ಎಂದು ಪ್ರಾರ್ಥಿಸಿದರು.

ಸುಶೀಲಳೂ, ನಮ್ರಳೂ ಆದ ಸೀತೆಯು ಅತ್ರಿಋಷಿಯ ಪತ್ನಿಯಾದ ಅನಸೂಯೆಯ ಚರಣಗಳಿಗೆರಗಿದಳು. ಆಗ ಅನಸೂಯೆಗೆ ಬಹಳ ಆನಂದವಾಯಿತು. ಆಕೆಯು ಆಶೀರ್ವದಿಸಿ ಸೀತೆಯನ್ನು ಹತ್ತರ ಕುಳ್ಳಿರಿಸಿಕೊಂಡಳು. ಆಕೆಯು ದಿನಾಲು ಹೊಸ ಹೊಸ ವಸ್ತ್ರಗಳನ್ನೂ, ಅಲಂಕಾರಗಳನ್ನೂ ಸೀತೆಗೆ ಉಡಿಸಿ ತೊಡಿಸಿ ಆನಂದಪಡುವಳು. ಅನಸೂಯೆಯು ಸೀತೆಯೊಡನೆ ಮಾತಾಡುತ್ತಾಡುತ್ತ ಪ್ರಸಂಗವಶಾತ್ ಸ್ತ್ರೀಧರ್ಮವನ್ನು ಕುರಿತು ಪ್ರತಿಪಾದಿಸತೊಡಗಿದಳು. ಆಕೆಯು ಸೀತೆಯನ್ನು ಕುರಿತು–ಎಲೈ ರಾಜಕುಮಾರೀ, ಸೀತೇ ಕೇಳು. ಸ್ತ್ರೀಗೆ ತಾಯಿತಂದೆಗಳೂ, ಅಣ್ಣತಮ್ಮಂದಿರೂ ಹಿತಕರ್ತೃಗಳಾಗಿರುವರು; ಆದರೆ ಅವರಿಂದಾಗುವ ಹಿತಕ್ಕೆ ಏನಾದರೊಂದು ಮೇರೆಯು ಇರುತ್ತದೆ; ಆದರೆ ಜಾನಕೀ, ಸ್ತ್ರೀಗೆ ಅಮಿತ ಸುಖವನ್ನು ಕೊಡುವವನು ಒಬ್ಬ ಪತಿಯು ಮಾತ್ರ ಆಗಿರುವನು. ಆತನನ್ನು ಸೇವಿಸದ ಸ್ತ್ರೀಯು ಅಧಮಳೆಂದು ತಿಳಿಯತಕ್ಕದ್ದು. ಧೈರ್ಯ, ಧರ್ಮ, ಮಿತ್ರ, ಭಾರ್ಯಾ ಈ ನಾಲ್ವರಪರೀಕ್ಷೆಯು ಆಪತ್ಕಾಲದಲ್ಲಿ ಆಗುತ್ತಿರುತ್ತದೆ. ಪತಿಯು ವೃದ್ಧನೂ, ರೋಗಗ್ರಸ್ತನೂ, ಬುದ್ಧಿಗೇಡಿಯೂ, ಕುರುಡನೂ, ಕಿವುಡನೂ, ಸಿಟ್ಟಿನವನೂ, ತೀರಬಡವನೂ ಆಗಿದ್ದರೂ ಅಂಥವನನ್ನು ಅವಮಾನಗೊಳಿಸುವ

ಸ್ತ್ರೀಯು ಯಮಲೋಕದಲ್ಲಿ ನಾನಾಪ್ರಕಾರದ ದುಃಖಗಳನ್ನು ಭೋಗಿಸುವಳು. ಶರೀರದಿಂದಲೂ, ಮಾತಿನಿಂದಲೂ, ಮನಸ್ಸಿನಿಂದಲೂ ಪತಿಚರಣಗಳಲ್ಲಿಪ್ರೇಮವಿಡುವದೊಂದೇ ಸ್ತ್ರೀಗೆ ಧರ್ಮವೂ, ವ್ರತವೂ, ನಿಯಮವೂ ಆಗಿರುವದು. ಸೀತೆಯೇ, ಜಗತ್ತಿನಲ್ಲಿ ಉತ್ತಮ, ಮಧ್ಯಮ, ನೀಚ, ಲಘು ಎಂಬ ನಾಲ್ಕುವಿಧದಪತಿವ್ರತೆಯರಿರುವರೆಂದು ವೇದ-ಪುರಾಣ-ಸಂತರ ಮತವಿರುವದು. ಇವರೆಲ್ಲರ ವಿವರಣವನ್ನು ಲಕ್ಷಪೂರ್ವಕವಾಗಿ ಕೇಳು. ಉತ್ತಮ ಪತಿವ್ರತೆಯು ತನ್ನ ಪತಿಯ ಹೊರತು ಈ ಜಗತ್ತಿನಲ್ಲಿ ಸ್ವಪ್ನದಲ್ಲಿಯೂ ಕೂಡ ಅನ್ಯಪುರುಷರನ್ನು ಕಾಣುವದಿಲ್ಲವು. ಮಧ್ಯಮ ಪತಿವ್ರತೆಯು ಪತಿಯಿಂದ ಹೊರತಾದ ಅನ್ಯಪುರುಷರನ್ನು ತಂದೆಯಂತೆಯೂ, ಅಣ್ಣತಮ್ಮಂದಿರಂತೆಯೂ ನೋಡುವಳು. ಸ್ವಧರ್ಮದ ಅಥವಾ ಸ್ವಕುಲದ ವಿಚಾರದಿಂದ ಪರಪುರುಷರಿಂದ ಹೊರತಾಗಿ ಇರುವವಳು ನಿಕೃಷ್ಟ ಪತಿವ್ರತೆಯು. ಅವಸರದೊರೆಯದ್ದರಿಂದಾಗಲಿ, ಭೀತಿಯಿಂದಾಗಲಿ ಪರಪುರುಷರಿಂದ ಹೊರತಾಗಿರುವವಳು ಅಧಮಪತಿವ್ರತೆಯು. ತನ್ನ ಪತಿಯನ್ನು ವಂಚಿಸಿ ಪರಪುರುಷನೊಡನೆ ರಮಿಸುವ ಸ್ತ್ರೀಯು ನೂರಾರು ಕಲ್ಪಗಳ ವರೆಗೆ ರೌರವ ನರಕದಲ್ಲಿ ಬೇಯುವಳು. ಕ್ಷಣದ ಸುಖಕ್ಕಾಗಿ ಕೋಟ್ಯವಧಿ ಜನ್ಮಪರ್ಯಂತವಾಗಿ ಭೋಗಿಸಬೇಕಾಗುವ ದುಃಖವನ್ನು ತಿಳಿಯಲಾರದ ಸ್ತ್ರೀಯಂಥ ಆತ್ಮವಂಚಕಸ್ತ್ರೀಯು ಮತ್ತೊಬ್ಬಳಾವಳಿರುವಳು! ನಿಷ್ಕಪಟದಿಂದ ಪಾತಿವ್ರತ್ಯಧರ್ಮದಂತೆ ನಡೆಯುವ ಸ್ತ್ರೀಗೆ ಅನಾಯಾಸದಿಂದ ಪರಮಪದವು ಪ್ರಾಪ್ತವಾಗುವದು. ಪತಿಯನ್ನು ವಂಚಿಸುವ ಸ್ತ್ರೀಯು ಪುನಃ ಜನ್ಮವೆತ್ತಿದಾಗ ಅಲ್ಲಿಯೂ ತಾರುಣ್ಯಭರದಲ್ಲಿಯೇ ವಿಧವೆಯಾಗುವಳು. ಸೀತೆಯೇ, ಸ್ತ್ರೀಯು ಸ್ವಾಭಾವಿಕವಾಗಿಯೇ ಅಪವಿತ್ರಳಾಗಿರುವಳು. ಪತಿಸೇವೆಯಿಂದಲೇ ಆಕೆಗೆ ಉತ್ತಮಗತಿಯು ಪ್ರಾಪ್ತವಾಗುತ್ತಿದ್ದು, ನಾಲ್ಕು ವೇದಗಳು ಆಕೆಯ ಯಶಸ್ಸಿನ ಗಾಯನ ಮಾಡುವವು. ಭಗವಂತನಿಗೆ ತುಲಸಿಯು ಇನ್ನೂ ಪ್ರಿಯಳಾಗಿರುವಳು; ಯಾಕಂದರೆ ಆಕೆಯು ಪೂರ್ವಜನ್ಮದಲ್ಲಿ ಜಾಲಂದರ ರಾಕ್ಷಸನ ಮಹಾಪತಿವ್ರತೆಯಾದ ವೃಂದೆಯೆಂಬ ಹೆಸರಿನ ಸ್ತ್ರೀಯಾಗಿದ್ದಳು. ಸೀತೆಯೇ, ಕೇಳು. ನಿನ್ನ ನಾಮಸ್ಮರಣ ಮಾಡಿ ಸ್ತ್ರೀಯರು ಪಾತಿವ್ರತ್ಯ-ಧರ್ಮವನ್ನು ಆಚರಿಸುವರು. ನಿನಗೆ ರಾಮಚಂದ್ರನು ಪ್ರಾಣಕ್ಕಿಂತಲೂ ಪ್ರಿಯನಾಗಿರುವನು. ನಾನು ಹೇಳಿದ ಧರ್ಮವು ನಿನ್ನ ಸಲುವಾಗಿ ಆಗಿರದೆ ಜಗತ್ತಿನ ಕಲ್ಯಾಣಕ್ಕಾಗಿ ಇರುವದು.

ಅನಸೂಯೆಯ ಈ ಬೋಧವನ್ನು ಕೇಳಿ ಸೀತೆಗೆ ಪರಮಾನಂದವಾಯಿತು. ಆಕೆಯು ಆದರಪೂರ್ವಕವಾಗಿ ಅನಸೂಯೆಯ ಚರಣಗಳಿಗೆರಗಿದಳು. ಆಮೇಲೆ ಕೃಪಾನಿಧಿಯಾದ ರಾಮನು ಅತ್ರಿಋಷಿಗಳನ್ನು ಕುರಿತು——ತಮ್ಮ ಅಪ್ಪಣೆಯಾದರೆ ಎರಡನೆಯ ವನಕ್ಕೆ ಹೋಗುವೆನು. ನನ್ನಮೇಲೆ ಯಾವಾಗಲೂ ಕೃಪೆಮಾಡಬೇಕು. ನನ್ನನ್ನು ಸೇವಕನೆಂದು ತಿಳಿದು ನನ್ನಮೇಲಿನ ಪ್ರೇಮವನ್ನು ಅಖಂಡವಾಗಿ ಇರಿಸಬೇಕು, ಎಂದು ಪ್ರಾರ್ಥಿಸಲು,

ರ್ಮಧುರಂಧರಪ್ರಭುವಿನ ಆ ವಾಣಿಯನ್ನು ಕೇಳಿ ಜ್ಞಾನವಂತಮುನಿಯು ಪ್ರೇಮದಿಂದ–"ಬ್ರಹ್ಮದೇವ–ಶಿವ–ಸನಕಾದಿಕರಾದ ಪರಮಾರ್ಥವ ಬೋಧಿಸುವವರು ಯಾವನ ಕೃಪೆಯನ್ನು ಇಚ್ಛಿಸುವರೋ, ಅಂಥ ನಿಷ್ಕಾಮ ಪ್ರೇಮವಮಾಡುವ ದೀನಬಂಧು ರಾಮನು ನೀನು ಹೀಗೆ ವಿನಯದ ಮಾತುಗಳನ್ನಾಡುವ ಹೇಗೆ ಇದ್ದೀ? ಹೇ ಸ್ವಾಮಿನ್, ಈಗ ನನಗೆ ನಾನು "ಹೋಗು" ಎಂದು ಹೇಗೆ ಹೇಳಲಿ ನೀನೇ ಹೇಳು. ಎಲೈ ನಾಥನೇ, ನೀನು ಅಂತಸ್ಸಾಕ್ಷಿಯಾಗಿರುವೆ" ಎಂದು ಹೇಳಿ, ಆ ಜ್ಞಾನವಂತಮುನಿಯು ಪ್ರಭುವನ್ನು ಅವಲೋಕಿಸಲು, ಆತನ ಶರೀರದಲ್ಲಿ ರೋಮಾಂಚಗಳು ಉತ್ಪನ್ನವಾಗಿ, ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಸುರಿಯಹತ್ತಿದವು. ಅತ್ರಿಋಷಿಯು ಪ್ರಭುರಾಮನನ್ನು ಕುರಿತು—ಮನಸ್ಸು, ಜ್ಞಾನ, ಗುಣಗಳು, ಇಂದ್ರಿಯಗಳು ಇವುಗಳಿಗೆ ಅಗಮ್ಯನಾದ ಪ್ರಭುವಿನ ದರ್ಶನವು ಈಗ ನನಗೆ ಆಗುತ್ತಿರುವದಲ್ಲ! ಇದಕ್ಕೆತಕ್ಕ ಅಂಥ ಜಪತಪಗಳನ್ನಾದರೂ ನಾನು ಏನು ಮಾಡಿರುವೆನು? ತುಳಸೀದಾಸನು ಅನ್ನುವನೇನಂದರೆ— ಹಗಲು ರಾತ್ರಿ, ರಾಮಚರಿತ್ರಗಾಯನ ಮಾಡುವವರು ಜಪ–ಯೋಗ–ಧರ್ಮಾದಿ ಸಾಧನಸಮುದಾಯದ ಫಲವನ್ನು ಹೊಂದಿ, ಅನುಪಮ–ಭಕ್ತಿಯನ್ನು ದೊರಕಿಸಿಕೊಳ್ಳುವರು. ರಾಮನ ವಿಪುಲಯಶಸ್ಸು ಕಲಿಕಲ್ಮಷವನ್ನು ನಾಶಗೊಳಿಸುವಂತಹದೂ, ದುಃಖಗಳನ್ನು ನಿರ್ಮೂಲ ಮಾಡುವಂತಹದೂ ಆಗಿದ್ದು, ಸರ್ವಸುಖಗಳ ಆದಿಕಾರಣವಾಗಿರುತ್ತದೆ. ಆ ಯಶಸ್ಸನ್ನು ಭಕ್ತಿಪೂರ್ವಕವಾಗಿ ಕೇಳುವವರ ಮೇಲೆ ರಾಮಚಂದ್ರನು ಯಾವಾಗಲೂ ಪ್ರಸನ್ನನಾಗಿರುವನು. ಈ ಕಲಿಕಾಲವು ಅತ್ಯಂತ ಕಠಿಣವಾದದ್ದಾಗಿದ್ದು, ಪಾಪದ ಆಗರವಾಗಿರುತ್ತದೆ. ಈ ಯುಗದಲ್ಲಿ ಧರ್ಮ, ಜ್ಞಾನ, ಯೋಗ, ತಪಗಳು ಏನೂ ಸಾಧಿಸುವದಿಲ್ಲ; ಆದ್ದರಿಂದ ಈ ಯಾವತ್ತು ಸಾಧನಗಳ ಆಧಾರವನ್ನು ಬಿಟ್ಟು, ರಾಮನನ್ನು ಭಜಿಸುವವರೇ ನಿಜವಾಗಿ ಚತುರರೆಂದು ತಿಳಿಯತಕ್ಕದ್ದು.

ಸುರ–ನರಾದಿಕರ ಸ್ವಾಮಿಯಾದ ಶ್ರೀರಾಮನು ಮುನಿಪದಗಳಿಗೆರಗಿ ಮುಂದಿನ ವನಕ್ಕೆ ಸಾಗಿದನು. ಎಲ್ಲರ ಮುಂದೆ ಶ್ರೀರಾಮನು, ಎಲ್ಲಕ್ಕು ಹಿಂದೆ ಲಕ್ಷ್ಮಣನು ಸಾಗಿದ್ದು, ಅವರಿಬ್ಬರ ನಡುವೆ ಸೀತೆಯು, ಬ್ರಹ್ಮ–ಜೀವರ ನಡುವೆ ಮಾಯೆಯು ಶೋಭಿಸುವಂತೆ ಶೋಭಿಸುತ್ತಿದ್ದಳು. ಹಾದಿಯ ಹಿಡಿದು ಹೋಗುತ್ತಿರುವಾಗ ವಿರಾಧನೆಂಬ ಹೆಸರಿನ ರಾಕ್ಷಸನು ಎದುರಾಗಲು, ಕೂಡಲೆ ರಾಮನು ಆತನ ನಿಃಪಾತ ಮಾಡಿದನು. ಕೂಡಲೆ ಆತನಿಗೆ ದಿವ್ಯಶರೀರವು ಪ್ರಾಪ್ತವಾಯಿತು. ಆತನು ದುಃಖಿತನಾಗಿರುವದನ್ನರಿತು ಪ್ರಭುವು ಆತನಿಗೆ ಸ್ವಪದವನ್ನಿತ್ತನು. ವಿರಾಧನು ಪೂರ್ವಜನ್ಮದಲ್ಲಿ ಒಬ್ಬ ಗಂಧರ್ವನು. ಕುಬೇರನ ಸೇವೆಯನ್ನು ಆತನು ಹೊತ್ತಿಗೆ ಸರಿಯಾಗಿ ಮಾಡದ್ದರಿಂದ ಶಪಿತನಾಗಿ ಆತನು ರಾಕ್ಷಸನಾಗಿದ್ದನು. ಕುಬೇರನ ಉಃಶಾಪದಿಂದಲೇ ಆತನಿಗೆ ಇಂಥ ಮರಣವೊದಗಿ, ವೈಕುಂಠಪ್ರಾಪ್ತಿಯಾಯಿತು. ಬಳಿಕ ಶ್ರೀರಾಮನು ಜಾನಕೀ–ಲಕ್ಷ್ಮಣ

ರೊಡನೆ ಶರಭಂಗ ಮುನಿಯು ಇರುವಲ್ಲಿಗೆ ಬಂದನು. ಆಗ ಅತ್ಯಂತ ಹರ್ಷಿತನಾದ ಶರಭಂಗ ಮುನಿಯು—ಎಲೈ ಶಂಕರಮಾನಸ ರಾಜಹಂಸಾ, ದಯಾಲೋ ರಘುವೀರಾ, ಕೇಳು. ನಾನು ಬ್ರಹ್ಮಲೋಕಕ್ಕೆ ಹೋಗುತ್ತಿದ್ದೆನು; ಆದರೆ ರಾಮಾ, ನೀನು ವನಕ್ಕೆ ಬರುವೆಯೆಂಬುದನ್ನು ಕೇಳಿ, ಹಗಲು ರಾತ್ರಿ ನಿನ್ನ ಹಾದಿಯನ್ನು ನೋಡುತ್ತಿರುವೆನು. ಪ್ರಭುವೇ, ನಿನ್ನ ದರ್ಶನವಾದದ್ದರಿಂದ ನನ್ನ ಅಂತಃಕರಣವು ಶಾಂತವಾಯಿತು. ಎಲೈ ನಾಥನೇ, ನಾನು ಯಾವತ್ತು ಸಾಧನ ಹೀನನಾಗಿರುವೆನು. ನನ್ನನ್ನು ನಿನ್ನ ದೀನ ಸೇವಕನೆಂದು ತಿಳಿದು ನನ್ನ ಮೇಲೆ ನೀನು ಕೃಪೆಮಾಡಿರುವೆ ಅಥವಾ ನನ್ನನ್ನು ನೋಡಿ ನೀನು ಕೃಪೆಮಾಡಿರದೆ ನಿನ್ನ ಬಿರುದನ್ನು ಕಾಯ್ದುಕೊಂಡಿರುತೀ. ಇನ್ನು ಈ ದೇಹತ್ಯಾಗ ಮಾಡಿ ನಾನು ನಿನ್ನ ಸ್ವರೂಪದಲ್ಲಿ ಕೂಡುವವರೆಗೆ ನೀನು ದೀನನಾದ ನನ್ನ ಮೇಲೆ ಉಪಕಾರ ಮಾಡುವದಕ್ಕಾಗಿ ಇಲ್ಲಿಯೇ ಇರಬೇಕು, ಎಂದು ಹೇಳಿ, ಮುನಿಯು ತಾನು ಮಾಡಿದ ಯೋಗ, ಯಜ್ಞ, ಜಪ, ತಪ, ವ್ರತಾದಿ ಸತ್ಕರ್ಮಗಳನ್ನು ಪ್ರಭುವಿಗೆ ಅರ್ಪಿಸಿ, ಆತನಿಂದ ಭಕ್ತಿಯ ವರವನ್ನು ಬೇಡಿಕೊಂಡನು. ಈ ಮೇರೆಗೆ ಶರಭಂಗ ಮುನಿಯು ಹೃದಯದೊಳಗಿನ ಸರ್ವವಾಸನೆಗಳನ್ನು ಪರಿತ್ಯಜಿಸಿ ಚಿತೆಯನ್ನು ರಚಿಸಿ ಅದನ್ನು ಆರೋಹಿಸಿದನು. ಬಳಿಕ ಆ ಮುನಿಯು—ಎಲೈ ನೀಲಮೇಘಶ್ಯಾಮತನುವೇ, ಪ್ರಭೋ ಶ್ರೀರಾಮಾ, ನಿನ್ನ ಈ ಸಗುಣರೂಪವು ಸೀತಾ-ಲಕ್ಷ್ಮಣರಿಂದ ಸಹಿತವಾಗಿ ನನ್ನ ಹೃದಯದಲ್ಲಿ ನಿರಂತರ ವಾಸಮಾಡಲಿ. ಎಂದು ನುಡಿದು ಮುನಿಯು ಯೋಗಾಗ್ನಿಯಲ್ಲಿ ತನ್ನ ದೇಹವನ್ನು ದಗ್ಧಮಾಡಿ ರಾಮಕೃಪೆಯಿಂದ ವೈಕುಂಠಕ್ಕೆ ಹೋದನು. ಮುನಿಯು ರಾಮಸ್ವರೂಪದಲ್ಲಿ ಲೀನನಾಗಲಿಲ್ಲ; ಯಾಕಂದರೆ, ಆತನು ಮೊದಲೇ ದ್ವೈತಭಕ್ತಿಯ ವರವನ್ನು ಬೇಡಿಕೊಂಡಿದ್ದನು. ಮುನಿವರ್ಯನ ಈ ಗತಿಯನ್ನು ನೋಡಿ ಋಷಿ ಸಮುದಾಯವು ಅತ್ಯಂತ ಹರ್ಷಿತವಾಗಿ ಜಯ ಜಯ ಧ್ವನಿಯಿಂದ ಶ್ರೀರಾಮನನ್ನು ಸ್ತುತಿಸಿತು.

ಬಳಿಕ ಶ್ರೀ ರಾಮನು ಮುಂದಿನ ವನಕ್ಕೆ ಸಾಗಲು, ಆತನೊಡನೆ ಅನೇಕ ಮುನಿಗಣವೂ ಹೊರಟಿತು. ಹಾದಿಯಲ್ಲಿ ಎಲುವಿನ ರಾಶಿಯು ಬಿದ್ದಿರುವದನ್ನು ನೋಡಿ ಕಳವಳಗೊಂಡ ಶ್ರೀರಾಮನು ಇದೇನೆಂದು ಮುನಿಜನರನ್ನು ಕೇಳಲು, ಅವರು—"ಸ್ವಾಮಿನ್, ನೀನು ಸರ್ವದರ್ಶಿಯೂ, ಅಂತರ್ಯಾಮಿಯೂ ಆಗಿರುವೆ; ಅಂದಬಳಿಕ ಎಲ್ಲವೂ ನಿನಗೆ ಗೊತ್ತಿದ್ದು ಹೀಗೇಕೆ ಕೇಳುವೆ? ರಾಕ್ಷಸ ಸಮುದಾಯದ ಭಕ್ಷ್ಯಸ್ಥಾನದಲ್ಲಿ ಬಿದ್ದಿರುವ ಮುನಿಗಳ ಅಸ್ಥಿಗಳಿವು," ಎಂದು ಹೇಳಿದರು. ಅದನ್ನು ಕೇಳಿದ ಕೂಡಲೆ ರಾಮನ ಕಣ್ಣುಗಳು ಅಶ್ರುಪೂರ್ಣವಾದವು. ಆಗ ಆತನು—"ಪೃಥ್ವಿಯನ್ನು ರಾಕ್ಷಸಹೀನವಾಗಿ ಮಾಡುವೆನು" ಎಂದು ಕೈಯೆತ್ತಿ ಪ್ರತಿಜ್ಞೆಮಾಡಿದನು. ಯಾವತ್ತು ಋಷಿಗಳ ಆಶ್ರಮಕ್ಕೆ ಹೋಗಿ ಶ್ರೀರಾಮನು ಅವರನ್ನು ಸಂತುಷ್ಟರಾಗಮಾಡಿದನು. ಅಗಸ್ತ್ಯಮುನಿಯ ಶಿಷ್ಯನಾದ ಸುತೀಕ್ಷ್ಣನೆಂಬ ಒಬ್ಬ ಮುನಿಯು ಅದೇ ವನದಲ್ಲಿದ್ದನು. ಆತನು

ಭಗವಂತನಲ್ಲಿ ಅನುರಕ್ತನಾಗಿದ್ದು, ತ್ರಿಕರಣಗಳಿಂದ ರಾಮನ ಚರಣಗಳ ಉಪಾಸನೆ ಮಾಡುತ್ತಿದ್ದನು. ಆತನು ಕನಸಿನಲ್ಲಿ ಯೂ ಅನ್ಯದೇವತೆಯ ಆಶ್ರಯ ಮಾಡಿದವನಲ್ಲ. ಪ್ರಭುವು ಬಂದ ಸುದ್ದಿಯು ಕಿವಿಗೆ ಬಿದ್ದಕೂಡಲೆ ಆತನು ಆತುರನಾಗಿ ಅನೇಕ ಮನೋರಥಗಳನ್ನು ಕಲ್ಪಿಸುತ್ತ ಓಡುತ್ತ ಬರುವಾಗ ಮನಸ್ಸಿನಲ್ಲಿ— "ದೀನಬಂಧುವಾದ ರಘುರಾಜನು ನನ್ನಂಥ ಶಠನ ಮೇಲೆ ದಯಮಾಡಬಹುದೇ? ಸ್ವಾಮಿ ರಾಮಚಂದ್ರನು ನನ್ನನ್ನು ತನ್ನ ಸೇವಕನೆಂದು ತಿಳಿದು ಲಕ್ಷ್ಮಣನೊಡನೆ ನನ್ನನ್ನು ಕಾಣಬಹುದೇ? ನನ್ನ ಹೃದಯದಲ್ಲಿ ದೃಢವಿಶ್ವಾಸವಿರದೆ, ನನ್ನಲ್ಲಿ ಭಕ್ತಿ, ವೈರಾಗ್ಯ, ಜ್ಞಾನಗಳಲ್ಲಿ ಒಂದೂ ಇರುವದಿಲ್ಲ. ನಾನು ಸತ್ಸಂಗ, ಯೋಗ, ಜಪ, ಯಾಗ ಇವುಗಳಲ್ಲಿ ಯಾವದನ್ನೂ ಮಾಡಿರದೆ, ಶ್ರೀರಾಮನ ಚರಣಕಮಲಗಳಲ್ಲಿ ನನ್ನ ನಿಶ್ಚಲ ಪ್ರೇಮವೂ ಇರುವದಿಲ್ಲ; ಕರುಣಾನಿಧಾನನಾದ ಪ್ರಭುವಿಗೆ ಅನನ್ಯಗತಿಕರಾದವರೇ ಪ್ರಿಯರಾಗಿರುವದೊಂದು ಆತನ ಬಿರುದಾಗಿರುವದು. ಆದ್ದರಿಂದ ಇಂದು ಆ ಭವಭಂಜನನ ಮುಖಕಮಲವು ನನ್ನ ಕಣ್ಣಿಗೆ ಬಿದ್ದು ನಾನು ಧನ್ಯನಾಗುವೆನು" ಎಂದು ಆಲೋಚಿಸುತ್ತ, ಆ ಜ್ಞಾನಿಯಾದ ಮುನಿಯು ಪ್ರೇಮಭರದಲ್ಲಿ ಅತ್ಯಂತ ನಿಮಗ್ನನಾದನು. ತಾನು ಸರಳಮಾರ್ಗದಿಂದ ಹೋಗುವೆನೋ, ಅಡ್ಡಹಾದಿಯಿಂದ ಹೋಗುವೆನೋ ಎಂಬದೂ ಆತನಿಗೆ ತಿಳಿಯದಂತಾಯಿತು. ನಾನು ಯಾರು, ಎಲ್ಲಿಗೆ ಹೋಗುವೆನು ಎಂಬ ಎಚ್ಚರವೂ ಆತನಿಗೆ ಉಳಿಯಲಿಲ್ಲ. ಒಮ್ಮೆ ಆತನು ಹಿಂದುರುಗಿ ಓಡುವನು, ಒಮ್ಮೆ ಪ್ರಭುವಿನ ಗುಣಗಾನಮಾಡುತ್ತ ಕುಣಿಯುವನು! ಆ ಮುನಿಗೆ ಅಖಂಡವಾದ ಪ್ರೇಮಭಕ್ತಿಗಳು ಪ್ರಾಪ್ತವಾಗಿದ್ದವು. ಶ್ರೀರಾಮಚಂದ್ರನು ಗಿಡದ ಮರೆಯಲ್ಲಿ ನಿಂತುಕೊಂಡು ಇದನ್ನೆಲ್ಲ ನೋಡುತ್ತಿದ್ದನು. ಆತನ ಉತ್ಕಟ ಪ್ರೇಮವನ್ನು ನೋಡಿ ಭವಹರಣ ರಘುವೀರನು ಆತನ ಹೃದಯದಲ್ಲಿ ಪ್ರಕಟನಾದನು. ಆಗ ಆ ಮುನಿಯು ಮಾರ್ಗದಲ್ಲಿಯೇ ಅಚಲನಾಗಿ ಕುಳಿತುಕೊಂಡನು. ಆತನ ಶರೀರವು ಹಲಸಿನಹಣ್ಣಿನಂತೆ ರೋಮಾಂಚಿತವಾಯಿತು. ಬಳಿಕ ಶ್ರೀರಾಮನು ತೀರ ಆತನ ಸಮೀಪಕ್ಕೆ ಹೋಗಿ, ಭಕ್ತನ ಈ ಸ್ಥಿತಿಯನ್ನು ನೋಡಿ ಮನಸ್ಸಿನಲ್ಲಿ ಪ್ರಸನ್ನನಾದನು. ರಾಮನು ಆತನನ್ನು ಎಚ್ಚರಗೊಳಿಸುವದಕ್ಕಾಗಿ ಬಹಳ ಯತ್ನಿಸಿದರೂ ಆತನು ಸಮಾಧಿ ಸುಖವನ್ನು ಅನುಭವಿಸುತ್ತಿದ್ದದ್ದರಿಂದ ಎಚ್ಚರಿಯಲಿಲ್ಲವು. ಆಗ ರಾಮನು ತನ್ನ ರಾಜರೂಪವನ್ನು ಅಡಗಿಸಿ, ತನ್ನ ಚತುರ್ಭುಜರೂಪವನ್ನು ಆತನ ಹೃದಯದಲ್ಲಿ ಪ್ರಕಟಮಾಡಲು, ಸುತೀಕ್ಷ್ಣನು ಮಣಿವಿಹೀನ ಸರ್ಪದಂತೆ ದುಃಖಿತನಾಗಿ ಗಾಬರಿಯಿಂದ ಕಣ್ಣು ತೆರೆದನು.

ಆಗ ಸುಖನಿಧಾನನಾದ ಶ್ಯಾಮಲ ಮೂರ್ತಿ ಶ್ರೀರಾಮನು, ಸೀತಾಲಕ್ಷ್ಮಣರೊಡನೆ ಎದುರಿಗೆ ನಿಂತಿರುವದನ್ನು ನೋಡಿ ಆ ಭಾಗ್ಯವಂತನಾದ ಮುನಿಯು ಪ್ರೇಮನಿಮಗ್ನನಾಗಿ, ಕಟ್ಟಿಗೆಯಂತೆ ಆತನ ಚರಣಗಳ ಮೇಲೆ ಬಿದ್ದನು. ಆಗ ಶ್ರೀರಾಮನು ತನ್ನ ವಿಶಾಲವಾದ ಬಾಹುಗಳಿಂದ ಆತನನ್ನು ಹಿಡಿದೆತ್ತಿ ಅಖಂಡವಾದ ಪ್ರೇಮದಿಂದ

ಆತನನ್ನು ಎದೆಗವಚಿಕೊಳ್ಳಲು, ಆಮುನಿಯು ಪ್ರಭುವಿನ ಮುಖವನ್ನು ನೋಡುತ್ತ ನಿಶ್ಚಲನಾಗಿ ಚಿತ್ರದ ಗೊಂಬೆಯಂತೆ ನಿಂತುಕೊಂಡನು. ಬಳಿಕ ಸುತೀಕ್ಷ್ಣನು ಧೈರ್ಯತಾಳಿ ಆಗಾಗ್ಗೆ ಪ್ರಭುವಿನ ಚರಣಗಳಿಗೆರಗುತ್ತ ಆತನನ್ನು ತನ್ನ ಆಶ್ರಮಕ್ಕೆ ಕರತಂದು ಬಗೆಬಗೆಯಾಗಿ ಪೂಜಿಸಿದನು. ಬಳಿಕ ಆತನು ಕೈಜೋಡಿಸಿ— ಪ್ರಭೋ, ಮಂದಮತಿಯಾದ ನಾನು ಅಪಾರ ಮಹಿಮನಾದ ನಿನ್ನನ್ನು ಏನೆಂದು ಸ್ತುತಿಸಲಿ? ನೀನು ಭಕ್ತರ ಭೇದ ಭಾವದಂತೆ ಸಗುಣನೂ, ನಿರ್ಗುಣನೂ, ಸಮವಿಷಮ ರೂಪನೂ ಇದ್ದು, ಜ್ಞಾನ-ವಾಣಿ-ಇಂದ್ರಿಯಾದಿಗಳಿಗೆ ಅಗೋಚರನಾಗಿರುತ್ತೀ. ನೀನು ಅರೂಪನೂ, ನಿರ್ಮಲನೂ, ಅಖಂಡನೂ, ನಿರ್ದೋಷನೂ, ಅಪಾರನೂ ಆಗಿದ್ದು, ಪೃಥ್ವಿಯ ಭಾರವನ್ನು ಇಳಿಸುವವನಾಗಿರುತ್ತೀ. ಎಲೈ ರಾಮನೇ, ಇಂಥ ನಿನ್ನನ್ನು ನಾನು ನಮಸ್ಕರಿಸುವೆನು. ಭಗವನ್, ಯದ್ಯಪಿ ನೀನು ವಾಸನಾರಹಿತನೂ, ವ್ಯಾಪಕನೂ, ಅವಿನಾಶಿಯೂ ಇದ್ದು ಸರ್ವರ ಹೃದಯದಲ್ಲಿ ನಿರಂತರವಾಸಿಸುತ್ತಿದ್ದರೂ, ಖರಶತ್ರು ರಾಮಾ! ಸೀತಾಲಕ್ಷ್ಮಣರೊಡನೆ ಅರಣ್ಯದಲ್ಲಿ ಸಂಚರಿಸುವ ನಿನ್ನ ಈಮೂರ್ತಿಯು ನನ್ನ ಹೃದಯದಲ್ಲಿ ವಾಸಿಸಲಿ. ನಾನು ಸೇವಕನು, ರಘುಪತಿಯು ಸ್ವಾಮಿಯು ಎಂಬ ನನ್ನ ಅಭಿಮಾನವು ಅಪ್ಪಿತಪ್ಪಿಯೂ ನನ್ನಲ್ಲಿ ನಷ್ಟವಾಗ ಬೇಡ. ಎಂದು ಪ್ರಾರ್ಥಿಸಿದನು. ಮುನಿಯ ಆ ಮಾತುಗಳನ್ನು ಕೇಳಿ ರಾಮನು ಮನಸ್ಸಿನಲ್ಲಿ ಪ್ರಸನ್ನನಾದನು. ಆತನು ಪುನಃ ಮುನಿಯನ್ನು ಅಪ್ಪಿಕೊಂಡು—ಮುನಿಯೇ, ನಾನು ಪ್ರಸನ್ನನಾಗಿದ್ದೇನೆ, ಬೇಕಾದ ವರವನ್ನು ಕೇಳಿಕೊಳ್ಳು ಅನ್ನಲು, ಮುನಿಯು ನಾನು ಎಂದೂ ವರವನ್ನೇ ಬೇಡಿಕೊಂಡಿರುವದಿಲ್ಲ. ಅದು ಸಟೆಯೋ ದಿಟವೋ ಎಂಬದು ನನಗೆ ತಿಳಿಯುವದಿಲ್ಲ. ಆದರಿಂದ ರಘುರಾಮನೇ, ನೀನು ಸೇವಕರ ಕಲ್ಯಾಣಮಾಡುವವನಾದ್ದರಿಂದ ನಿನಗೆ ಉಚಿತವಾದ ವರವನ್ನೇ ನನಗೆ ಕೊಡು, ಎಂದುಬೇಡಿಕೊಂಡನು. ಆಗ ಪ್ರಭುವು—"ಅಖಂಡ ಭಕ್ತಿ, ವಿಜ್ಞಾನ, ವೈರಾಗ್ಯಗಳು ನಿನಗೆ ಪ್ರಾಪ್ತವಾಗಿ, ನೀನು ಯಾವತ್ತು ಸದ್ಗುಣಗಳ ಹಾಗು ಜ್ಞಾನದ ಭಾಂಡಾರವಾಗುವೆ, ಎಂದು ವರವೀಯಲು, ಸುತೀಕ್ಷ್ಣನು—ಪ್ರಭುವೆ, ನೀನು ಕೊಟ್ಟ ವರವು ನನಗೆ ಮುಟ್ಟಿತು. ಇನ್ನು ನನ್ನ ಅಭೀಷ್ಟವನ್ನು ಪೂರ್ಣಮಾಡಬೇಕು. ಎಲೈ ಪ್ರಭುವೇ, ಸೀತಾಲಕ್ಷ್ಮಣರಿಂದ ಸಹಿತನಾಗಿ ಚಾಪಬಾಣಗಳನ್ನು ಧರಿಸಿ ನನ್ನ ಹೃದಯಾಕಾಶದಲ್ಲಿ ಚಂದ್ರನಂತೆ ಅಖಂಡವಾಗಿ ನೀನು ವಾಸಿಸಬೇಕು; ಮತ್ತು ನಾನು ಕಾಮನಾರಹಿತನಾಗಬೇಕು; ಎಂದು ಪ್ರಾರ್ಥಿಸಲು, "ಏವಮಸ್ತು" ಎಂದು ನುಡಿದು ಪ್ರಭುವು ಆನಂದದಿಂದ ಅಗಸ್ತ್ಯಗಳೆಡೆಗೆ ಹೋಗುವದಕ್ಕಾಗಿ ಹೊರಟನು.

ಆಗ ಆ ಸುತೀಕ್ಷ್ಣಮುನಿಯು ಶ್ರೀರಾಮನನ್ನು ಕುರಿತು—ಪ್ರಭುವೇ, ಈಆಶ್ರಮಕ್ಕೆ ಬಂದ ಬಳಿಕ ಗುರುದರ್ಶನವಿಲ್ಲದೆ ನನಗೆ ಬಹಳದಿನಗಳಾದವು. ಈಗ ನಾನು ಪ್ರಭುವಿನೊ

ಡನೆ ಗುರುದರ್ಶನಕ್ಕೆ ಬರುವೆನು. ಎಲೈ ನಾಥನೆ, ನನ್ನಿಂದ ನಿನಗೇನಾದರೂ ಉಪಯೋಗವಾಗುತ್ತದೆಂದು ನಾನು ಬರುವದಿಲ್ಲ, ಎಂದು ಹೇಳಿದನು. ಕೃಪಾನಿಧಿಯಾದ ಶ್ರೀರಾಮನು ಮುನಿಯ ಚಾತುರ್ಯವನ್ನು ನೋಡಿ ಲಕ್ಷ್ಮಣನೊಡನೆ ನಕ್ಕು ಆ ಮುನಿಯನ್ನು ತನ್ನ ಸಂಗಡ ಕರಕೊಂಡನು. ಮಾರ್ಗದಲ್ಲಿ ತನ್ನ ಅನುಪಮವಾದ ಭಕ್ತಿಯನ್ನು ನಿರೂಪಿಸುತ್ತ, ದೇವಾಧಿದೇವನಾದ ರಾಮಚಂದ್ರನು ಅಗಸ್ತ್ಯಋಷಿಗಳ ಆಶ್ರಮಕ್ಕೆ ಮುಟ್ಟಿದನು. ಆಗ ಸುತೀಕ್ಷ್ಣನು ವೇಗವಾಗಿ ಗುರುಗಳಬಳಿಗೆ ಓಡಿಹೋಗಿ ದೀರ್ಘದಂಡನಮಸ್ಕಾರಮಾಡಿ —ಎಲೈ ನಾಥನೇ, ಅಯೋಧ್ಯಾಧೀಶನೂ, ದಶರಥರಾಜನ ಕುಮಾರನೂ, ಬ್ರಹ್ಮಾಂಡದ ಆಧಾರವೂ, ಅಹೋರಾತ್ರಿ ನೀವು ಜಪಿಸುತ್ತಿರುವವನೂ ಆದ ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಡನೆ ನಿಮ್ಮನ್ನು ಕಾಣುವದಕ್ಕಾಗಿ ಬರುತ್ತಿರುವನು, ಎಂದು ಹೇಳಿದನು ಅದನ್ನು ಕೇಳಿದಕೂಡಲೆ ಅಗಸ್ತ್ಯಮಹರ್ಷಿಗಳು ರಾಮನ ಬಳಿಗೆ ಓಡುತ್ತ ಬರತೊಡಗಿದರು. ಶ್ರೀಹರಿಯನ್ನು ನೋಡಿ ಅವರ ನೇತ್ರಗಳು ಜಲಪೂರ್ಣವಾದವು. ಇಬ್ಬರು ಬಂಧುಗಳೂ ಋಷಿಗಳ ಚರಣಗಳಿಗೆ ಸಾಷ್ಟಾಂಗವಾಗಿ ಎರಗಲು, ಅಗಸ್ತ್ಯಮಹರ್ಷಿಗಳು ಅತ್ಯಂತಪ್ರೇಮದಿಂದ ಅವರನ್ನು ಹಿಡಿದೆತ್ತಿ ಆಲಿಂಗಿಸಿದರು. ಜ್ಞಾನವಂತರಾದ ಅಗಸ್ತ್ಯಋಷಿಗಳು ಪ್ರಭುವಿನ ಕುಶಲವನ್ನು ವಿಚಾರಿಸಿ ಆತನನ್ನು ಕರೆತಂದು ಆಸನದಮೇಲೆ ಕುಳ್ಳಿರಿಸಿದರು. ಬಳಿಕ ವಿವಿಧ ಪ್ರಕಾರವಾಗಿ ಪ್ರಭುವನ್ನು ಪೂಜಿಸಿ ಅವರು —"ನನ್ನಂಥ ಭಾಗ್ಯಶಾಲಿಯು ಯಾವನೂ ಇಲ್ಲವೆ"ಂದು ಹೇಳಿದರು. ಉಳಿದ ಮುನಿವೃಂದವೂ ಶ್ರೀರಾಮನನ್ನು ನೋಡಿ ಹರ್ಷಿತವಾಯಿತು. ಆಗ ಶ್ರೀರಾಮನು ಅಗಸ್ತ್ಯರನ್ನು ಕುರಿತು—ನಿಮಗೆ ಗೊತ್ತಿಲ್ಲದ್ದು ಯಾವದೂ ಇರುವದಿಲ್ಲ. ನಾನು ಬಂದಿರುವ ಕೆಲಸವು ನಿಮಗೆ ಗೊತ್ತೇ ಇರುವದು. ಆದ್ದರಿಂದ ಎಲೈ ತಾತನೆ, ಮುನಿದ್ರೋಹಿಗಳಾದ ರಾಕ್ಷಸರ ಸಂಹಾರವು ನನ್ನಿಂದ ಆಗುವಂತೆ ನನಗೆ ಆಲೋಚನೆಯನ್ನು ಹೇಳಬೇಕು; ಎಂದು ಕೇಳಲು, ಅಗಸ್ತ್ಯರು ನಕ್ಕು—ಪ್ರಭುವೆ, ಏನು ತಿಳಿದು ನನ್ನನ್ನು ಕುರಿತು ಹೀಗೆ ಪ್ರಶ್ನೆಮಾಡಿದೆ? ನಿನ್ನ ಭಜನದ ಪ್ರಭಾವದಿಂದ ನಿನ್ನ ಮಹಿಮೆಯನ್ನು ನಾನು ಕಿಂಚಿತ್ತಾಗಿ ತಿಳಿದಿರುವೆನು. ನಿನ್ನ ಮಾಯೆಯು ಅತ್ತಿಯಗಿಡದಂತೆ ವಿಶಾಲವಾದದ್ದಿದ್ದು, ಅನಂತಕೋಟಿ ಬ್ರಹ್ಮಾಂಡಗಳು ಆ ಗಿಡದ ಹಣ್ಣುಗಳಾಗಿರುವವು. ಸಕಲ ಚರಾಚರ ಜೀವಗಳು ಹುಳಗಳಂತೆ ಇದ್ದು, ಆಹಣ್ಣುಗಳ ಹೊಟ್ಟೆಯಲ್ಲಿ ಇರುತ್ತಿರುವವು; ಆದರೆ ಒಬ್ಬರು ಒಬ್ಬರನ್ನು ಅರಿತುಕೊಳ್ಳುವದಿಲ್ಲ. ಆ ಫಲಗಳನ್ನು ಭಕ್ಷಣಮಾಡುವ ಕಠಿನ—ಕರಾಲ ಕಾಲನೂ ಕೂಡ ನಿನ್ನ ಭಯದಿಂದ ನಿರಂತರವಾಗಿ ನಡಗುತ್ತಿರುವನು. ಹೀಗಿದ್ದು, ಯಾವತ್ತು ದೇವತೆಗಳ ದೇವನಾಗಿರುವ ನೀನು ಸಾಮಾನ್ಯ ಜನರಂತೆ ನನ್ನನ್ನು ಕೇಳುತ್ತಿರುವೆಯಲ್ಲ! ಎಲೈ ದಯಾನಿಧೇ, ಇನ್ನು ನೀನು ನನ್ನ ಹೃದಯದಲ್ಲಿ ಸೀತಾಲಕ್ಷ್ಮಣರೊ

ಡನೆ ವಾಸಮಾಡಿ ನನಗೆ ನಿಶ್ಚಲ ಭಕ್ತಿಯನ್ನೂ, ವೈರಾಗ್ಯವನ್ನೂ, ಸತ್ಸಂಗವನ್ನೂ, ನಿನ್ನ ಚರಣಕಮಲಗಳಲ್ಲಿ ಅಚಲ ಪ್ರೀತಿಯನ್ನೂ ವರವಾಗಿ ಕೊಡು. ನೀನು ಸಚ್ಚಿದಾನಂದನೂ, ಬ್ರಹ್ಮಸ್ವರೂಪನೂ, ಅಖಂಡನೂ, ಅನಂತನೂ ಆಗಿರುವೆ ಯೆಂದು ನಿನ್ನಲ್ಲಿಭಕ್ತಿಯನ್ನಿಡುವ ಸಂತಜನರು ಸ್ವಾನುಭವದಿಂದ ಹೇಳುತ್ತಿದ್ದರೂ, ಆಗಾಗ್ಗೆ ನಿನ್ನ ಸಗುಣ ಬ್ರಹ್ಮನಲ್ಲಿಯೇ ಪ್ರೇಮವು ಉತ್ಪನ್ನವಾಗಿ ನಿನ್ನ ರೂಪವನ್ನು ವರ್ಣಿಸಬೇಕೆನ್ನುವ ಹಾಗೆ ನನಗೆ ಆಗುತ್ತದೆ. ನೀನು ನಿನ್ನ ದಾಸರಿಗೆ ದೊಡ್ಡಿಸ್ತನ ಕೊಡು ತ್ತಿರುವದರಿಂದ, ಎಲೈ ರಘುರಾಮನೇ, ನೀನು ನನಗೆ ಪ್ರಶ್ನೆಮಾಡಿದೆ. ಪ್ರಭುವೆ ಪಂಚವಟಿಯೆಂಬ ಹೆಸರಿನ ಪರಮರಮ್ಯವೂ, ಪವಿತ್ರವೂ ಆದ ಸ್ಥಾನವಿರುವದು. ಎಲೈ ನಾಥನೇ, ಗೌತಮಮುನಿಯ ಉಗ್ರಶಾಪದ ಪರಿಮಾರ್ಜನಮಾಡಿ ಆ ದಂಡಕ ವನವನ್ನು ನೀನು ಪವಿತ್ರವಾಗಮಾಡಬೇಕು.

ಶ್ರೀರಾಮನು ಅಗಸ್ತ್ಯಋಷಿಯ ಅನುಜ್ಞೆಯನ್ನು ಪಡೆದು ಹೊರಟು ಬೇಗನೆ ಪಂಚವಟಿಗೆ ಬಂದನು. ಅಲ್ಲಿ ಜಟಾಯುವನ್ನು ಕಂಡು ಹಲವು ವಿಧವಾಗಿ ಆತನನ್ನು ಪ್ರೀತಿಸಿ ಗೋದಾವರಿಯ ಸಮೀಪದಲ್ಲಿ ಪರ್ಣಶಾಲೆಯನ್ನು ಕಟ್ಟಿಕೊಂಡು ಇರಹತ್ತಿ ದನು. ಸೀತಾರಾಮನು ಅಲ್ಲಿ ಇರಹತ್ತಿದ್ದರಿಂದ ಎಲ್ಲ ಮುನಿಗಳು ತ್ರಾಸಮುಕ್ತರಾಗಿ ಸುಖದಿಂದ ಇರತೊಡಗಿದರು. ಆ ವನ-ಪ್ರದೇಶವೂ ದಿನದಿನಕ್ಕೆ ಕಲಾಯುಕ್ತವಾಗುತ್ತ ಹೆಚ್ಚು ಹೆಚ್ಚು ರಮಣೀಯವಾಗಿ ತೋರಹತ್ತಿತು. ಒಮ್ಮೆ ಪ್ರಭುವು ಆನಂದದಿಂದ ಕುಳಿತುಕೊಂಡಿರುವಾಗ, ಲಕ್ಷ್ಮಣನುನಿಷ್ಕಪಟದಿಂದ ಅಣ್ಣನನ್ನು ಕುರಿತು- ಎಲೈ ಸುರ- ನರ-ಮುನಿ-ಚರಾಚರಸ್ವಾಮಿನ್, ನಾನು ನಿನ್ನನ್ನು ಸಾಕ್ಷಾತ್ ಪ್ರಭುವೆಂದು ತಿಳಿದು ಕೇಳು ತ್ತಿರುವೆನು, ಏನು ಮಾಡಿದರೆ ನಾನು ನಿನ್ನ ಚರಣರಜವನ್ನೇ ಸರ್ವಸಂಗಪರಿತ್ಯಾಗ ಪೂರ್ವಕವಾಗಿ ಸೇವಿಸುತ್ತಿರುವೆನೆಂಬದನ್ನು ಹೇಳಬೇಕು. ಜ್ಞಾನ, ವೈರಾಗ್ಯ, ಮಾಯಾ ಇವುಗಳ ಲಕ್ಷಣವನ್ನೂ, ನಿನ್ನ ಕೃಪೆಯ ಸುಲಭಸಾಧನವಾದ ಭಕ್ತಿಯ ಲಕ್ಷಣವನ್ನೂ, ಈಶ್ವರ-ಜೀವ ಇವರಲ್ಲಿಯಭೇಧವನ್ನೂ, ಬೇರೆವಿಷಯಗಳನ್ನೂ ನನಗೆ ತಿಳಿಸಿ ಹೇಳಬೇಕು; ಅಂದರೆ ನನ್ನ ಶೋಕ-ಮೋಹ-ಭ್ರಮಗಳೆಲ್ಲ ಇಲ್ಲದಂತಾಗಿ ನಿನ್ನ ಚರಣಗಳಲ್ಲಿ ನನ್ನ ಪ್ರೇಮವು ಕೂಡಲಾಗಲು, ಎಂದು ಪ್ರಾರ್ಥಿಸಲು, ರಾಮನು—ಎಲೈ ತಾತನೇ, ನಾನು ನಿನಗೆ ಸ್ವಲ್ಪದಲ್ಲಿ ಎಲ್ಲವನ್ನುತಿಳಿಸಿ ಹೇಳುವೆನು, ಅದನ್ನು ನೀನು ಮನಸ್ಸು-ಬುದ್ಧಿ-ಚಿತ್ತ ಗಳನ್ನಿಟ್ಟು ಕೇಳು. ಎಲೈ ಬಂಧುವೇ, ನಾನು-ನನ್ನದು, ನೀನು-ನಿನ್ನದು ಎಂಬದೇ ಮಾಯೆಯು. ಈ ಮಾಯೆಯೇ ಜೀವಮಾತ್ರಗಳಮೇಲೆ ತನ್ನ ವರ್ಚಸ್ಸನ್ನು ಕೂಡಿಸಿ ರುವದು. ಇಂದ್ರಿಯಗಳೂ, ಅವುಗಳ ದ್ವಾರದಿಂದ ತಿಳಿಯುವ ಹಾಗು ಅವುಗಳಿಗೆ ಮೀರಿರುವ, ಮನಸ್ಸಿಗೆ ಗೋಚರವಾಗುವ ವಿಷಯಗಳೆಲ್ಲವೂ ಮಾಯಾರೂಪಗಳಾಗಿರುವ ವೆಂದು ತಿಳಿ. ಇನ್ನು ಮಾಯೆಯಭೇಧಗಳನ್ನು ಹೇಳುವೆನು ಕೇಳು. ಅವಿದ್ಯೆ-ವಿದ್ಯೆ

ಎಂಬ ಎರಡು ಮಾಯೆಯ ಭೇದಗಳಾಗಿರುವವು. ಇವುಗಳಲ್ಲಿ ಅವಿದ್ಯೆಯೆಂಬದು ಅತಿಶಯ ದುಷ್ಟವೂ, ದುಃಖರೂಪವೂ ಆಗಿರುವದು. ಅದರ ಸ್ವಾಧೀನವಾಗಿ ಜೀವನು ಭವಕೂಪದಲ್ಲಿ ಬೀಳುವನು. ಎರಡನೆಯ ಭೇದವಾದ ವಿದ್ಯೆಯು ಗುಣಮಯವಾಗಿದ್ದು ಪ್ರಭುವಿನಪ್ರೇರಣೆಯಿಂದ ಸೃಷ್ಟಿಯನ್ನು ನಿರ್ಮಿಸುವದು. ಜ್ಞಾನ-ಮಾನಗಳಲ್ಲಿ ಒಂದೂ ಇಲ್ಲದೆ ಎಲ್ಲವನ್ನು ಬ್ರಹ್ಮಸಮಾನವಾಗಿ ತಿಳಿಯುವವನು ಪರಮವಿರಕ್ತನು. ಆತನು ಸತ್ವ-ರಜಸ್ತಮಗಳೆಂಬ ತ್ರಿಗುಣಗಳನ್ನು ತ್ಯಜಿಸುವನು. ಸಿದ್ಧಿಗಳು ಆತನಿಗೆ ಹುಲ್ಲಿಗೆ ಸಮವಾಗಿರುವವು.

ಎಲೈ ಬಂಧುವೇ, ತಾನು ಸ್ವತಃ; ಮಾಯೆಯ ಪ್ರಭುವೆಂದು ತಿಳಿಯಲಾರದವನೇ ಜೀವನು. ಬಂಧ ಮೋಕ್ಷಗಳನ್ನು ಕೊಡುವವನೂ, ಎಲ್ಲರಿಗಿಂತ ಶ್ರೇಷ್ಠನೂ, ಮಾಯೆಯ ಚಾಲಕನೂ ಆಗಿರುವವನು ಈಶ್ವರನು. ಧರ್ಮದಿಂದ ವೈರಾಗ್ಯವು, ಯೋಗದಿಂದ ಜ್ಞಾನವು, ಜ್ಞಾನದಿಂದ ಮೋಕ್ಷವು ಪ್ರಾಪ್ತವಾಗುವವೆಂದು ವೇದದಲ್ಲಿ ಪ್ರತಿಪಾದಿಸಿರುವದು. ನಾನು ತತ್‌ಕ್ಷಣ ಕರಗುವವೆಂದರೆ ಭಕ್ತಿಯಿಂದ, ಭಕ್ತಿಯು ಭಕ್ತನನ್ನು ಸುಖಿಯನ್ನಾಗಮಾಡುವದು. ಆ ಭಕ್ತಿಯು ಸ್ವತಂತ್ರವಾಗಿದ್ದು ಬೇರೆಯಾತರ ಆಶ್ರಯವೂ ಅದಕ್ಕೆ ಬೇಕಾಗಿರುವದಿಲ್ಲ. ಜ್ಞಾನ-ವಿಜ್ಞಾನಗಳೆರಡು ಭಕ್ತಿಗೆ ಅಂಕಿತವಾಗಿರುವವು. ಎಲೈ ತಾತನೇ, ಈಭಕ್ತಿಯು ಅನುಪಮ ಸುಖವನ್ನುಂಟುಮಾಡಿಕೊಡುವದು. ಇಂಥ ಭಕ್ತಿಯು ಸಂತರು ಅನುಕೂಲವಾದಾಗವಾತ್ರ ಪ್ರಾಪ್ತವಾಗುತ್ತದೆ. ಇನ್ನು ಜೀವರು ಸಹಜವಾಗಿ ನನ್ನನ್ನು ಸಂಪಾದಿಸುವ ಭಕ್ತಿಯಸಾಧನಗಳನ್ನು ವರ್ಣಿಸುವೆನು, ಕೇಳು. ಮೊದಲು ವಿಪ್ರಚರಣದಲ್ಲಿ ಅತ್ಯಂತ ಪ್ರೇಮವನ್ನಿಟ್ಟು ವೇದವಿಹಿತ ಮಾರ್ಗದಿಂದ ತಮ್ಮ ತಮ್ಮ ಧರ್ಮಗಳಲ್ಲಿ ರತರಾಗಿರಬೇಕು. ಆ ಮೇಲೆ ಅವರ ಫಲವೇ ಎಂಬ ವಿಷಯಗಳಲ್ಲಿ ವಿರಕ್ತಿಯುಂಟಾದ ಬಳಿಕ ನನ್ನ ಚರಣಗಳಲ್ಲಿ ಪ್ರೇಮವು ಉತ್ಪನ್ನವಾಗುವದು. ಈ ಮೇರೆಗೆ ಶ್ರವಣಾದಿ ನವವಿಧಭಕ್ತಿಗಳು ದೃಢವಾದ ಬಳಿಕ ನನ್ನ ಲೀಲೆಗಳಲ್ಲಿ ಭಕ್ತರು ಆಸಕ್ತರಾಗುವರು. ಅವರು ಸಂತಚರಣಗಳಲ್ಲಿ ಅತ್ಯಂತಪ್ರೇಮವುಳ್ಳವರಾಗಿ, ದೃಢವಾದ ನೇಮದಿಂದ ತ್ರಿಕರಣಪೂರ್ವಕವಾಗಿ ನನ್ನನ್ನು ಭಜಿಸುತ್ತ, ಗುರುಗಳು, ತಾಯಿತಂದೆಗಳು, ಬಂಧುಗಳು, ಸ್ವಾಮಿ, ದೇವತೆಗಳು ಮೊದಲಾದವರನ್ನು ನಾನೇ ಎಂದು ತಿಳಿದು ನನ್ನನ್ನು ಅಖಂಡವಾಗಿ ಸೇವಿಸುವರು. ನನ್ನ ಗುಣಗಳ ಗಾಯನಮಾಡುತ್ತಿರುವಾಗ ಅವರದೇಹವು ರೋಮಾಂಚಿತವಾಗಿ ವಾಣಿಯು ಸದ್ಗದಿತವಾಗುವದು; ನೇತ್ರಗಳಲ್ಲಿ ಅಶ್ರುಗಳು ಸುರಿಯತೊಡಗುವವು; ಅವರ ಕಾಮ-ಮದ-ದಂಭಾದಿ ವಿಕಾರಗಳು ನಷ್ಟವಾಗುವವು. ಎಲೈ ತಾತನೇ, ಹೀಗೆ ತ್ರಿಕರಣಪೂರ್ವಕವಾಗಿ ಅನನ್ಯಗತಿಕತೆಯಿಂದ ನನ್ನನ್ನೇ ಅಹೇತುಕವಾಗಿ ಭಜಿಸುವವರ ಹೃದಯಕಮಲದಲ್ಲಿಯೇ ನಿರಂತರವಾಗಿ ನಾನು ವಾಸಿಸುವೆನು.

ಈ ಮೇರೆಗೆ ಭಕ್ತಿಯೋಗದ ಶ್ರವಣಮಾಡಿ ಅತ್ಯಂತ ಸುಖವನ್ನು ಹೊಂದಿದ ಲಕ್ಷ್ಮಣನು, ಪ್ರಭುಚರಣದಲ್ಲಿ ತಲೆಬಾಗಿಸಿದನು. ಹೀಗೆ ವೈರಾಗ್ಯ, ಜ್ಞಾನ, ಗುಣ ನೀತಿ ಇತ್ಯಾದಿವಿಷಯಗಳ ನಿರೂಪಣದಲ್ಲಿ ಕೆಲವು ದಿನಗಳು ಕಳೆದುಹೋಗುತ್ತಿರಲು, ಸರ್ಪಿಣಿಯಂತೆ ದಾರುಣಳೂ, ದುಷ್ಟಹೃದಯಳೂ ಆದ ಶೂರ್ಪನಖಿಯೆಂಬ ಹೆಸರಿನ ರಾವಣನ ತಂಗಿಯು, ಒಮ್ಮೆ ಪಂಚವಟಿಯಲ್ಲಿ ಬಂದಾಗ ಆಶ್ರಮದಲ್ಲಿ ಇರುವ ಇಬ್ಬರು ಕುಮಾರರನ್ನು ನೋಡಿ ಕಾಮಾವಿಷ್ಟಳಾದಳು. ಅಣ್ಣತಮ್ಮಂದಿರಿರಲಿ, ತಂದೆಯಿರಲಿ, ಮಗನಿರಲಿ, ಯಾರೇ ಇರಲಿ, ಸ್ತ್ರೀಯು ಮನೋಹರರೂಪವನ್ನಷ್ಟು ನೋಡುವಳು ಸೂರ್ಯಕಾಂತಮಣಿಯು ಸೂರ್ಯನನ್ನು ನೋಡಿದಕೂಡಲೆ ದ್ರವಿಸತೊಡಗುವಂತೆ ಆಕೆಯ ಮನಸ್ಸು ದ್ರವಿಸತೊಡಗಿ ಮನಸ್ಸನ್ನು ಬಿಗಿಹಿಡಿಯಲು ಆಕೆಯು ಅಸಮರ್ಥಳಾದಳು. ಶೂರ್ಪನಖಿಯು ಸುಂದರರೂಪವನ್ನು ಧರಿಸಿ ರಾಮನ ಬಳಿಗೆ ಬಂದು ಮುಗುಳುನಗೆಯಿಂದ—ನಿಮ್ಮಂಥ ಪುರುಷನು, ನನ್ನಂಥ ಸ್ತ್ರೀಯು ಈ ಸುಯೋಗವನ್ನು ಬ್ರಹ್ಮದೇವನು ವಿಚಾರಪೂರ್ವಕವಾಗಿ ಒದಗಿಸಿಕೊಟ್ಟಿರುವನು. ನನಗೆ ಅನುರೂಪನಾದ ಪುರುಷನು ಈ ಜಗತ್ತಿನಲ್ಲಿ, ಕಿಂಬಹುನಾ ತ್ರೈಲೋಕ್ಯದಲ್ಲಿಯೂ ಹುಡುಕಿ ದೊರೆಯದ್ದರಿಂದಲೇ ನಾನು ಈವರೆಗೆ ಕುಮಾರಿಯಾಗಿ ಉಳಿದಿರುವೆನು; ಆದರೆ ನಿಮ್ಮನ್ನು ನೋಡಿ ಮಾತ್ರ ನನ್ನ ಮನಸ್ಸಿಗೆ ಬಂದಿರುತ್ತದೆ; ಅನ್ನಲು, ರಾಮನು ಸೀತೆಯ ಕಡೆಗೆ ನೋಡಿ, ತನ್ನ ವಿವಾಹವಾಗಿರುತ್ತದೆಂದು ಸೂಚಿಸಿ, ತನ್ನ ತಮ್ಮನಾದ ಲಕ್ಷ್ಮಣನು ಕುಮಾರನಿರುವನೆಂದು ಸೂಚಿಸಿದನು. ಈ ಮೊದಲೆ ಲಕ್ಷ್ಮಣನ ಲಗ್ನವಾಗಿದ್ದರೂ ಶೂರ್ಪನಖಿಯು ತನ್ನನ್ನು ಕುಮಾರಿಯೆಂದು ಹೇಳಿಕೊಂಡದ್ದರಿಂದ "ಶಠೇಶಾಠ್ಯಂ", ಎಂಬ ನ್ಯಾಯವು ಇಲ್ಲಿ ಹತ್ತುವದು. ಶೂರ್ಪನಖಿಯು ಲಕ್ಷ್ಮಣನಕಡೆಗೆ ಹೋದಳು. ಆಕೆಯು ವೈರಿಯ ತಂಗಿಯಿರುವಳೆಂದು ತಿಳಿದು, ಪ್ರಭುವಿನಕಡೆಗೆ ನೋಡಿ ಮೃದುವಾಣಿಯಿಂದ—ಎಲೈ ಸುಂದರಿಯೇ, ಕೇಳು. ನಾನು ರಾಮನ ಸೇವಕನು, ಅರ್ಥಾತ್ ಪರಾಧೀನನು; ಆದ್ದರಿಂದ ನಿನಗೆ ಯೋಗ್ಯನಲ್ಲವು. ಪ್ರಭುವಾದ ಕೋಸಲೇಶ್ವರನು ಎಲ್ಲಬಗೆಯಿಂದ ಸಮರ್ಥನಿದ್ದು, ಆತನು ಏನುಮಾಡಿದರೂ ಚಂದಕಾಣುವದು. ಸೇವಕನಾಗಿ ಒಮ್ಮೆಯಾದರೂ ಸುಖವನ್ನಿಚ್ಛಿಸುವವನೂ, ಬಡವನಾಗಿ ಮಾನವನ್ನಪೇಕ್ಷಿಸುವವನೂ, ಅದರಂತೆ ವ್ಯಸನಿಯಾಗಿಧನವನ್ನೂ, ವ್ಯಭಿಚಾರಿಯಿದ್ದು ಶುಭಮಾರ್ಗವನ್ನೂ, ಲೋಭಿಯಿದ್ದು ಯಶಸ್ಸನ್ನೂ, ಗರ್ವಿಷ್ಠನಿದ್ದು ಲೋಕಸಂಗ್ರಹವನ್ನೂ ಇಚ್ಛಿಸುವವನೂ ಆಕಾಶದೊಳಗಿಂದ ಹಾಲುಕರೆಯಲಿಚ್ಛಿಸುವನೆಂದು ತಿಳಿಯಬೇಕು, ಎಂದು ಹೇಳಲು, ಆಕೆಯು ಪುನಃ ರಾಮನಬಳಿಗೆ ಹೋದಳು; ಆದರೆ ಆತನು ಮತ್ತೆ ಆಕೆಯನ್ನು ಲಕ್ಷ್ಮಣನ ಕಡೆಗೇ ಕಳಿಸಿದನು. ಆಗ ಲಕ್ಷ್ಮಣನು—ಹುಲ್ಲಿನಂತೆ ಲಜ್ಜೆಯನ್ನು ತ್ಯಾಗಮಾಡುವವನೇ ನಿನ್ನನ್ನು ಲಗ್ನವಾಗಬಹುದು, ಅನ್ನಲು, ಆಕೆಯು ತಡಫಡಿಸುತ್ತ ರಾಮನಬಳಿಗೆ

ಹೋಗಿ ತನ್ನ ಉಗ್ರರೂಪವನ್ನು ಪ್ರಕಟಮಾಡಿದಳು. ಕೂಡಲೆ ಲಕ್ಷ್ಮಣನು, ಆಕೆಯು ಮುಖಾಂತರವಾಗಿ ರಾವಣನನ್ನು ಕೆಣಕಿಕರೆದಂತೆ ಕೈಚಳಕದಿಂದ ಆಕೆಯ ಕಿವಿಮೂಗುಗಳನ್ನು ಕೊಯ್ದನು. ಆಗ ಆಕೆಯು ವಿಕಾರಳಾಗಿ ಕಾಣುತ್ತಿ, ಪರ್ವತದಿಂದ ಕೆಂಪು ಪ್ರವಾಹವು ಹರಿಯಬರುವಂತೆ ಆಕೆಯಿಂದ ರುಧಿರಪ್ರವಾಹವು ಹರಿಯತೊಡಗಿತು. ಆಕೆಯು ಆಕ್ರೋಶಮಾಡುತ್ತ, ಖರದೂಷಣರಕಡೆಗೆ ಹೋಗಿ—"ಅಣ್ಣುಗಳಿರಾ, ನಿಮ್ಮ ಬಲಕ್ಕೂ, ಪೌರುಷಕ್ಕೂ ಧಿಕ್ಕಾರವಿರಲಿ" ಅನ್ನಲು, ಅವರಿಬ್ಬರು ಆಕೆಯಿಂದ ಯಾವತ್ತು ವೃತ್ತಾಂತವನ್ನು ಕೇಳಿಕೊಂಡಕೂಡಲೆ ತಮ್ಮ ಸೈನ್ಯವನ್ನು ಸಿದ್ಧಮಾಡಿ, ನಾನಾಪ್ರಕಾರದ ವಾಹನಗಳನ್ನೇರಿದ, ನಾನಾಪ್ರಕಾರದ ರೂಪಗಳನ್ನು ಧರಿಸುವ, ನಾನಾಪ್ರಕಾರದ ಭಯಂಕರವಾದ ಅಸಂಖ್ಯ ಆಯುಧಗಳನ್ನು ಹಿಡಿದಿರುವ ಅಸಂಖ್ಯರಾಕ್ಷಸರೊಡನೆ ರಾಮಲಕ್ಷ್ಮಣರಮೇಲೆ ಸಾಗಿಹೋದರು. ಆಗ ಆಕಾಶವು ಧೂಳಿಯಿಂದ ವ್ಯಾಪ್ತವಾಯಿತು.

ಇತ್ತ ರಾಮನು ಲಕ್ಷ್ಮಣನನ್ನು ಕರೆದು—ನೀನು ಜಾನಕಿಯನ್ನು ಕರಕೊಂಡು ಗಿರಿಕಂದರಗಳಲ್ಲಿ ಹೋಗು; ಭಯಂಕರವಾದ ರಾಕ್ಷಸಸೈನ್ಯವು ಬರುವದರಿಂದ ಜೋಕೆಯಿಂದಿರು, ಎಂದು ಹೇಳಿದನು. ರಾಮಾಜ್ಞೆಯಾದಕೂಡಲೆ ಲಕ್ಷ್ಮಣನು ಧನುರ್ಬಾಣಗಳನ್ನು ಧರಿಸಿ ಸೀತೆಯೊಡನೆ ಹೋದನು. ಶತ್ರುಸೈನ್ಯವು ಬರುತ್ತಿರುವದನ್ನು ನೋಡಿ ರಾಮನು ನಗೆಮೊಗದಿಂದ ತನ್ನ ಭಯಂಕರ ಧನುಸ್ಸಿಗೆ ಹೆದೆಯೇರಿಸಿದನು. ಪ್ರಭುವನ್ನು ನೋಡಿ ಯಾವತ್ತು ರಾಕ್ಷಸಸೈನಿಕರು ಬೆರಗಾದರು. ಆಗ ಖರ—ದೂಷಣರು ತಮ್ಮ ಸಚಿವರನ್ನು ಕರೆಸಿ—ಈ ನರರತ್ನಗಳು ಯಾರೋ ರಾಜಕುಮಾರರಿರುವರು. ನಾವು ಬಹುಜನರನ್ನು ಈವರೆಗೆ ಕೊಂದೆವು, ಹಣ್ಣುಮಾಡಿದೆವು; ಆದರೆ ಇಂಥ ಸೌಂದರ್ಯವನ್ನು ನಮ್ಮ ಇಡಿಯ ಜನ್ಮದಲ್ಲಿ ಕಾಣಲಿಲ್ಲ. ಇವರು ನಮ್ಮ ತಂಗಿಯನ್ನು ಕುರೂಪಿಯಾಗಮಾಡಿದ್ದರೂ ಈ ಅನುಪಮ ಪುರುಷರು ವಧಾರ್ಹರಲ್ಲ. ಅವರು ಅಡಗಿಸಿದ್ದ ಸ್ತ್ರೀಯನ್ನು ಬೇಗನೆ ಕೊಟ್ಟುಬಿಟ್ಟು ಇಬ್ಬರೂ ಜೀವದಿಂದ ತಮ್ಮ ಮನೆಗೆ ಹೋಗಲಿ. ನಮ್ಮ ಈ ನಿರೂಪವನ್ನು ಅವರಿಗೆ ತಿಳಿಸಿ ಅವರು ಏನನ್ನುವರೆಂಬದನ್ನು ಬೇಗನೆ ಕೇಳಿಕೊಂಡು ಬರುವವರಾಗಿರಿ, ಎಂದು ಹೇಳಿದರು. ದೂತರು ಹೋಗಿ ರಾಮನಿಗೆ ನಿರೂಪವನ್ನು ತಿಳಿಸಿದರು. ಅದನ್ನು ಕೇಳಿ ರಾಮನು ನಕ್ಕು—ನಾವು ಕ್ಷತ್ರಿಯರಿದ್ದು, ಅರಣ್ಯದಲ್ಲಿ ಬೇಟೆಯಾಡುತ್ತ ನಿಮ್ಮಂಥ ದುಷ್ಟಮೃಗಗಳನ್ನು ಹುಡುಕುತ್ತ ತಿರುಗುತ್ತಿರುವೆವು. ಶತ್ರುವು ಬಲಾಢ್ಯನಿರುವನೆಂದು ಅಂಜತಕ್ಕವರು ನಾವಲ್ಲವು. ಪ್ರಸಂಗಬಂದರೆ ಯಮನೊಡನೆಯೂ ಕಾದುವೆವು. ನಾವು ಮನುಷ್ಯರಾಗಿದ್ದರೂ ಮುನಿಗಳ ಸಂರಕ್ಷಣವನ್ನೂ, ದೈತ್ಯಕುಲದ ಸಂಹಾರವನ್ನೂ, ಖಲರಶಾಸನವನ್ನೂ ಮಾಡತಕ್ಕವರಿರುವೆವು. ನಿಮ್ಮಲ್ಲಿ ಪರಾಕ್ರಮವಿಲ್ಲದಿದ್ದರೆ ಮನೆಗೆ ಹೋಗಿರಿ. ರಣದಿಂದಓಡಿಹೋಗುವವರನ್ನು ನಾವು

ಕೊಲ್ಲುತ್ತಿರುವದಿಲ್ಲ. ರಣಭೂಮಿಯಲ್ಲಿ ಏರಿಬಂದು ಮಾಯೆಯನ್ನೂ, ಕಪಟವನ್ನೂ ಮಾಡುವದು ನಿಮ್ಮ ಸ್ವಭಾವವೇ ಆಗಿರುತ್ತದೆ. ಅದನ್ನು ಬಿಟ್ಟು ಈಗ ಶತ್ರುಗಳ ಮೇಲೆ ದಯತೋರಿಸುತ್ತಿರುವದು ನಿಮ್ಮ ಕೇವಲ ಅಂಜುಬುರುಕತನವಾಗಿರುವದು, ಎಂದು ಹೇಳಿದನು. ದೂತರು ಕೂಡಲೆ ಹೋಗಿ ಯಾವತ್ತು ವರ್ತಮಾನವನ್ನು ಖರ-ದೂಷಣರಿಗೆ ಹೇಳಿದರು. ಅದನ್ನು ಕೇಳಿದಕೂಡಲೆ ಅವರ ಹೃದಯವು ಸುಡಹತ್ತಿತು. ಅವರು ಕ್ರೋಧಸಂತಪ್ತರಾಗಿ ರಾಮನಮೇಲೆ ಏರಿಬಂದರು. ರಾಮನಧನುಷ್ಟಂಕಾರ ಧ್ವನಿಯನ್ನು ಕೇಳಿ ಅವರ ಕಿವಿಗಳು ಗಡಚಿಕ್ಕಿದವು. ರಾಮನ ಕಠೋರಬಾಣಗಳಿಂದ ಅವರ ಶಸ್ತ್ರಾಸ್ತ್ರಗಳು ಎಳ್ಳನಷ್ಟು ಚೂರುಚೂರಾದವು. ಪುನಃ ಪುನಃ ರಾಮನ ತೀಕ್ಷ್ಣ ಬಾಣಗಳು ಬರತೊಡಗಲು, ರಾಕ್ಷಸಸೈನಿಕರು ಸಮರಭೂಮಿಯಿಂದ ಕಾಲುದೆಗೆಯಹತ್ತಿದರು. ಆಗ ಖರದೂಷಣರು ಅತ್ಯಂತ ಕ್ರುದ್ಧರಾಗಿ ತಮ್ಮ ಸೈನಿಕರನ್ನು ಕುರಿತು— ಸಮರಭೂಮಿಯಿಂದ ಓಡಿಹೋಗುವವರನ್ನು ಕೈಯಿಟ್ಟು ನಾವು ಸಂಹರಿಸುವೆವು, ಅನ್ನಲು, ರಾಕ್ಷಸರು ಮರಣಕ್ಕೆ ಸಿದ್ಧರಾಗಿ ನಿಂತುಕೊಂಡರು. ಆಗ ರಾಮನ ತೀಕ್ಷ್ಣಬಾಣಗಳಿಂದ ರಾಕ್ಷಸರ ಸಂಹಾರವು ಮಿತಿಮೀರಿ ಆಗತೊಡಗಲು, ರಣಭೂಮಿಯು ರಕ್ತ-ಮಜ್ಜ-ಮೇದಗಳಿಂದ ಹೇಸಿಗೆಯಿಟ್ಟು ಭಯಂಕರವಾಗಿ ಭೂತಗಣದ ಹಾಗು ಹದ್ದು-ನರಿಗಳ ಆನಂದದ ನರ್ತನಸ್ಥಾನವಾಯಿತು. ತಮ್ಮ ಸೈನ್ಯದ ನಿಃಪಾತವಾದ ದ್ದನ್ನು ನೋಡಿ ಖರ-ದೂಷಣ- ತ್ರಿಶಿರಾದಿ ವೀರರು ಮುಗಿಬಿದ್ದರು. ಶ್ರೀರಾಮನ ಬಾಣಗಳಿಂದ ಸಂಹರಿಸಲ್ಪಟ್ಟರಾಕ್ಷಸರು ಮರಣಹೊಂದದೆ ಪುನಃ ಎದ್ದು ಯುದ್ಧಮಾಡುತ್ತಲಿದ್ದರು. ಅನೇಕಪ್ರಕಾರದ ಮಾಯೆಯನ್ನು ಅವರು ಪ್ರಕಟಮಾಡತೊಡಗಿದರು. ಒತ್ತಟ್ಟಿಗೆ ಹದಿನಾಲ್ಕುಸಾವಿರ ರಾಕ್ಷಸರು, ಇನ್ನೊತ್ತಟ್ಟಿಗೆ ಅಯೋಧ್ಯಾಧಿಪತಿಯಾದ ಒಬ್ಬ ಶ್ರೀರಾಮನೆಂಬದನ್ನು ನೋಡಿ ದೇವತೆಗಳು ಭಯಭೀತರಾದರು. ಹೀಗೆ ದೇವತೆಗಳೂ, ಮುನಿಗಳೂ ಭಯಭೀತರಾದದ್ದನ್ನು ನೋಡಿ ಪ್ರಭುವು ಒಳ್ಳೇಚಮತ್ಕಾರವನ್ನು ಮಾಡಿದನು. ರಾಕ್ಷಸರು ಪರಸ್ಪರರನ್ನು ರಾಮನೆಂದುತಿಳಿದು ಒಬ್ಬರಸಂಗಡ ಒಬ್ಬರು ತಮ್ಮತಮ್ಮೊಳಗೆ ಕಾದಹತ್ತಿ ಎಲ್ಲರೂ ಮರಣಹೊಂದಿದರು!

ರಾಕ್ಷಸವೀರರು "ರಾಮರಾಮ" ಎಂದು ಅನ್ನುತ್ತ ಪ್ರಾಣಬಿಟ್ಟು ಮೋಕ್ಷವನ್ನು ಹೊಂದುತ್ತಿದ್ದರು. ಇಂಥ ಯುಕ್ತಿಯಿಂದ ಶ್ರೀರಾಮನು ಕ್ಷಣದಲ್ಲಿ ಎಲ್ಲ ರಾಕ್ಷಸರನ್ನು ಸಂಹರಿಸಿದನು. ದೇವತೆಗಳು ಸಂತುಷ್ಟರಾಗಿ ಪುಷ್ಪವೃಷ್ಟಿಯನ್ನು ಮಾಡತೊಡಗಿದರು. ಸುರ-ಮುನಿಗಳೆಲ್ಲರೂ ನಿರ್ಭಯರಾದರು. ಬಳಿಕ ಲಕ್ಷ್ಮಣನು ಸೀತೆಯನ್ನು ಕರಕೊಂಡು ಬಂದು, ಪ್ರಭುಚರಣಕ್ಕೆ ಸಾಷ್ಟಾಂಗವೆರಗಿದನು, ರಾಮಚಂದ್ರನು ಆತನನ್ನು ಆನಂದದಿಂದ ಅಪ್ಪಿಕೊಂಡನು. ಆಶ್ಯಾಮಸುಂದರಮೂರ್ತಿಯನ್ನು ಪ್ರೇಮದಿಂದ ಅವಲೋಕಿಸುತ್ತಿರುವಾಗ ಸೀತೆಯನೇತ್ರಗಳು ತೃಪ್ತವಾಗಲೊಲ್ಲವು. ಹೀಗೆ ಸುರರಿಗೂ, ಮುನಿಗ

ಹೀಗೆ ಸುಖಕರವಾಗಿರುವ ಚರಿತ್ರಗಳನ್ನು ಮಾಡುತ್ತ, ಶ್ರೀರಾಮನು ಪಂಚವಟಿಯಲ್ಲಿ ವಾಸಿಸತೊಡಗಿದನು. ಖರ-ದೂಷಣರ ನಿಃಪಾತವಾದದ್ದನ್ನು ನೋಡಿ ಶೂರ್ಪನಖಿಯು ಲಂಕೆಗೆ ಹೋಗಿ ರಾವಣನನ್ನು ಕುರಿತು ಅತ್ಯಂತಕ್ರೋಧದಿಂದ—ನಿನಗೆ ನಿನ್ನ ದೇಶ-ಕೋಶಗಳ ಎಚ್ಚರವು ತಪ್ಪಿದಹಾಗೆ ಕಾಣುತ್ತದೆ. ಹಗಲುರಾತ್ರಿ ಮದ್ಯಪಾನಮಾಡಿ ನಿದ್ದೆಯನ್ನು ಮಾಡುತ್ತಿರುವೆ; ಆದರೆ ನಿನ್ನ ಮೇಲೆ ಏರಿಬರುತ್ತಿರುವ ಶತ್ರುವಿನ ಶುದ್ಧಿಯೇ ನಿನಗೆ ಇದ್ದಂತೆ ತೋರುವದಿಲ್ಲ. ನೀತಿಯಿಲ್ಲದ ರಾಜ್ಯವೂ, ಧರ್ಮವಿಲ್ಲದ ಧನವೂ, ಭಗವದರ್ಪಣವಿಲ್ಲದ ಪುಣ್ಯಾಚರಣೆಯೂ, ವಿವೇಕವಿಲ್ಲದ ವಿದ್ಯೆಯೂ ವ್ಯರ್ಥವೇಸರಿ. ಅದರಂತೆ, ಸಂಗತಿಯಿಂದ ಸನ್ಯಾಸಿಯೂ, ದುಷ್ಟಮಂತ್ರಿಯಯೋಗದಿಂದ ರಾಜನೂ, ಮದ್ಯಪಾನದಿಂದ ಲಜ್ಜೆಯೂ, ಅಹಂಕಾರದಿಂದ ಗುಣಗಳೂ, ನಮ್ರತೆಯಿಲ್ಲದ ಪ್ರೀತಿಯೂ ಬೇಗನೆ ನಷ್ಟಹೊಂದುವದನ್ನು ನೀನು ಕೇಳಿಲ್ಲವೆ? ವೈರಿ, ರೋಗ, ಅಗ್ನಿ, ಪಾಪ, ಸ್ವಾಮಿ, ಸರ್ಪ ಇವನ್ನು ಕ್ಷುದ್ರವೆಂದು ತಿಳಿದು ನಡೆಯಲಾಗದು, ಎಂದು ಅನೇಕಪ್ರಕಾರದ ನೀತಿಯನ್ನು ಹೇಳಿ, ಪುನಃ ಪುನಃ ಅಳತೊಡಗಿ ಭೂಮಿಯಮೇಲೆ ಹೊರಳಾಡುತ್ತ—"ದಶಮುಖಾ, ನೀನು ಬದುಕಿರುವಾಗ ಹೀಗೆ ನನ್ನ ಅವಸ್ಥೆಯಾಗಬೇಕೇ?" ಎಂದು ಗೋಳಿಡತೊಡಗಿದಳು. ಆಗ ಸಭಿಕರು ವ್ಯಾಕುಲರಾಗಿ, ಆಕೆಯ ತೋಳುಗಳನ್ನು ಹಿಡಿದು ಎಬ್ಬಿಸಿ ಸಮಾಧಾನಪಡಿಸತೊಡಗಿದರು. ಆಗ ರಾವಣನು—ಏನಾಯಿತೆಂಬುದನ್ನು ಹೇಳಲೊಲ್ಲಿಯೇಕೆ? ನಿನ್ನ ಕಿವಿಮೂಗುಗಳನ್ನು ಯಾರು ಕೊಯ್ದರು?

ರಾವಣನ ಈ ಮಾತುಗಳನ್ನು ಕೇಳಿ, ಶೂರ್ಪನಖಿಯು —ಅಯೋಧ್ಯಾಧೀಶನಾದ ದಶರಥನ ಪುರುಷಸಿಂಹ ಪುತ್ರನು ವನದಲ್ಲಿ ಬೇಟೆಯಾಡುವದಕ್ಕಾಗಿ ಬಂದಿದ್ದು, ನನಗೆ ಆತನ ಕೃತಿಯೆಲ್ಲ ಸಂಪೂರ್ಣವಾಗಿ ತಿಳಿದು ಹೋಗಿರುತ್ತದೆ. ಆತನು ಈ ಪೃಥ್ವಿಯನ್ನು ನಿಶ್ಚಯವಾಗಿ ರಾಕ್ಷಸಹೀನವಾಗಿ ಮಾಡುವನು ಎನ್ನಿ, ದಶಾನನನೇ, ಆತನ ಭುಜಬಲದಿಂದ ಮುನಿಜನರು ನಿಶ್ಚಿಂತರಾಗಿ ಅರಣ್ಯದಲ್ಲಿ ಸಂಚರಿಸುತ್ತಿರುವರು. ಅವರು ನೋಡಲಿಕ್ಕೆ ಹುಡುಗರಾಗಿದ್ದರೂ, ಯಮನಿಗೆ ಸಮಾನರಾಗಿದ್ದು, ಅತ್ಯಂತ ಧೈರ್ಯಶಾಲಿಗಳು, ನಾನಾಪ್ರಕಾರದ ಧನುರ್ವಿದ್ಯೆಯಲ್ಲಿ ಪ್ರವೀಣರೂ ಇರುವರು. ಆ ಇಬ್ಬರು ಬಂಧುಗಳು ಅಸಾಮಾನ್ಯ ಬಲಾಢ್ಯರೂ, ಪ್ರತಾಪಿಗಳೂ ಇದ್ದು, ಖಳವಧಮಾಡುವಲ್ಲಿ ತತ್ಪರರೂ, ಸುರ-ಮುನಿಗಳಿಗೆ ಸುಖಕರರೂ ಆಗಿರುವರು. ಅವರಲ್ಲಿ ಲಾವಣ್ಯನಿಧಿಯಾದವನ ಹೆಸರು ರಾಮನು, ಅವರ ಬಳಿಯಲ್ಲಿ ಒಬ್ಬ ಸುಂದರಸ್ತ್ರೀಯಿರುವಳು. ಬ್ರಹ್ಮನು ಸೌಂದರ್ಯದ ಖನಿಯನ್ನಾಗಿ ಆ ಸ್ತ್ರೀಯನ್ನು ಉಂಟುಮಾಡಿರುವನು. ಕೋಟ್ಯವಧಿ ರತಿದೇವಿಯರನ್ನು ಆಕೆಯ ಮೇಲೆ ನಿವಾಳಿಸಿ ಚಲ್ಲತಕ್ಕದ್ದು. ಆ ರಾಮನ ತಮ್ಮನಾದ ಲಕ್ಷ್ಮಣನೆಂಬುವನು ನನ್ನ ಕಿವಿ ಮೂಗುಗಳನ್ನು ಕೊಯ್ದನು. ನಾನು ನಿಮ್ಮ ತಂಗಿಯೆಂಬದನ್ನರಿತು ಆತನು ಹೀಗೆ ನನ್ನ ಉಪಹಾಸಮಾಡಿದನು. ಇದನ್ನು ಕೇಳಿ

ಖರದೂಷಣರು ಸೈನ್ಯದೊಡನೆ ರಾಮನೊಡನೆ ಯುದ್ಧಕ್ಕೆ ಬಂದರು; ಆದರೆ ರಾಮನು ಕ್ಷಣದಲ್ಲಿ ಅವರೆಲ್ಲರನ್ನು ಸಂಹರಿಸಿದನು, ಎಂದು ಹೇಳಿದಳು. ಖರದೂಷಣ-ತ್ರಿಶಿರರ ಸಂಹಾರವಾದದ್ದನ್ನು ಕೇಳಿ, ರಾವಣನ ಸರ್ವಾಂಗದಲ್ಲಿ ದಾಹವು ಉತ್ಪನ್ನವಾಯಿತು. ಆತನು ಶೂರ್ಪನಖಿಯನ್ನು ಸಮಾಧಾನಪಡಿಸಿ, ತನ್ನ ಪರಾಕ್ರಮದ ಹಲವು ಪ್ರಕಾರದ ಪ್ರೌಢಿಮೆಯನ್ನು ವರ್ಣಿಸುತ್ತ ಅತ್ಯಂತ ಶೋಕಗ್ರಸ್ತನಾಗಿ ಮಂದಿರವನ್ನು ಪ್ರವೇಶಿಸಿದನು. ಆದಿನರಾತ್ರಿ ಆತನಿಗೆ ನಿದ್ರೆ ಬರಲಿಲ್ಲ. ಆತನು ಮನಸ್ಸಿನಲ್ಲಿ—ಸುರ, ನರ, ಅಸುರ, ನಾಗ, ಖಗಗಳಲ್ಲಿ ನನಗೆ ಅನುಕೂಲರಾದವರು ಯಾರೂ ಇಲ್ಲ. ಖರದೂಷಣರು ನನ್ನಷ್ಟೇ ಬಲಾಢ್ಯರಿದ್ದು, ಒಬ್ಬ ಭಗವಂತನ ಹೊರತು ಅವರನ್ನು ಕೊಲ್ಲಲು ಯಾರು ಸಮರ್ಥರಿರುವರು? ದೇವತೆಗಳ ಸಂರಕ್ಷಣವನ್ನೂ, ಪೃಥ್ವಿಯ ಭಾರಹರಣವನ್ನೂ ಮಾಡುವ ಜಗದೀಶನೇ ಅವತಾರಮಾಡಿದ್ದಾಗಿದ್ದರೆ, ನಾನು ಹೋಗಿ ಹಟದಿಂದ ಅವನೊಡನೆ ಶತ್ರುತ್ವವನ್ನು ಬೆಳಿಸಿ, ಪ್ರಭುವಿನ ಬಾಣದಿಂದ ಗತಪ್ರಾಣನಾಗಿ ಭವಸಮುದ್ರವನ್ನು ದಾಟಿ ಹೋಗುವೆನು. ಈ ತಾಮಸದೇಹದಿಂದ ಭಗವದ್ಭಜನವಾಗುವದಿಲ್ಲವು; ಆದ್ದರಿಂದ ತ್ರಿಕರಣಪೂರ್ವಕವಾಗಿ ಇದೇಮಾತಿನ ನಿರ್ಧಾರವಾಯಿತು. ಇನ್ನು ಅವರು ಯಾರಾದರೂ ಸಾಧಾರಣ ರಾಜಪುತ್ರರಿದ್ದರೆ, ಅವರನ್ನು ರಣದಲ್ಲಿ ಸಂಹರಿಸಿ, ಅವರ ಸ್ತ್ರೀಯನ್ನು ಹರಣಮಾಡುವೆನು. ಎಂದು ನಿಶ್ಚಯಿಸಿ ರಾವಣನು ಒಬ್ಬನೇ ರಥದಲ್ಲಿ ಕುಳಿತು ಸಿಂಧುತಟಾಕದಲ್ಲಿರುವ ಮಾರೀಚರಾಕ್ಷಸನ ಬಳಿಗೆ ಹೋದನು.

ಶಂಕರನು ಪಾರ್ವತಿಯನ್ನು ಕುರಿತು—ಎಲೈ ಪಾರ್ವತಿಯೇ, ಇತ್ತ ರಾಮಚಂದ್ರನು ಏನು ಯುಕ್ತಿಯ ಯೋಚಿಸಿದನೆಂಬ ಸುಂದರ ಕಥೆಯನ್ನು ಕೇಳು. ಲಕ್ಷ್ಮಣನು ಕಂದಮೂಲಾದಿಗಳನ್ನು ತರುವದಕ್ಕಾಗಿ ವನದಲ್ಲಿ ಹೋಗಿರಲು, ಕೃಪಾಸುಖನಿಧಾನನಾದ ರಾಮಚಂದ್ರನು ಹಾಸ್ಯಪೂರ್ವಕವಾಗಿ ಸೀತೆಯನ್ನು ಕುರಿತು—ಎಲೈ ರುಚಿರವ್ರತಶಾಲಿನೀ, ಪ್ರಿಯೇ, ಕೇಳು. ನಾನು ಒಂದಾನೊಂದು ಚಮತ್ಕಾರದ ನರಲೀಲೆಯನ್ನು ಮಾಡಬೇಕೆಂದಿರುವೆನು; ಆದ್ದರಿಂದ ನಾನು ರಾಕ್ಷಸರ ನಾಶಮಾಡುವವರೆಗೆ ನೀನು ಅಗ್ನಿಯಲ್ಲಿ ವಾಸಿಸು, ಎಂದು ಎಲ್ಲವನ್ನು ತಿಳಿಸಿ ಹೇಳಲು, ಪ್ರಭುಪದವನ್ನೇ ಹೃದಯದಲ್ಲಿ ಧರಿಸಿ ಸೀತೆಯು ತಾನು ಅಗ್ನಿಪ್ರವೇಶ ಮಾಡಿ ತನ್ನ ಛಾಯೆಯನ್ನು ಮಾತ್ರ ಅಲ್ಲಿ ಇಟ್ಟಳು. ಆಛಾಯೆಯಾದರೂ ಶೀಲದಿಂದ, ಅಂತಃಕರಣದಿಂದ ಸೀತೆಯಂತೆಯೇ ಪವಿತ್ರಳಾಗಿದ್ದಳು. ಭಗವಂತನು ಮಾಡಿದ ಈ ಚರಿತ್ರದ ಮರ್ಮವು ಲಕ್ಷ್ಮಣನಿಗೂ ಗೊತ್ತಾಗಲಿಲ್ಲ. ಇತ್ತ ರಾವಣನು ಮಾರೀಚನ ಬಳಿಗೆ ಹೋದನು. ಆ ಸ್ವಾರ್ಥಸಾಧುವಾದ ನೀಚನು ಮಾರೀಚನ ಮುಂದೆ ತಲೆಬಾಗಿಸಿದನು. ನೀಚರ ನಮ್ರಭಾವವು ಅಂಕುಶ, ಬಿಲ್ಲು, ಹಾವು, ಬೆಕ್ಕು ಇವುಗಳಂತೆ ಅತ್ಯಂತ ದುಃಖಾವಹವಾಗುವದು. ಎಲೈ ಪಾರ್ವತಿಯೇ, ಅಕಾಲದಲ್ಲಾದ ಪುಷ್ಪದಂತೆ ಖಲರ ಪ್ರೇಮದಮಾತುಗಳಾದರೂ ಅತ್ಯಂತ

ಭಯಪ್ರದಗಳಾಗಿರುವವು. ಮಾರೀಚನು ರಾವಣನಿಗೆ ಯೋಗ್ಯ ಸತ್ಕಾರಮಾಡಿ ಆದರದಿಂದ—"ಅಪ್ಪಾ ರಾವಣಾ, ಯಾವಕಾರಣದಿಂದ ನೀನು ಇಷ್ಟು ಚಿಂತಾಗ್ರಸ್ತನಾಗಿ ಅಕಸ್ಮಾತ್ತಾಗಿಇಲ್ಲಿಗೆ ಬಂದಿರುತ್ತೀ?,, ಎಂದು ಕೇಳಲು, ಭಾಗ್ಯಹೀನನಾದ ರಾವಣನು ಆತನ ಮುಂದೆ ಒಳ್ಳೆ ಆಢ್ಯತೆಯಿಂದ ಯಾವತ್ತು ವರ್ತಮಾನವನ್ನು ಹೇಳಿ ಆತನನ್ನು ಕುರಿತು— ನೀನು ಮಾಯಾವಿಯಾಗಿರುವದರಿಂದ ನನಗೆ ರಾಜಪತ್ನಿಯಾದ ಸೀತೆಯ ಹರಣಮಾಡಲಿಕ್ಕೆ ಬರುವಂತೆ ನೀನು ಕಪಟಮೃಗದ ವೇಷವನ್ನು ಧರಿಸತಕ್ಕದ್ದು, ಎಂದು ಹೇಳಿದನು. ಆದರೆ ಮಾರೀಚನು—ರಾವಣಾ, ಕೇಳು. ಅವರು ಮಾನವ ರೂಪಧಾರಿಗಳಾದ ಚರಾಚರ ಸೃಷ್ಟಿಯ ಈಶರಾಗಿರುವರು. ಅವರೊಡನೆ ನೀನು ವೈರವನ್ನು ಬಳಿಸಬೇಡ. ಅವರು ಕೊಲ್ಲಬೇಕೆಂದರೆ ಪ್ರಾಣಿಗಳಿಗೆ ಮೃತ್ಯುಪ್ರಾಪ್ತವಾಗುವದು. ಅವರು ಬದುಕಿಸಬೇಕೆಂದರೆ ಪ್ರಾಣಿಗಳು ಬದುಕುವವು. ವಿಶ್ವಾಮಿತ್ರನ ಯಜ್ಞವನ್ನು ರಕ್ಷಿಸುವದಕ್ಕಾಗಿ ಆ ಕುಮಾರರು ಹೋಗಿದ್ದರು. ಆ ಕಾಲದಲ್ಲಿ ರಘುಪತಿಯು ನನಗೆ ಒಂದು ಬಾಣವನ್ನು ಹೊಡೆಯಲು, ನಾನು ಒಂದು ಕ್ಷಣದಲ್ಲಿ ನೂರುಯೋಜನದಷ್ಟೇರಿರುವ ಈ ಸ್ಥಳದಲ್ಲಿ ಬಂದು ಬಿದ್ದೆನು; ಆದ್ದರಿಂದ ಅವರೊಡನೆ ದ್ವೇಷಬಳಿಸುವಲ್ಲಿ ಹಿತವಿಲ್ಲ. ಅಂದಿನಿಂದ ಕೀಟಭೃಂಗನ್ಯಾಯದಂತೆ ನನ್ನ ಅವಸ್ಥೆಯಾಗಿರುವದು. ನನಗೆ ನೋಡಿದತ್ತ ಆ ಇಬ್ಬರು ಬಂಧುಗಳೇ ಕಾಣುವರು. ಅಪ್ಪಾ, ಮಾನವರಿದ್ದರೂ ಅವರು ಅತ್ಯಂತ ಶೂರರಿರುವರು. ಅವರೊಡನೆ ವಿರೋಧಬಳಿಸಿ ಗತಿಗಾಣುವದಾಗಿಲ್ಲ. ತಾಟಿಕಾ-ಸುಬಾಹುಗಳನ್ನು ಕೊಂದಂಥ, ಶಿವಚಾಪವನ್ನು ತುಂಡು ಮಾಡಿದಂಥ, ಖರ-ದೂಷಣ-ತ್ರಿಶಿರರ ಪ್ರಾಣಹರಣ ಮಾಡಿದಂಥ ಬಲಾಢ್ಯರು ಮಾನವರೇ ಆಗಿರುವರೇನು? ನಿನ್ನ ಕುಲದ ಕಲ್ಯಾಣವನ್ನು ವಿಚಾರಿಸಿ ನೀನು ಮನೆಗೆ ಹೋಗು, ಎಂದು ಹೇಳಿದನು.

ಮಾರೀಚನ ಈ ಮಾತುಗಳನ್ನು ಕೇಳಿ ರಾವಣನು ಸಂತಪ್ತನಾಗಿ, ಮಾರೀಚನನ್ನು ಬಾಯಿಗೆ ಬಂದಂತೆ ಬಯ್ಯುತ್ತ— "ಮೂರ್ಖಾ, ಗುರುವಿನಂತೆ ನನಗೆ ಜಾಣತನ ಕಲಿಸುವೆಯೇನು? ನನ್ನಂಥ ಯೋದ್ಧನು ಯಾವನಿರುವನೆಂಬದನ್ನು ಸ್ಪಷ್ಟವಾಗಿ ಯಾಕೆ ಹೇಳಲೊಲ್ಲೆ? " ಎಂದು ಗದ್ದರಿಸಲು, ಮಾರೀಚನು ಮನಸ್ಸಿನಲ್ಲಿ— "ಶಸ್ತ್ರಧಾರಿಗಳು, ಗುಪ್ತಚಾರರು, ಅರಸನು, ನೀಚರು, ಒಡೆಯನು, ವೈದ್ಯನು, ಸ್ತುತಿಪಾಠಕರು, ಕವಿಗಳು, ಗುಣಿಜನರು ಈ ಒಂಬತ್ತು ಬಗೆಯ ಜನರೊಡನೆ ವಿರೋಧ ಬಳಿಸುವದು ಹಿತಕರವಲ್ಲವು, ಎಂದು ಯೋಚಿಸಿ, ಎರಡೂ ಪಕ್ಷದಲ್ಲಿಯೂ ತನಗೆ ಮರಣವವು ಒದಗಿರುವದನ್ನು ತಿಳಿದು, ಆತನು ರಘುನಾಯಕನಿಗೇ ಶರಣು ಹೋಗುವದನ್ನು ನಿಶ್ಚಯಿಸಿದನು. "ಇಲ್ಲೆಂದು ಹೇಳಿದರೆ ಈ ದುಷ್ಟನು ನನ್ನ ಪ್ರಾಣಹರಣವ ಮಾಡುವನು; ಅಂದ ಬಳಿಕ ರಘುಪತಿಯ ಬಾಣತಾಕಿ ಸತ್ತರೆ ಕೆಟ್ಟದ್ದೇನು? " ಎಂದು ಯೋಚಿಸಿ ಮಾರೀಚನು ರಾವಣನ ಸಂಗಡ ಹೊರಟನು. ಆತನು ರಾಮಚರಣದಲ್ಲಿ ನಿಶ್ಚಲ ಪ್ರೇಮವುಳ್ಳವ

ನಾಗಿದ್ದನು; ಆದ್ದರಿಂದ ಅತನ ಮನಸ್ಸಿಗೆ ಅತ್ಯಂತ ಹರ್ಷವಾಗಿತ್ತು; ಆದರೆ ಅದನ್ನು ಆತನು ರಾವಣನಿಗೆ ತಿಳಿಯಗೊಡಲಿಲ್ಲ. ಇದು ದಶರಥನನ ದರ್ಶನವಾಗುವದೆಂಬ ದೊಂದೇ ವಿಚಾರವು ಆತನ ಮನಸ್ಸಿನಲ್ಲಿ ಸದಾ ಕಟಿಯುತ್ತಿತ್ತು. ಆತನು ಮನಸ್ಸಿನಲ್ಲಿ— ನಾನು ಇಂದು ನನ್ನ ಪ್ರಿಯತಮನನ್ನು ನೋಡಿ ನೇತ್ರಗಳನ್ನು ಸಫಲವಾಗಿ ಮಾಡಿಕೊಂಡು ಸುಖಿಯಾಗುವೆನು. ಜಾನಕೀ—ಲಕ್ಷ್ಮಣರಿಂದ ಸಹಿತನಾದ ಆ ದಶರಥನನ ಚರಣಗಳಲ್ಲಿ ನನ್ನ ಚಿತ್ತವನ್ನಿರಿಸುವೆನು. ಭಕ್ತಿಗೆ ಅವಶ್ಯವಾಗಿ ವಶವಾಗುವವನೂ, ಕ್ರೋಧವು ಕೂಡ ಮೋಕ್ಷಪ್ರದವಾಗಿ ಉಳ್ಳವನೂ ಆದ ಆ ಸುಖಸಾಗರ ಶ್ರೀಹರಿಯು ಸ್ವಹಸ್ತದಿಂದ ಬಾಣ ಬಿಟ್ಟು ನನ್ನ ಪ್ರಾಣ ಹರಣಮಾಡುವನು. ಚಾಪಬಾಣಗಳನ್ನು ಧರಿಸಿ ನನ್ನನ್ನು ಹಿಡಿಯುವದಕ್ಕಾಗಿ ಪ್ರಭುವು ನನ್ನ ಬೆನ್ನುಹತ್ತಿ ಬರುತ್ತಿರುವಾಗ, ನಾನು ಹಿಂದಕ್ಕೆ ಹೊರಳಿ ಹೊರಳಿ ಪ್ರಭುವನ್ನು ನೋಡುವೆನು. ನನ್ನಂಥ ಧನ್ಯನು ಬೇರೆಯಾವನೂ ಇಲ್ಲವು!

ಮಾರೀಚನು ಹೀಗೆ ವಿಚಾರ ಮಾಡುತ್ತ ಬರುತ್ತಿರಲು, ರಾವಣನು ದಂಡಕವನದ ಬಳಿಗೆ ಬಂದನು. ಮಾರೀಚನು ಮಾಯಾಮೃಗವಾದನು. ಆತನು ಅತ್ಯಂತ ವಿಚಿತ್ರವೂ, ಅವರ್ಣನೀಯವೂ ಆದ ರತ್ನಖಚಿತ ಸುವರ್ಣ ದೇಹವನ್ನು ಧರಿಸಿದನು. ಸರ್ವಾಂಗ ಸುಂದರವೂ, ಅತ್ಯಂತ ರಮಣೀಯವೂ ಆದ ಆ ಮೃಗವನ್ನು ಸೀತೆಯು ನೋಡಿ ಶ್ರೀ ರಾಮನನ್ನು ಕುರಿತು— ಎಲೈ ದಯಾಘನನಾದ ರಘುವೀರ ಪ್ರಭುವೇ, ಈ ಮೃಗದ ಚರ್ಮವು ಅತ್ಯಂತ ಸುಂದರವಾಗಿ ಕಾಣುವದು. ಅದನ್ನು ಸಂಹರಿಸಿ ಚರ್ಮವನ್ನಷ್ಟು ತಕ್ಕೊಂಡು ಬರಬೇಕು, ಎಂದು ಬೇಡಿಕೊಂಡಳು. ಆಗ ರಾಮಚಂದ್ರನು ಯಾವತ್ತು ಪ್ರಯೋಜನವನ್ನರಿತು,ದೇವಕಾರ್ಯವನ್ನು ಸಿದ್ಧಿಸುವದಕ್ಕಾಗಿ ಪ್ರಸನ್ನತೆಯಿಂದ ಎದ್ದನು. ಆ ಚಿಗರಿಯನ್ನು ನೋಡಿ ಟೊಂಕಕಟ್ಟಿ ಕೈಯಲ್ಲಿ ಸುಂದರ ಧನುಸ್ಸನ್ನು ತಕ್ಕೊಂಡು ಆ ಮೃಗದ ಮೇಲೆ ಶರಸಂಧಾನ ಮಾಡಿದನು. ಅತನು ಲಕ್ಷ್ಮಣನನ್ನು ಕುರಿತು ನಿರ್ಧಾರದಿಂದ— “ಲಕ್ಷ್ಮಣಾ, ವನದಲ್ಲಿ ರಾಕ್ಷಸರು ಸಂಚರಿಸುತ್ತಿರುವರು. ಬುದ್ಧಿ, ವಿವೇಕ, ಬಲ, ಸಮಯ ಇವುಗಳ ವಿಚಾರಮಾಡಿ ನೀನು ಸೀತೆಯನ್ನು ರಕ್ಷಿಸತಕ್ಕದ್ದು,” ಎಂದು ಹೇಳಿದನು. ಪ್ರಭುವನ್ನು ನೋಡಿ ಮೃಗವು ಓಡತೊಡಗಿತು. ಆಗ ಪ್ರಭುವೂ ಚಾಪವನ್ನು ಸಿದ್ಧಮಾಡಿ ಅದರ ಬೆನ್ನು ಹತ್ತಿದನು. ವೇದಗಳು ಯಾವನ ಮಹಿಮೆಯನ್ನು “ನೇತಿ ನೇತಿ” ಎಂದು ಗಾಯನ ಮಾಡುವವೋ, ಶಂಕರನ ಧ್ಯಾನಕ್ಕೂ ಯಾವನು ಅಗಮ್ಯನಾಗಿರುವನೋ ಆ ಪ್ರಭುರಾಮನು ಮಾಯಾ ಮೃಗದ ಬೆನ್ನು ಹತ್ತಿ ಓಡತೊಡಗಿದನು. ಆ ಮೃಗವು ಒಮ್ಮೆ ರಾಮನ ಸನಿಯಕ್ಕೆ ಬಂದಹಾಗಾಗುವದು, ಒಮ್ಮೆ ದೂರ ಓಡಿ ಹೋದಹಾಗಾಗುವದು; ಒಮ್ಮೆ ಗುಪ್ತವಾಗುವದು, ಒಮ್ಮೆ ಪ್ರಕಟವಾಗುವದು. ಈ ಮೇರೆಗೆ ಆ ಮೃಗವು ಗುಪ್ತ—ವ್ಯಕ್ತವಾಗುತ್ತ ಪ್ರಭುವನ್ನು ಬಹುದೂರ ಕರೆದುಕೊಂಡು ಹೋಯಿತು. ಆಗ ಶ್ರೀರಾಮನು ಗುರಿ ನೋಡಿ ಅದರ ಮೇಲೆ ಒಂದೇ ಒಂದು

ಬಾಣವನ್ನು ಬಿಟ್ಟನು. ಆದರಿಂದ ಆ ಮೃಗವು ಭಯಂಕರ ಆಕ್ರೋಶ ಮಾಡುತ್ತ ಭೂಮಿಯಮೇಲೆ ಬಿದ್ದಿತು. ಮಾರೀಚನು ಮೊದಲು ಲಕ್ಷ್ಮಣನನ್ನು ಹೆಸರುಗೊಂಡು ಕೂಗಿದನು; ಆ ಮೇಲೆ ರಾಮನನ್ನು ಮನಸ್ಸಿನಲ್ಲಿ ಸ್ಮರಿಸಿದನು. ಆತನು ಪ್ರಾಣಬಿಡುವಾಗ ತನ್ನ ರಾಕ್ಷಸ ದೇಹವನ್ನು ಪ್ರಕಟಮಾಡಿ ಪ್ರೇಮಪೂರ್ವಕವಾಗಿ ರಾಮನನ್ನು ಸ್ಮರಿಸಿದನು. ಆತನ ಅಂತಸ್ಥ ಪ್ರೇಮವನ್ನರಿತು ಸರ್ವಜ್ಞನಾದ ರಾಮನು ಮುನಿಗಳಿಗೂ ದುರ್ಲಭವಾದ ಗತಿಯನ್ನು ಆತನಿಗೆ ಕೊಟ್ಟನು. ಆಗ ದೇವತೆಗಳು ಪುಷ್ಪವೃಷ್ಟಿಮಾಡುತ್ತ, ರಘುವೀರನು ನಿಜವಾಗಿಯೇ ದಯಾಸಾಗರನು, ಆತನು ರಾಕ್ಷಸನಿಗೂ ನಿಜಪದವಿತ್ತನು." ಎಂದು ಸ್ತೋತ್ರ ಮಾಡಿದರು. ಆ ಖಲನನ್ನು ಸಂಹರಿಸಿ ರಾಮನು ಕೂಡಲೆ ತಿರುಗಿದನು. ಇತ್ತ ಸೀತೆಯು ಮಾರೀಚನು ಕೂಗಿದ "ಲಕ್ಷ್ಮಣಾ, ಲಕ್ಷ್ಮಣಾ," ಎಂಬ ಆರ್ತಸ್ವರವನ್ನು ಕೇಳಿ ಗಾಬರಿಯಾಗಿ ಲಕ್ಷ್ಮಣನನ್ನು ಕುರಿತು—ನಿನ್ನ ಬಂಧುವು ಸಂಕಟಕ್ಕೊಳಗಾಗಿರುವದರಿಂದ ನೀನು ಬೇಗನೆ ಅಲ್ಲಿಗೆ ಹೋಗು, ಅನ್ನಲು, ಲಕ್ಷ್ಮಣನು ನಗುತ್ತ--ಮಾತೇ ಕೇಳು. ಯಾವನ ಭ್ರುಕುಟೀವಿಲಾಸದಿಂದ ಸೃಷ್ಟಿಯು ಲಯವಾಗುವದೋ ಆತನು ಸ್ವಪ್ನದಲ್ಲಿಯಾದರೂ ಸಂಕಟಕ್ಕೆ ಗುರಿಯಾಗಬಹುದೇ? ಎಂದು ಕೇಳಿದನು; ಆದರೆ ಸೀತೆಯು ಮರ್ಮಭೇದಕವಚನಗಳನ್ನು ಆಡಿದ್ದರಿಂದ ಪ್ರಭುಸತ್ತೆಯನ್ನನುಸರಿಸಿ ಲಕ್ಷ್ಮಣನ ಬುದ್ಧಿಯು ಹೊಯ್ದಾಡ ಹತ್ತಿತು. ವನದೇವತೆಗಳಿಗೂ, ದಿಗ್ದೇವತೆಗಳಿಗೂ ಸೀತೆಯನ್ನು ಒಪ್ಪಿಸಿ, ಆತನು ಶ್ರೀರಾಮನ ಬಳಿಗೆ ಹೊರಟುಹೋದನು. ಇತ್ತ ರಾವಣನು ಆಶ್ರಮವು ಶೂನ್ಯವಾಗಿರುವದನ್ನು ನೋಡಿ ಯತಿವೇಷವನ್ನು ಧರಿಸಿ ಆ ಆಶ್ರಮದ ಬಳಿಗೆ ಬಂದನು. ಯಾವನ ಅಂಜಿಕೆಯಿಂದ ದೇವತೆಗಳೂ, ರಾಕ್ಷಸರೂ ಅಂಜುತ್ತಿದ್ದು ಇವರಿಗೆ ರಾತ್ರಿ ನಿದ್ದೆ ಬರುತ್ತಿದ್ದಿಲ್ಲವೋ, ಹಗಲು ಊಟ ಹೋಗುತ್ತಿದ್ದಿಲ್ಲವೋ ಅಂಥ ರಾವಣನು ಈಗ ನಾಯಿಯಂತೆ ಅತ್ತಿತ್ತ ನೋಡುತ್ತ ಕಳವು ಮಾಡುವಕನ್ಯಾಗಿ ಹೋಗಹತ್ತಿದನು. ಹೀಗೆ ಕುಮಾರ್ಗದಿಂದ ಹೆಜ್ಜೆಯಿಡುವವರ ತೇಜಸ್ಸು ಹಾನಿಯಾಗುವದಲ್ಲದೆ, ಅವರ ಬುದ್ಧಿಯ ಲೇಶವೂ ಉಳಿಯುವದಿಲ್ಲ. ರಾವಣನು ಹಲವು ಪ್ರಕಾರದ ಕಥೆಗಳನ್ನು ಹೇಳಿ, ರಾಜನೀತಿಯನ್ನು ಕೇಳಿಸಿ, ಪ್ರೀತಿಯನ್ನು ತೋರಿಸಿ ಕಡೆಗೆ ಸೀತೆಗೆ ಅಂಜಿಕೆಯನ್ನು ಹಾಕಿದನು. ಆಗ ಸೀತೆಯು— ಎಲೈ ಗೋಸಾವಿಯೇ, ನೀನು ನೀಚ ಮನುಷ್ಯನಂತೆ ಮಾಡುತ್ತಿರುವೆ, ಅನ್ನಲು, ಕಡೆಗೆ ರಾವಣನು ತನ್ನ ನಿಜಸ್ವರೂಪವನ್ನು ಪ್ರಕಟಮಾಡಿ ತನ್ನಹೆಸರು ಹೇಳಲು, ಸೀತೆಯು ಬೆದರಿದಳು; ಆದರೂ ಆಕೆಯು ಅತ್ಯಂತ ಧೈರ್ಯದಿಂದ ರಾವಣನನ್ನು ಕುರಿತು— ಎಲೈ ದುಷ್ಟನೇ, ಪ್ರಭುವು ಬರುತ್ತಿರುವನು, ನಿಲ್ಲು. ಎಲೈ ರಾಕ್ಷಸಪತಿಯೇ, ನೀಚನರಿಯು ಸಿಂಹಿಣಿಯನ್ನು ಇಚ್ಛಿಸುವಂತೆ ನೀನು ಮೃತ್ಯುವಿನ ಅಧೀನನಾಗಿ ನನ್ನನ್ನು ಇಚ್ಛಿಸುತ್ತೀ, ಎಂದಳು. ಸೀತೆಯ ಈ ಮಾತುಗಳನ್ನು ಕೇಳಿ ರಾವಣನು ಲಜ್ಜಿತನಾದನು. ಆತನು ಮನಸ್ಸಿನಿಂದಲೇ ಆಕೆ

ಯನ್ನು ನಮಸ್ಕರಿಸಿ, ಸಂತೋಷಪಟ್ಟನು. ಒಮ್ಮೆಲೆ ಆತನು ಕ್ರುದ್ಧನಾಗಿ ಆಕೆಯನ್ನು ಎತ್ತಿ ರಥದಲ್ಲಿ ಹಾಕಿಕೊಂಡು ಲಗುಬಗೆಯಿಂದ ಆಕಾಶ ಮಾರ್ಗದಿಂದ ಹೋಗ ಹತ್ತಿದನು; ಆದರೆ ಭೀತಿಯಿಂದ ರಥಹೊಡೆಯುವದು ಆತನಿಂದ ಆಗಲೊಲ್ಲದು. ಸೀತೆಯು ಆಕ್ರೋಶ ಮಾಡತೊಡಗಿದಳು. ಆಕೆಯು— ಎಲೈ ಜಗದೇಕವೀರ ಪ್ರಭುವೇ, ರಘುರಾಯಾ, ಯಾವ ಅಪರಾಧಕ್ಕಾಗಿ ನನ್ನ ವಿಷಯದಲ್ಲಿ ಹೀಗೆ ದಯಾಹೀನನಾಗಿ ನನ್ನನ್ನು ಮರೆತೆ? ಎಲೈ ದುಃಖಹಾರಕನೇ, ಶರಣಾಗತ ಸುಖದಾಯಕನೇ, ಎಲೈ ರಘುಕುಲ ಕಮಲ ಸೂರ್ಯನೇ! ಎಲೈ ಲಕ್ಷ್ಮಣಾ, ಇದರಲ್ಲಿ ನಿನ್ನ ಅಪರಾಧವೇನೂ ಇಲ್ಲ. ನಿನ್ನ ಮೇಲೆ ಸಿಟ್ಟಾಗಿದ್ದರ ಫಲವು ನನಗೆ ದೊರೆಯಿತು. ಪ್ರಭುವಿನ ಕೃಪೆಯು ನನ್ನ ಮೇಲೆ ವಿಶೇಷವಾಗಿ ಇದ್ದಿತು. ಆದರೆ ಇಂದು ನಾನು ಆ ಕೃಪೆಗೆ ಎರವಾದೆನು. ನನ್ನ ವಿಪತ್ತನ್ನು ನನ್ನ ಪ್ರಭುವಿಗೆ ಯಾರು ಹೇಳಿಯಾರು! ಕತ್ತೆಯು ಪುರೋಡಾಶವೆಂಬ ಹವಿರ್ಭಾಗವನ್ನು ತಿನ್ನಲಿಚ್ಛಿಸಬಹುದೇ?" ಎಂದು ಸೀತೆಯು ಮಾಡುವ ದಾರುಣ ವಿಲಾಪವನ್ನು ಕೇಳಿ ಚರಾಚರಗಳು ದುಃಖಿತವಾದವು. ಸೀತೆಯ ಈ ಆರ್ತಸ್ವರವನ್ನು ಕೇಳಿ, "ಮ್ಲೇಚ್ಛನು ಕಪಿಲೆ ಆಕಳನ್ನು ಎಳೆದೊಯ್ಯುವಂತೆ ದುಷ್ಟ ರಾಕ್ಷಸನು ರಘುತಿಲಕನ ಪತ್ನಿಯನ್ನು ಹರಣಮಾಡುವನೆ"ಂದು ತಿಳಿದು, ಗೃಧ್ರರಾಜನಾದ ಜಟಾಯುವು ಸೀತೆಯನ್ನು ಕುರಿತು— ಬಾಲೇ ಸೀತೇ, ಬೆದರಬೇಡ, ನಾನು ಈ ರಾಕ್ಷಸನ ನಾಶಮಾಡುವೆನು. ಎಂದು ಹೇಳಿ ಕ್ರೋಧಸಂತಪ್ತನಾದ ಆತನು ರಾವಣನನ್ನು ಕುರಿತು— ಎಲೆ ಎಲೆ ದುಷ್ಟಾ, ಯಾಕೆ ನಿಲ್ಲಲೊಲ್ಲಿ? ನಿಶ್ಶಂಕೆಯಿಂದ ಹೋಗುತ್ತಿರುವೆಯಲ್ಲ! ನನ್ನ ಗುರುತು ನಿನಗೆ ಹತ್ತಲಿಲ್ಲವೆಂಬಂತೆ ಕಾಣುತ್ತದೆ, ಅನ್ನಲು, ಜಟಾಯುವು ಕೃತಾಂತನಂತೆ ಬರುತ್ತಿರುವದನ್ನು ನೋಡಿ ರಾವಣನು ಹಿಂದಿರುಗಿ—"ಇವನೇನು ಮೈನಾಕಪರ್ವತವಿರಬಹುದೋ, ಅಥವಾ ಗರುಡನಿರಬಹುದೋ,' ಎಂದು ತರ್ಕಿಸತೊಡಗಿದನು. ಈತನು ವೃದ್ಧ ಜಟಾಯುವಿರುವನೆಂಬುದನ್ನರಿತು ರಾವಣನು—"ಇವನು ನನ್ನ ಹಸ್ತತೀರ್ಥದಲ್ಲಿ ದೇಹಪಾತವನ್ನು ಮಾಡಿಕೊಳ್ಳುವನು" ಅನ್ನಲು, ಅದನ್ನು ಕೇಳಿ ಜಟಾಯುವು ರೇಗಿಗೆದ್ದು ರಾವಣನನ್ನು ಕುರಿತು—ರಾವಣಾ, ನನ್ನ ಹಿತಬೋಧವನ್ನು ಕೇಳು. ಜಾನಕಿಯನ್ನು ಇಲ್ಲಿಯೇ ಬಿಟ್ಟು ನೀನು ಜೀವದಿಂದ ಮನೆಗೆ ಹೋಗತ್ತು; ಇಲ್ಲದಿದ್ದರೆ ಎಲೈ ಬಹುಬಾಹುವೇ, ರಾಮನ ಕ್ರೋಧಾಗ್ನಿಯು ಬಹು ಭಯಂಕರವಾಗಿರುವದು. ನಿನ್ನ ಯಾವತ್ತು ಕುಲವು ಪತಂಗದಂತೆ ಅದರಲ್ಲಿ ಬಿದ್ದು ಬೂದಿಯಾಗುವಹೊತ್ತು ಬಂದೀತು, ಎಂದು ಹೇಳಿದನು; ಆದರೆ ರಾವಣವೀರನು ಅದಕ್ಕೆ ಉತ್ತರವನ್ನೇ ಕೊಡಲಿಲ್ಲ. ಆಗ ಜಟಾಯುವು ಕ್ರುದ್ಧನಾಗಿ ರಾವಣನಮೇಲೆ ಏರಿಹೋಗಿ ಅವನ ಚಂಡಿಕೆಯನ್ನು ಹಿಡಿದು ಅವನನ್ನು ರಥಹೀನ

ಸನ್ನಾಗಿ ಮಾಡಿ ಅವನನ್ನು ಭೂಮಿಗೆ ಅಪ್ಪಳಿಸಿದನು. ಬಳಿಕ ಜಟಾಯುವು ಸೀತೆಯನ್ನು ಕರಕೊಂಡು ಒತ್ತಟ್ಟಿಗೆ ಕುಳ್ಳಿರಿಸಿ, ತನ್ನ ಚಂಚುವಿನಿಂದ ರಾವಣನ ದೇಹವನ್ನು ಸೀಳಿದನು. ಅದರಿಂದ ರಾವಣನಿಗೆ ಒಂದು ಗಳಿಗೆ ಮೂರ್ಛೆಯುಂಟಾಯಿತು. ಬಳಿಕ ಕ್ರುದ್ಧನಾದ ರಾವಣನು ಅತ್ಯಂತ ತೀಕ್ಷ್ಣವಾದ ತನ್ನ ಖಡ್ಗವನ್ನು ಹಿರಿದು ಜಟಾಯುವಿನ ರೆಕ್ಕೆಗಳನ್ನು ತುಂಡರಿಸಿಬಿಟ್ಟನು. ಆಗ ಜಟಾಯುವು ಭೂಮಿಯಲ್ಲಿ ಬೀಳಲು, ರಾವಣನು ಮತ್ತೆ ಸೀತೆಯನ್ನು ರಥದಲ್ಲಿ ಹಾಕಿಕೊಂಡು ಅತ್ಯಂತ ತ್ರಸ್ತನಾಗಿ ಅವಸರದಿಂದ ಹೋಗತೊಡಗಿದನು. ಆತನು ಆಕಾಶಮಾರ್ಗದಿಂದ ಹೋಗುತ್ತಿರುವಾಗ ಸೀತೆಯು ಬೇಡನ ಕೈಯಲ್ಲಿ ಸಿಕ್ಕು ಅಂಜಿದ ಚಿಗರೆಯಂತೆ ವಿಲಾಪಿಸುತ್ತಿದ್ದಳು. ಆಕೆಯು ಋಷ್ಯಮೂಕ ಪರ್ವತದ ಮೇಲೆ ಕುಳಿತಿರುವ ಕಪಿಗಳನ್ನು ನೋಡಿ “ರಾಮ ರಾಮ” ಎಂದು ಹೆಸರ್ಗೊಂಡು ಕೂಗುತ್ತ ತನ್ನ ಉತ್ತರೀಯವನ್ನು ಅವರ ನಡುವೆ ಚೆಲ್ಲಿಕೊಟ್ಟಳು. ಹೀಗೆ ದುಷ್ಟರಾವಣನು ಸೀತೆಯನ್ನು ಅಪಹರಿಸಿ, ಹಲವು ಬಗೆಯಿಂದ ಭೀತಿಯನ್ನೂ, ಪ್ರೀತಿಯನ್ನೂ ತೋರಿಸಿದರೂ ಆಕೆಯು ವಶವಾಗದಿರಲು, ಆಕೆಯನ್ನು ನವೀನವಾದ ಅಶೋಕವೃಕ್ಷದ ಬುಡದಲ್ಲಿ ಭದ್ರವಾದ ಕಾವಲಿನಲ್ಲಿ ಇರಿಸಿದನು. ಕಪಟಮೃಗವನ್ನು ಬೆನ್ನಟ್ಟಿ ಹೋಗುವಾಗಿನ ರೂಪವನ್ನು ಸೀತೆಯು ಹೃದಯದಲ್ಲಿ ಧಾರಣಮಾಡಿ, ರಾಮನಾಮವನ್ನು ಜಪಿಸುತ್ತ ಅಲ್ಲಿ ಇರತೊಡಗಿದಳು.

ಇತ್ತ ಲಕ್ಷ್ಮಣನು ಬರುತ್ತಿರುವದನ್ನು ನೋಡಿ ರಾಮನು ಬಹು ಚಿಂತಾಕ್ರಾಂತನಾದಂತೆ ನಟಿಸಿ, ಲಕ್ಷ್ಮಣನನ್ನು ಕುರಿತು—“ಅಯ್ಯೋ ಲಕ್ಷ್ಮಣಾ, ನನ್ನ ಅಪ್ಪಣೆಯನ್ನು ಮೀರಿ ಸೀತೆಯೊಬ್ಬಳನ್ನೇ ಬಿಟ್ಟು ಬಂದೆಯಲ್ಲ! ರಾಕ್ಷಸಸಮುದಾಯವು ವನದಲ್ಲಿ ತಿರುಗುತ್ತಿರುವದು. ಸೀತೆಯು ಆಶ್ರಮದಲ್ಲಿಲ್ಲವೆಂದು ನನ್ನ ಮನಸ್ಸು ನನಗೆ ಹೇಳುತ್ತಿರುವದು, ಅನ್ನಲು, ಲಕ್ಷ್ಮಣನು ರಾಮಚಂದ್ರನ ಚರಣಗಳಿಗೆರಗಿ ಕೈಜೋಡಿಸಿ—“ನಾಥನೇ, ಇದರಲ್ಲಿ ನನ್ನ ಅಪರಾಧವೇನೂ ಇಲ್ಲ [illegible],” ಎಂದು ಹೇಳಿದನು. ಬಳಿಕ ಪ್ರಭುವು ಲಕ್ಷ್ಮಣನೊಡನೆ ಗೋದಾವರೀತೀರದ ಆಶ್ರಮಕ್ಕೆ ಬಂದು, ಅಲ್ಲಿ ಸೀತೆಯು ಇಲ್ಲದಿರುವದನ್ನು ನೋಡಿ ಪ್ರಾಕೃತಜನರಂತೆ ದುಃಖಿಸತೊಡಗಿದನು. ಹಾ, ಗುಣಖನೀ ಜಾನಕೀ, ಹಾ! ರೂಪಶೀಲವ್ರತನೇಮಪುನೀತೇ, ಸೀತೇ, ಎಂದು ಶ್ರೀರಾಮನು ಮಾರ್ಗದಲ್ಲಿ ವಿಲಾಪಿಸುತ್ತ, ಹೋಗಹೋಗುವಾಗ—“ನೀವು ಸೀತೆಯನ್ನು ಕಂಡಿರೇನು” ದು ಗಿಡ–ಬಳ್ಳಿ–ಚಿಗರು ಮೊದಲಾದವುಗಳನ್ನು ಕೇಳುತ್ತ, ಸೀತೆಯನ್ನು ಹುಡುಕುತ್ತ ಹೋಗತೊಡಗಿದನು. ಆಗ ಪ್ರಭುವು ಅತ್ಯಂತ ಕಾಮಿಯಾಗಿಯೂ, ಮಹಾನ್ ವಿರಹಿಯಾಗಿಯೂ ತೋರಹತ್ತಿದನು. ಪೂರ್ಣಕಾಮನೂ, ಸುಖನಿಧಾನನೂ, ಜನ್ಮಮರಣರಹಿತನೂ, ಆದ ಶ್ರೀ ರಾಮನು ಹೀಗೆ ಮಾನವಚರಿತ್ರವನ್ನು ಮಾಡತೊಡಗಿದನು. ಹೋಗಹೋಗುತ್ತ ಎದುರಿಗೇ ರಾಮಚರಣಚಿಹ್ನವನ್ನು ಧ್ಯಾನಿಸುತ್ತ ಬಿದ್ದುಕೊಂಡಿದ್ದ ಜಟಾಯುವು ಆತನ ಕಣ್ಣಿಗೆ ಬಿದ್ದನು.

ಕೃಪಾಸಾಗರನಾದ ರಘುವೀರನು ತನ್ನ ಕರಕಮಲದಿಂದ ಜಟಾಯುವಿನ ಮಸ್ತಕವನ್ನು ಸ್ಪರ್ಶಮಾಡಿದನು. ರಾಮಚಂದ್ರನ ಆ ಸೌಂದರ್ಯನಿಧಾನ-ಮುಖವನ್ನು ನೋಡಿ ಜಟಾಯುವಿನ ಯಾವತ್ತು ಕ್ಲೇಶವು ನಷ್ಟವಾಯಿತು. ಆಗ ಜಟಾಯುವು ಧೈರ್ಯದಿಂದ ಶ್ರೀ ರಾಮನನ್ನು ಕುರಿತು—ಎಲೈ ಭವಭಯಭಂಜನಾ, ರಾಮಾ, ಕೇಳು. ಎಲೈ ನಾಥನೇ, ರಾವಣನು ಹೀಗೆ ನನ್ನನ್ನು ದುರ್ದಸೆಗೊಳಿಸಿ ವೈದೇಹಿಯನ್ನು ಹರಣಮಾಡಿ ದಕ್ಷಿಣದಿಕ್ಕಿನಕಡೆಗೆ ಹೋದನು ಆ ಕಾಲದಲ್ಲಿ ಸೀತೆಯು ಲಾವಕ್ಕಿಯಂತೆ ಅತ್ಯಂತ ವಿಲಾಪಮಾಡುತ್ತಿದ್ದಳು. ಎಲೈ ಪ್ರಭುವೇ, ನಿನ್ನ ದರ್ಶನೇಚ್ಛೆಯಿಂದ ನಾನು ಪ್ರಾಣಧಾರಣ ಮಾಡಿದ್ದೆನು; ಅವರೆ ದಯಾಸಿಂಧೋ, ಈಗ ಆ ಪ್ರಾಣಗಳು ಹೋಗತೊಡಗಿರುವವು. ಅನ್ನಲು, ರಾಮನು—“ಎಲೈ ತಾತನೇ, ನೀನು ದೇಹಧಾರಣ ಮಾಡಿ ಇರು” ಅನ್ನಲು, ಜಟಾಯುವು ನಕ್ಕು—“ಮರಣ ಸಮಯದಲ್ಲಿ ಯಾವನ ನಾಮಸ್ಮರಣ ಮಾಡುವದರಿಂದ ಅಧಮನೂ ಮುಕ್ತನಾಗುವನೆಂದು ವೇದಗಳು ಹೇಳುವವೋ, ಅಂಥ ಶ್ರೀ ರಾಮನು ನೀನು ಪ್ರತ್ಯಕ್ಷನಾಗಿ ಕಣ್ಣೆದುರಿಗೆ ನಿಂತಿರುವಾಗ, ಎಲೈ ನಾಥನೇ, ನಾನು ಈ ದೇಹವನ್ನು ಯಾತಕ್ಕೋಸ್ಕರ ಕಾದಿಡಬೇಕು!” ಎಂದು ಕೇಳಿದನು. ಆಗ ರಾಮಚಂದ್ರನ ಕಣ್ಣುಗಳು ನೀರಿನಿಂದ ತುಂಬಿದವು. ಆತನು ಜಟಾಯುವನ್ನು ಕುರಿತು—ಎಲೈ ತಾತನೇ, ನಿನ್ನ ಕರ್ಮದಂತೆ ನಿನಗೆ ಗತಿಯು ಪ್ರಾಪ್ತವಾಯಿತು. ಪರಹಿತದವಿಷಯವಾಗಿ ಮನಸ್ಸಿನಲ್ಲಿ ತತ್ಪರರಾದವರಿಗೆ ಈ ಜಗತ್ತಿನಲ್ಲಿ ದುರ್ಲಭವಾದದ್ದೇನೂ ಇರುವದಿಲ್ಲ. ಎಲೈ ತಾತನೇ, ಇನ್ನು ನೀನು ಈ ದೇಹವನ್ನು ಬಿಟ್ಟು ನನ್ನ ಲೋಕಕ್ಕೆ ಹೋಗು. ನಿನ್ನನ್ನು ಪೂರ್ಣಕಾಮನಾಗಿ ಮಾಡುವದಕ್ಕಾಗಿ ನಿನಗೆ ನಾನು ಮತ್ತೇನು ಕೊಡಲಿ ಹೇಳು. ಎಲೈ ತಾತನೇ, ನೀನು ಹೋಗಿ ಸೀತಾಹರಣದ ವರ್ತಮಾನವನ್ನು ಮಾತ್ರ ನನ್ನ ತಂದೆಗೆ ಹೇಳಬೇಡ. ನಾನು ನಿಜವಾದ ರಾಮನೇ ಆಗಿದ್ದರೆ, ರಾವಣನನ್ನು ಆತನ ಯಾವತ್ತು ಕುಲದೊಡನೆ ಸಂಹರಿಸಿದಾಗ ಆ ರಾವಣನೇ ನನ್ನ ತಂದೆಯ ಮುಂದೆ ಆ ವರ್ತಮಾನವನ್ನು ಹೇಳುವನು.

ಜಟಾಯುವು ತನ್ನ ಗೃಧ್ರದೇಹವನ್ನು ಬಿಟ್ಟುಕೊಟ್ಟು, ಸುಂದರ ಪೀತವಸ್ತ್ರಧಾರಿಯೂ, ಶ್ಯಾಮಲವೂ, ವಿಶಾಲಚತುರ್ಭುಜಗಳುಳ್ಳದ್ದೂ, ಅತ್ಯಂತ ಅಲಂಕೃತವೂ ಆದ ಹರಿರೂಪವನ್ನು ಧರಿಸಿದನು. ಆತನ ನೇತ್ರಗಳು ಪ್ರೇಮಾಶ್ರುಪೂರ್ಣವಾಗಲು, ಆತನು ಸ್ತೋತ್ರ ಮಾಡತೊಡಗಿದನು—ಎಲೈ ರಘುವೀರನೇ, ನಿನ್ನ ಅನುಪಮರೂಪಕ್ಕೆ ಜಯಜಯಕಾರವಿರಲಿ. ನೀನು ನಿರ್ಗುಣನಿರುವೆ, ಸಗುಣನಿರುವೆ, ಸತ್ವ-ರಜ-ತಮಾದಿ ಗುಣಗಳ ಪ್ರೇರಕನಿರುವೆ. ಎಲೈ ರಾಮನೇ, ನಿನ್ನ ಬಲವು ಅಪ್ರಮೇಯವಾಗಿದ್ದು, ನೀನು ಅನಾದಿಯೂ, ಜನ್ಮರಹಿತನೂ, ಅವ್ಯಕ್ತನೂ, ಅದ್ವಿತೀಯನೂ, ಅಗೋಚರನೂ, ಗೋವಿಂದನೂ, ಇಂದ್ರಿಯಾತೀತನೂ, ದ್ವಂದ್ವಹರನೂ, ವಿಜ್ಞಾನಘನನೂ, ಧರಣೀ

ಧರನೂ ಆಗಿರುವೆ. "ಜಯರಾಮ" ಎಂದು ಮಂತ್ರವನ್ನು ನಿರಂತರವಾಗಿ ಜಪಿಸುವ ಸಂತರ ಮನಸ್ಸನ್ನು ರಂಜಿಸುವವನು ನೀನೇ ಇರುವೆ. ನೀನು ಅನಂತನಾಗಿದ್ದು, ನಿಷ್ಕಾಮಪ್ರಿಯನೂ, ಕಾಮಾದಿ ದುಷ್ಟ ಮನೋವಿಕಾರಗಳ ಸಮೂಹವನ್ನು ನಾಶಮಾಡುವವನೂ ಆಗಿರುತ್ತೀ. ಎಲೈ ರಾಮನೇ, ನಿನಗೆ ನಿರಂತರವಾಗಿ ನನ್ನ ವಂದನಗಳಿರಲಿ. ಎಂಬು ಬಗೆಬಗೆಯಿಂದ ಪ್ರಾರ್ಥಿಸಿ, ಅಚಲವಾದ ಭಕ್ತಿಯ ವರವನ್ನು ಬೇಡಿಗೊಂಡು ಜಟಾಯುವು ವೈಕುಂಠವನ್ನು ಕುರಿತು ತೆರಳಿದನು. ಆತನ ಔರ್ಧ್ವದೇಹಿಕ ಕರ್ಮಗಗಳನ್ನು ಶ್ರೀರಾಮನು ಸ್ವತಃ ಯಥೋಚಿತವಾಗಿ ಮಾಡಿದನು. ರಘುವೀರನು ಅತ್ಯಂತ ಕೋಮಲಚಿತ್ತನೂ, ದೀನದಯಾಳುವೂ ಇದ್ದು, ಆತನು ಕಾರಣವಿಲ್ಲದೆಯೂ ಕೃಪೆ ಮಾಡುತ್ತಿರುವನು. ವಾಸ್ತವವೆಂದರೆ ಹದ್ದು, ಮಾಂಸಾಹಾರಿಯಾದ ನೀಚ ಪಕ್ಷಿಯು. ಆದರೆ ಯೋಗಿಗಳು ಕೇಳಿಕೊಳ್ಳುತ್ತಿರುವ ಗತಿಯನ್ನು ಪ್ರಭುವು ತಾನಾಗಿ ಅದಕ್ಕೆ ಕೊಟ್ಟನು! ಎಲೈ ಪಾರ್ವತಿಯೇ ಕೇಳು. ಇಂಥ ಶ್ರೀಹರಿಯನ್ನು ಬಿಟ್ಟು ವಿಷಯಲಂಪಟರಾಗುವವರು ಭಾಗ್ಯಹೀನರೇ ಸರಿ. ಆಮೇಲೆ ಅವರಿಬ್ಬರು ಬಂಧುಗಳು ಸೀತೆಯನ್ನು ಹುಡುಕುತ್ತ, ದಟ್ಟವಾದ ಅರಣ್ಯಗಳನ್ನು ನೋಡುತ್ತ ಸಾಗಿದರು. ಮಾರ್ಗದಲ್ಲಿ ರಾಮಚಂದ್ರನು ಕಬಂಧ ರಾಕ್ಷಸನ ಸಂಹಾರ ಮಾಡಲು, ಆತನು ತನ್ನ ಶಾಪದ ವೃತ್ತಾಂತವನ್ನು ಹೇಳುವದಕ್ಕಾಗಿ ಪ್ರಭುವನ್ನು ಕುರಿತು—ಪ್ರಭುವೇ, ನಾನು ಪೂರ್ವಜನ್ಮದಲ್ಲಿ ಗಂಧರ್ವನಿದ್ದೆನು. ಒಮ್ಮೆ ದೂರ್ವಾಸರು ನನ್ನ ಗಾಯನಕ್ಕೆ ಪ್ರಸನ್ನರಾಗದೆ ಇರಲು, ನಾನು ನಕ್ಕೆನು. ಆಗ ದೂರ್ವಾಸರು "ನೀನು ರಾಕ್ಷಸನಾಗು" ಎಂದು ನನಗೆ ಶಾಪಕೊಟ್ಟರು; ಆದರೆ ಪ್ರಭುವೇ, ನಿನ್ನ ಚರಣದರ್ಶನದಿಂದ ನನ್ನ ಶಾಪನಿವೃತ್ತಿಯಾಯಿತು. ಎಂದು ಹೇಳಲು, ಶ್ರೀರಾಮನು—ಎಲೈ ಗಂಧರ್ವನೇ, ಕೇಳು. ನಾನು ಬ್ರಹ್ಮದ್ವೇಷಿಯನ್ನು ಸರ್ವಥಾ ಸಹಿಸುವದಿಲ್ಲ. ಯಾವನು ತ್ರಿಕರಣಪೂರ್ವಕವಾಗಿ ಕಪಟವನ್ನು ಪರಿತ್ಯಜಿಸಿ ಬ್ರಾಹ್ಮಣರನ್ನು ಸೇವಿಸುವನೋ, ಅವನಿಗೆ ನನ್ನಿಂದ ಸಹಿತವಾಗಿ ಶಿವ-ಬ್ರಹ್ಮ ಮೊದಲಾದ ಯಾವತ್ತು ದೇವತೆಗಳು ವಶವಾಗುವರು. ಶಾಪಕೊಡುತ್ತಿರುವ, ಹೊಡೆಯುತ್ತಿರುವ, ಕಠೋರ ಮಾತುಗಳಾಡುತ್ತಿರುವ ಬ್ರಾಹ್ಮಣನೂ ಪೂಜ್ಯನೆಂದು ಸಂತರು ಹೇಳುತ್ತಿರುವರು. ಶೀಲ-ಗುಣಗಳಿಂದ ಹೀನನಾದ ಬ್ರಾಹ್ಮಣನೂ ಪೂಜ್ಯನಾಗಿರುವನು; ಆದರೆ ಅನೇಕ ಗುಣಗಳುಳ್ಳವನೂ, ಜ್ಞಾನಪ್ರವೀಣನೂ ಆಗಿದ್ದರೂ ಶೂದ್ರನು ಮಾತ್ರ ಪೂಜ್ಯನಲ್ಲವು. ಎಂದು ಹೇಳಿ, ಶ್ರೀರಾಮನು ಆತನಿಗೆ ಸ್ವಧರ್ಮಪ್ರತಿಪಾದನ ಮಾಡಿದನು. ತನ್ನ ಚರಣದಲ್ಲಿ ಆತನ ಪ್ರೇಮವಿರುವದನ್ನು ನೋಡಿ ರಘುಪತಿಗೆ ಸಂತೋಷವಾಯಿತು. ರಘುಪತಿಯ ಚರಣಗಳಿಗೆ ವಂದಿಸಿ ಆ ಗಂಧರ್ವನು ತನ್ನ ಗತಿಯನ್ನು ಭೋಗಿಸುವದಕ್ಕಾಗಿ ಸ್ವರ್ಗಲೋಕಕ್ಕೆ ತೆರಳಿದನು.

ಶಬರಿಯ ಉದ್ಧಾರ—ಈ ಮೇರೆಗೆ ಕಬಂಧನನ್ನು ಉದ್ಧರಿಸಿ ಉದಾರಧೀಯಾದ ರಾಮ ಪ್ರಭುವು ಶಬರಿಯ ಆಶ್ರಮವನ್ನು ಪ್ರವೇಶಿಸಿದನು. ತನ್ನ ಆಶ್ರಮಕ್ಕೆ ರಾಮಚಂದ್ರನು ಬಂದದ್ದನ್ನು ನೋಡಿ ಶಬರಿಗೆ, ಮಾತಂಗಋಷಿಗಳ ಆಶೀರ್ವಾದದ ಸ್ಮರಣವಾಗಿ, ಆಕೆಗೆ ಸಂತೋಷವಾಯಿತು. ಸುಂದರರಾದ ಉಭಯಬಂಧುಗಳನ್ನು ನೋಡಿ ಶಬರಿಯು ಅವರ ಚರಣಗಳಿಗೆ ಎರಗಿದಳು. ಆಕೆಯು ಪ್ರೇಮಮಗ್ನಳಾದದ್ದರಿಂದ ಆಕೆಯ ಮುಖದಿಂದ ಶಬ್ದಗಳು ಹೊರಡದಾದವು. ಆಕೆಯು ಪುನಃ ಪುನಃ ಪ್ರಭುವಿನ ಚರಣಗಳಿಗೆ ವಂದಿಸತೊಡಗಿದಳು. ಆಕೆಯು ನೀರುತಂದು ಪ್ರಭು ಚರಣಗಳ ಪ್ರಕ್ಷಾಲನಮಾಡಿ, ಆತನನ್ನು ಸುಂದರವಾದ ಆಸನದಲ್ಲಿ ಕುಳ್ಳಿರಿಸಿ ಅತ್ಯಂತಮಧುರವಾದ ಕಂದ-ಮೂಲ-ಫಲಗಳನ್ನು ರಾಮನಿಗೆ ಅರ್ಪಿಸಿದಳು. ರಾಮನಾದರೂ ಮೇಲಿಂದ ಮೇಲೆ ಅವನ್ನು ವರ್ಣಿಸುತ್ತ ಭಕ್ಷಿಸಿದನು. ಆಕೆಯು ಕೈಜೋಡಿಸಿ ಎದುರಿಗೆ ನಿಂತುಕೊಂಡಿರುವಾಗ ಪ್ರಭುವು ಅವಲೋಕಿಸುತ್ತಿರಲು, ಆಕೆಯ ಪ್ರೇಮವು ಹೆಚ್ಚುತ್ತ ಹೋಯಿತು. ಆಕೆಯು ಪ್ರಭುವನ್ನು ಕುರಿತು—"ನಾನು ನಿನ್ನ ಸ್ತೋತ್ರವನ್ನು ಹೇಗೆ ಮಾಡಬೇಕು! ನಾನು ನೀಚಳು, ಮೇಲೆ ಸ್ತ್ರೀಜಾತಿಯು, ಇದಲ್ಲದೆ ಮಂದಮತಿಯು-ಸ್ತ್ರೀಯು ಅಧಮರಲ್ಲಿಯೂ ಅಧಮಳಾಗಿದ್ದು, ಅವರಲ್ಲಿ ನಾನಂತೂ ಬುದ್ಧಿಹೀನಳೂ, ಪಾಪಿಯೂ ಆಗಿರುವೆನು; ಅನ್ನಲು ಶ್ರೀರಾಮನು—ಎಲೈ ಭಾಮಿನಿಯೇ, ನನ್ನ ಮಾತನ್ನು ಕೇಳು. ನಾನು ಕೇವಲ ಭಕ್ತಿಯ ಸಂಬಂಧವನ್ನೇ ನೋಡುತ್ತಿರುವೆನು. ಜಾತಿ, ಕುಲ, ಐಶ್ವರ್ಯ, ಧನ, ಬಲ, ಪರಿಜನ, ಗುಣ, ಚಾತುರ್ಯ ಇವೆಲ್ಲ ಇದ್ದು, ಭಕ್ತಿಯೊಂದು ಇಲ್ಲದಿದ್ದರೆ, ಆ ಮನುಷ್ಯನು ಜಲವಿರಹಿತ ಮೇಘದಂತೆ ಇರುವನೆಂದು ತಿಳಿ. ನವವಿಧ ಭಕ್ತಿಗಳನ್ನು ಹೇಳುವೆನು, ಸಾವಧಾನದಿಂದ ಕೇಳಿ ಮನಸ್ಸಿನಲ್ಲಿ ಟ್ಟುಕೋ. ಸಂತಸಮಾಗಮವಾಗುವದು ಮೊದಲನೆಯ ಭಕ್ತಿಯಾಗಿದ್ದು, ನನ್ನ ಕಥೆಯಲ್ಲಿ ಅನುರಕ್ತಿಯಿರುವದು ಎರಡನೆಯ ಭಕ್ತಿಯಾಗಿರುವದು. ಅಭಿಮಾನವನ್ನು ತ್ಯಜಿಸಿ ಗುರುಚರಣ ಕಮಲವನ್ನು ಸೇವಿಸುವದು ಮೂರನೇ ಭಕ್ತಿಯಾಗಿದ್ದು, ನಿಷ್ಕಪಟದಿಂದ ನನ್ನ ಗುಣಗಳ ಗಾಯನಮಾಡುವದು ನಾಲ್ಕನೆಯ ಭಕ್ತಿಯ ಲಕ್ಷಣವಾಗಿರುವದು. ನನ್ನ ಮಂತ್ರವನ್ನು ಜಪಿಸಿ, ನನ್ನಲ್ಲಿ ದೃಢವಿಶ್ವಾಸವಿಟ್ಟು ನನ್ನನ್ನು ಭಜಿಸುವದು ವೇದಪ್ರತಿಪಾದಿತವಾದ ಐದನೆಯ ಭಕ್ತಿಯಾಗಿರುವದು. ಇಂದ್ರಿಯಗಳ ದಮನಮಾಡಿ ಸಚ್ಛೀಲ ಪೂರ್ವಕವಾಗಿ ಅನೇಕ ಕರ್ಮಗಳಲ್ಲಿ ವೈರಾಗ್ಯಶಾಲಿ, ಸಜ್ಜನರ ಧರ್ಮದಲ್ಲಿ ನಿರಂತರ ಪ್ರೇಮಮಾಡುವದು ಭಕ್ತಿಯ ಆರನೆಯ ಲಕ್ಷಣವಾಗಿರುವದು. ಯಾವತ್ತು ಜಗತ್ತು ನನ್ನ ಸ್ವರೂಪವಾಗಿದ್ದು, ನನಗಿಂತಲೂ ಸಂತರನ್ನು ಹೆಚ್ಚು ಮನ್ನಿಸುವದು ಏಳನೇ ಪ್ರಕಾರವಾಗಿದ್ದು, ಯದೃಚ್ಛಾಲಾಭದಿಂದ ಸಂತುಷ್ಟರಾಗಿ, ಸ್ವಪ್ನದಲ್ಲಿಯೂ ಎರಡನೆಯವರ ದೋಷಗಳನ್ನು ನೋಡದಿರುವದು ಭಕ್ತಿಯ ಎಂಟ

ನೆಯ ಲಕ್ಷಣವಾಗಿರುವು. ಎಲ್ಲರೊಡನೆ ನಿಷ್ಕಪಟದಿಂದಲೂ, ಸರಳತನದಿಂದಲೂ ನಡೆದು ಕೊಳ್ಳುತ್ತ, ನನ್ನಲ್ಲಿ ವಿಶ್ವಾಸವಿಟ್ಟು ಹರ್ಷವಿಷಾದಗಳೆಣಿಸದಿರುವದು ಭಕ್ತಿಯ ಒಂಬತ್ತನೆಯ ಪ್ರಕಾರವಾಗಿರುವದು. ಈ ಒಂಬತ್ತು ಪ್ರಕಾರಗಳಲ್ಲಿ ಒಂದು ಪ್ರಕಾರದ ಭಕ್ತಿಯಾದರೂ ಇದ್ದವರು, ಪುರುಷರೇ ಇರಲಿ, ಸ್ತ್ರೀಯರೇ ಇರಲಿ, ಎಲೈ ಭಾಮಿನಿಯೇ, ಅವರು ನನಗೆ ಅತ್ಯಂತ ಪ್ರಿಯರಾಗಿರುವರು. ನಿನ್ನ ಹೃದಯದಲ್ಲಂತು ಯಾವತ್ತು ಪ್ರಕಾರದ ಭಕ್ತಿಗಳು ನೆಲಿಸಿರುವವು. ಯೋಗಿಗಳಿಂದಕೂಡ ದುರ್ಲಭವಾಗಿರುವ ಗತಿಯು ಇಂದು ನಿನಗೆ ಸುಲಭವಾಗಿರುವದು. ನನ್ನ ದರ್ಶನದ ಅನುಪಮ ಫಲವಾವುದೆಂದರೆ, ಅದರಿಂದ ಜೀವನು ಸಹಜವಾಗಿ ಸ್ವಸ್ವರೂಪದಲ್ಲಿ ಕೂಡಿಕೊಳ್ಳುವನು. ಎಲೈ ಶಬರಿಯೇ, ಗಜಗಾಮಿನಿಯಾದ ಜಾನಕಿಯ ವರ್ತಮಾನವೇನಾದರೂ ನಿನಗೆ ಗೊತ್ತಿದ್ದರೆ ಹೇಳು, ಎಂದು ಕೇಳಿದನು. ಅದಕ್ಕೆ ಶಬರಿಯು—ರಘುರಾಜನೇ, ನೀನು ಪಂಪಾಸರೋವರಕ್ಕೆ ಹೋಗಬೇಕು. ಅಲ್ಲಿ ನಿಮ್ಮ ಹಾಗು ಸುಗ್ರೀವನ ಸಮಾಗಮವಾಗುವದು. ಎಲೈ ಪ್ರಭುವೇ, ರಘುವೀರಾ, ಆಸುಗ್ರೀವನು ನಿಮಗೆ ಎಲ್ಲ ವರ್ತಮಾನವನ್ನು ಹೇಳುವನು. ಎಲೈ ಮತಿಧೀರನೇ, ಇದೆಲ್ಲವನ್ನು ನೀವು ಅರಿತವನಾಗಿದ್ದು, ನನ್ನನ್ನೇಕೆ ಕೇಳುವೆ? ಎಂದು ಹೇಳಿ, ಪುನಃ ಪುನಃ ಪ್ರಭುವಿನ ಚರಣಗಳಿಗೆರಗಿ ಯಾವತ್ತು ವರ್ತಮಾನವನ್ನು ಹೇಳಿದಳು. ಬಳಿಕ ಆಕೆಯು ರಾಮಪದಕಮಲಗಳಲ್ಲಿ ತನ್ನ ನೇತ್ರಗಳನ್ನು ಸ್ಥಿರಗೊಳಿಸಿ, ಯೋಗಾಗ್ನಿಯಿಂದ ದೇಹವಿಸರ್ಜನ ಮಾಡಿ ಪುನರಾವರ್ತನ ರಹಿತವಾದ ಹರಿಪದದಲ್ಲಿ ಲೀನಳಾದಳು. ತುಲಸೀದಾಸನು ಹೇಳುವನೇನಂದರೆ—ಎಲೈ ನರರೇ, ವಿವಿಧಕರ್ಮಗಳು, ಅಧರ್ಮಗಳು, ಬಹುಮತಗಳು ಶೋಕಕ್ಕೆ ಕಾರಣವಾಗುವದರಿಂದ, ಅವುಗಳನು, ತ್ಯಜಿಸಿ ಶ್ರದ್ಧಾಪೂರ್ವಕವಾಗಿ ರಾಮಚರಣದಲ್ಲಿ ಅನುರಕ್ತರಾಗಿರಿ. ಸರ್ವಪಾಪಗಳ ಜನ್ಮಭೂಮಿಯಾದ ಜಾತಿಹೀನ ಶಬರಿಯನ್ನು ಉದ್ಧರಿಸಿದ ಪ್ರಭುವನ್ನು ಮರೆತು ಸುಖವನ್ನು ಇಚ್ಛಿಸುವ ಮನಸ್ಸೇ, ನಿನ್ನನ್ನು ಮಹಾಮೂರ್ಖನೆಂದು ತಿಳಿಯಬೇಕಾಗುವದು.

ಬಳಿಕ ಅತುಲ ಪರಾಕ್ರಮಿಗಳಾದ ಆ ಪುರುಷಸಿಂಹರಿಬ್ಬರು ಎರಡನೆಯ ವನವನ್ನು ಪ್ರವೇಶಿಸಿದರು. ವಿರಹ ವ್ಯಥೆಯಿಂದ ಪೀಡಿತನಾದ ಪ್ರಭುವು ಸೀತೆಯನ್ನು ನೆನಿಸಿ ವಿಲಾಪಮಾಡುತ್ತ ಅನೇಕ ಕಥಾಸಂವಾದವನ್ನು ಮಾಡುತ್ತಲಿದ್ದನು. ಆತನು ಲಕ್ಷ್ಮಣನನ್ನು ಕುರಿತು—ಎಲೈ ಲಕ್ಷ್ಮಣನೇ, ಈ ವನದ ಶೋಭೆಯನ್ನು ನೋಡಿದೆಯಾ? ಈ ವನಶೋಭೆಯನ್ನು ನೋಡಿ ಯಾವನ ಮನಸ್ಸು ಕ್ಷುಬ್ಧವಾಗಲಿಕ್ಕಿಲ್ಲ? ಯಾವತ್ತು ಪಶುಪಕ್ಷಿಸಮುದಾಯವು ತಮ್ಮ ತಮ್ಮ ಪ್ರಿಯರೊಡನೆ ಇರುವದು. ನನಗಂತು ಇವು ನನ್ನ ಉಪಹಾಸಮಾಡುತ್ತಿರುವವೆಂಬಂತೆ ತೋರುತ್ತದೆ. ನನ್ನನ್ನು ನೋಡಿ ಗಂಡು ಚಿಗರೆಗಳ ಹಿಂಡು ಓಡತೊಡಗಲು, ಹೆಣ್ಣುಚಿಗರೆಗಳು ಅವನ್ನು ಕುರಿತು—"ನಿಮಗೆ

ಇವರಿಂದ ಭಯವಿಲ್ಲವು. ಎಲೈ ಮೃಗಶಾವಕಗಳೇ, ನೀವು ಆದಂಡದಿಂದ ಇರ್ರಿ. ಕಾಂಚನ ಮೃಗವನ್ನು ಹುಡುಕುವದಕ್ಕಾಗಿ ಇವರು ಬಂದಿರುವರು" ಎಂದು ಹೇಳುತ್ತಿರುವವು. ಲಕ್ಷ್ಮಣಾ, ಕಾಮದೇವನ ಬಹು ದೊಡ್ಡಬಲವೆಂದರೆ ಸ್ತ್ರೀಯು. ಆಕೆಯು ಹೊಯ್ಲಿನಿಂದ ಪಾರಾಗುವವನೇ ನಿಜವಾದ ಶೂರನು. ಎಲೈತಾತನೆ, ಕಾಮ-ಕ್ರೋಧ-ಲೋಭಗಳೆಂಬ ಮೂರೂ ಬಲಾಢ್ಯರಾದ ಖಲರು. ವಿಜ್ಞಾನಪೂರ್ಣರಾದ ಮುನಿಗಳ ಚಿತ್ತವನ್ನೂ ಅವರು ಕ್ಷಣಮಾತ್ರದಲ್ಲಿ ಕ್ಷುಬ್ಧಗೊಳಿಸುವರು. ಇಚ್ಛಾಡಂಭಗಳು ಲೋಭದ ಸೈನ್ಯವಾಗಿದ್ದು, ಕೇವಲ ಸ್ತ್ರೀಯು ಕಾಮನ ಸೈನ್ಯವಾಗಿರುವಳು; ಅದರಂತೆ ಕಠೋರವಚನವು ಕ್ರೋಧದ ಬಲವಾಗಿರುವದು, ಎಂದು ಯಾವತ್ತು ಮುನಿಗಳು ವಿಚಾರಪೂರ್ವಕವಾಗಿ ಹೇಳಿರುವರು. ಶಂಕರನು ಪಾರ್ವತಿಯನ್ನು ಕುರಿತು—ಎಲೈ ಪಾರ್ವತಿಯೇ, ರಾಮಚಂದ್ರನು ತ್ರಿಗುಣಾತೀತನೂ, ಚರಾಚರ ಪ್ರಭುವೂ, ಸರ್ವಾಂತರವ್ಯಾಪಕನೂ ಆಗಿದ್ದರೂ ಆತನು ಕಾಮುಕಲಂಪಟರ ದೈನ್ಯವನ್ನು ತೋರಿಸಿ, ಧೈರ್ಯಶಾಲಿಗಳಾದ ಭಕ್ತರ ಮನಸ್ಸಿನೊಳಗಿನ ವೈರಾಗ್ಯವನ್ನು ದೃಢೀಕರಿಸಿದನು. ಕ್ರೋಧ, ಕಾಮ, ಲೋಭ, ಮದ, ಮಾಯೆ ಇವೆಲ್ಲ ರಾಮಕೃಪೆಯಿಂದ ನಷ್ಟವಾಗುವವು. ಯಾರನ್ನು ಈ ನಟಶ್ರೇಷ್ಠನಾದ ರಾಮಚಂದ್ರನು ಅನುಗ್ರಹಿಸುವನೋ, ಆ ಮನುಷ್ಯನು ಈ ಇಂದ್ರಜಾಲವನ್ನು ನೋಡಿ ಮೋಸಹೋಗುವದಿಲ್ಲವು. ಪಾರ್ವತಿಯೇ, ನಾನು ಸ್ವಂತದ ಅನುಭವವನ್ನು ಹೇಳುವೆನು ಕೇಳು. ಒಂದು ಹರಿಭಜನೆ ಮಾಡಿದ ಮಾತ್ರದಿಂದ ಜಗತ್ತು ಸ್ವಪ್ನವತೆ ತೋರುವದು.

ಬಳಿಕ ಪ್ರಭುವು ಸುಂದರವೂ, ಗಂಭೀರವೂ ಆದ ಪಂಪಾಸರೋವರದ ತೀರಕ್ಕೆ ಹೋದನು. ಅದರ ನೀರು ಸಂತರ ಹೃದಯದಂತೆ ನಿರ್ಮಲವಾಗಿದ್ದು, ಅದಕ್ಕೆ ರಮಣೀಯವಾದ ಘಾಟುಗಳಿದ್ದವು. ನಾಲ್ಕೂ ಮಗ್ಗಲುಗಳಿಂದ ಅನೇಕ ಪಶುಗಳು ನೀರು ಕುಡಿಯುತ್ತಿರುವಾಗ, ದಾನಶೂರನ ಮನೆಯ ಬಾಗಿಲಲ್ಲಿ ಯಾಚಕರಗುಂಪು ನೆರೆದಿರುವಂತೆ ತೋರುತ್ತಿತ್ತು. ಮಾಯೆಯಿಂದ ಆಚ್ಛಾದಿತನಾದದ್ದರಿಂದ ಜೀವನು ನಿರ್ಗುಣ ಬ್ರಹ್ಮನನ್ನು ತಿಳಿಯಲು ಅಶಕ್ತನಾಗಿರುವಂತೆ, ನೀಲಕಮಲಗಳಿಂದ ಆಚ್ಛಾದಿತವಾದ ಸರೋವರದ ನೀರು ನೋಡುವವರಿಗೆ ಒಮ್ಮಿಂದೊಮ್ಮೆ ಕಾಣುತ್ತಿದ್ದಿಲ್ಲ. ಧರ್ಮಪರಾಯಣನಾದ ಮನುಷ್ಯನ ದಿನಗಳು ಸುಖವಲ್ಲಿ ಹೋಗುತ್ತಿರುವಂತೆ, ಆ ಸರೋವರದೊಳಗಿನ ಅಗಾಧ ಜಲದೊಳಗಿದ್ದ ಮೀನಗಳು ಪ್ರೇಮದಿಂದಲೂ, ಸುಖದಿಂದಲೂ ವಾಸಿಸುತ್ತಿದ್ದವು. ಆ ಸರೋವರದ ಸಮೀಪದಲ್ಲಿ ಮುನಿಗಳ ಆಶ್ರಮಗಳಿದ್ದು, ಅವುಗಳ ಸುತ್ತುಮುತ್ತು ವಿವಿಧವೃಕ್ಷಗಳುಳ್ಳ ಅರಣ್ಯಗಳು ಶೋಭಿಸುತ್ತಿದ್ದವು. ಚಂಪಕ, ಬಕುಲ, ಕದಂಬ, ತಮಾಲ, ಪೇರಲ, ಫಣಸ, ಆಮ್ರ ಮೊದಲಾದ ಹಲವು ವೃಕ್ಷಗಳು ನೂತನ ಪಲ್ಲವಗಳಿಂದ ಶೋಭಿಸುತ್ತಿದ್ದವು. ಅವುಗಳಲ್ಲಿ ಭ್ರಮರಗಳ ಸಮೂಹವು ಮಂಜುಲ

ಧ್ವನಿಮಾಡುತ್ತಿತ್ತು. ಶೀತಲವೂ, ಮಂದವೂ, ಸುಗಂಧಿತವೂ ಆದ ಆಲ್ಹಾದಕಾರಕ ವಾಯುವು ಯಾವಾಗಲೂ ಬೀಸುತ್ತಿತ್ತು. ಕೋಗಿಲೆಗಳು, "ಕುಹು ಕುಹು" ಎಂದು ಶಬ್ದಮಾಡುತ್ತಿದ್ದವು. ಅವುಗಳ ಆ ಮನೋಹರ ಸ್ವರಗಳನ್ನು ಕೇಳಿ ಮುನಿಗಳ ಧ್ಯಾನ ಕ್ಕೂ ಭಂಗವು ಉಂಟಾಗುತ್ತಿತ್ತು. ಪರೋಪಕಾರದ ಮನುಷ್ಯನಿಗೆ ವಿಪುಲಸಂಪತ್ತು ಪ್ರಾಪ್ತವಾದಾಗ ಆತನು ನಮ್ರನಾಗುವಂತೆ, ವೃಕ್ಷಗಳು ಫಲಭಾರದಿಂದ ನಮ್ರವಾಗಿ ನೆಲಕ್ಕೆ ಹತ್ತಿದ್ದವು. ಅಂಥ ಆ ರಮ್ಯಸರೋವರವನ್ನು ನೋಡಿ ರಾಮನು ಅದರಲ್ಲಿ ಸ್ನಾನ ಮಾಡಿದ್ದರಿಂದ ಆತನಿಗೆ ಪರಮಾಲ್ಹಾದವಾಯಿತು. ಒಂದು ಸುಂದರವಾದ ವಿಶಾಲವೃಕ್ಷ ವನ್ನು ನೋಡಿ ಅದರ ನೆರಳಲ್ಲಿ ರಘುವೀರನು ಲಕ್ಷ್ಮಣನೊಡನೆ ಕುಳಿತುಕೊಂಡನು. ಆಗ ದೇವತೆಗಳೂ, ಮುನಿಗಳೂ ಬಂದು ಭಗವಂತನ ಸ್ತೋತ್ರಮಾಡಿ ಸ್ವಸ್ಥಾನಗಳಿಗೆ ಹೋದರು. ಕೃಪಾಳುವಾದ ಪ್ರಭುವು ಅತ್ಯಂತ ಪ್ರಸನ್ನನಾಗಿ ಲಕ್ಷ್ಮಣನೊಡನೆ ರಸಾಲಭಾಷಣಮಾಡುತ್ತಲಿದ್ದನು. ಭಗವಂತನ ವಿರಹದುಃಖವನ್ನು ನೋಡಿ ನಾರದನಿಗೆ ಬಹಳ ದುಃಖವಾಯಿತು. ಆತನು—"ನನ್ನ ಶಾಪದಯೋಗದಿಂದ ಪ್ರಭುವು ಅನೇಕ ದುಃಖಗಳನ್ನು ಸಹಿಸುತ್ತಿರುವವರಿಂದ, ಇಂಥ ಪ್ರಭುವಿನ ದರ್ಶನವನ್ನು ಅವಶ್ಯವಾಗಿ ಮಾಡಿಕೊಳ್ಳಬೇಕು. ಪುನಃ ಇಂಥ ಪ್ರಸಂಗವು ಬರಲಿಕ್ಕಿಲ್ಲ;" ಎಂದು ಯೋಚಿಸಿ ಕೈಯಲ್ಲಿ ವೀಣೆಯನ್ನು ಧರಿಸಿ ಪ್ರೇಮಪೂರ್ವಕ ಮಧುರವಾಣಿಯಿಂದ ರಾಮಚರಿತ್ರದ ಗಾಯನಮಾಡುತ್ತ, ಪ್ರಭುವು ಸ್ವಸ್ಥವಾಗಿ ಕುಳಿತುಕೊಂಡಿರುವಲ್ಲಿಗೆ ಬಂದು, ದೀರ್ಘ ದಂಡ ನಮಸ್ಕಾರಮಾಡಿದನು. ಪ್ರಭುವು ಆತನನ್ನು ಎಬ್ಬಿಸಿ ಪುನಃ ಪುನಃ ಆಲಿಂಗಿಸಿ ಕುಶಲ ಪ್ರಶ್ನೆ ಮಾಡಿ ಹತ್ತರ ಕುಳ್ಳಿರಿಸಿಕೊಂಡನು. ಆಗ ಲಕ್ಷ್ಮಣನು ಆದರಪೂರ್ವಕ ವಾಗಿ ನಾರದರ ಪಾದಪ್ರಕ್ಷಾಲನಮಾಡಿದನು.

ನಾರದರು ಹಲವು ಬಗೆಗಳಿಂದ ಪ್ರಭುವಿನ ಸ್ತೋತ್ರಮಾಡಿ, ಆತನ ಅಂತಃಕರಣವು ಪ್ರಸನ್ನವಾಗಿರುವದನ್ನು ಅರಿತು ಕೈಜೋಡಿಸಿ—ಎಲೈ ಪರಮೋದಾರನಾದ ರಘುನಾಯಕಾ, ನೀನು ಸುಂದರನೂ, ಅಗಮನೂ, ಸುಗಮನೂ, ವರದನೂ ಆಗಿರುವೆ. ಎಲೈ ಸ್ವಾಮಿಯೇ, ನೀನು ಅಂತರ್ಯಾಮಿಯಾಗಿ ಎಲ್ಲವನ್ನೂ ತಿಳಿಯುತ್ತಿದ್ದರೂ, ನಾನು ಒಂದುವರವನ್ನು ಬೇಡಿಕೊಳ್ಳುವೆನು. ಪ್ರಭುವಿನ ಅನಂತನಾಮಗಳು ವೇದದಲ್ಲಿ ಹೇಳಿದ್ದರೂ "ರಾಮ" ಎಂಬ ನಾಮವೇ ಯಾವತ್ತು ನಾಮಗಳಲ್ಲಿ ಶ್ರೇಷ್ಠವಾಗಿ ಪಾಪರೂಪವಾದ ಪಕ್ಷಿಗಣದ ನಾಶಮಾಡುವಂತಹದಾಗಲಿ. ನಿನ್ನ ಭಕ್ತಿಯು ಪೌರ್ಣಿಮೆಯ ರಾತ್ರಿಯಾಗಿ, ನಿನ್ನ ಇತರನಾಮಗಳು ನಕ್ಷತ್ರಗಣದಂತೆಯೂ, ರಾಮನಾಮವು ಚಂದ್ರನಂತೆಯೂ ಆಗಿ ಭಕ್ತರ ನಿರ್ಮಲ ಹೃದಯಾಕಾಶದಲ್ಲಿ ಪ್ರಕಾಶಿಸುತ್ತಿರಲಿ," ಅನ್ನಲು ರಾಮನು "ತಥಾಸ್ತು" ಎಂದು ಆಶೀರ್ವಾದವಿತ್ತನು. ಆಗ ನಾರದನು ಹರ್ಷಿತನಾಗಿ ಪ್ರಭುವಿನ ಚರಣಕ್ಕೆರಗಿದನು. ತನ್ನ ಸ್ವಾಮಿಯು ಸುಪ್ರಸನ್ನನಾಗಿರುವನೆಂದು ತಿಳಿದು

ನಾರದನು ಮತ್ತೆ ವಿನಯದಿಂದ—ಶ್ರೀರಾಮಾ, ನಾನು ನಿನ್ನ ಮಾಯೆಯಿಂದ ಮೋಹಿತ ನಾಗಿ ಲಗ್ನಮಾಡಿಕೊಳ್ಳಬೇಕೆನ್ನುತ್ತಿರಲು, ನೀನೇಕೆ ಮಾಡಗೊಡಲಿಲ್ಲ? ಎಂದು ಪ್ರಶ್ನೆಮಾ ಡಲು, ಶ್ರೀರಾಮನು—ಎಲೈ ಮುನಿಯೇ, ಯಾವತ್ತು ಆಶ್ರಮಗಳನ್ನು ಬಿಟ್ಟು ಅನನ್ಯ ಗತಿಕರಾಗಿ ನನ್ನನ್ನೇ ಭಜಿಸುವವರ ಸಂರಕ್ಷಣವನ್ನು, "ತಾಯಿಯು ಕೂಸಿನ ಸಂರಕ್ಷಣಮಾ ಡುವಂತೆ, ನಿರಂತರವಾಗಿ ನಾನು ಮಾಡುತ್ತಿರುವೆನು. ತಾಯಿಯು ತನ್ನ ಕೂಸು ಬೆಂಕಿ ಯನ್ನು ಅಥವಾ ಹಾವನ್ನು ಹಿಡಿಯಹೋದಾಗ ಬಿಡಿಸುವಳು. ಮಕ್ಕಳು ಪ್ರೌಢರಾದ ಬಳಿಕ ಅವರಮೇಲೆತಾಯಿಯಪ್ರೇಮವುಇದ್ದರೂ,ಆ ಪ್ರೇಮವು ಚಿಕ್ಕವರಿದ್ದಾಗಿನ ಪ್ರೇಮ ವನ್ನು ಸಂಗಟ್ಟಲಾರದು. ಜ್ಞಾನಿಗಳಾದವರು ನನಗೆ ಪ್ರೌಢಮಕ್ಕಳಂತೆ ಇದ್ದು, ನಿರಭಿ ಮಾನಿಗಳಾದ ಭಕ್ತರು ನನಗೆ ಕೂಸುಗಳಂತೆ ಇರುವರು. ಜ್ಞಾನಿಗಳಿಗೆ ಸ್ವಂತದ ಬಲ ವಿದ್ದು, ನಿರಭಿಮಾನಿ ಭಕ್ತರಿಗೆ ನನ್ನ ಆಧಾರವಿರುವದು. ಇಬ್ಬರು ಮಕ್ಕಳಿಗೂ ಕಾಮ- ಕ್ರೋಧಗಳು ಶತ್ರುಸ್ಥಾನದಲ್ಲಿರುವವು. ಇದನ್ನು ಅರಿತೇ ಜ್ಞಾನಿಗಳಾದವರೂ ನನ್ನನ್ನು ಭಜಿಸುವರು. ಅವರಿಗೆ ಜ್ಞಾನವು ಪ್ರಾಪ್ತವಾಗಿದ್ದರೂ ಅವರು ನನ್ನ ಭಕ್ತಿಯನ್ನು ಬಿಡುವದಿಲ್ಲ. ಕಾಮ-ಕ್ರೋಧ-ಮದ-ಲೋಭಾದಿಗಳೆಲ್ಲವೂ ಮಾಯೆಂಬ ಪ್ರಬಲ ಸೈನ್ಯಗಳಿದ್ದು, ಸ್ತ್ರೀಯಂತು ಪ್ರತ್ಯಕ್ಷ ಮಾಯಾರೂಪಿಯೇ ಆಗಿರುವಳಲ್ಲದೆ, ಆಕೆಯು ಅತ್ಯಂತ ದಾರುಣಳೂ, ದುಃಖಕಾರಕಳೂ ಆಗಿರುವಳು. ಸ್ತ್ರೀಯು ದುರ್ಗುಣಗಳ ಮೂಲವಾಗಿದ್ದು, ಯಾವತ್ತು ಕಾಯಿಕ ಮಾನಸಿಕ ದುಃಖಗಳ ಖನಿಯಾಗಿರುವಳು. ಮುನಿಯೇ, ಇದನ್ನೆಲ್ಲ ಅರಿತೇ ನಾನು ನಿನ್ನ ವಿವಾಹೇಚ್ಛೆಯನ್ನು ನಡೆಯ ಗೊಡಲಿಲ್ಲ.

ರಘುಪತಿಯ ಈ ಸುಂದರ ವಚನಗಳನ್ನು ಕೇಳಿ ನಾರದನ ಶರೀರದಲ್ಲಿ ರೋಮಾಂಚಗಳು ಉತ್ಪನ್ನವಾಗಿ, ಆತನ ನೇತ್ರಗಳು ಅಶ್ರುಪೂರ್ಣವಾದವು. ಆತನು ಪುನಃ ಪ್ರಭುವನ್ನು ಕುರಿತು—"ಎಲೈ ವಿಜ್ಞಾನ ವಿಶಾರದನೇ, ನನಗೆ ಸಂತರ ಲಕ್ಷಣ ವನ್ನು ಹೇಳಬೇಕು" ಎಂದು ಬೇಡಿಕೊಂಡನು. ಆಗ ರಘುಪತಿಯು—ಎಲೈ ಮುನಿಯೇ ಕೇಳು. ಯಾವ ಲಕ್ಷಣಗಳ ಮೂಲಕ ನಾನು ಸಂತರ ಆಧೀನನಾಗುವೆನೋ ಆ ಲಕ್ಷಣ ಗಳನ್ನು ನಿನಗೆ ಹೇಳುವೆನು. ಸಂತರು ಕಾಮಾದಿ ಷಡ್ರಿಪುಗಳನ್ನು ಗೆಲ್ಲುವವರೂ, ನಿಷ್ಪಾಪರೂ, ನಿರಿಚ್ಛರೂ, ಸ್ಥಿತಪ್ರಜ್ಞರೂ, ನಿರ್ಧನರೂ, ಪವಿತ್ರರೂ, ಸುಖಧಾಮರೂ ಆಗಿದ್ದು, ಅತ್ಯಂತ ಜ್ಞಾನಿಗಳೂ, ನಿಷ್ಕಾಮರೂ, ಮಿತಭೋಗಿಗಳೂ, ಸತ್ಯಪ್ರತಿಜ್ಞರೂ, ಕವಿಗಳೂ, ಪಂಡಿತರೂ, ಯೋಗಿಗಳೂ, ಜಾಗೃತರೂ, ವಿನಯಸಂಪನ್ನರೂ, ಮದಹೀನರೂ, ಧೀರರೂ, ಭಕ್ತಿಮಾರ್ಗದಲ್ಲಿ ಪ್ರವೀಣರೂ ಆಗಿರುವರು. ಅವರು ಸದ್ಗುಣಗಳ ಆಗರವೂ, ಸಂಸಾರದುಃಖವಿವರ್ಜಿತರೂ, ನಷ್ಟಸಂದೇಹರೂ ಆಗಿದ್ದು, ಅವರಿಗೆ ನನ್ನ ಚರಣಕಮಲಗಳಹೊರತು ದೇಹ-ಗೇಹಗಳಾವವೂ ಪ್ರಿಯ

ವಾಗಿರುವದಿಲ್ಲವು. ಸಂತರು ತಮ್ಮ ಗುಣಗಳ ವರ್ಣನಕೇಳಿ ನಾಚುವರು; ಪರಗುಣಶ್ರವಣದಿಂದ ಮಾತ್ರ ಅತ್ಯಂತ ಹರ್ಷಿತರಾಗುವರು. ಅವರು ಸಮದರ್ಶಿಗಳೂ ಶಾಂತರೂ, ನೀತಿಯನ್ನು ಬಿಡದವರೂ, ನಿಷ್ಕಪಟ ಸ್ವಭಾವದವರೂ, ಎಲ್ಲರನ್ನು ಪ್ರೀತಿಸುವವರೂ, ಜಪ-ತಪ-ವ್ರತ-ಶಮ-ನಿಯಮ-ದಮಗಳನ್ನು ಆಚರಿಸುವವರೂ, ಕ್ಷಮಾಶೀಲರೂ, ಶ್ರದ್ಧಾಳುಗಳೂ, ಎಲ್ಲರೊಡನೆ ಮಿತ್ರತ್ವವನ್ನೂ, ದಯೆಯನ್ನೂ ಆಚರಿಸುವವರೂ, ನಿತ್ಯಪ್ರಸನ್ನರೂ, ಮಾಯಾರಹಿತರೂ, ನನ್ನ ಚರಣಗಳಲ್ಲಿ ಪ್ರೇಮಮಾಡುವವರೂ ಆಗಿರುವರು. ಅವರು ವಿರಕ್ತರೂ, ವಿವೇಕಿಗಳೂ, ವಿನಯಶೀಲರೂ, ವಿಜ್ಞಾನವಂತರೂ, ವೇದ-ಪುರಾಣಗಳ ತತ್ವವನ್ನು ಬಲ್ಲವರೂ ಇರುವರು. ಅವರು ಎಂದೂ ದಂಭ-ಮಾನ-ಅಹಂಕಾರಗಳಿಗೆ ಒಳಗಾಗದೆ, ತಪ್ಪಿತಪ್ಪಿಯೂ ಕುಮಾರ್ಗದಲ್ಲಿ ಹೆಜ್ಜೆಯನ್ನು ಇಡರು. ಅವರು ಯಾವಾಗಲೂ ನನ್ನಲೀಲೆಯ ಗಾಯನವನ್ನೂ ಶ್ರವಣವನ್ನೂ ಮಾಡುವರು. ನಿರ್ಹೇತುಕವಾಗಿ ಎರಡನೆಯವರಮೇಲೆ ಉಪಕಾರಮಾಡುವದೇ ಸಂತರ ಶೀಲವಾಗಿರುವದು. ಎಲೈ ಮುನಿಯೇ, ಸಂತರ ಸರ್ವಗುಣಗಳನ್ನು ಸರಸ್ವತಿಯೂ ವರ್ಣಿಸಲಾರಳು, ಎಂದು ಹೇಳಿದನು. ಅದನ್ನು ಕೇಳಿ ನಾರದನು ಹರ್ಷಿತನಾಗಿ ಪ್ರಭುವಿನ ಚರಣಗಳಿಗೆರಗಿ ಬ್ರಹ್ಮಲೋಕವನ್ನು ಕುರಿತು ಪ್ರಯಾಣಮಾಡಿದನು. ತುಳಸೀದಾಸನು ಹೇಳುವನೇನಂದರೆ—ಆಶೆಯನ್ನು ತ್ಯಜಿಸಿ ಶ್ರೀಹರಿಯ ಧ್ಯಾನದಲ್ಲಿ ರಮಮಾಣರಾಗುವವರೇ ಧನ್ಯರು. ರಾವಣಾರಿಯಾದ ಶ್ರೀರಾಮನ ಯಶಸ್ಸನ್ನು ಕೇಳುವವರಿಗೂ ಪಠಿಸುವವರಿಗೂ ವೈರಾಗ್ಯ, ಜಪ, ಯೋಗ ಮೊದಲಾದ ಸಾಧನಗಳಿಲ್ಲದೆ ನಿಶ್ಚಲರಾಮಭಕ್ತಿಯು ಪ್ರಾಪ್ತವಾಗುವದು; ಆದ್ದರಿಂದ ಎಲೈ ಮನಸ್ಸೇ, ಸ್ತ್ರೀಜನವು ದೀಪಜ್ಯೋತಿಯಂತೆ ಇರುವದು; ಆದರೆ ನೀನು ಪತಂಗದಂತೆ ಆಗದೆ ಅಭಿಮಾನವನ್ನೂ, ಕಾಮವನ್ನೂ ತ್ಯಜಿಸಿ ರಾಮಚಂದ್ರನನ್ನು ಭಜಿಸುತ್ತ ಯಾವಾಗಲೂ ಸತ್ಸಂಗಮಾಡು.



॥ ಶ್ರೀ ಗಣೇಶಾಯನಮಃ ॥

ಶ್ರೀ ಜಾನಕೀವಲ್ಲಭೋ ವಿಜಯತೇ.

# ರಾಮಚರಿತ-ಮಾನಸ

## ಶ್ರೀ ತುಲಸೀ-

# ರಾಮಾಯಣಾಮೃತ



# ಚತುರ್ಥಸೋಪಾನ

## - ಕಿಷ್ಕಿಂಧಾಕಾಂಡ -

ಮುಕ್ತಿಯ ಜನ್ಮಭೂಮಿಯೂ, ಜ್ಞಾನದ ಖನಿಯೂ, ಪಾಪಹಾರಕ ಸ್ಥಾನವೂ ಆಗಿದ್ದ, ಶಂಕರ-ಪಾರ್ವತಿಯರ ವಾಸಸ್ಥಾನವಾಗಿರುವ ಕಾಶಿಯನ್ನು ಯಾಕೆ ಸೇವಿಸ ಬಾರದು? ಯಾವತ್ತು ದೇವಗಣವು ದಗ್ಧವಾಗುತ್ತಿರುವಾಗ ಅತ್ಯಂತ ತೀವ್ರವಾದ ಕಾಲಕೂಟ ವಿಷವನ್ನು ಪಾನಮಾಡಿದಾತನನ್ನು ಮೂಢಮನಸ್ಸೇ ಯಾಕೆ ಭಜಿಸುವದಿಲ್ಲವು? ಶಂಕರನಂಥ ದಯಾಳುವು ಯಾವನಿರುವನು?

ರಘುಪತಿಯು ಪಂಪಾಸರೋವರದಿಂದ ಹೊರಟು ಋಷ್ಯಮೂಕ ಪರ್ವತದ ಬಳಿಗೆ ಬಂದನು. ಅಲ್ಲಿ ಸಚಿವರೊಡನೆ ಸುಗ್ರೀವನು ವಾಸಿಸುತ್ತಿದ್ದನು. ಆತನು ಅತುಲಪರಾಕ್ರಮದ ಸೀಮೆಯಂತಿರುವ ರಾಮಲಕ್ಷ್ಮಣರು ಬರುತ್ತಿರುವದನ್ನು ನೋಡಿ ಅತ್ಯಂತ ಭಯಭೀತನಾಗಿ ಮಾರುತಿಯನ್ನು ಕುರಿತು— ಎಲೈ ಹನುಮಂತನೇ, ಇವರಿಬ್ಬರು ಪುರುಷರು ರೂಪ-ಬಲಗಳ ನಿಧಾನವಾಗಿರುವರು. ನೀನು ವಟುರೂಪವನ್ನು ಧರಿಸಿ ಎಲ್ಲ ಸಂಗತಿಯನ್ನು ತಿಳಿದುಕೊಂಡು ಸಂಕೇತದಿಂದ ನನಗೆ ತಿಳಿಸು. ವಾಲಿಯು ದುಷ್ಟಬುದ್ಧಿಯಿಂದ ಅವರನ್ನು ಕಳಿಸಿದ್ದರೆ, ನಾವು ಈ ಪರ್ವತವನ್ನು ಬಿಟ್ಟು, ಕೂಡಲೆ ಓಡಿ ಹೋಗೋಣ, ಅನ್ನಲು, ಮಾರುತಿಯು ವಿಪ್ರರೂಪದಿಂದ ರಾಮಲಕ್ಷ್ಮಣರ ಬಳಿಗೆ ಹೋಗಿ ಅವರನ್ನು ನಮಸ್ಕರಿಸಿ—"ಶ್ಯಾಮ-ಹಾಗು ಗೌರವರ್ಣದ ತಾವು ಯಾರಿರುವಿರಿ? ರೂಪದಿಂದಂತು ತಾವು ಕ್ಷತ್ರಿಯರಂತೆ ತೋರುತ್ತಿರುವಿರಿ; ಆದರೆ

ತಾವು ಈ ವನದಲ್ಲಿ ಸಂಚರಿಸುವ ಕಾರಣವೇನು! ಈ ವನಭೂಮಿಯು ಅತ್ಯಂತ ಕಠಿಣ ವಾಗಿದ್ದು, ಸುಕುಮಾರರು ನೀವು ಬರಿಗಾಲಿನಿಂದಲೇ ನಡೆಯುತ್ತಿರುವಿರಿ. ಸ್ವಾಮಿನ್, ನೀವು ವನದಲ್ಲಿ ಸಂಚರಿಸುತ್ತಿರುವದರ ಹೇತುವಾದರೂ ಏನು? ನಿಮ್ಮ ಶರೀರವು ಅತ್ಯಂತ ಸುಕುಮಾರವೂ, ಮನೋಹರವೂ, ಸುಂದರವೂ ಆಗಿದ್ದು, ಈ ವನದೊಳ ಗಿನ ಬಿಸಿಲುಗಾಳಿಗಳನ್ನು ನೀವು ಸಹಿಸುತ್ತಿರುವಿರಲ್ಲ! ನೀವು ತ್ರಿಮೂರ್ತಿಗಳಲ್ಲಿ ಯಾರಾ ದರೊಬ್ಬ ದೇವರಿರುವಿರೋ ಏನು? ಇಲ್ಲದಿದ್ದರೆ ನೀವಿಬ್ಬರು ನರ-ನಾರಾಯಣರಿರುವಿರೋ? ಅಥವಾ ವಿಶ್ವಕಾರಣರೂ, ಭವತಾರಕರೂ, ಪೃಥ್ವಿಯ ಭಾರಹರಣಮಾಡುವವರೂ, ತ್ರಿಭುವನಗಳ ಒಡೆಯರೂ ಇದ್ದು, ಈ ಮನುಷ್ಯಾವತಾರವನ್ನು ಧರಿಸಿರುವಿರೋ? ಎಂದು ಕೇಳಿದನು- ಅದಕ್ಕೆ ಶ್ರೀರಾಮನು--ನಾವು ಕೋಸಲಾಧಿಪನಾದ ದಶರಥರಾ ಜನ ಮಕ್ಕಳಿದ್ದು, ಆತನ ಅಪ್ಪಣೆಯಿಂದ ವನದಲ್ಲಿ ಸಂಚರಿಸುತ್ತಿರುವೆವು. ನಮ್ಮ ಇಬ್ಬರು ಬಂಧುಗಳ ಹೆಸರು ರಾಮಲಕ್ಷ್ಮಣರು. ನಮ್ಮಸಂಗಡ ನಮ್ಮ ಸುಕುಮಾರ ಸ್ತ್ರೀವೈದೇಹಿಯು ಇದ್ದಳು. ಆಕೆಯನ್ನು ರಾಕ್ಷಸರು ಹರಣಮಾಡಿ ಒಯ್ದರು. ಎಲೈ ವಟುವೇ, ನಾವು ಆಕೆಯ ಶೋಧಾರ್ಥವಾಗಿಯೇ ತಿರುಗುತ್ತಿರುವೆವು. ನಮ್ಮ ಈ ವೃತ್ತಾಂತವನ್ನು ಕೇಳಿದ ನೀನು, ನಿನ್ನ ವೃತ್ತಾಂತವನ್ನು ಇನ್ನು ಸ್ಪಷ್ಟವಾಗಿ ಹೇಳು.

ಪ್ರಭುವಿನ ಗುರುತು ಹಿಡಿದು ಮಾರುತಿಯು ಆತನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಎಲೈ ಪಾರ್ವತೀ, ಮಾರುತಿಗಾದ ಸುಖವನ್ನು ವರ್ಣಿಸಲಿಕ್ಕೆ ಬರುವದಿಲ್ಲ. ಪ್ರಭುವಿನ ಆ ಸುಂದರವೇಷದ ರಚನೆಯನ್ನು ನೋಡಿ ಮಾರುತಿಯ ಶರೀರದಲ್ಲಿ ರೋಮಾಂಚಗಳು ಉತ್ಪನ್ನವಾಗಿ, ಆತನ ಮುಖದಿಂದ ಶಬ್ದಗಳು ಹೊರ ಡದಾದವು. ತನ್ನ ಪ್ರಭುವಿನ ಗುರುತು ಹಿಡಿದದ್ದರಿಂದ ಆತನ ಹೃದಯದಲ್ಲಿ ಹರ್ಷವು ಉತ್ಪನ್ನವಾಯಿತು. ಧೈರ್ಯದಿಂದ ಆತನು ತನ್ನ ಪ್ರಭುವಿನ ಸ್ತೋತ್ರಮಾಡತೊಡಗಿ ದನು- ಎಲೈ ಸ್ವಾಮಿಯೇ, ನಾನು ನಿನ್ನ ವೃತ್ತಾಂತವನ್ನು ಕೇಳಿದ್ದು ನ್ಯಾಯವೇ ಸರಿ; ಆದರೆ ನೀನು ಸಾಮಾನ್ಯಮನುಷ್ಯರಂತೆ ನನಗೆ ಪ್ರಶ್ನಮಾಡುತ್ತಿರುವೆಯಲ್ಲ, ಇದು ಹೇಗೆ? ನಿನ್ನ ಮಾಯೆಗೆ ವಶನಾಗಿ ನಾನು ಭ್ರಮಿಷ್ಟನಂತೆ ತಿರುಗುತ್ತಿದ್ದದ್ದರಿಂದ ನಿನ್ನ ಗುರುತು ಹಿಡಿಯಲಿಕ್ಕೆ ನನಗೆ ಬರಲಿಲ್ಲ. ನಾನು ಮಂದಮತಿಯು, ಮೋಹವಶನಾದ ವನು, ಕುಟಿಲ ಹೃದಯುದವನು, ಜ್ಞಾನಶೂನ್ಯನು; ಅದರಲ್ಲಿ ದೀನವತ್ಸಲನಾದ ನನ್ನ ಸ್ವಾಮಿಯು ನೀನು ನನ್ನನ್ನು ಮರೆತುಬಿಟ್ಟೆ! ಎಲೈ ನಾಥನೇ, ನನ್ನಲ್ಲಿ ಅನೇಕ ದುರ್ಗು ಣಗಳಿದ್ದರೂ, ಪ್ರಭುವು ಸೇವಕನನ್ನು ಅಪ್ರಿತಪ್ರಿಯಾದರೂ ಎಂದೂ ತ್ಯಜಿಸಿರುವದಿ ಲ್ಲವು. ಎಲೈ ಪ್ರಭುವೇ,ಕುಮರನು ನಾನುನಿನ್ನ ಮಾಯೆಯಿಂದ ಮೋಹಿತನಾಗಿರುವೆನು- ಆ ಮಾಯೆಯು ನಿವಾರಣವು ನಿನ್ನ ಕೃಪೆಯಿಂದಲೇ ಆಗಬೇಕಲ್ಲದೆ. ಅನ್ಯೋಪಾಯವಿ ಲ್ಲವು. ಇದರಮೇಲೆಯೂ ರಘುವೀರನೇ, ನಾನು ನಿನ್ನ ಆಣೆಮಾಡಿಯೇ ಹೇಳುವೆನು.

ನಾನು ಭಜನಾದಿ ಯಾವ ಸಾಧನಗಳನ್ನೂ ತಿಳಿಯುವದಿಲ್ಲ. ಬಾಲಕನು ತನ್ನ ತಾಯಿಯ ನಂಬಿಗೆಯಿಂದಲೂ, ಸೇವಕನು ತನ್ನ ಒಡೆಯನ ನಂಬಿಗೆಯಿಂದಲೂ ಇರುವಂತೆ ನಾನು ಪ್ರಭುವಿನ ನಂಬಿಗೆಯಿಂದ ನಿಶ್ಚಿಂತನಾಗಿರುವೆನು.

ಈ ಮೇರೆಗೆ ನುಡಿದು ಮಾರುತಿಯು ಅತ್ಯಂತ ವ್ಯಾಕುಲನಾಗಿ ರಾಮನಚರಣಗಳಿಗೆ ಸಾಷ್ಟಾಂಗವೆರಗಿ, ತನ್ನ ಸ್ವರೂಪವನ್ನು ಪ್ರಕಟಮಾಡಿದನು. ಆತನ ಹೃದಯವು ಪ್ರೇಮಪೂರ್ಣವಾಯಿತು. ಆಗ ರಘುಪತಿಯು ಆತನನ್ನು ಎದೆಗವಚಿಕೊಂಡು, ತನ್ನ ಅಶ್ರುಜಲದ ಸೇಚನದಿಂದ ಆತನನ್ನು ಶಾಂತಗೊಳಿಸಿದನು. ಬಳಿಕ ರಾಮನು ಮಾರುತಿಯನ್ನು ಕುರಿತು—ಎಲೈ ಮಾರುತಿಯೇ, ನೀನು ಕಡಮೆಯವನೆಂದು ತಿಳಿದುಕೊಳ್ಳಬೇಡ. ನೀನು ನನಗೆ ಲಕ್ಷ್ಮಣನಿಗಿಂತಲೂ ಪ್ರಿಯನಾಗಿರುವೆ. ಯಾವತ್ತು ಜನರೂ ನನ್ನನ್ನು ಸಮದರ್ಶಿಯೆಂದು ಅನ್ನುವರು; ಆದರೆ ಅನನ್ಯಗತಿಕನಾದ ಸೇವಕನೇ ನನಗೆ ಪ್ರಿಯನಾಗಿರುವನು. ಸ್ಥಾವರ ಜಂಗಮಾತ್ಮಕವಾದ ಈ ಯಾವತ್ತು ಸೃಷ್ಟಿಯು ಭಗವತ್ಸ್ವರೂಪವಿದ್ದು, ನಾನು ಆ ಸ್ವಾಮಿಯ ಸೇವಕನೆಂಬ ನಿಶ್ಚಯದಿಂದ ಚಲಿಸದವನೇ ಅನನ್ಯಭಕ್ತನು. ಎಂದು ಹೇಳಿದನು. ಸ್ವಾಮಿಯು ಪ್ರಸನ್ನನಾಗಿರುವದನ್ನು ನೋಡಿ ಮಾರುತಿಗೆ ಹರ್ಷವಾಯಿತು. ಆತನ ಮನಸ್ಸಿನೊಳಗಿನ ಚಿಂತೆಯೆಲ್ಲ ನಷ್ಟವಾಗಿ, ಆತನು ಪ್ರಭುವನ್ನು ಕುರಿತು—ಎಲೈ ನಾಥನೇ, ಈ ಶೈಲಶೃಂಗದ ಮೇಲೆ ಕಪಿಪತಿಯಾದ ಸುಗ್ರೀವನು ವಾಸಿಸುತ್ತಿದ್ದು, ಆತನು ನಿನ್ನ ಸೇವಕನಾಗಿರುವನು. ಆತನೊಡನೆ ನೀನು ಸ್ನೇಹಬಳಸಿ ಆತನು ದೀನನೆಂದು ತಿಳಿದು ಆತನಿಗೆ ನೀನು ಅಭಯವನ್ನೀಯಬೇಕು. ಆತನು ನಾಲ್ಕೂಕಡೆಗೆ ಕೋಟ್ಯವಧಿವಾನರರನ್ನು ಕಳಿಸಿ ಸೀತೆಯಗೊತ್ತುಹಚ್ಚಿಸುವನು; ಎಂದು ಹೇಳಿ, ಮಾರುತಿಯು ಅವರಿಬ್ಬರನ್ನೂ ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ಸುಗ್ರೀವನಬಳಿಗೆ ಹೋದನು. ರಾಮನನ್ನು ನೋಡಿ ಸುಗ್ರೀವನು ತನ್ನ ಜನ್ಮವು ಧನ್ಯವೆಂದು ಭಾವಿಸಿದನು. ಸುಗ್ರೀವನು ಚರಣಗಳಲ್ಲಿ ಮಸ್ತಕವಿಟ್ಟು ಉಭಯಬಂಧುಗಳನ್ನು ಕಂಡನು. ರಾಮಚಂದ್ರನಾದರೂ ಲಕ್ಷ್ಮಣನೊಡನೆ ಆತನನ್ನು ಕಂಡನು. ಸುಗ್ರೀವನು ಚಿಂತಾತುರನಾಗಿ ಮನಸ್ಸಿನಲ್ಲಿ—ಎಲೈ ವಿಧಾತೃವೇ, ಇವರು ನನ್ನಂಥವನನ್ನು ಪ್ರೀತಿಸಬಹುದೇ? ಎಂದು ಯೋಚಿಸತೊಡಗಿದನು. ಬಳಿಕ ಮಾರುತಿಯು ಎರಡೂಕಡೆಯ ಯಾವತ್ತು ವೃತ್ತಾಂತವನ್ನು ಹೇಳಿ ಅಗ್ನಿನಾರಾಯಣನ ಸಾಕ್ಷಿಯಿಂದ ಇಬ್ಬರಲ್ಲಿಯೂ ದೃಢಪ್ರೇಮವನ್ನುಂಟುಮಾಡಿದನು. ಹೀಗೆ ರಾಮ-ಸುಗ್ರೀವರ ದೃಢಮೈತ್ರಿಯುಂಟಾದಬಳಿಕ ಅವರಲ್ಲಿ ಯಾವತರದ ಸಂಕೋಚಭಾವವೂ ಉಳಿಯಲಿಲ್ಲ. ಲಕ್ಷ್ಮಣನು ರಾಮನ ಯಾವತ್ತು ಪೂರ್ವವೃತ್ತಾಂತವನ್ನು ಹೇಳಿದನು. ಅದನ್ನು ಕೇಳಿ ಸುಗ್ರೀವನ ನೇತ್ರಗಳು ಅಶ್ರುಪೂರ್ಣವಾದವು. ಆತನು ಶ್ರೀರಾಮನನ್ನು ಕುರಿತು—ಎಲೈ ನಾಥನೇ, ನಿಶ್ಚಯ ಜಾನಕಿಯು ನಿನಗೆ ಪುನಃ ದೊರೆಯುವಳು. ಮಂತ್ರಿಗಳೊಡನೆ

ನಾನು ಒಮ್ಮೆ ಇಲ್ಲಿ ವಿಚಾರಮಾಡುತ್ತ ಕುಳಿತಿರುವಾಗ, ಆಕೆಯು ಆಕಾಶಮಾರ್ಗದಿಂದ ಹೋಗುತ್ತಿರುವಾಗ ನನ್ನ ಕಣ್ಣಿಗೆಬಿದ್ದಳು. ಶತ್ರುವಿನ ದವಡೆಯಲ್ಲಿ ಸಿಕ್ಕಿದ್ದರಿಂದ ಆಕೆಯು ಬಹಳ ವಿಲಾಪಮಾಡುತ್ತಿದ್ದಳು. "ಹಾ ರಾಮ! ಹಾ ರಾಮ!" ಎಂದು ಹಂಬಲಿಸುತ್ತಿರುವ ಆಕೆಯು ನಮ್ಮನ್ನು ನೋಡಿ ಒಂದು ವಸ್ತ್ರವನ್ನು ಕೆಳಗೆ ಒಗೆದಳು.

ಈ ಮೇರೆಗೆ ಹೇಳಿದ ಸುಗ್ರೀವನು ರಾಮನ ಅಪ್ಪಣೆಯಿಂದ ಆ ವಸ್ತ್ರವನ್ನು ಆತನಿಗೆ ಕೊಡಲು, ಪ್ರಭುವು ಅದನ್ನು ಎದೆಗವಚಿಕೊಂಡು ಬಹಳವಾಗಿ ಶೋಕಿಸಿದನು. ಆಗ ಸುಗ್ರೀವನು—ಎಲೈ ರಘುವೀರನೇ, ಮನಸ್ಸಿನಲ್ಲಿ ಧೈರ್ಯತಾಳಿ ಶೋಕವನ್ನು ತ್ಯಜಿಸು. ತಾಯಿ ಜಾನಕಿಯು ಒಂದು ನಿನ್ನನ್ನು ಕಾಣುವಂತೆ ಎಲ್ಲಬಗೆಯಿಂದ ನಾನು ನಿನ್ನ ಸೇವೆಮಾಡುವೆನು, ಎಂದು ಹೇಳಿದನು. ಮಿತ್ರನ ಈ ಪ್ರತಿಜ್ಞೆಯನ್ನು ಕೇಳಿ ದಯಾಸಾಗರನೂ, ಅತುಲಬಲಶಾಲಿಯೂ ಆದ ರಘುಪತಿಯು ಹರ್ಷಿತನಾಗಿ—ಎಲೈ ಸುಗ್ರೀವನೇ, ಯಾವಕಾರಣದಿಂದ ನೀನು ಈ ವನದಲ್ಲಿ ವಾಸಿಸುತ್ತಿರುವೆಯೆಂಬದನ್ನು ನನಗೆ ಹೇಳು, ಎಂದು ಕೇಳಿದನು. ಅದಕ್ಕೆ ಸುಗ್ರೀವನು—ಪ್ರಭುವೇ, ವಾಲಿಯು, ಸುಗ್ರೀವನು ಎಂಬ ನಾವು ಇಬ್ಬರು ಬಂಧುಗಳಿರುವೆವು. ನಮ್ಮ ಬಂಧುಪ್ರೀತಿಯು ಅನರ್ಘ್ಯವಾಗಿ ಇತ್ತು. ಮಯದೈತ್ಯನ ಮಗನಾದ ಮಾಯಾವಿಯೆಂಬವನು ನಮ್ಮ ಪಂಪಾಪುರಕ್ಕೆ ಬಂದನು. ಮಧ್ಯರಾತ್ರಿಯಲ್ಲಿ ಪುರದ್ವಾರದಲ್ಲಿ ನಿಂತು ಆತನು ಕೂಗಿ ಕರೆದನು; ಆದರೆ ವಾಲಿಗೆ ವೈರಿಯ ಈ ಉದ್ದಾಮತನವು ಸಹನವಾಗದ್ದರಿಂದ, ಆತನು ಮಾಯಾವಿಯಬಳಿಗೆ ಧಾವಿಸಿದನು. ಅದನ್ನು ನೋಡಿ ಮಾಯಾವಿಯು ಓಡಲು, ನಾವಿಬ್ಬರೂ ಬಂಧುಗಳೂ ಮಾಯಾವಿಯ ಬೆನ್ನು ಹತ್ತಿದೆವು. ವಾಲಿಯ ಭಯದಿಂದ ಮಾಯಾವಿಯು ಓಡುತ್ತೋಡುತ್ತ ಒಂದು ಪರ್ವತದ ಗುಹೆಯನ್ನು ಪ್ರವೇಶಿಸಿದನು. ಆಗ ವಾಲಿಯು ನನ್ನನ್ನು ಕುರಿತು—ಹದಿನೈದುದಿನ ನನ್ನ ಹಾದಿಯನ್ನು ನೋಡು, ಅಷ್ಟರಲ್ಲಿ ನಾನು ಬಾರದಿದ್ದರೆ ನಾನು ಸತ್ತೆನೆಂದು ತಿಳಿ, ಎಂದು ಹೇಳಿ, ಮಾಯಾವಿಯನ್ನು ಹಿಂಬಾಲಿಸಿ ಗುಹೆಯನ್ನು ಪ್ರವೇಶಿಸಿದನು. ಎಲೈ ಖರಶತ್ರುವೇ, ಒಂದು ತಿಂಗಳವರೆಗೆ ಅಲ್ಲಿ ನಾನು ಹಾದಿಯನ್ನೋಡಿದರೂ ವಾಲಿಯು ತಿರುಗಿಬಾರದೆ, ಗುಹೆಯೊಳಗಿಂದ ಪ್ರಚಂಡವಾದ ರಕ್ತಪ್ರವಾಹವು ಹರಿದು ಬರತೊಡಗಿತು. ಆ ಮಾಯಾವಿಯು ವಾಲಿಯನ್ನು ಕೊಂದು ನನ್ನನ್ನೂ ಕೊಲ್ಲಲಿಕ್ಕೆ ಬರುವನೆಂದು ತಿಳಿದು ನಾನು ಗುಹೆಯಬಾಗಿಲಿಗೆ ಒಂದು ಕಲ್ಲು ಅಡಿಸಿ ಪಂಪಾಪುರದಕಡೆಗೆ ಬಂದೆನು. ನಗರವು ಅರಾಜಕವಾಗಿರುವದನ್ನು ನೋಡಿ ಮಂತ್ರಿಗಳು ನನ್ನನ್ನು ಒತ್ತಾಯದಿಂದ ಪಟ್ಟಕ್ಕೆ ಕುಳ್ಳಿರಿಸಿದರು. ಬಳಿಕ ವಾಲಿಯು ಮಾಯಾವಿಯನ್ನು ಸಂಹರಿಸಿ ಮನೆಗೆ ಬಂದು ನನ್ನನ್ನು ನೋಡಿ ನನ್ನೊಡನೆ ದ್ವೇಷಬಳಿಸಿದನು. ಆತನು ನನ್ನನ್ನು ಹೊಡೆದು ಹಣ್ಣುಮಾಡಿ ಸ್ತ್ರೀಸಹಿತವಾಗಿ ನನ್ನ ಸರ್ವಸ್ವದ ಹರಣಮಾಡಿದನು. ಎಲೈ ದಯಾಘನನಾದ ರಘುವೀರನೇ, ಆತನ ಭೀತಿಯಿಂದ

ವ್ಯಾಕುಲನಾಗಿ ನಾನು ಯಾವತ್ತು ಭುವನವನ್ನು ತಿರುಗಿದೆನು; ಆದರೆ ಇಲ್ಲಿ ಮಾತ್ರ ಆತನು ಶಾಪಭಯದಿಂದ ಬರುವಹಾಗಿಲ್ಲ; ಆದರೂ ಆತನಿಗೆ ಅಂಜಿರುವ ನಾನು ಇಲ್ಲಿ ವಾಸಿಸುತ್ತಿರುವೆನು.

ಸೇವಕನ ದುಃಖವನ್ನು ಕೇಳಿ ದೀನರನ್ನು ರಕ್ಷಿಸುವಂಥ ರಾಮಚಂದ್ರನ ಪ್ರಚಂಡ ವಾದ ಎರಡೂ ಬಾಹುಗಳು ಸ್ಫುರಿಸತೊಡಗಿದವು. ಆತನು ಸುಗ್ರೀವನನ್ನು ಕುರಿತು— ಎಲೈ ಮಿತ್ರನೇ, ನಾನು ಒಂದೇ ಬಾಣದಿಂದ ವಾಲಿಯನ್ನು ಸಂಹರಿಸುವೆನು. ಆತನು ಬ್ರಹ್ಮದೇವನನ್ನೂ, ಶಂಕರನನ್ನೂ ಶರಣು ಹೋದರೂ ಆತನ ಪ್ರಾಣಗಳು ಉಳಿಯ ಲಾರವು. ಮಿತ್ರನ ದುಃಖವನ್ನು ನೋಡಿ ದುಃಖಿತರಾಗದವರನ್ನು ನೋಡುವವರಲ್ಲಿಯೂ ಅತ್ಯಂತ ಪಾತಕವಿರುವದು. ತನ್ನ ಪರ್ವತದಷ್ಟು ದುಃಖವನ್ನು ರಜಃಕಣದಷ್ಟು ತಿಳಿದು, ಮಿತ್ರನ ರಜಃಕಣದಷ್ಟು ದುಃಖವನ್ನು ಪರ್ವತದಷ್ಟು ತಿಳಿವ ಸಹಜಪ್ರ ವೃತ್ತಿಯಿಲ್ಲದ ಶಠರು ಹಟದಿಂದ ಬಳಿಸುವ ಮೈತ್ರಿಯಾದರೂ ಎಂಥಹದ ... ಕೆಟ್ಟ ಹಾದಿ ಯನ್ನು ಬಿಡಿಸಿ, ಒಳ್ಳೆಯಹಾದಿಗೆ ಹಚ್ಚುವದು, ಕೆಟ್ಟಗುಣಗಳನ್ನು ... ಒಳ್ಳೆಯ ಗುಣಗಳನ್ನು ಬೈಲಿಗಿಡುವದು, ಕೊಡಕೊಳ್ಳುವದರಲ್ಲಿ ಮನಸಿನಲ್ಲಿ ... ಸುವ ಸಂಶ ಯವನ್ನೂ ತಾಳದಿರುವದು, ಯಥಾಶಕ್ತಿ ಯಾವಾಗಲೂ ಹಿತವನ್ನೇ ಮಾಡುವದು, ಸಂಕಟ ಸಮಯದಲ್ಲಿ ನೂರುಪಟ್ಟು ಪ್ರೇಮಮಾಡುವದು ಸನ್ಮಿತ್ರರ ಲಕ್ಷಣಗಳೆಂದು ಶ್ರುತಿಗಳು ಪ್ರತಿಪಾದಿಸುವವು. ... ಮಾತ್ರ ಕಪಟಪೂರ್ವಕವಾಗಿ ಅಹಿತದ ಪ್ರಯತ್ನಮಾಡುವ ಸರ್ಪಗತಿಯುಳ್ಳ ... ಕುಮಿತ್ರನ ತ್ಯಾಗಮಾಡುವದರಲ್ಲಿಯೇ ಹಿತವಿರುವದು. ದುಷ್ಟಸೇವಕನೂ, ಕೃಪಣ ರಾಜನೂ, ಕೆಟ್ಟನಡತೆಯ ಸ್ತ್ರೀಯೂ, ಕಪಟರೂಪದ ಮಿತ್ರನೂ ಈ ನಾಲ್ವರು ... ಇರು ವರು! ಎಲೈ ಮಿತ್ರನೇ, ನನ್ನಲ್ಲಿ ನಂಬಿಗೆಯಿಟ್ಟು ದುಃಖವನ್ನು ... ಸು. ಎಲ್ಲಬಗೆಯಿಂ ದಲೂ ನಾನು ನಿನ್ನ ಕಾರ್ಯವನ್ನು ಕೈಕೊಂಡಿರುವೆನು, ಅನ್ನಲು, ಸುಗ್ರೀವನು—ಎಲೈ ರಘುವೀರನೇ, ವಾಲಿಯು ಮಹಾ ... ನಿದ್ದು, ... ರಣಧೀರನಾಗಿರುವನು. ಎಂದು ಹೇಳಿ, ದುಂದುಭೀದೈತ್ಯನ ಅಸ್ಥಿಗಳನ್ನೂ, ತಾಲವೃಕ್ಷಗಳನ್ನೂ ಶ್ರೀರಾಮನಿಗೆ ತೋರಿಸಲು, ಆತನು ಲೀಲೆಯಿಂದ ಅವನ್ನು ಭೇದಿಸಿ ತೋರಿಸಿದನು. ರಾಮನ ಆ ಕಲ್ಪನಾತೀತ ಬಲ ವನ್ನು ನೋಡಿ, ಆತನವಿಷಯವಾಗಿ ಸುಗ್ರೀವನ ಪ್ರೇಮವು ಮತ್ತಷ್ಟು ಹೆಚ್ಚಿ, ರಾಮನು ವಾಲಿಯನ್ನು ಸಂಹರಿಸುವನೆಂಬದರ ನಂಬಿಗೆಯು ಆತನಿಗುಂಟಾಯಿತು.

ಸುಗ್ರೀವನು ಪ್ರಭುವಿನ ಸ್ವರೂಪವನ್ನರಿತು ಹರ್ಷಾತಿರೇಕದ ಅಂತಃಕರಣದಿಂದ ಪುನಃ ಪುನಃ ಆತನ ಚರಣಗಳಿಗೆರಗುತ್ತಿರಲು, ಆತನಿಗೆ ಜ್ಞಾನೋದಯವಾಗಿ ಆತನು ಶ್ರೀರಾಮನನ್ನು ಕುರಿತು—ಎಲೈ ಸ್ವಾಮಿಯೇ, ನಿನ್ನ ಕೃಪೆಯಿಂದ ನನ್ನ ಚಿತ್ತವು ಸ್ಥಿರ ವಾಯಿತು. ಸುಖವನ್ನೂ, ಸಂಪತ್ತನ್ನೂ, ಪರಿವಾರವನ್ನೂ, ಐಶ್ವರ್ಯವನ್ನೂ ತ್ಯಜಿಸಿ

ನಾನು ನಿನ್ನನ್ನು ಸೇವಿಸುವೆನು; ಯಾಕಂದರೆ ಇವೆಲ್ಲ ರಾಮಭಕ್ತಿಗೆ ಬಾಧಕಗಳಾಗಿರುವವೆಂದು ನಿನ್ನ ಚರಣಗಳನ್ನು ಅರಾಧಿಸುವಸಂತಜನರು ಹೇಳುವರು. ಶತ್ರು-ಮಿತ್ರರೂ, ಸುಖ-ದುಃಖಗಳೂ ಇವೆಲ್ಲ ಮಾಯೆಯಿಂದ ಉಂಟಾಗುವವು. ಇವುಗಳಲ್ಲಿ ಸಾರವುಳ್ಳ ವಸ್ತುವು ಯಾವದೂ ಇರುವದಿಲ್ಲ. ಎಲೈ ರಾಮನೇ, ವಾಲಿಯು ನನ್ನ ಪರಮ ಹಿತಕರ್ತೃವಾಗಿದ್ದು, ಆತನ ಪ್ರಸಾದದಿಂದಲೇ ನನಗೆ ನಿನ್ನ ದರ್ಶನವಾಗಿ, ನನ್ನ ದುಃಖದ ನಾಶವಾಯಿತು; ಆದ್ದರಿಂದ ಸ್ವಪ್ನದಲ್ಲಿ ಒಬ್ಬನೊಡನೆ ಯುದ್ಧಮಾಡಿ ಎಚ್ಚತ್ತಬಳಿಕ ಸಂಕೋಚಪಡುವವನಂತೆ ನನ್ನ ಸ್ಥಿತಿಯಾಗಿದೆ. ಎಲೈ ಪ್ರಭುವೇ, ಇನ್ನು ನಾನು ಸರ್ವಸಂಗಪರಿತ್ಯಾಗವಮಾಡಿ ಹಗಲು ರಾತ್ರಿ ನಿನ್ನನ್ನು ಭಜಿಸುವಂತೆ ನನ್ನ ಮೇಲೆ ಕೃಪೆಮಾಡು, ಎಂದು ಪ್ರಾರ್ಥಿಸಿದನು. ಸುಗ್ರೀವನ ಈ ವೈರಾಗ್ಯದ ಮಾತುಗಳನ್ನು ಕೇಳಿ ಧನುರ್ಧರನಾದ ರಾಮಚಂದ್ರನು ನಕ್ಕು ಆತನನ್ನು ಕುರಿತು—ನೀನನ್ನುವದೆಲ್ಲ ಸತ್ಯವಾದದ್ದು; ಆದರೆ ನನ್ನ ಮಾತು ಸುಳ್ಳಾಗಲಾರದು; ಆದ್ದರಿಂದ ವಾಲಿಯು ಸಂಹಾರವಾಗುವದು ನಿಶ್ಚಯುವು, ಎಂದು ನುಡಿದು, ಕೈಯಲ್ಲಿ ಧನುರ್ಬಾಣಗಳನ್ನು ತಕ್ಕೊಂಡು ಸುಗ್ರೀವನನ್ನು ಸಂಗಡ ಕರಕೊಂಡು ಹೊರಟನು. ರಾಮನು ಸುಗ್ರೀವನನ್ನು ವಾಲಿಯ ಬಳಿಗೆ ಕಳಿಸಲು, ಪ್ರಭುವಿನ ಒಲವು ಪ್ರಾಪ್ತವಾದದ್ದರಿಂದ ಸುಗ್ರೀವನು ವಾಲಿಯಬಳಿಗೆ ಹೋಗಿ ಗರ್ಜಿಸಿದನು. ವಾಲಿಯು ಅದನ್ನು ಕೇಳಿ ಸಿಟ್ಟಿನಿಂದ ಹೋಗತೊಡಗಲು, ಆತನ ಹೆಂಡತಿಯು ಆತನ ಕೈಕಾಲು ಕಟ್ಟಿಕೊಂಡು ಆತನನ್ನು ಕುರಿತು-ಎಲೈ ನಾಥನೇ ಕೇಳು. ಸುಗ್ರೀವನು ಮೊರೆಬಿದ್ದಿರುವ ಕೋಸಲಾಧಿಪನ ಮಕ್ಕಳಾದ ರಾಮಲಕ್ಷ್ಮಣರಿಬ್ಬರೂ ತೇಜ-ಬಲಗಳ ಪರಮಾವಧಿಯಾಗಿರುವರು. ಅವರು ಯುದ್ಧದಲ್ಲಿ ಪ್ರತ್ಯಕ್ಷ ಕಾಲನನ್ನಾದರೂ ಜಯಿಸಲು ಶಕ್ತರು, ಎಂದು ಹೇಳಿದಳು. ಅದಕ್ಕೆ ವಾಲಿಯು-ಪ್ರಿಯೇ, ನೀನು ಭೀರುವಿರುವೆ, ನನ್ನ ಮಾತನ್ನು ಕೇಳು. ರಾಮನು ಸಮದರ್ಶಿಯಾಗಿರುವನು. ಒಂದು ಪಕ್ಷದಲ್ಲಿ ಆತನು ನನ್ನನ್ನು ವಧಿಸಿದರೆ ನಾನು ಸನಾಥನಾಗುವೆನು, ಎಂದು ಹೇಳಿ, ಆ ಮಹಾ ಅಭಿಮಾನಿಯಾದ ವಾಲಿಯು ಸುಗ್ರೀವನನ್ನು ಹುಲ್ಲಿಗೆ ಸಮಾನವಾಗಿ ಎಣಿಸಿ ಅವನಮೇಲೆ ಏರಿ ಹೋದನು. ಅವರಿಬ್ಬರೂ ಪರಸ್ಪರ ಕಾದತೊಡಗಿದರು. ಕಡೆಗೆ ವಾಲಿಯು ಅತ್ಯಂತ ಕ್ರುದ್ಧನಾಗಿ ಕಸುವಿನಿಂದ ಸುಗ್ರೀವನಿಗೆ ಗುದ್ದಿ ಗಟ್ಟಿಯಾಗಿ ಗರ್ಜಿಸಿದನು. ಆಗ ಸುಗ್ರೀವನು ವ್ಯಥೆಪಟ್ಟು ಶ್ರೀ ರಾಮನ ಬಳಿಗೆ ಹೋಗಿ—ಎಲೈ ದಯಾಘನ ರಘು ವೀರನೇ, ಈತನು ನಮ್ಮ ಅಣ್ಣನಾಗಿರದೆ ಯಮನಾಗಿರುವನೆಂದು ಮೊದಲೇ ನಿನಗೆ ಹೇಳಿದೆನಲ್ಲವೆ! ಅನ್ನಲು, ಶ್ರೀ ರಾಮನು—"ನೋಡಲಿಕ್ಕೆ ನೀವಿಬ್ಬರೂ ಒಂದೇ ಸವನೆ ಇರುವದರಿಂದ, ಅವನನ್ನು ಬಿಟ್ಟು ನಿನ್ನನ್ನು ಹೊಡೆದೇನೆಂಬ ಭ್ರಾಂತಿಯಿಂದ ಬಾಣಪ್ರಯೋಗ ಮಾಡಲಿಲ್ಲ" ಎಂದು ಹೇಳಿ ರಾಮನು ಸುಗ್ರೀವನ ಮೈಮೇಲೆ ಕೈಯಾಡಿಸಿದನು. ಅದರಿಂದ ಆತನ ಯಾವತ್ತು ಕ್ಲೇಶಗಳು ನಷ್ಟವಾಗಿ ಆತನ ದೇಹವು ವಜ್ರ

ದಂತಾಯಿತು. ರಾಮನು ಆತನ ಕೊರಳಲ್ಲಿ ಹೂಮಾಲೆಯನ್ನು ಹಾಕಿ ಆತನಿಗೆ ವಿಶಾಲಶಕ್ತಿಯನ್ನು ಕೊಟ್ಟು ಪುನಃ ವಾಲಿಯೊಡನೆ ಕಾದಲಿಕ್ಕೆ ಕಳಿಸಿದನು. ಆಗ ಆ ವಾಲಿ ಸುಗ್ರೀವರು ಹಲವು ವಿಧವಾಗಿ ಕಾದುತ್ತಿರುವದನ್ನು ಶ್ರೀ ರಾಮನು ಮರದಮರೆಯಲ್ಲಿ ನಿಂತು ನೋಡುತ್ತಿದ್ದನು. ಸುಗ್ರೀವನು ಅನೇಕ ಹಿಡತಗಳಿಂದ ತನ್ನ ಸಾಮರ್ಥ್ಯವನ್ನು ತೋರಿಸಿದರೂ, ಕಡೆಗೆ ವಾಲಿಗೆ ಅಂಜಿ ಆತನು ಹಿಂದಕ್ಕೆ ಸರಿಯಹತ್ತಿದನು. ಆಗ ಶ್ರೀ ರಾಮನು ವಾಲಿಯ ಎದೆಗೆ ಗುರಿನೋಡಿ ಒಂದು ಬಾಣವನ್ನು ಬಿಡಲು, ಆ ಬಾಣ ತಾಕಿ ವಾಲಿಯು ಭೂಮಿಗೆ ಬಿದ್ದನು; ಮತ್ತೆ ಆತನು ಮೇಲಕ್ಕೇಳಲು, ರಾಮನ ಮೂರ್ತಿಯು ಆತನ ಕಣ್ಣಿಗೆ ಬಿದ್ದಿತು. ಆಗ ಪ್ರಭುವಿನ ಆ ಯುದ್ಧ ಸನ್ನದ್ಧ ಮೂರ್ತಿಯನ್ನು ನೋಡಿ ವಾಲಿಯು ಆತನ ಚರಣದಲ್ಲಿ ಚಿತ್ತವಿಟ್ಟು ಪುನಃ ಪುನಃ ಆತನನ್ನು ನೋಡತೊಡಗಿ ತನ್ನ ಜನ್ಮವು ಸಫಲವಾಯಿತೆಂದು ಭಾವಿಸತೊಡಗಿದನು. ಆತನು ಮನಸ್ಸಿನಲ್ಲಿ ಪ್ರೇಮವನ್ನೂ, ಮುಖದಲ್ಲಿ ಕಠೋರವಚನವನ್ನೂ ವಹಿಸಿ ರಾಮನನ್ನು ನೋಡಿ— ಸ್ವಾಮಿಯು ಅವತಾರವು ಧರ್ಮರಕ್ಷಣಕ್ಕಾಗಿ ಇದ್ದು, ನನ್ನನ್ನು ಮಾತ್ರ ಸ್ವಾಮಿಯು ವ್ಯಾಧನಂತೆ ಸಂಹರಿಸಿದನು. ನಾನು ತಮ್ಮ ವೈರಿಯು, ಸುಗ್ರೀವನು ಮಾತ್ರ ತಮ್ಮ ಪ್ರಿಯನು! ಎಲೈ ಪ್ರಭುವೇ, ಯಾವ ತಪ್ಪಿಗಾಗಿ ನೀನು ನನ್ನನ್ನು ಹೊಡೆದೆ?

ವಾಲಿಯು ಈ ಪ್ರಶ್ನವನ್ನು ಕೇಳಿ ಶ್ರೀ ರಾಮನು—ಎಲೈ ಶಠನೇ, ನಾದಿನಿ, ತಂಗಿ, ಸೊಸೆ, ಮಗಳು ಇವರೆಲ್ಲರೂ ಸಮಾನವಾಗಿರುವರು. ಇವರನ್ನು ಪಾಪದೃಷ್ಟಿಯಿಂದ ನೋಡುವವನನ್ನು ಸಂಹರಿಸುವದರಲ್ಲಿ ಸರ್ವಥಾ ಪಾಪವಿಲ್ಲ. ಎಲೈ ಮೂಢನೇ, ನೀನು ಅತ್ಯಂತ ಉನ್ಮತ್ತನಾಗಿದ್ದು, ಹೆಂಡತಿಯ ಉಪದೇಶವನ್ನೂ ಕೇಳಲಿಲ್ಲವು. ಎಲೈ ಅಧಮಾ, ಗರ್ವಿಷ್ಠಾ, ಸುಗ್ರೀವನಿಗೆ ನನ್ನ ಬಾಹುಬಲದ ಆಶ್ರಯವಿರುತ್ತದೆಂಬವನ್ನು ತಿಳಿದೂ ಅವನನ್ನು ಕೊಲ್ಲಬೇಕೆನ್ನುತ್ತಿದ್ದೆಯಾ? ಅನ್ನಲು, ವಾಲಿಯು— ರಾಮಚಂದ್ರಾ, ನೀನು ಎಲ್ಲರ ಸ್ವಾಮಿಯಿರುತ್ತೀ. ನಿನ್ನ ಮುಂದೆ ನನ್ನ ಚಾತುರ್ಯವೇನು ನಡೆಯುವದು? ಪ್ರಭುವೇ, ಇನ್ನೂ ನಾನು ಪಾತಕಿಯೇ ಇರುವೆನೇನು? ಅಂತಕಾಲವಲ್ಲಿ ನನಗೆ ನಿನ್ನ ಗತಿಯೇ ಪ್ರಾಪ್ತವಾಗುವದು- ಎಂದು ನುಡಿದನು. ವಾಲಿಯ ಈ ಅತ್ಯಂತ ಕೋಮಲವಾಣಿಯನ್ನು ಕೇಳಿ ರಾಮನು ಆತನ ಮಸ್ತಕದಮೇಲೆ ಹಸ್ತವನ್ನಿಟ್ಟು—ನಾನು ನಿನ್ನ ದೇಹವನ್ನು ಅಮರವಾಗಿ ಮಾಡುವೆನು, ನೀನು ಜೀವದಿಂದಲೇ ಇರು." ಎಂದು ಹೇಳಿದನು. ಅದಕ್ಕೆ ವಾಲಿಯು— ಎಲೈ ಕೃಪಾನಿಧಿಯೇ, ಜನ್ಮಜನ್ಮಾಂತರದಲ್ಲಿ ಮುನಿಗಳು ಯತ್ನಪಡುತ್ತಿದ್ದರೂ ಅಂತಕಾಲದಲ್ಲಿ ನಿನ್ನ ನಾಮವು ಮುಖದಲ್ಲಿ ಪ್ರಾಪ್ತವಾಗುವದಿಲ್ಲ. ಯಾವನ ನಾಮಬಲದಿಂದ ಅವಿನಾಶಿಯಾದ ಮಹಾದೇವನು ಕಾಶಿಯಲ್ಲಿ ಎಲ್ಲರಿಗೂ ಮೋಕ್ಷವನ್ನು ಕೊಡುವನೋ, ಆ ನೀನು ಅಂತಕಾಲದಲ್ಲಿ ನನಗೆ ದೃಷ್ಟಿ

ಗೋಚರನಾಗಿರುವೆ. ತಿರುಗಿ ಯತ್ನಿಸಿದರೂ ಇಂಥ ಪ್ರಸಂಗವು ಒದಗಬಹುದೋ? ಪ್ರಭುವು ನನ್ನನ್ನು ಅತ್ಯಂತ ಅಭಿಮಾನವಶನಾಗಿ ತಿಳಿದು, ಬದುಕಿ ಇರಲು ಬೋಧಿಸುತ್ತಿರುವನು; ಆದರೆ ಹಟದಿಂದ ಕಲ್ಪವೃಕ್ಷವನ್ನು ಕೊಯ್ದು, ತಿಳಿದೂ ತಿಳಿದೂ ಜಾಲಿಯ ಗಿಡಕ್ಕೆ ಯಾವನು ನೀರು ಹಾಕಿಯಾನು? ಎಲೈ ಪ್ರಭುವೇ, ನನ್ನನ್ನು ಕೃಪಾದೃಷ್ಟಿಯಿಂದ ನೋಡಿ ನಾನು ಕೇಳುವವರವನ್ನು ಕೊಡಬೇಕು. ಕರ್ಮಾನುಬಂಧದಿಂದ ನಾನು ಯಾವ ಯಾವ ಯೋನಿಯಲ್ಲಿ ಹುಟ್ಟುವೆನೋ ಅಲ್ಲಲ್ಲಿ ನಾನು ತಮ್ಮ ಚರಣಗಳಲ್ಲಿ ಅನುರಕ್ತನಾಗಿರಬೇಕು. ನನ್ನಂತೆಯೇ ವಿನಯಶಾಲಿಯೂ, ಪರಾಕ್ರಮಿಯೂ ಆದ ನನ್ನ ಈ ಪುತ್ರ ಅಂಗದನಿಗೆ ಪ್ರಭುವು ತಮ್ಮ ಕಲ್ಯಾಣಪ್ರದ ಚರಣಗಳ ಆಶ್ರಯ ಕೊಡಬೇಕು. ಎಲೈ ಸುರ-ನರನಾಥನೇ, ಈ ಅಂಗದನ ಕೈಯನ್ನು ಹಿಡಿದು ತಾವು ಈತನನ್ನು ದಾಸನನ್ನಾಗಿ ಪರಿಗ್ರಹಿಸಬೇಕು. ಎಂದು ಬೇಡಿಕೊಂಡು ಕೊರಳೊಳಗಿನ ಪುಷ್ಪಹಾರವು ಬೀಳುವಾಗ ಆನೆಗೆ ತಿಳಿಯದಿರುವಂತೆ, ವಾಲಿಯು ರಾಮಚರಣದಲ್ಲಿ ದೃಢಪ್ರೇಮವಿಟ್ಟು ನಿರಾಯಾಸವಾಗಿ ದೇಹವನ್ನು ಕಳಚಿಚಲ್ಲಿದನು! ಆಗ ಪ್ರಭುವು ವಾಲಿಯನ್ನು ತನ್ನ ಲೋಕಕ್ಕೆ ಕಳಿಸಿದನು. ಆಗ ಯಾವತ್ತು ಸಂಗಡಿಗರು ವ್ಯಾಕುಲರಾಗಿ ಓಡುತ್ತ ಬಂದರು. ವಾಲಿಯ ಹೆಂಡತಿಯಾದ ತಾರೆಯು ಮಹಾದುಃಖಿತೆಯಾಗಿ ವಿಲಪಿಸತೊಡಗಿದಳು. ಆಕೆಯ ಕರಣಗಳು ಅಸ್ತವ್ಯಸ್ತವಾಗಿ ಆಕೆಯ ಮೈಮೇಲಿನ ಎಚ್ಚರವು ಹಾರಿತು. ಹೀಗೆ ತಾರೆಯು ದುಃಖಿತಳಾದದ್ದನ್ನು ನೋಡಿ ಶ್ರೀರಾಮನು ತನ್ನ ಮಾಯೆಯನ್ನು ನಿವಾರಿಸಿ ಜ್ಞಾನವನ್ನಿತ್ತು ಆಕೆಯನ್ನು ಕುರಿತು—ತಾರೆಯೇ, ನಿನ್ನ ಪತಿಯ ಈ ಅತ್ಯಂತ ಅಧಮವಾದ ಶರೀರವು ಪೃಥ್ವಿ, ಅಪ್, ತೇಜ, ವಾಯು, ಆಕಾಶ ಎಂಬ ಪಂಚ ಮಹಾಭೂತಗಳಿಂದ ಆಗಿರುವದು. ಆ ಶರೀರವು ಪ್ರತ್ಯಕ್ಷ ನಿನ್ನ ಮುಂದೆ ಬಿದ್ದಿರುವದು; ಜೀವವಂತು ಅಮರವಾಗಿರುವದು; ಅಂದಬಳಿಕ ನೀನು ಯಾತಕ್ಕೋಸ್ಕರ ದುಃಖಪಡುವೆ? ಎಂದು ಕೇಳಲು, ತಾರೆಗೆ ಜ್ಞಾನೋದಯವಾಗಿ ಆಕೆಯು ಪ್ರಭುವಿನ ಚರಣಗಳನ್ನು ಹಿಡಿಕೊಂಡು ಪರಮಭಕ್ತಿಯ ವರವನ್ನು ಬೇಡಿಕೊಂಡಳು. ಎಲೈ ಪಾರ್ವತಿಯೇ, ರಾಮಪ್ರಭುವು ಕಟ್ಟಿಗೆಯ ಗೊಂಬೆಯಂತೆ ಎಲ್ಲರನ್ನು ಕುಣಿಸುತ್ತಿರುವನು.

ಬಳಿಕ ಸುಗ್ರೀವನು ಶ್ರೀರಾಮನ ಅಪ್ಪಣೆಯಂತೆ ವಾಲಿಯ ಔರ್ಧ್ವದೇಹಿಕ ಕರ್ಮಗಳನ್ನು ಯಥಾವಿಧಿಯಾಗಿ ಮಾಡಿದನು. ರಾಮನ ಅಪ್ಪಣೆಯಂತೆ ಲಕ್ಷ್ಮಣನು ಕೂಡಲೆ ಪುರಜನರನ್ನೂ, ಬ್ರಾಹ್ಮಣರನ್ನೂ ಕರೆಸಿ ಸುಗ್ರೀವನಿಗೆ ರಾಜ್ಯಾಭಿಷೇಕ ಮಾಡಿ, ಅಂಗದನನ್ನು ಯುವರಾಜನನ್ನಾಗಿ ಮಾಡಿದನು. ಎಲೈ ಪಾರ್ವತೀ, ಗುರುಗಳು, ತಾಯಿತಂದೆಗಳು, ಬಂಧುಗಳು, ಪ್ರಭುವು ಇವರಾದರೂ ಈ ಜಗತ್ತಿನಲ್ಲಿ ರಾಮನಷ್ಟು ಹಿತಚಿಂತಕರಲ್ಲವು. ಸುರರು, ನರರು, ಮುನಿಗಳು, ಇವರೇ ಮೊದಲಾದವರು

ಸ್ವಾರ್ಥಕ್ಕಾಗಿಯೇ ಪ್ರೀತಿಸುತ್ತಿರುವದು ಅವರೆಲ್ಲರ ರೀತಿಯಾಗಿರುವದು. ವಾಲಿಯ ಉಪದ್ರವದಿಂದ ಹಗಲು ರಾತ್ರಿ ತಳಮಳಿಸುತ್ತಿರುವ, ಚಿಂತೆಯಿಂದ ಹೃದಯವು ಸುಡುತ್ತಿರುವ ಸುಗ್ರೀವನಿಗೆ ಅತ್ಯಂತ ದಯಾಲು ಸ್ವಭಾವದ ರಘುವೀರನು ಕಪಿಗಳ ರಾಜನನ್ನಾಗಮಾಡಿದನು. ತಿಳಿದೂ ತಿಳಿದೂ ಇಂಥ ಪ್ರಭುವಿನ ತ್ಯಾಗವಮಾಡುವ ಮನುಷ್ಯನು ವಿಪತ್ತಿನ ಬಲೆಯಲ್ಲಿ ಯಾಕೆ ಸಿಗಲಿಕ್ಕಿಲ್ಲವು? ಶ್ರೀರಾಮನು ಸುಗ್ರೀವನನ್ನು ಕರಿಸಿ ಅನೇಕ ಪ್ರಕಾರದ ರಾಜನೀತಿಯನ್ನು ಉಪದೇಶಿಸಿ ಆತನನ್ನು ಕುರಿತು— "ಎಲೆ, ಕಪಿಪತಿಯಾದ ಸುಗ್ರೀವನೇ, ಕೇಳು. ಹದಿನಾಲ್ಕು ವರ್ಷಗಳವರೆಗೆ ನಾನು ನಗರಕ್ಕೆ ಹೋಗುವಹಾಗಿಲ್ಲವು. ಬೇಸಿಗೆಯು ಹೋಗಿ ಮಳೆಗಾಲವು ಬಂದದ್ದರಿಂದ ಹತ್ತರವೇ ಇರುವ ಒಂದು ಪರ್ವತದಮೇಲೆ ಒಂದು ಪರ್ಣಕುಟಿಯನ್ನು ಕಟ್ಟಿಕೊಂಡು ಇರುವೆನು. ಅಂಗದನೊಡನೆ ನೀನು ರಾಜ್ಯಭಾರ ಮಾಡು. ನನ್ನ ಕಾರ್ಯವನ್ನು ಯಾವಾಗಲೂ ಹೃದಯದಲ್ಲಿ ಧರಿಸು, ಎಂದು ಹೇಳಿ, ಸುಗ್ರೀವನು ಮನೆಗೆ ಹೋಗಲು, ತಾನು ಪ್ರವರ್ಷಣವೆಂಬ ಪರ್ವತದಮೇಲೆ ಹೋಗಿ ಲಕ್ಷ್ಮಣನೊಡನೆ ಇರಹತ್ತಿದನು ಕೃಪಾನಿಧಿಯಾದ ರಾಮಚಂದ್ರನು ಕೆಲವು ದಿವಸ ಅಲ್ಲಿ ಇರಬಹುದೆಂದು ತಿಳಿದು, ದೇವತೆಗಳು ಈ ಮೊದಲೇ ಗಿರಿಗುಹೆಗಳನ್ನು ಶೃಂಗರಿಸಿ ಇಟ್ಟಿದ್ದರು. ಯಾವತ್ತು ಸಿದ್ಧರೂ, ಮುನಿಗಳೂ, ದೇವತೆಗಳೂ ಭ್ರಮರಗಳ ಹಾಗು ಪಶುಪಕ್ಷಿಗಳ ದೇಹವನ್ನು ಧರಿಸಿ ಪ್ರಭುವನ್ನು ಸೇವಿಸತೊಡಗಿದರು. ರಮಾಪತಿಯು ಅಲ್ಲಿ ವಾಸಿಸಹತ್ತಿದಂದಿನಿಂದ ಆ ವನವು ಮಂಗಲರೂಪವಾಯಿತು. ಅತ್ಯಂತ ಶುಭ್ರವೂ, ಸುಂದರವೂ ಆದ ಒಂದು ಸ್ಫಟಿಕ ಶಿಲೆಯಮೇಲೆ ಉಭಯ ಬಂಧುಗಳು ಸ್ವಸ್ಥವಾಗಿ ಕುಳಿತುಕೊಳ್ಳುವರು. ರಾಮಚಂದ್ರನು ಲಕ್ಷ್ಮಣನಿಗೆ ಭಕ್ತಿ—ಜ್ಞಾನ—ವೈರಾಗ್ಯ—ರಾಜನೀತಿಗಳ ಸಂಬಂಧದಿಂದ ಅನೇಕ ಕಥೆಗಳನ್ನು ಹೇಳುವನು. ಹೀಗಿರುವಾಗ ಮಳೆಗಾಲವು ಪ್ರಾಪ್ತವಾದದ್ದರಿಂದ ಆಕಾಶವು ಮೇಘಗಳಿಂದ ವ್ಯಾಪ್ತವಾಗಿ, ಅವುಗಳ ಗರ್ಜನೆಯು ಬಹು ಮನೋಹರವಾಗಿ ಕೇಳಹತ್ತಿತು. ನವಿಲುಗಳು ಆನಂದದಿಂದ ಕುಣಿಯುತೊಡಗಿದವು, ನೀಚ ಜನರ ಪ್ರೀತಿಯು ಚಂಚಲವಾಗಿರುವಂತೆ, ಮಿಂಚು ನಡನಡುವೆ ಮೇಘಮಧ್ಯದಲ್ಲಿ ಫಳಕ್ಕನೆ ಹೊಳೆದು ಅದೃಶ್ಯವಾಗುತ್ತಿತ್ತು. ಅಲ್ಪ ಸಂಪತ್ತಿನಿಂದ ದುಷ್ಟರು ಉನ್ಮತ್ತರಾಗುವಂತೆ ಕ್ಷುದ್ರನದಿಗಳು ತುಂಬಿ ಭೋರ್ಗರೆಯುತ್ತ ಹರಿಯುತೊಡಗಿದ್ದವು. ಮಾಯೆಯ ಆವರಣದಿಂದ ಜೀವನು ಮಲಿನನಾಗುವಂತೆ, ನೀರು ನೆಲಕ್ಕೆ ಬಿದ್ದಕೂಡಲೆ ರಾಡಿಯಾಗುತ್ತಿತ್ತು. ಸಜ್ಜನರಿಗೆ ಕ್ರಮಕ್ರಮವಾಗಿ ಸದ್ಗುಣಗಳು ಪ್ರಾಪ್ತವಾಗುವಂತೆ, ಕೆರೆಗಳು ಮೆಲ್ಲಮೆಲ್ಲನೆ ನೀರಿನಿಂದ ತುಂಬತೊಡಗಿದ್ದವು. ಸುರಾಜ್ಯದಲ್ಲಿ ನೀಚರ ಉದ್ಯೋಗಗಳು ಮುಣುಗುವಂತೆ, ಎಕ್ಕೆಯು, ಹಾಗು ಬೂರಲ ಗಿಡಗಳು ಬರಲಾದವು. ಕ್ರೋಧವು ಧರ್ಮವನ್ನು ನಷ್ಟಪ್ರಾಯವಾಗಿ ಮಾಡುವಂತೆ, ಮಳೆಯು ಧೂಳಿಯನ್ನು ನಷ್ಟಗೊಳಿಸುತ್ತಿತ್ತು. ಪರೋಪ

ಪಕಾರಿಗಳಾದವರ ಸಂಪತ್ತು ಶೋಭಿಸುವಂತೆ ಪೈರುಗಳ ಭರದ ಬೆಳೆಯಿಂದ ಭೂಮಿಯು ಶೋಭಿಸತೊಡಗಿತು. ಸ್ತ್ರೀಯು ಸ್ವತಂತ್ರಳಾಗುವದರಿಂದ ಕೆಡುವಂತೆ, ಮಹಾವೃಷ್ಟಿಯಾದದ್ದರಿಂದ ಕೆರೆಗಳ ಒಡ್ಡುಗಳು ಒಡೆದು ಪ್ರವಾಹಗಳು ಹರಿಯತೊಡಗಿದವು. ವಿವೇಕಿ ಪುರುಷನು ಮೋಹ-ಮದ-ಮಾನಗಳನ್ನು ಹೊರಪಡಿಸುವಂತೆ ಒಕ್ಕಲಿಗರು ಭೂಮಿಯ ಕಳೆತೆಗೆಯುತ್ತಿದ್ದರು. ಕಲಹವುಂಟಾಗುವದರಿಂದ ಧರ್ಮವು ನಷ್ಟವಾಗುವಂತೆ, ಚಕ್ರವಾಕಪಕ್ಷಿಗಳು ಎಲ್ಲಿ ನೋಡಿದರೂ ಕಣ್ಣಿಗೆ ಬೀಳದಂತಾಗಿದ್ದವು. ಹರಿಭಕ್ತರ ಹೃದಯದಲ್ಲಿ ಕಾಮವು ಉತ್ಪನ್ನವಾಗದಿರುವಂತೆ, ಸೌಳು ನೆಲದಲ್ಲಿ ಹುಲ್ಲು ಕೂಡ ಹುಟ್ಟದಾಯಿತು. ಸುರಾಜ್ಯಪ್ರಾಪ್ತಿಯಿಂದ ಪ್ರಜೆಗಳ ಉತ್ಕರ್ಷವಾಗುವಂತೆ, ಪೃಥ್ವಿಯು ಹಲವು ಜೀವಜಂತುಗಳಿಂದ ವ್ಯಾಪ್ತವಾಯಿತು. ಜ್ಞಾನವಾಗುವದರಿಂದ ಇಂದ್ರಿಯಗಳು ನಿರುದ್ಧವಾಗುವಂತೆ, ಹಾದಿಕಾರರು ಅಲ್ಲಲ್ಲಿ ತಡೆದು ನಿಲ್ಲುತ್ತಿದ್ದರು. ಕುಪುತ್ರನು ಹುಟ್ಟುವದರಿಂದ ಕುಲವೂ, ಸದ್ಧರ್ಮವೂ ನಾಶವಾಗುವಂತೆ, ಬಿರುಗಾಳಿ ಬಿಟ್ಟಾಗ ಮೋಡಗಳು ಅತ್ತಿತ್ತ ಚದರಿಹೋಗುತ್ತಿದ್ದವು. ಸತ್ಸಂಗದಿಂದ ಜ್ಞಾನೋದಯವಾಗಿ ದುಸ್ಸಂಗದಿಂದ ಜ್ಞಾನವು ನಷ್ಟವಾಗುವಂತೆ, ಹಗಲು ಮೋಡಗಳಿಲ್ಲದಾಗ ಸೂರ್ಯಪ್ರಕಾಶ ಬಿದ್ದು, ದಟ್ಟಮೋಡ ಕವಿದಾಗ ಕತ್ತಲೆ ಬೀಳುತ್ತಿತ್ತು.

ಈ ಮೇರೆಗೆ ಬೋಧಪ್ರದವಾಗಿ ಮಳೆಗಾಲವು ಮುಗಿಯಲು, ಅತ್ಯಂತ ಸುಂದರವಾದ ಶರದೃತುವು ಪ್ರಾಪ್ತವಾಯಿತು. ಆಗ ಸಂತರ ಹೃದಯಗಳು ಮದ-ಮೋಹ ವಿರಹಿತವಾಗಿರುವಂತೆ, ನದಿ ಕೆರೆಗಳ ನೀರು ಸ್ವಚ್ಛವಾದವು. ಜ್ಞಾನಿಗಳ ಮಮತೆಯು ನಷ್ಟವಾಗುವಂತೆ, ನದಿ-ಕೆರೆಗಳ ನೀರು ಕ್ರಮಕ್ರಮವಾಗಿ ಅಟ್ಟಿಸುತ್ತ ಹೋದವು. ಸಮಯ ಒದಗಿದ ಕೂಡಲೆ ಪುಣ್ಯ ಕರ್ಮಗಳು ಘಟಿಸುವಂತೆ, ಶರದೃತುವು ಪ್ರಾಪ್ತವಾದ ಕೂಡಲೆ ಖಂಜನ ಎಂಬ ಪಕ್ಷಿಗಳು ಬಂದವು. ಅಜ್ಞಾನಿಯೂ, ಕುಟುಂಬ ವತ್ಸಲನೂ ಆದವನ ಧನಹೀನತೆಯಿಂದ ದುಃಸ್ಥಿತಿಯು ಪ್ರಾಪ್ತವಾಗುವಂತೆ, ನೀರು ಅಟ್ಟಿಸುತ್ತ ಹೋದದ್ದರಿಂದ ಮೀನಗಳ ಅವಸ್ಥೆಯಾಯಿತು. ಯಾವತ್ತು ಆಶೆಯನ್ನು ಪರಿತ್ಯಜಿಸಿದ ಬಳಿಕ ಹರಿಭಕ್ತನು ಶೋಭಿಸುವಂತೆ, ಆಕಾಶವು ನಿರಭ್ರವಾದದ್ದರಿಂದ ನಿರ್ಮಲವಾಗಿ ತೋರಹತ್ತಿತು. ಕ್ವಚಿತ್ತಾಗಿ ಒಬ್ಬಾನೊಬ್ಬನಿಗೆ ಮಾತ್ರ ಹರಿಭಕ್ತಿಯು ಉತ್ಪನ್ನವಾಗುವಂತೆ, ಶರದೃತುವಿನಲ್ಲಿ ಎಲ್ಲಿಯಾದರೂ ಅಲ್ಪಸ್ವಲ್ಪ ಮಳೆಯಾಗುತ್ತಿತ್ತು. ಕಷ್ಟದಿಂದ ಭಗವದ್ಭಕ್ತಿಯು ಪ್ರಾಪ್ತವಾದಮೇಲೆ ನಾಲ್ಕೂ ಆಶ್ರಮಗಳೂ ಕಳಚಿ ಹೋಗುವಂತೆ, ಅರಸರು, ತಪಸ್ವಿಗಳು, ಭಿಕ್ಷುಕರು ತಮ್ಮ ತಮ್ಮ ಊರುಗಳನ್ನು ಬಿಟ್ಟು ಹೊರಬೀಳುತ್ತಿದ್ದರು. ನಿರ್ಗುಣ ಬ್ರಹ್ಮವು ಸಗುಣ ಸ್ವರೂಪದಲ್ಲಿ ಶೋಭಿಸುವಂತೆ, ಅರಳಿದ ಕಮಲಗಳಿಂದ ಸರೋವರವು ಶೋಭಿಸುತ್ತಿರುವದು. ಆ ಸುಂದರವಾದ ಶರದೃತುವಿನಲ್ಲಿ ಭ್ರಮರಗಳು ಝೇಂಕರಿಸುತ್ತಿರುವವು, ಹಲವು ಪ್ರಕಾರದ ಸುಂದರ ಪಕ್ಷಿಗಳು ಶಬ್ದ

ಮಾಡುತ್ತಿರುವವು. ಎರಡನೆಯವರ ಸಂಪತ್ತನ್ನು ನೋಡಿ ದುಃಖಿಸುವ ದುರ್ಜನರಂತೆ, ರಾತ್ರಿಯಾದದ್ದರಿಂದ ಚಕ್ರವಾಕಗಳು ಮನಸ್ಸಿನಲ್ಲಿ ಉದ್ವಿಗ್ನವಾಗುವವು. ಶಿವದ್ರೋಹಿಯಾದವನಿಗೆ ಸುಖವು ದೊರೆಯದಿರುವಂತೆ, ಚಾತಕ ಪಕ್ಷಿಯು ನೀರಡಿಸಿ ಆಕ್ರೋಶ ಮಾಡತೊಡಗಿತು. ಬ್ರಾಹ್ಮಣದ್ವೇಷದಿಂದ ಕುಲಕ್ಷಯವಾಗುವಂತೆ, ಛಳಿಯಿಂದ ನೊಣಗಳ ಕಡತದ ನಿವಾರಣವಾಯಿತು. ಸದ್ಗುರು ಪ್ರಾಪ್ತಿಯಿಂದ ಸಂಶಯ-ಮೋಹಗಳು ನಷ್ಟವಾಗುವಂತೆ, ಮಳೆಗಾಲದಲ್ಲಿ ಭೂಮಿಯೊಳಗಿಂದ ಹೊರಬಿದ್ದಿದ್ದ ಪ್ರಾಣಿಗಳೆಲ್ಲ ಶರದೃತುವು ಪ್ರಾಪ್ತವಾದ ಕೂಡಲೆ ನಷ್ಟವಾಗಿ ಹೋದವು.

ಹೀಗೆ ಶರದೃತುವೂ ಬೋಧಪ್ರದವಾಗಿಯೇ ಕ್ರಮಿಸಲು, ಶ್ರೀರಾಮನು ಲಕ್ಷ್ಮಣನನ್ನು ಕುರಿತು—ಲಕ್ಷ್ಮಣಾ, ವರ್ಷಋತುವು ಹೋಗಿ ಶರದೃತುವು ಬಂದರೂ ಇನ್ನೂ ಸೀತೆಯ ಶೋಧವಾಗಲಿಲ್ಲ. ಒಮ್ಮೆ ಹೇಗಾದರೂ ಮಾಡಿ ಆಕೆಯ ಶೋಧವಾದರೆ ಪ್ರತ್ಯಕ್ಷ ಕಾಲನನ್ನಾದರೂ ಗೆದ್ದು ಒಂದು ಕ್ಷಣದಲ್ಲಿ ಆಕೆಯನ್ನು ತಂದೇನು. ಸುಗ್ರೀವನಂತು ರಾಜ್ಯವು, ಕೋಶವು, ಪುರವು, ಸ್ತ್ರೀಯು ಪ್ರಾಪ್ತವಾದದ್ದರಿಂದ ನನ್ನನು ಮರತೇ ಬಿಟ್ಟಿರುವನು. ಯಾವಬಾಣದಿಂದ ನಾನು ವಾಲಿಯನ್ನು ಸಂಹರಿಸಿದೆನೋ, ಅದೇ ಬಾಣದಿಂದ ನಾಳೆ ಆ ಮೂರ್ಖನ ಪ್ರಾಣಹರಣ ಮಾಡುವೆನು, ಎಂದು ನುಡಿದನು. ಶಂಕರನು ಪಾರ್ವತಿಯನ್ನು ಕುರಿತು— ಎಲೈ ಪಾರ್ವತೀ, ಶ್ರೀ ರಾಮನ ಕೃಪೆಯಿಂದ ಮದ-ಮೋಹಾದಿವಿಕಾರಗಳು ನಷ್ಟವಾಗುತ್ತಿರಲು, ಆ ಪ್ರಭುವಿಗೆ ಸ್ವಪ್ನದಲ್ಲಿ ಯಾದರೂ ಸಿಟ್ಟು ಬರಬಹುದೇ? ಶ್ರೀರಘುವೀರನ ಚರಣಗಳಲ್ಲಿಯೇ ಪ್ರೇಮವಿಟ್ಟ ಜ್ಞಾನವಂತ ಮುನಿಗಳಿಗೆಮಾತ್ರ ಈಚರಿತ್ರವು ತಿಳಿಯುವದು. ಪ್ರಭುವು ಕ್ರುದ್ಧನಾದದ್ದನ್ನು ನೋಡಿ ಲಕ್ಷ್ಮಣನು ಧನುಸ್ಸಿಗೆ ಹೆದೆಯೇರಿಸಿ ಕೈಯಲ್ಲಿ ಬಾಣವನ್ನು ತಕ್ಕೊಂಡನು. ಆಗ ನಿಸ್ಸೀಮ ದಯಾಲುವಾದ ರಘುಪತಿಯು ಲಕ್ಷ್ಮಣನಿಗೆ ತಿಳಿಸಿ ಹೇಳಿ —ಎಲೈ ತಾತನೇ, ನೀನು ಸುಗ್ರೀವನಿಗೆ ಅಂಜಿಕೆಯನ್ನು ಮಾತ್ರ ತೋರಿಸಿ ಆತನನ್ನು ಕರಕೊಂಡು ಬಾ; ಯಾಕಂದರೆ, ಆತನು ನಮ್ಮ ಮಿತ್ರನಿರುವನು, ಎಂದು ಹೇಳಿದನು. ಇತ್ತ ಮಾರುತಿಯು—"ಸುಗ್ರೀವನಿಗೆ ರಾಮಕಾರ್ಯದ ವಿಸ್ಮೃತಿ ಯಾಯಿತೆ"ಂದು ತಿಳಿದು ಸುಗ್ರೀವನ ಬಳಿಗೆ ಹೋಗಿ ಆತನನ್ನು ವಂದಿಸಿ, ಸಾಮ-ದಾನ-ಭೇದ-ದಂಡಗಳೆಂಬ ನಾಲ್ಕು ಉಪಾಯಗಳಿಂದ ಆತನಿಗೆ ತಿಳಿಯಹೇಳಿದನು. ಅದನ್ನು ಕೇಳಿ ಸುಗ್ರೀವನು ಅತ್ಯಂತ ಭಯಭೀತನಾಗಿ—ಮಾರುತೀ, ವಿಷಯಗಳಿಂದ ನನ್ನ ಜ್ಞಾನವು ನಷ್ಟವಾಯಿತು. ಇನ್ನು ಯಾವತ್ತು ವಾನರ ಸೇನೆಯನ್ನು ಕರೆಸುವ ದಕ್ಕಾಗಿ ಅಲ್ಲಲ್ಲಿಗೆ ದೂತರನ್ನು ಕಳಿಸು. ಇನ್ನು ಹದಿನೈದು ದಿವಸಗಳಲ್ಲಿ ಸೀತೆಯ ಶೋಧ ಮಾಡದೆತಿರುಗಿಬರುವವರನ್ನು ನನ್ನ ಕೈ ಮುಟ್ಟಿ ವಧಿಸುವೆನೆಂದು ಸ್ಪಷ್ಟವಾಗಿ ಎಲ್ಲರಿಗೆ ಹೇಳು.

ಈ ಮೇರೆಗೆ ಸುಗ್ರೀವನ ಅಪ್ಪಣೆಯಾಗಲು, ಮಾರುತಿಯು ವಾನರ ದೂತರನ್ನು ಕರೆಸಿ ಹಲವು ಪ್ರಕಾರಗಳಿಂದ ಅವರನ್ನು ಗೌರವಿಸಿ ಅವರಿಗೆ ನೀತಿ-ಭೀತಿ-ಪ್ರೀತಿಗಳನ್ನು ತೋರಿಸಿ ಕಳಿಸಿ ಕೊಟ್ಟನು. ಅವರೆಲ್ಲರು ಮಾರುತಿಯ ಚರಣಗಳಿಗೆರಗಿ ಹೊರಟು ಹೋದರು. ಅದೇ ಸಮಯದಲ್ಲಿ ಲಕ್ಷ್ಮಣನು ಪಂಪಾಪುರಕ್ಕೆ ಬಂದನು. ಆತನು ಕ್ರುದ್ಧನಾಗಿರುವದನ್ನು ನೋಡಿ ಕಪಿಗಳು ಅತ್ತಿತ್ತ ಓಡಿಹೋಗತೊಡಗಿದರು. ಆಗ ಲಕ್ಷ್ಮಣನು ಧನುಸ್ಸಿಗೆ ಗುಣವಿರಿಸಿ—ನಾನು ಈ ಪಟ್ಟಣವನ್ನು ಸುಟ್ಟುಬೂದಿಮಾಡುವೆನು, ಎನ್ನಲು, ಎಲ್ಲರೂ ಅಂಜಿದರು. ಅಷ್ಟರಲ್ಲಿ ಅಂಗದನು ಬಂದು ಲಕ್ಷ್ಮಣನ ಚರಣಗಳ ಮೇಲೆ ಮಸ್ತಕವಿಟ್ಟು ಪ್ರಾರ್ಥಿಸಲು, ಲಕ್ಷ್ಮಣನು ಆತನ ತಲೆಯ ಮೇಲೆ ಅಭಯ ಹಸ್ತವನ್ನಿಟ್ಟನು. ಲಕ್ಷ್ಮಣನು ಸಿಟ್ಟಾಗಿರುವನೆಂಬ ವರ್ತಮಾನವನ್ನು ಕೇಳಿ ಸುಗ್ರೀವನು ಅತ್ಯಂತ ಭಯಗ್ರಸ್ತನಾಗಿ ಮಾರುತಿಯನ್ನು ಕುರಿತು—ಎಲೈ ಹನುಮಂತಾ, ನೀನು ತಾರೆಯನ್ನು ಸಂಗಡ ಕರೆದುಕೊಂಡು ಹೋಗಿ ಲಕ್ಷ್ಮಣನನ್ನು ಪ್ರಾರ್ಥಿಸಿ ಆತನನ್ನು ಸಮಾಧಾನ ಪಡಿಸು, ಎಂದು ಹೇಳಿದನು. ಆಗ ಮಾರುತಿಯು ತಾರೆಯೊಡನೆ ಹೋಗಿ ಪ್ರಭುವಾದ ಲಕ್ಷ್ಮಣನ ಚರಣಗಳಿಗೆರಗಿ ಸ್ತೋತ್ರಮಾಡಿ ಆತನನ್ನು ಮನೆಗೆ ಕರತಂದು ಆತನ ಪಾದಪ್ರಕ್ಷಾಲನ ಮಾಡಿ ಆತನನ್ನು ಮಂಚದ ಮೇಲೆ ಕುಳ್ಳಿರಿಸಿದನು. ಬಳಿಕ ಸುಗ್ರೀವನು ಲಕ್ಷ್ಮಣನ ಚರಣಗಳ ಮೇಲೆ ಮಸ್ತಕವಿಡಲು, ಲಕ್ಷ್ಮಣನು ಅವನನ್ನು ಹಿಡಿದೆತ್ತಿ ಬಿಗಿಯಾಗಿ ಅಪ್ಪಿಕೊಂಡನು. ಆಗ ಸುಗ್ರೀವನು—ಎಲೈ ಪ್ರಭುವೇ, ಮುನಿಗಳ ಮನಸ್ಸನ್ನು ಕ್ಷಣದಲ್ಲಿ ಮೋಹಿತವಾಗಿ ಮಾಡುವ ವಿಷಯಮದದಂತಹ ಮದವು ಮತ್ತಾವದೂ ಇಲ್ಲವು, ಎಂದು ಬಿನ್ನಯಿಸಿಕೊಂಡನು. ಆತನ ಆ ನಮ್ರವಚನವನ್ನು ಕೇಳಿ ಲಕ್ಷ್ಮಣನಿಗೆ ಸಮಾಧಾನವಾಯಿತು. ಆತನು ಹಲವು ರೀತಿಯಿಂದ ಲಕ್ಷ್ಮಣನಿಗೆ ಸಮಾಧಾನ ಹೇಳಿದನು. ಆಗ ಮಾರುತಿಯು ವಾನರ ದೂತಸಮುದಾಯವನ್ನು ಕರೆಕಳಿಸಿದ್ದೇ ಮೊದಲಾದ ಸುದ್ದಿಯನ್ನು ಲಕ್ಷ್ಮಣನಿಗೆ ಹೇಳಿದನು. ಬಳಿಕ ಆ ಅಂಗದಾದಿವಾನರರನ್ನು ಸಂಗಡಕರಕೊಂಡು ಲಕ್ಷ್ಮಣನನ್ನು ಮುಂದೆ ಮಾಡಿಕೊಂಡು ಸುಗ್ರೀವನು ಆನಂದದಿಂದ ಹೊರಟು, ಶ್ರೀ ರಘುಪತಿಯು ಇದ್ದಲ್ಲಿಗೆ ಬಂದನು. ಆತನು ರಾಮನ ಚರಣಗಳ ಮೇಲೆ ಮಸ್ತಕವನ್ನಿಟ್ಟು ಕೈ ಜೋಡಿಸಿ— ಎಲೈ ನಾಥನೆ, ನನ್ನ ಕಡೆಗೆ ಏನೂ ದೋಷವಿಲ್ಲವು; ದೇವಾ, ನಿನ್ನ ಮಾಯೆಯು ಅತ್ಯಂತ ಪ್ರಬಲವಾಗಿದ್ದು, ನಿನ್ನ ದಯೆಯಾದರೆ ಮಾತ್ರ ಅದು ನಷ್ಟವಾಗುವದು. ಎಲೈ ಸ್ವಾಮಿಯೇ, ಸುರ-ನರ-ಮುನಿಗಳು ಕೂಡ ವಿಷಯಗಳಿಂದ ಬದ್ಧರಾಗಿರುವರು. ನಾನಂತು ಹೇಳಕೇಳಿ ಕಪಿಯು, ಪಾಮರನು, ಪಶುವು ಅಂತೇ ಅತ್ಯಂತ ಕಾಮಿಯಾಗಿರುವೆನು. ಸ್ತ್ರೀಯ ನೇತ್ರಕಟಾಕ್ಷರೂಪ ಬಾಣಗಳು ಯಾವನನ್ನು ಬಂಧಿಸುವದಿಲ್ಲವೋ, ಕ್ರೋಧವೆಂಬ ಘೋರ ಅಂಧಃಕಾರಯುಕ್ತ ರಾತ್ರಿಯಲ್ಲಿ ಯಾವನು ಜಾಗ್ರತನಾಗಿರುವನೋ, ಲೋಭದ ಪಾಶದಲ್ಲಿ

ಯಾವನ ಕುಕ್ಷಿಗೆಯು ತೊಡಕಿರುವದಿಲ್ಲವೊ, ಆ ಮನುಷ್ಯನು, ಎಲೈ ರಘುನಾಥನೆ, ಕೇವಲ ನಿನಗೆ ಸಮಾನನೇ ಆಗಿರುವನು. ಸಾಧನಗಳ ದ್ವಾರದಿಂದ ಸಾಧ್ಯವಾಗು ವಂಥವು ಈ ಗುಣಗಳಲ್ಲವು. ಅವು ನಿನ್ನ ಕೃಪೆಯಿಂದಲೇ ಕೆಲ ಕೆಲವರಿಗೆ ಪ್ರಾಪ್ತ ವಾಗುವವು.

ಸುಗ್ರೀವನ ಈ ಮಾತುಗಳನ್ನು ಕೇಳಿ ಶ್ರೀರಾಮನು ನಕ್ಕು ಆತನನ್ನು ಕುರಿತು—"ಎಲೈ ಬಂಧುವೇ, ನನ್ನ ಭರತನಂತೆ ನೀನು ನನಗೆ ಪ್ರಿಯನಾಗಿರುತ್ತೀ. ಇನ್ನು ನೀನು ಸೀತೆಯು ಶೋಧವಾಗುವಂತೆ ಮನಃಪೂರ್ವಕವಾಗಿ ಯತ್ನಿಸು,, ಎಂದು ಹೇಳಿದನು. ಈ ವೇಳೆಗೆ ವಾನರಗಳು ನಡೆದಿರುವಾಗ ಯಾವತ್ತು ದಿಕ್ಕುಗಳಿಂದ ನಾನಾವರ್ಣದ ವಾನರ ಸಮೂಹವು ಬರತೊಡಗಿತು. ಆ ವಾನರ ಸೈನ್ಯದ ಲೆಕ್ಕಮಾಡ ಹೋಗುವವನು ಮೂರ್ಖನೇ ಸರಿ. ಬಳಿಕ ಯಾವತ್ತು ವಾನರರು ರಾಮನ ಚರಣಗಳಿಗೆರಗಿ, ರಾಮರೂಪ ವನ್ನು ನೋಡಿ ಎಲ್ಲರೂ ಸನಾಥರಾದರು. ಶ್ರೀರಾಮನು ಕುಶಲಪ್ರಶ್ನೆಮಾಡದ ಒಬ್ಬ ಕಪಿಯಾದರೂ ವಾನರಸೈನ್ಯದಲ್ಲಿ ಉಳಿಯಲಿಲ್ಲ. ರಘುರಾಯನು ವಿಶ್ವರೂಪನೂ, ವ್ಯಾಪಕನೂ ಆದದ್ದರಿಂದ ಹೀಗೆ ಎಲ್ಲರನ್ನು ಕಂಡದ್ದರಲ್ಲಿ ವಿಶೇಷವೇನೂ ಇಲ್ಲ. ಅಷ್ಟ ರೊಳಗೆ ಯಾವತ್ತು ಕಪಿಗಳು ಅಲ್ಲಲ್ಲಿ ನಿಂತುಕೊಂಡರು ಆಗ ಸುಗ್ರೀವನು ಎಲ್ಲರನ್ನು ಕುರಿತು ವಿಸ್ತಾರದಿಂದ—ಎಲೈ ವಾನರ ಗಣವೇ, ರಾಮನಕಾರ್ಯವೂ, ನನ್ನ ಮೇಲೆ ಉಪಕಾರವೂ ಎಂದು ತಿಳಿದು ನೀವು ನಾಲ್ಕೂದಿಕ್ಕುಗಳಿಗೆ ಹೋಗಿರಿ. ಒಂದು ತಿಂಗಳಲ್ಲಿ ಸೀತೆಯ ಶೋಧವನ್ನು ಮಾಡಿಕೊಂಡು ಬರಲೇಬೇಕು. ಈ ಅವಧಿಯು ಮುಗಿದ ಬಳಿಕ, ಅಥವಾ ಶೋಧಮಾಡದೆ ಯಾರಾದರೂ ತಿರುಗಿಬಂದಾಗ ಅವರನ್ನು ನನ್ನ ಕೈಮುಟ್ಟಿ ಸಂಹರಿಸುವೆನು, ಎಂದು ಆಜ್ಞಾಪಿಸಿದನು. ಅದನ್ನು ಕೇಳಿದಕೂಡಲೆ ಯಾವತ್ತು ವಾನರರು ನಾಲ್ಕೂಕಡೆಗೆ ಹೊರಟರು. ಬಳಿಕ ಸುಗ್ರೀವನು ಅಂಗದ, ನಲ, ಹನು ಮಂತರನ್ನು ಕುರಿತು—ಎಲೈ ನೀಲ, ಅಂಗದ, ಮಾರುತಿ, ಜಾಂಬುವಂತರೇ, ಕೇಳಿರಿ. ನೀವು ಸುಜ್ಞರೂ, ಧೈರ್ಯಶಾಲಿಗಳೂ ಇರುವಿರಿ. ನೀವೆಲ್ಲ ವೀರರು ಕೂಡಿ ದಕ್ಷಿಣ ದಿಕ್ಕಿನ ಕಡೆಗೆ ಹೋಗಿರಿ; ಕಣ್ಣಿಗೆ ಬಿದ್ದವರನ್ನು ಸೀತೆಯ ವಿಷಯವಾಗಿ ಕೇಳಿರಿ. ನೀವು ದೇಹದಿಂದ, ವಾಣಿಯಿಂದ, ಮನಸ್ಸಿನಿಂದ ವಿಚಾರಪೂರ್ವಕ ಯತ್ನ ಮಾಡಿ ಶ್ರೀರಾಮ ಚಂದ್ರನ ಕಾರ್ಯವನ್ನು ಕೊನೆಗಾಣಿಸಿರಿ. ಯಾಕಂದರೆ ಬೆನ್ನ ಕಡೆಯಿಂದ ಸೂರ್ಯ ನನ್ನು, ಹೊಟ್ಟೆಯಕಡೆಯಿಂದ ಅಗ್ನಿಯನ್ನು, ಯಾವತ್ತು ಕಪಟವನ್ನು ಪರಿತ್ಯಜಿಸಿ ಸ್ವಾಮಿ ಯನ್ನು ಸೇವಿಸಬೇಕಾಗುವದು. ಮಾಯೆಯನ್ನು ಪರಿತ್ಯಜಿಸಿ ಸಂಸಾರದಲ್ಲಿ ಉತ್ಪನ್ನ ವಾಗುವ ಯಾವತ್ತು ದುಃಖಗಳು ನಾಶವಾಗುವಂತೆ, ಪರಲೋಕದ ಸೇವನ ಮಾಡಬೇ ಕಾಗುವದು. ಬಂಧುಗಳೇ, ನಿಷ್ಕಾಮದಿಂದ ರಾಮನಲ್ಲಿ ಭಕ್ತಿಯಿಡುವದೇ ದೇಹಧಾರಣ ಮಾಡಿದ್ದರ ಸಾಫಲ್ಯವು. ರಘುವೀರಚರಣದಲ್ಲಿ ಅನುರಕ್ತನಾಗಿರುವವನೇ ನಿಜವಾದ ಗುಣಜ್ಞನು, ಅವನೇ ಭಾಗ್ಯಶಾಲಿಯು ಎಂದು ತಿಳಿಯಿರಿ, ಎಂದು ಬೋಧಿಸಿದನು.

ಸುಗ್ರೀವನ ಈ ಬೋಧವನ್ನು ಕೇಳಿ ಆ ನಲ-ನೀಲಾದಿಗಳು ಸುಗ್ರೀವನ ಅಪ್ಪ ಣೆಪಡೆದು ರಾಮನ ಚರಣಗಳಲ್ಲಿ ಮಸ್ತಕವಿಟ್ಟು ಆನಂದದಿಂದ ರಘುವೀರನ ಸ್ಮರಣಮಾ ಡುತ್ತ ಹೊರಟರು. ಎಲ್ಲರ ಹಿಂದಿನಿಂದ ಮಾರುತಿಯು ಪ್ರಭುವನ್ನು ನಮಸ್ಕರಿಸಿದನು. ಆಗ ಕಾರ್ಯವರಿತು ಶ್ರೀರಾಮನು ಆತನನ್ನು ಹತ್ತರಕರೆದು ತನ್ನ ಹಸ್ತಕಮಲದಿಂದ ಆತನ ಮಸ್ತಕವನ್ನು ಸ್ಪರ್ಶಮಾಡಿ, ತನ್ನ ದಾಸನೆಂದು ತಿಳಿದು ಆತನ ಕೈಯಲ್ಲಿ ತನ್ನ ಬೆರಳೊಳಗಿನ ಉಂಗರವನ್ನು ಕೊಟ್ಟನು. ಬಳಿಕ ರಘುವೀರನು ಮಾರುತಿಗೆ— ನೀನು ಹೋಗಿ ಸೀತೆಗೆ ಹಲವುಬಗೆಯಿಂದ ಸಮಾಧಾನಹೇಳು. ಆಕೆಗೆ ನನ್ನ ಪರಾಕ್ರಮವನೂ ವಿರಹಾವಸ್ಥೆಯನ್ನೂ ಹೇಳಿ ಬೇಗನೆ ಬಾ, ಎಂದು ಹೇಳಿದನು. ಮಾರುತಿಗೆ ತನ್ನಜನ್ಮವು ಸಫಲವಾದಂತೆ ತೋರಿತು. ಆತನು ಹೃದಯದಲ್ಲಿ ರಾಮನನ್ನು ಧ್ಯಾನಿಸುತ್ತ ಹೊರ ಟನು. ದೇವತೆಗಳನ್ನು ರಕ್ಷಿಸುವಪ್ರಭುವು ಎಲ್ಲವನ್ನು ಅರಿತವನಾಗಿದ್ದರೂ, ಆತನು ರಾಜನೀತಿಯನ್ನು ಪಾಲಿಸುತ್ತಿದ್ದನು. ಇತ್ತ ಯಾವತ್ತು ವಾನರರು ವನಗಳಲ್ಲಿಯೂ,ನದಿಗ ಳಲ್ಲಿಯೂ, ಸರೋವರಗಳಲ್ಲಿಯೂ, ಪರ್ವತಗಳಲ್ಲಿಯೂ, ಕಂದರಗಳಲ್ಲಿಯೂ, ಬೇರೆಸ್ಥಳ ಗಳಲ್ಲಿಯೂ ಸೀತೆಯನ್ನು ಹುಡುಕುತ್ತ ಹೊರಟರು. ಶ್ರೀರಾಮಕಾರ್ಯದಲ್ಲಿ ಅವರಮನಸ್ಸು ತಲ್ಲೀನವಾದದ್ದರಿಂದ, ಅವರಿಗೆ ದೇಹದಸ್ಮೃತಿಯು ಉಳಿಯಲಿಲ್ಲ. ಎಲ್ಲಿಯಾದರೂ ರಾಕ್ಷಸರು ಕಂಡರೆ ಅವರಿಗೊಂದೊಂದು ತಪರಾಕಿಕೊಟ್ಟು ಅವರ ಪ್ರಾಣಹರಣಮಾಡು ತ್ತಿದ್ದರು. ಒಬ್ಬಾನೊಬ್ಬ ಮುನಿಯನ್ನು ಕಂಡರೆ ಅವನಸುತ್ತು ಎಲ್ಲರೂ ನೆರೆಯುತ್ತಿ ದ್ದರು. ಹೀಗೆ ಪರ್ವತಅರಣ್ಯಗಳನ್ನು ತಿರುಗಿ ಹುಡುಕುತ್ತಿರಲು, ಅವರಿಗೆ ನೀರಡಿಕೆ ಯಾಗಿ ಅವರು ಅತ್ಯಂತವ್ಯಾಕುಲರಾದರು; ಆದರೆ ಅವರಿಗೆ ಎಲ್ಲಿಯೂ ನೀರು ಸಿಗಲೊ ಲ್ಲವು. ಅವರು ದಟ್ಟವಾದಅರಣ್ಯದಲ್ಲಿ ಹಾದಿಯನ್ನು ತಪ್ಪಿದರು. ಆಗ ಮಾರುತಿಯು ನೀರಿಲ್ಲದೆ ಎಲ್ಲರಪ್ರಾಣಗಳು ಹಾರುತ್ತಿರುವದನ್ನು ಕಂಡು, ಒಂದು ಪರ್ವತಶಿಖರವನ್ನೇರಿ ನಾಲ್ಕೂಕಡೆಗೂ ನೋಡಹತ್ತಿದನು. ಆಗ ಆತನಿಗೊಂದು ಭೂಮಿಯೊಳಗಿನ ವಿವ ರವು ಕಂಡು ಅದರಲ್ಲಿ ಚಕ್ರವಾಕ, ಬಕ, ಹಂಸ ಮೊದಲಾದ ಅನೇಕ ಪಕ್ಷಿಗಳು ಪ್ರವೇಶಿ ಸುತ್ತಿದ್ದವು. ಬಳಿಕ ಮಾರುತಿಯು ಪರ್ವತಶಿಖರದಿಂದ ಇಳಿದು ಬಂದು ಅವರೆಲ್ಲರನ್ನು ಆಸ್ಥಳಕ್ಕೆ ಕರಕೊಂಡು ಹೋಗಿ, ಆ ವಿವರವನ್ನು ಅವರಿಗೆ ತೋರಿಸಿದನು.

ಆಗ ಎಲ್ಲವಾನರರು ಮಾರುತಿಯನ್ನು ಮುಂದೆ ಮಾಡಿಕೊಂಡು ಆ ವಿವರವನ್ನು ಪ್ರವೇಶಿಸಿದರು. ಅಲ್ಲಿ ಒಂದು ಸುಂದರವಾದ ಉಪವನವಿದ್ದು, ಅದರೊಳಗಿನ ಸುಂದರ ಸರೋವರದಲ್ಲಿ ಅನೇಕ ಹೂಗಳು ಅರಳಿದ್ದವು. ಆ ಸ್ಥಳದಲ್ಲಿ ಒಂದು ರಮಣೀಯ ಮಂದಿರದಲ್ಲಿ ಒಬ್ಬ ಮಹಾತಪಸ್ವಿನಿಯಾದ ಸ್ತ್ರೀಯು ಕುಳಿತುಕೊಂಡಿದ್ದಳು. ಎಲ್ಲರೂ ಆಕೆಗೆ ದೂರದಿಂದಲೇ ನಮಸ್ಕಾರಮಾಡಿದರು. ಆಕೆಯು ಕೇಳಿದದ್ದರಿಂದ ಅವರು ಆಕೆಗೆ ಎಲ್ಲವೃತ್ತಾಂತವನ್ನು ಹೇಳಿದರು. ಆಮೇಲೆ ಆಕೆಯು ಅವರಿಗೆ ಜಲಪಾನಮಾಡಲಿಕ್ಕೂ

ರುಚಿಕರವಾದ ಹಣ್ಣುಗಳನ್ನು ತಿನ್ನಲಿಕ್ಕೂ ಅಪ್ಪಣೆಕೊಟ್ಟಳು. ಆದರಂತೆ ಎಲ್ಲವಾನರರು ಸ್ನಾನಮಾಡಿ ಮಧುರಫಲಗಳನ್ನು ತಿಂದು ಎಲ್ಲರೂ ಆಕೆಯ ಬಳಿಯಲ್ಲಿ ಬಂದು ಕುಳಿತುಕೊಂಡರು. ಬಳಿಕ ಆ ತಪಸ್ವಿನಿಯು ವಾನರರನ್ನು ಕುರಿತು—ಎಲೈ ವಾನರರೇ, ಈ ವಿವರವನ್ನು ಮಯನೆಂಬಹೆಸರಿನ ದೈತ್ಯನು ನಿರ್ಮಿಸಿರುವನು. ಆತನ ಮಗನಾದ ಮಾಯಾವಿಯೆಂಬುವನು ಹೇಮೆಯೆಂಬ ಅಪ್ಸರೆಯಲ್ಲಿ ಆಸಕ್ತನಾದದ್ದರಿಂದ ಮಯನು ಹೇಮೆಗೆ ಈ ವಿವರವನ್ನು ಕೊಟ್ಟನು. ನಾನು ಆ ಹೇಮೆಯ ಸಖಿಯು. ಇನ್ನು ನಾನು ರಾಮನ ಬಳಿಗೆ ಹೋಗುವೆನು. ನೀವು ಎಲ್ಲರೂ ಕಣ್ಣುಮುಚ್ಚಿದರೆ ಈ ವಿವರದಿಂದ ಹೊರಬೀಳುವಿರಿ. ನೀವು ಶೋಕಿಸಬೇಡಿರಿ. ನಿಮಗೆ ಸೀತೆಯಗೊತ್ತು ಹತ್ತುವದು. ಎಂದು ಹೇಳಲು, ವಾನರರು ಕಣ್ಣುಮುಚ್ಚಿ ಕಣ್ಣುತೆರೆದುನೋಡಿದಾಗ ಎಲ್ಲರೂ ಸಮುದ್ರದದಂಡೆಯಲ್ಲಿದ್ದರು. ಇತ್ತ ಆ ತಪಸ್ವಿನಿಯು ಶ್ರೀರಾಮನ ಬಳಿಗೆ ಹೋಗಿ ಆತನ ಚರಣಗಳಿಗೆ ನಮಿಸಿ ಹಲವು ಬಗೆಯಿಂದ ಆತನನ್ನು ಸ್ತುತಿಸಿದಳು. ಆಗ ಪ್ರಭುವು ಆಕೆಗೆ, ಅನಪಾಯಿನೀಭಕ್ತಿಯನ್ನು ಕೊಟ್ಟನು. ಬಳಿಕ ಆತಪಸ್ವಿನಿಯು ಪ್ರಭುವಿನ ಚರಣಕಮಲಗಳನ್ನು ಹೃದಯದಲ್ಲಿ ಧರಿಸಿ ಬದರಿಕಾಶ್ರಮಕ್ಕೆ ಹೊರಟುಹೋದಳು. ಇತ್ತ ಕಪಿಗಳೆಲ್ಲರೂ ಸಮುದ್ರತೀರದಲ್ಲಿ ಕುಳಿತು ವಿಚಾರಮಾಡತೊಡಗಿ, ಅವಧಿಯುಮುಗಿಯುತ್ತಬಂದಿದ್ದು ಸೀತೆಯಶೋಧವಾಗದ್ದರಿಂದ ಇನ್ನೇನುಮಾಡಬೇಕೆಂದು ಚಿಂತಿಸತೊಡಗಿದರು. ಅಂಗದನನೇತ್ರಗಳು ಅಶ್ರುಪೂರ್ಣವಾದವು. ಆತನು ಕಪಿಗಳನ್ನು ಕುರಿತು—ವಾನರಶ್ರೇಷ್ಠರೇ, ಇನ್ನು ನನಗೆ ಮರಣವು ಸಿದ್ಧವಾಗಿರುವದು. ಸೀತೆಯಶೋಧವಾಗದೆ ನಾನು ಹಾಗೇಹೊದರೆ ಸುಗ್ರೀವನು ತಪ್ಪದೆ ನನ್ನನ್ನು ಕೊಲ್ಲುವನು. ತಂದೆಯವಧೆಯಾದಬಳಿಕ ಸುಗ್ರೀವನು ನನ್ನನ್ನು ನಿಶ್ಚಯವಾಗಿ ಕೊಲ್ಲುತ್ತಿದ್ದನು; ಆದರೆ ಆಗ ರಾಮನು ನನ್ನ ಸಂರಕ್ಷಣಮಾಡಿದ್ದರಿಂದ ನನ್ನಮೇಲೆ ಅವನ ಅನುಗ್ರಹ ಉಪಕಾರವಾಗಿರುವದು, ಎಂದು ಹೇಳಿ, ಆತನು ಪುನಃ ಪುನಃ ವಾನರರ ಮುಂದೆ—"ಇನ್ನು ನಾನು ನಿಃಸಂಶಯವಾಗಿ ಮರಣಹೊಂದುವೆನು. "ಎಂದು ಅನ್ನಹತ್ತಿದನು.

ಅಂಗದನ ಈ ಮಾತುಗಳನ್ನು ಕೇಳಿದಕೂಡಲೆ ವಾನರವೀರರ ಕಣ್ಣುಗಳೊಳಗಿಂದ ಅಶ್ರುಗಳು ಸುರಿಯ ಹತ್ತಿದವು. ಅವರ ಮುಖದಿಂದ ಶಬ್ದಗಳು ಹೊರಡದಾದವು. ಕ್ಷಣಮಾತ್ರ ಅವರು ಹೀಗೆ ಶೋಕನಿಮಗ್ನರಾಗಿ ಅಂಗದನನ್ನು ಕುರಿತು—ಚತುರ ಯುವರಾಜನೇ, ಸೀತೆಯ ಗೊತ್ತುಹಚ್ಚದೆ ನಾವು ತಿರುಗಿ ಹೋಗುವದಿಲ್ಲ, ಎಂದು ಹೇಳಿ, ಸಮುದ್ರದ ದಂಡೆಯಲ್ಲಿ ಅವರೆಲ್ಲರೂ ದರ್ಭವನ್ನು ಹಾಸಿಕೊಂಡು ಕುಳಿತರು. ಅಂಗದನದುಃಖವನ್ನು ನೋಡಿ ಜಾಂಬುವಂತನು—ಎಲೈ ತಾತನೇ, ರಾಮಚಂದ್ರನನ್ನು ಮನುಷ್ಯನೆಂದು ತಿಳಿಯಬೇಡ. ಆತನನ್ನು ನಿರ್ಗುಣ ಬ್ರಹ್ಮನೆಂತಲೂ, ಅಜಿಂಕ್ಯನೆಂತಲೂ, ಜನ್ಮರಹಿತನೆಂತಲೂ ತಿಳಿ. ನಾವು ಯಾವಾಗಲೂ ಸಗುಣ ಬ್ರಹ್ಮ

ರಾಮಚಂದ್ರನಲ್ಲಿ ಅನುರಕ್ತರಾಗಿದ್ದು, ಆತನ ಸೇವಕರಾಗಿರುವದು ನಮ್ಮ ಮಹದ್ಭಾಗ್ಯವಾಗಿರುವದು. ದೇವತೆಗಳು, ಬ್ರಾಹ್ಮಣರು, ಪೃಥ್ವೀ, ಆಕಳುಗಳು ಇವುಗಳ ಉದ್ಧಾರಕ್ಕಾಗಿ ಪ್ರಭುವು ಸ್ವೇಚ್ಛೆಯಿಂದ ಅವತರಿಸಿರುವನು. ನಮ್ಮಂಥ ಸಗುಣಬ್ರಹ್ಮೋಪಾಸಕರು ಮೋಕ್ಷಸುಖವನ್ನು ತ್ಯಜಿಸಿ ಆ ಸಗುಣಬ್ರಹ್ಮನಾದ ರಾಮನಲ್ಲಿ ಪ್ರೀತರಾಗಿರಬೇಕಾಗುವದು. ಎಂದು ಉಪದೇಶಿಸುತ್ತಿರಲು, ಅಲ್ಲಿಯೇ ಪರ್ವತದ ಗುಹೆಯಲ್ಲಿದ್ದ ಸಂಪಾತಿಯೆಂಬವನು ಅದನ್ನು ಕೇಳಿ ಹೊರಗೆ ಬಂದು ಆ ವಾನರರನ್ನೆಲ್ಲ ನೋಡಿ—"ಈಶ್ವರನು ನನ್ನ ಖಾದ್ಯಗಳನ್ನು ಕಳಿಸಿರುವನು. ಇಂದು ಇವರೆಲ್ಲರನ್ನು ನಾನು ಭಕ್ಷಿಸುವೆನು. ಬಹುದಿವಸಗಳಿಂದ ಆಹಾರವಿಲ್ಲದೆ ನಾನು ಸಾಯುತ್ತಿರುವೆನು. ಈವೊತ್ತಿನವರೆಗೆ ಎಂದೂ ನನಗೆ ಹೊಟ್ಟೆತುಂಬ ಆಹಾರವು ದೊರೆತಿರುವದಿಲ್ಲ. ಅಂತೆ ಬ್ರಹ್ಮದೇವನು ಇಂದು ಒಮ್ಮೆಲೆ ಎಲ್ಲ ಆಹಾರವನ್ನು ಒದಗಿಸಿಕೊಟ್ಟಿರುವನು, ಎಂದನು. ಗೃಧ್ರನ ಈ ಮಾತುಗಳನ್ನು ಕೇಳಿ ಆ ವಾನರರೆಲ್ಲರೂ ಭಯಭೀತರಾಗಿ—ಇನ್ನು ಸಾಕ್ಷಾತ್ತಮ್ಮ ಮರಣವು ನಿಶ್ಚಯವಾಗಿ ಒದಗಿ ಬಂದಿತು, ಎಂದು ಅಂದುಕೊಂಡು ಸಂಪಾತಿಯನ್ನು ನೋಡಿ ಎಲ್ಲರೂ ಎದ್ದು ನಿಂತರು. ಜಾಂಬುವಂತನು ಮನಸ್ಸಿನಲ್ಲಿ ಅತ್ಯಂತ ಚಿಂತಾತುರನಾದನು. ಆಗ ಅಂಗದನು ಮನಸ್ಸಿನಲ್ಲಿ ವಿಚಾರಮಾಡಿ—"ಜಟಾಯುವಿನಂಥ ಧನ್ಯನು ಯಾವನೂ ಇರುವದಿಲ್ಲ. ರಾಮಕಾರ್ಯಕ್ಕೆ ದೇಹವನ್ನು ಅರ್ಪಿಸಿ ಆ ಭಾಗ್ಯವಂತನು ವೈಕುಂಠಕ್ಕೆ ತೆರಳಿದನು," ಎಂದನು.

ಅಂಗದನು ಆಡಿದ ಈ ಹರ್ಷ-ಶೋಕಾನ್ವಿತವಾದ ಮಾತುಗಳನ್ನು ಕೇಳಿ ಸಂಪಾತಿಯು ವಾನರರ ಬಳಿಗೆ ಬಂದನು; ಆಗ ವಾನರರು ಭಯಭೀತರಾದರು; ಆದರೆ ಸಂಪಾತಿಯು ಅವರಿಗೆ ಅಭಯವನ್ನಿತ್ತು ಅವರಬಳಿಗೆ ಹೋಗಿ ವೃತ್ತಾಂತವನ್ನು ಕೇಳಲು, ವಾನರರೂ ಆತನಿಗೆ ಜಟಾಯುವಿನ ಎಲ್ಲ ಸುದ್ದಿಯನ್ನು ಹೇಳಿದರು. ಬಂಧುವಿನ ಕೃತಿಯನ್ನು ಕೇಳಿ ಸಂಪಾತಿಯು ರಾಮನ ಮಾಹಾತ್ಮ್ಯವನ್ನು ಹಲವು ಬಗೆಯಾಗಿ ವರ್ಣಿಸಿದನು. ಆತನು ವಾನರರಿಗೆ—ನೀವು ನನ್ನನ್ನು ಸಮುದ್ರತೀರಕ್ಕೆ ಕರಕೊಂಡು ಹೋಗಿರಿ. ನಾನು ನನ್ನ ತಮ್ಮನಿಗೆ ತಿಲಾಂಜಲಿಯನ್ನು ಕೊಟ್ಟು ನಿಮಗೆ ಎಲ್ಲ ವೃತ್ತಾಂತವನ್ನು ಹೇಳಿ ಸಹಾಯಮಾಡುವೆನು. ಆಮೇಲೆ ಸೀತೆಯನ್ನು ಹುಡುಕಲಿಕ್ಕೆ ಹೋದರೆ ಆಕೆಯು ನಿಮಗೆ ಸಿಗುವಳು, ಎಂದು ಹೇಳಿದನು. ಸಾಗರತೀರದಲ್ಲಿ ತಮ್ಮನ ಕ್ರಿಯೆಯನ್ನು ಮಾಡಿದಬಳಿಕ ಆತನು ತನ್ನ ವೃತ್ತಾಂತವನ್ನು ಹೇಳುವದಕ್ಕಾಗಿ ವಾನರರನ್ನು ಕುರಿತು—ಎಲೈ ವಾನರವೀರರೇ ಕೇಳಿರಿ. ಜಟಾಯುವೂ ನಾನೂ ಅಣ್ಣತಮ್ಮಂದಿರಾಗಿದ್ದು, ನಡುಪ್ರಾಯದಲ್ಲಿ ಸೂರ್ಯನಬಳಿಯಲ್ಲಿ ಹೋಗಲಿಕ್ಕೆ ನಾವು ಆಕಾಶದಲ್ಲಿ ಹಾರಿದೆವು; ಆದರೆ ಸೂರ್ಯತೇಜವು ಸಹನವಾಗದ್ದರಿಂದ ಜಟಾಯುವು ಹಿಂದಿರುಗಿದನು. ನಾನು ಮಾತ್ರ ಅಭಿಮಾನಕ್ಕೆ ಬಿದ್ದು ಸೂರ್ಯನಬಳಿಗೆ ಹೋದೆನು. ಆಗ ಸೂರ್ಯನ

ಅಪಾರವಾದ ತೇಜಸ್ಸಿನಿಂದ ನನ್ನ ರೆಕ್ಕೆಗಳು ಸುಟ್ಟು, ನಾನು ಭಯಂಕರವಾಗಿ ಚೀತ್ಕಾರಮಾಡುತ್ತ ಭೂಮಿಯಮೇಲೆ ಬಿದ್ದೆನು. ಅಲ್ಲಿ ಚಂದ್ರಮಾ ಎಂಬ ಹೆಸರಿನ ಮುನಿಯೊಬ್ಬ ಇದ್ದನು. ನಾನು ಹೀಗೆ ಬಿದ್ದದ್ದನ್ನು ನೋಡಿ ಆತನಿಗೆ ದಯೆಯು ಉತ್ಪನ್ನವಾಯಿತು. ಆತನು ನನಗೆ ಹಲವುಪ್ರಕಾರದ ಜ್ಞಾನೋಪದೇಶಮಾಡಿ ನನ್ನದೇಹಜನಿತ ಅಭಿಮಾನವನ್ನು ನಷ್ಟಗೊಳಿಸಿದನು. ಆತನು ನನ್ನನ್ನು ಕುರಿತು—ಮುಂದೆ ತ್ರೇತಾಯುಗದಲ್ಲಿ ನಿರ್ಗುಣ ಬ್ರಹ್ಮನು ಮಾನವರೂಪದಿಂದ ಅವತರಿಸಿದಾಗ ರಾಕ್ಷಸಾಧಿಪತಿಯು ಆತನ ಸ್ತ್ರೀಯನ್ನು ಹರಣಮಾಡುವನು. ಪ್ರಭುವು ಹೆಂಡತಿಯ ಶೋಧಕ್ಕಾಗಿ ದೂತರನ್ನು ಕಳಿಸಲು, ಆ ದೂತರ ಹಾಗು ನಿನ್ನ ಗಂಟುಬಿದ್ದಾಗ ನೀನು ಪುನೀತನಾಗುವೆ. ನೀನು ಚಿಂತಿಸಬೇಡ. ಆಗ ನಿನಗೆ ಪುನಃ ರೆಕ್ಕೆಗಳು ಒಡೆಯುವವು. ನೀನು ಆ ದೂತರಿಗೆ ಸೀತೆಯ ವರ್ತಮಾನವನ್ನು ಹೇಳಿಂದರಾಯಿತು" ಎಂದು ಹೇಳಿದನು. ಆ ಮುನಿಯ ಮಾತು ಇಂದು ನನ್ನ ಅನುಭವಕ್ಕೆ ಬಂದಿತು. ಇನ್ನು ನನ್ನ ಮಾತುಗಳನ್ನು ಕೇಳಿ ಪ್ರಭುಕಾರ್ಯದಲ್ಲಿ ಉದ್ಯುಕ್ತರಾಗಿರಿ. ತ್ರಿಕೂಟಪರ್ವತದ ಶಿಖರದಮೇಲೆ ಲಂಕಾಪಟ್ಟಣವಿರುವದು. ಅಲ್ಲಿ ರಾವಣನೆಂಬುವವನು ಸ್ವಾಭಾವಿಕವಾಗಿಯೇ ನಿಶ್ಶಂಕೆಯಿಂದ ವಾಸಿಸುವನು. ಅಲ್ಲಿ ಅಶೋಕವನದಲ್ಲಿ ಸೀತೆಯು ಶೋಕಮಾಡುತ್ತ ಕುಳಿತಿರುವಳು. ನಿಮಗೆ ಆಕೆಯು ಕಾಣದಿದ್ದರೂ ನನಗೆ ಇಲ್ಲಿಂದ ಕಾಣುತ್ತಿರುವಳು; ಯಾಕೆಂದರೆ ಹಾಳಿಯಹದ್ದುಗಳಿಗೆ ಅಪಾರವಾದ ದೃಷ್ಟಿಯು ಇರುತ್ತದೆ. ನಾನು ಮುದುಕನಾಗಿರುವೆನು, ಇಲ್ಲದಿದ್ದರೆ ನಿಮಗೆ ಕಿಂಚಿತ್ ಸಹಾಯಮಾಡುತ್ತಿದ್ದೆನು. ಯಾವನು ನೂರುಯೋಜನ ಸಮುದ್ರವನ್ನು ಹಾರಿಹೋಗುವನೋ ಆ ಬುದ್ಧಿನಿಧಾನನೇ ರಾಮಕಾರ್ಯವನ್ನು ಕೊನೆಗಾಣಿಸುವನು. ನನ್ನನ್ನು ನೋಡಿ ಮನಸ್ಸಿನಲ್ಲಿ ಧೈರ್ಯತಾಳಿರಿ. ನನ್ನ ಶರೀರವೇ ರಾಮಕೃಪೆಯಿಂದ ಈಗ ಹೇಗಾಗಿರುವದೆಂಬುದನ್ನು ನೋಡಿರಿ. ಯಾವನ ನಾಮಸ್ಮರಣದಿಂದ ಪಾಪಿಯಾದವರೂ ಅತ್ಯಂತ ಅಪಾರವಾದ ಭವಸಾಗರವನ್ನು ದಾಟಿಹೋಗುವರೋ ಆತನ ದೂತರು ನೀವು ಇರುತ್ತೀರಿ. ನೀವು ಅಂಜುಬುರುಕತನವನ್ನು ಬಿಟ್ಟುಬಿಡಿರಿ. ರಾಮನನ್ನು ಹೃದಯದಲ್ಲಿ ಧರಿಸಿ ಪ್ರಯತ್ನ ಮಾಡಿರಿ.

ಎಲೈ ಪಾರ್ವತಿಯೇ, ಈ ಮೇರೆಗೆ ನುಡಿದು ಸಂಪಾತಿಯು ಹಾರಿಹೋದಾಗ ಎಲ್ಲ ವಾನರರು ಆಶ್ಚರ್ಯಪಟ್ಟರು. ಅವರೆಲ್ಲರು ತಮ್ಮ ತಮ್ಮ ಸಾಮರ್ಥ್ಯವನ್ನು ಹೇಳಹತ್ತಿದರು; ಆದರೆ ಸಮುದ್ರವನ್ನು ಹಾರಿಹೋಗುವ ವಿಷಯದಲ್ಲಿ ಮಾತ್ರ ಅವರಿಗೆ ಸಂಶಯವುಂಟಾಯಿತು. ಆಗ ಜಾಂಬುವಂತನು ಕಪಿಗಳನ್ನು ಕುರಿತು—ನಾನು ಈಗ ಮುದುಕನಾಗಿರುವೆನು. ನನ್ನ ಮೊದಲಿನ ಶರೀರಬಲದ ಲವಲೇಶವಾದರೂ ಈಗ ಉಳಿದಿರುವದಿಲ್ಲ. ಪ್ರಭುವು ವಾಮನಾವತಾರವನ್ನು ತಾಳಿದಾಗ ನಾನು ಬಹಳ ತರುಣನಾಗಿದ್ದೆ

ಅತ್ಯಂತ ಬಲಾಢ್ಯನಿದ್ದನು. ಬಲಿಯನ್ನು ಕಟ್ಟುವಾಗ ಪ್ರಭುವು ಬೆಳೆಯಹತ್ತಿದನು. ಪ್ರಭುವಿನ ಆಗಿನ ದೇಹವನ್ನು ವರ್ಣಿಸುವದು ಶಕ್ಯವಲ್ಲ; ಆದರೆ ಆತನಿಗೂ ನಾನು ಓಡುತ್ತ ಹೋಗಿ ಎರಡುಗಳಿಗೆಗಳಲ್ಲಿ ಏಳು ಪ್ರದಕ್ಷಿಣೆಗಳನ್ನು ಹಾಕಿದೆನು. ಎಂದು ಹೇಳಿದನು. ಆಗ ಅಂಗದನು—ನಾನು ಸಮುದ್ರವನ್ನು ದಾಟಿಹೋಗುವೆನು; ಆದರೆ ತಿರುಗಿಬರುವದಕ್ಕೆ ಮಾತ್ರ ಮನಸ್ಸಿಗೆ ಸಂಶಯವಾಗಿ ತೋರುತ್ತದೆ, ಅನ್ನಲು, ಜಾಂಬುವಂತನು—ನೀನು ಎಲ್ಲಬಗೆಯಿಂದಲೂ ಯೋಗ್ಯನಿರುತ್ತೀ; ಆದರೆ ನೀನು ಎಲ್ಲರ ಮುಖ್ಯನಾದದ್ದರಿಂದ ನಿನ್ನನ್ನು ನಾವು ಹೇಗೆ ಕಳಿಸೋಣ? ಎಂದು ನುಡಿದು, ಮಾರುತಿಯನ್ನು ಕುರಿತು— ಎಲೈ ಮಾರುತಿಯೇ, ಕೇಳು. ನೀನು ಬಲಿಷ್ಠನಾಗಿದ್ದು ಸುಮ್ಮನೆ ಯಾಕೆ ಕುಳಿತಿರುವೆ? ನಿನ್ನ ಬಲವು ವಾಯುವಿನ ಬಲದಂತೆ ಇದ್ದು, ನೀನು ಬುದ್ಧಿ, ವಿವೇಕ, ಜ್ಞಾನಗಳ ನಿಧಿಯಾಗಿರುವೆ. ಎಲೈ ತಾತನೇ, ಜಗತ್ತಿನಲ್ಲಿ ನಿನ್ನಿಂದಲೂ ಆಗದೆ ಯಿದ್ದಂಥ ಕಠಿಣಕಾರ್ಯವು ಯಾವದಿರುವದು? ರಾಮಕಾರ್ಯಕ್ಕಾಗಿಯೇ ನಿನ್ನ ಅವತಾರವಿರುವದು. ಎಂದು ಹೇಳಿದನು. ಅದನ್ನು ಕೇಳಿದಕೂಡಲೆ ಮಾರುತಿಯು ಪರ್ವತಾಕಾರವಾದನು. ಆತನ ಕನಕವರ್ಣದದೇಹದಲ್ಲಿ ತೇಜಸ್ಸು ಪ್ರಕಾಶಿಸಲು, ಆತನು ಎರಡನೆಯ ಮೇರುಪರ್ವತದಂತೆ ತೋರಹತ್ತಿದನು. ಆತನು ಪುನಃ ಪುನಃ ಸಿಂಹನಾದಮಾಡಿ—ನಾನು ಈ ಸಮುದ್ರವನ್ನು ಲೀಲೆಯಿಂದ ಹಾರಿಹೋಗಿ, ರಾವಣನನ್ನು ಸೈನ್ಯಸಹಿತವಾಗಿ ಕೊಂದು ತ್ರಿಕೂಟಾಚಲವನ್ನು ಕಿತ್ತಿಕೊಂಡು ಇಲ್ಲಿಗೆ ಬರುವೆನು ಎಲೈ ಜಾಂಬುವಂತನೇ, ನಾನು ನಿನ್ನನ್ನು ಕೇಳಿಕೊಳ್ಳುವೆನು, ಯೋಗ್ಯವಾದ ಆಲೋಚನೆಯನ್ನು ಹೇಳು, ಎಂದು ಕೇಳಿದನು. ಅದಕ್ಕೆ ಜಾಂಬುವಂತನು—ಎಲೈ ತಾತನೇ, ನೀನು ಹೋಗಿ ಇಷ್ಟೇಕೆಲಸ ಮಾಡು. ಸೀತೆಯನ್ನು ನೋಡಿ ಬಂದು ರಾಮನಿಗೆ ಸುದ್ದಿಯನ್ನು ಹೇಳು. ಆಮೇಲೆ ಕಮಲನಯನ ಶ್ರೀರಾಮಚಂದ್ರನು ಕೇವಲ ಕೌತುಕಕ್ಕಾಗಿ ಕಪಿಸೈನ್ಯವನ್ನು ಸಂಗಡ ಕರಕೊಂಡು ತನ್ನ ಭುಜಬಲದಿಂದಲೇ ರಾಕ್ಷಸರನ್ನು ಸಂಹರಿಸಿ ಸೀತೆಯನ್ನು ತಿರುಗಿ ಕರಕೊಂಡು ಬರುವನು. ತ್ರೈಲೋಕ್ಯವನ್ನು ಪಾವನವಾಗಿ ಮಾಡುವ ಆತನ ಅಸದ್ಯಶಸ್ಸನ್ನು ನಾರದಾದಿ ಮುನಿಗಳೂ, ದೇವತೆಗಳೂ ವರ್ಣಿಸುವರು. ಯಾವದರ ಶರಣಗಾಯನ, ಮನನ, ಶ್ರವಣಗಳನ್ನುಮಾಡುವದರಿಂದ ಪರಮಪದದ ಪ್ರಾಪ್ತಿಯಾಗುವದೋ ಆ ಯಶಸ್ಸನ್ನು ರಘುವೀರಚರಣಕಮಲ ಭೃಂಗ ತುಲಸೀದಾಸನು ಗಾಯನಮಾಡುತ್ತಿರುವನು. ರಘುನಾಥನ ಯಶಸ್ಸು ಭವರೋಗದ ಔಷಧವಾಗಿರುವದು ಅದನ್ನು ಕೇಳುವ ಎಲ್ಲ ನರ-ನಾರಿಯರ ಮನೋರಥಗಳು ಪ್ರಭುವಿನ ಕೃಪೆಯಿಂದ ಪೂರ್ಣವಾಗುವವು. ನೀಲ ಕಮಲದಂತೆ ಶ್ಯಾಮವರ್ಣದವನೂ, ಕೋಟ್ಯವಧಿ ಮದನರಿಗಿಂತ ಅಧಿಕ ಸುಂದರನೂ, ನಾಮಸ್ಮರಣಮಾಡಿದಮಾತ್ರದಿಂದ ಪಾಪವನ್ನು ನಾಶಮಾಡುವವನೂ ಆದ ಪ್ರಭುವಿನ ಗುಣಗ್ರಾಮಗಳನ್ನು ಶ್ರವಣಮಾಡತಕ್ಕದ್ದು.

———o———

॥ ಶ್ರೀ ಗಣೇಶಾಯ ನಮಃ ॥

ಶ್ರೀ ಜಾನಕೀವಲ್ಲಭೋ ವಿಜಯತೇ.

# ರಾಮಚರಿತ-ಮಾನಸ

## ಶ್ರೀ ತುಲಸೀ-

# ರಾಮಾಯಣಾಮೃತ



# ಪಂಚಮಸೋಪಾನ

## - ಸುಂದರಕಾಂಡ -



ಅನುಪಮ ಬಲಸಂಪನ್ನನೂ, ಸುವರ್ಣಪರ್ವತದಂತೆ ಕಾಂತಿಮಾನವಾದ ದೇಹವುಳ್ಳವನೂ, ದೈತ್ಯರೂಪ ಅರಣ್ಯವನ್ನು ಅಗ್ನಿಯಂತೆ ಸುಡುವವನೂ, ಜ್ಞಾನವಂತರ ಅಗ್ರಣಿಯೂ, ಸಕಲಗುಣಸಂಪನ್ನನೂ ಆದ ರಘುಪತಿಯ ಪ್ರಿಯದೂತ-ವಾನರಾಧಿಪತಿ ವಾಯುಪುತ್ರನನ್ನು ನಾನು ವಂದಿಸುವೆನು. ಜಾಂಬುವಂತನ ಸುಂದರ ಭಾಷಣವು ಮಾರುತಿಗೆ ಬಹಳ ಒಪ್ಪಿಗೆಯಾಯಿತು. ಆತನು ಯಾವತ್ತು ವಾನರರನ್ನು ಕುರಿತು—ಬಂಧುಗಳೇ, ನೀವು ಕಂದಮೂಲಗಳಿಂದ ನಿರ್ವಾಹವನ್ನು ಸಾಗಿಸುತ್ತ, ದುಃಖವನ್ನು ಸಹಿಸುತ್ತ, ನಾನು ಸೀತೆಯ ಶೋಧಮಾಡಿಕೊಂಡು ಬರುವವರೆಗೆ ನನ್ನ ಹಾದಿಯನ್ನು ನೋಡುತ್ತ ಇರ್ರಿ. ಕೆಲಸವಾದರೆ ನನಗೆ ಬಹಳ ಆನಂದವಾಗುವದು, ಎಂದು ಹೇಳಿ ಆತನು ಎಲ್ಲರಿಗೂ ನಮಸ್ಕಾರಮಾಡಿ, ಹೃದಯದಲ್ಲಿ ರಘುಪತಿಯನ್ನು ಧ್ಯಾನಿಸುತ್ತ ಆನಂದದಿಂದ ಹೊರಟನು. ಆ ಸಮುದ್ರದ ದಂಡೆಯಲ್ಲಿ ಒಂದು ಸುಂದರವಾದ ಪರ್ವತವಿದ್ದಿತು. ಅದನ್ನು ಮಾರುತಿಯು ಕೌತುಕದಿಂದ ಹಾರಿಹತ್ತಿ ಮೇಲಿಂದಮೇಲೆ ರಾಮಸ್ಮರಣಮಾಡುತ್ತ ಮಹಾ ಪರಾಕ್ರಮಿಯಾದ ಆ ವಾಯುಪುತ್ರನು ಅಲ್ಲಿಂದ ಜಿಗಿದನು. ಮಾರುತಿಯು ಕಾಲಿಟ್ಟ ಪರ್ವತಗಳೆಲ್ಲ ಕೂಡಲೆ ಪಾತಾಳಕ್ಕೇ ಹೋಗುತ್ತಿದ್ದವು. ರಾಮನ ಬಾಣವು ಅಮೋಘವಾಗಿ ಹೋಗುವಂತೆ ಮಾರುತಿಯು ಹೊರಟನು. ರಾಮದೂತ

ನೆಂದು ತಿಳಿದು ಸಮುದ್ರನು ಆತನ ಶ್ರಮಪರಿಹಾರವಾಗಬೇಕೆಂದು ಮೈನಾಕನಿಗೆ ಹೇಳಿದನು. ಅದರಂತೆ ಮೈನಾಕನು ಮಾರುತಿಯನ್ನು ಉಪಚರಿಸತೊಡಗಲು, ಮಾರುತಿಯು ಆತನನ್ನು ಹಸ್ತದಿಂದ ಸ್ಪರ್ಶಮಾಡಿ, ಪುನಃ ನಮಸ್ಕರಿಸಿ—ರಾಮಕಾರ್ಯವಾಗುವವರೆಗೆ ನನಗೆ ವಿಶ್ರಾಂತಿಯಾತರದು! ಎಂದು ಹೇಳಿದನು. ಮಾರುತಿಯ ಬುದ್ಧಿಯನ್ನೂ, ಬಲವನ್ನೂ ಪರೀಕ್ಷಿಸುವದಕ್ಕಾಗಿ ದೇವತೆಗಳು "ಸುರಸಾ„ಎಂಬ ಹೆಸರಿನ ಸರ್ಪಗಳ ತಾಯಿಯನ್ನು ಆತನ ಕಡೆಗೆ ಕಳಿಸಿದರು. ಆಕೆಯು ಬಂದು ಮಾರುತಿಯನ್ನು ಕುರಿತು—"ಇಂದು ನನಗೆ ಒಳ್ಳೆಯ ಭಕ್ಷ್ಯವು ಸಿಕ್ಕಿತು„ ಅನ್ನಲು, ಮಾರುತಿಯು—ಎಲೈ ಮಾತೆಯೇ, ನಾನು ರಾಮಕಾರ್ಯವನ್ನು ಮಾಡಿ ತಿರುಗಿಬಂದು ಪ್ರಭುವಿಗೆ ಸೀತೆಯ ಸುದ್ದಿಯನ್ನು ಹೇಳಿದಬಳಿಕ ನಾನು ನಿನ್ನ ಮುಖದಲ್ಲಿ ಪ್ರವೇಶಮಾಡುವೆನು. ನಾನು ಸತ್ಯವಾಗಿ ಹೇಳುವೆನು, ಈಗ ನನ್ನನ್ನು ಹೋಗಗೊಡು, ಎಂದು ಕೇಳಿಕೊಂಡನು; ಆದರೆ ಏನು ಮಾಡಿದರೂ ಆಕೆಯು ಮಾರುತಿಯನ್ನು ಹೋಗಗೊಡಲೊಲ್ಲಳು. ಆಗ ಮಾರುತಿಯು "ನನ್ನನ್ನು ತಿಂದುಬಿಡುವದಿಲ್ಲವೇಕೆ?„ ಎಂದು ಕೇಳಲು, ಆಕೆಯು ಒಂದು ಹರದಾರಿಯವರೆಗೆ ತನ್ನ ಮುಖವನ್ನು ಪಸರಿಸಿದಳು. ಆಗ ಮಾರುತಿಯು ತನ್ನ ಶರೀರವನ್ನು ಇಮ್ಮಡಿ ವಿಸ್ತಾರಮಾಡಿದನು. ಆಮೇಲೆ ಆಕೆಯು ತನ್ನ ಮುಖದ ವಿಸ್ತಾರವನ್ನು ಹದಿನಾರುಯೋಜನ ಮಾಡಿದಳು. ಅದನ್ನು ನೋಡಿ ಮಾರುತಿಯು ತನ್ನ ದೇಹದ ವಿಸ್ತಾರವನ್ನು ಮೂವತ್ತೆರಡು ಯೋಜನ ಮಾಡಿದನು. ಹೀಗೆ ಸುರಸೆಯು ಮುಖವನ್ನು ವಿಸ್ತರಿಸಿದಂತೆ, ಅದರ ಇಮ್ಮಡಿಯಾಗಿ ಮಾರುತಿಯು ತನ್ನ ದೇಹವನ್ನು ವಿಸ್ತರಿಸತೊಡಗಿದನು. ಕಡೆಗೆ ಸುರಸೆಯು ತನ್ನ ಮುಖವನ್ನು ನೂರುಯೋಜನ ವಿಸ್ತರಿಸಲು, ಮಾರುತಿಯು ಅತ್ಯಂತ ಲಘುರೂಪವನ್ನು ಧಾರಣಮಾಡಿ, ಆಕೆಯ ಮುಖವನ್ನು ಪ್ರವೇಶಿಸಿ ಪುನಃ ಹೊರಗೆಬಂದು, ಆಕೆಯನ್ನು ನಮಸ್ಕರಿಸಿ ಅಪ್ಪಣೆ ಕೇಳತೊಡಗಿದನು. ಆಗ ಸುರಸೆಯು—"ನಿನ್ನ ಬುದ್ಧಿಯ ಹಾಗು ಬಲದ ಮರ್ಮವನ್ನು ನಾನು ತಿಳಿಮಕೊಂಡೆನು. ದೇವತೆಗಳು ಇದನ್ನು ತಿಳಕೊಳ್ಳುವದಕ್ಕಾಗಿಯೇ ನನ್ನನ್ನು ಕಳಿಸಿದ್ದರು. ನೀನು ಬಲ-ಬುದ್ಧಿಗಳ ನಿಧಿಯಾಗಿದ್ದು, ರಾಮಕಾರ್ಯವನ್ನು ಸಾಧಿಸುವೆ" ಎಂದು ಆಶೀರ್ವದಿಸಿ ತಿರುಗಿ ಹೋದಳು. ಮಾರುತಿಯು ಹರ್ಷಭರಿತನಾಗಿ ಮುಂದಕ್ಕೆ ಸಾಗತೊಡಗಿದನು. ಆ ಸಮುದ್ರದಲ್ಲಿ ಒಬ್ಬ ರಾಕ್ಷಸಿಯಿದ್ದಳು. ಆಕೆಯು ತನ್ನ ಮಾಯೆಯಿಂದ ಆಕಾಶದೊಳಗಿನ ಪಕ್ಷಿಗಳನ್ನು ಆಕರ್ಷಿಸುತ್ತಿದ್ದಳು. ಆಕಾಶದಲ್ಲಿ ಹಾರುತ್ತಿರುವ ಪಕ್ಷಿಗಳ ನೆರಳು ನೀರಮೇಲೆ ಬಿದ್ದದ್ದನ್ನು ನೋಡಿದಕೂಡಲೆ, ಆ ನೆರಳನ್ನೇ ಮುಗಿಬಿದ್ದು ಪಕ್ಷಿಗಳನ್ನು ಆಕರ್ಷಿಸಿ ನಿತ್ಯದಲ್ಲಿಯೂ ಅವನ್ನು ತಿನ್ನುತ್ತಿದ್ದಳು. ಮಾರುತಿಯನ್ನು ಗಾವರೂ ಹಾಗೆಯೇ ಮೋಸಮಾಡಬೇಕೆಂದು ಆಕೆಯು ಯೋಚಿಸಿದ್ದಳು. ಆದರೆ ಹನುಮಂತನು ಆಕೆಯ ಕಪಟವನ್ನರಿತು ಆಕೆಯನ್ನು ಕೊಂದು ಸಮುದ್ರವನ್ನು

ದಾಟಿಹೋದನು. ಆಚೆಯದಂಡೆಯಲ್ಲಿ ಒಂದು ಸುಂದರವಾದ ಉಪವನವು ಆತನ ಕಣ್ಣಿಗೆ ಬಿದ್ದಿತು. ಎದುರಿಗೆ ಒಂದು ಎತ್ತರವಾದ ಪರ್ವತವಿರಲು, ಅದನ್ನು ಮಾರುತಿಯು ಜಿಗಿಯುತ್ತ ಹತ್ತಿದನು. ಎಲೈ ಪಾರ್ವತಿಯೇ, ಇದರಲ್ಲಿ ಮಾರುತಿಯ ದೊಡ್ಡಸ್ತನವೇನು ಇರುವದಿಲ್ಲ. ಇದೆಲ್ಲ ಭಗವಂತನ ಪ್ರತಾಪವು. ಮಾರುತಿಯು ಆ ಪರ್ವತವನ್ನು ಹತ್ತಿ ಲಂಕೆಯನ್ನು ನೋಡಿದನು. ಅದನ್ನು ಪ್ರವೇಶಿಸುವದು ಅತ್ಯಂತ ದುರ್ಘಟವಾಗಿತ್ತು. ಲಂಕೆಯು ಬಹು ಉನ್ನತವಾಗಿದ್ದು, ಅದರ ನಾಲ್ಕುಮಗ್ಗಲುಗಳಲ್ಲಿ ಸಮುದ್ರವು ಸುತ್ತಹಾಕಿತ್ತು. ಅದರ ಸುತ್ತಲಿನ ರತ್ನಖಚಿತವಾದ ಭಂಗಾರದ ಗೋಡೆಯು ಕಣ್ಣುಕುಕ್ಕುತ್ತಿತ್ತು. ಪೇಟೆ, ರಾಜಮಾರ್ಗ, ಅಡ್ಡಹಾದಿಗಳು ಇವುಗಳಿಂದ ಆ ಪಟ್ಟಣವು ಬಹು ಸುಂದರವಾಗಿ ತೋರುತ್ತಿತ್ತು. ಆನೆಗಳು, ಕುದುರೆಗಳು , ಹೇಸರಗತ್ತೆಗಳು ಇವುಗಳ ಸಮೂಹವನ್ನೂ, ಅದರಂತೆ ಕಾಲಾಳು-ರಥಗಳ ಸಮುದಾಯವನ್ನೂ ಎಣಿಸುವದು ಯಾರಿಗೆ ಶಕ್ಯವು! ಬಲಾಢ್ಯವಾದ ನಾನಾರೂಪದ ಅನೇಕ ರಾಕ್ಷಸಗಣದ ಸೇನೆಯು ವರ್ಣನಾತೀತವಾಗಿತ್ತು. ಕೆಲಕೆಲವೆಡೆಯಲ್ಲಿ ಪರ್ವತಪ್ರಾಯವಾದ ಶರೀರದ ಮಲ್ಲರು ಕಣಗಳಲ್ಲಿ ಕುಸ್ತಿಯನ್ನಾಡುತ್ತ, ಗರ್ಜಿಸುತ್ತ ಒಬ್ಬರನ್ನೊಬ್ಬರು ಕೆಡವುತಲಿದ್ದರು

ವಿಕ್ರಾಳ ಶರೀರದ ಕೋಟ್ಯವಧಿ ವೀರರು ಪ್ರಯತ್ನಪೂರ್ವಕವಾಗಿ ನಗರವನ್ನು ಸಂರಕ್ಷಿಸುತ್ತಿದ್ದರು. ಕೆಲ ಕೆಲವೆಡೆಯಲ್ಲಿ ರಾಕ್ಷಸರು ಎಮ್ಮೆಗಳನ್ನೂ, ಆಕಳುಗಳನ್ನೂ, ಕತ್ತೆಗಳನ್ನೂ, ಕುದುರೆಗಳನ್ನೂ, ಪಕ್ಷಿಗಳನ್ನೂ, ಮನುಷ್ಯರನ್ನೂ ತಿನ್ನುತ್ತಲಿದ್ದರು. ಪುರರಕ್ಷಕರು ಬಹುಜನರಿರುವದನ್ನು ನೋಡಿ ಮಾರುತಿಯು, ಅತ್ಯಂತ ಸೂಕ್ಷ್ಮರೂಪವನ್ನು ಧರಿಸಿ ರಾತ್ರಿನಗರವನ್ನು ಪ್ರವೇಶಿಸಬೇಕೆಂದು ಮಾಡಿದನು. ಅದರಂತೆ ಆತನು ನೊಣದಂತಹ ಸಣ್ಣರೂಪವನ್ನು ಧರಿಸಿ ಶ್ರೀಹರಿಯನ್ನು ಸ್ಮರಿಸಿ ಲಂಕೆಯನ್ನು ಪ್ರವೇಶಿಸುವದಕ್ಕಾಗಿ ಹೊರಟನು; ಆದರೆ ಮಧ್ಯದಲ್ಲಿ ಲಂಕಿನಿಯೆಂಬ ರಾಕ್ಷಸಿಯು ಮಾರುತಿಯನ್ನು ತಡೆದು—ಎಲೈ ಮೂರ್ಖನೇ, ನನ್ನನ್ನು ಅವಮಾನಗೊಳಿಸಿ ಎತ್ತಹೋಗುವಿ? ನನ್ನ ಮರ್ಮವು ನಿನಗೆ ಗೊತ್ತಿಲ್ಲೆಂಬಂತೆ ತೋರುತ್ತದೆ. ಕಳ್ಳರನ್ನೆಲ್ಲ ನಾನು ತಿನ್ನುತ್ತಿರುವೆನು, ಎಂದಳು. ಆಗ ಮಾರುತಿಯು ಆಕೆಯನ್ನು ಒಮ್ಮೆ ಗುದ್ದಲು, ಕೂಡಲೆ ಆಕೆಯು ನೆಲಕ್ಕೆಬಿದ್ದು ರಕ್ತವನ್ನು ಕಾರಹತ್ತಿದಳು. ಪುನಃ ಆಕೆಯು ಜೋಲಿಯನ್ನು ಹಿಡಿದು ಎದ್ದು ನಿಂತು ಕೈಜೋಡಿಸಿ ಅಂಜುತ್ತಂಜುತ್ತ ಮಾರುತಿಯನ್ನು ಕುರಿತು—ಎಲೈ ಹನೂಮಾನ್ ಬ್ರಹ್ಮದೇವನು ರಾವಣನಿಗೆ ವರವನ್ನು ಕೊಟ್ಟಾಗ ಹೋಗಹೋಗುತ್ತ ನನ್ನನ್ನು ಕುರಿತು—ಎಲೈ ಲಂಕಿಣೀ, ನೀನು ವಾನರನ ಹೊಡತದಿಂದ ಪೀಡಿತಳಾದಾಗ ರಾಕ್ಷಸರ ಸಂಹಾರವಾಗುವದು. ಎಂದು ಹೇಳಿದ ಗುರುತು ಇಂದು ನನ್ನ ಅನುಭವಕ್ಕೆ ಬಂದಿತು. ನನ್ನ ಪುಣ್ಯವು ಬಲಿಷವಾದದ್ದರಿಂದ, ಈ ಕಣ್ಣುಗಳಿಂದ ನನಗೆ ರಾಮ

ಘೂತನ ದರ್ಶನದ ಯೋಗವು ಒದಗಿತು. ಎಲೈ ತಾತನೇ, ತಕ್ಕಡಿಯ ಒಂದು ಪರಡಿಗೆಯಲ್ಲಿ ಸ್ವರ್ಗ-ಮೋಕ್ಷಗಳ ಸುಖವನ್ನು ಹಾಕಿದರೂ, ಅದು ಕ್ಷಣಮಾತ್ರ ಆದ ಸತ್ಸಂಗದಸುಖಕ್ಕೆ ಸರಿಯಾಗಲಾರದು. ಇಂದು ನೀನು ರಾಮಚಂದ್ರನನ್ನು ಹೃದಯದಲ್ಲಿ ಧರಿಸಿ, ನಗರವನ್ನು ಪ್ರವೇಶಿಸಿ ಕಾರ್ಯವನ್ನು ಸಾಧಿಸಿಸಿಕೊಳ್ಳು. ರಾಮಚಂದ್ರನ ಕೃಪೆಯನ್ನು ಸಂಪಾದಿಸಿದವನಿಗೆ ವಿಷವು ಅಮೃತದಂತಾಗಿ, ಶತ್ರುಗಳೂ ಮಿತ್ರರಾಗುವರು. ಸಮುದ್ರವು ಗೋಷ್ಪದದಂತಾಗಿ, ಅಗ್ನಿಯು ಶೀತಲವೂ, ಶ್ರೇಷ್ಠ-ಸುಮೇರು-ಪರ್ವತವು ರಜಃಕಣದಂತೆಯೂ ಆಗುವವು. ಹನುಮಂತನು ಅತ್ಯಂತ ಸೂಕ್ಷ್ಮರೂಪವನ್ನು ಧರಿಸಿ ರಾಮಸ್ಮರಣಪೂರ್ವಕವಾಗಿ ನಗರವನ್ನು ಪ್ರವೇಶಿಸಿದನು. ಆತನು ನಗರದೊಳಗಿನ ಪ್ರತಿ ಒಂದು ಮನೆಯಲ್ಲಿ ಹುಡುಕುವಾಗ ಅಲ್ಲಲ್ಲಿ ಅಸಂಖ್ಯ ವೀರರನ್ನು ಕಂಡನು. ಹೀಗೆ ಆತನು ತಿರುಗುತ್ತ ತಿರುಗುತ್ತ ರಾವಣನ ಮನೆಗೆ ಹೋದನು. ಆ ಮಂದಿರವು ಅತ್ಯಂತ ಚಿತ್ರವಿಚಿತ್ರವಾಗಿಯೂ,ಅವರ್ಣನೀಯವಾಗಿಯೂ ಇತ್ತು. ರಾವಣನು ಮಲಗಿರುವದನ್ನು ಮಾರುತಿಯು ನೋಡಿದನು; ಆದರೆ ಅಲ್ಲಿ ಆತನಿಗೆ ಸೀತೆಯು ಕಾಣಲಿಲ್ಲ. ಆ ಮೇಲೆ ಆತನಿಗೊಂದು ಸುಂದರ ಗೃಹವು ಕಂಡಿತು. ಅದರೊಳಗಿನ ದೇವರ ಮನೆಯ ರಚನೆಯು ಬೇರೆ ತರದ್ದೇ ಆಗಿತ್ತು. ರಾಮನ ಆಯುಧಗಳಿಂದ ಚಿಹ್ನಿತವಾದ ಆಗೃಹದ ಶೋಭೆಯೂ ಅವರ್ಣನೀಯವಾಗಿತ್ತು. ಅಲ್ಲಿ ಸಣ್ಣ ಸಣ್ಣ ತುಲಸಿಯ ಮಡಿಗಳಿರುವದನ್ನು ನೋಡಿ ಮಾರುತಿಗೆ ಹರ್ಷವಾಯಿತು. ಲಂಕೆಯು ರಾಕ್ಷಸರ ತವರುಮನೆಯಾಗಿದ್ದು, ಇಲ್ಲಿ ಸಂತರ ವಾಸವು ಹೇಗಾಗಿರಬಹುದು, ಎಂದು ಮಾರುತಿಯು ಆಲೋಚಿಸುತ್ತಿರಲು, ವಿಭೀಷಣನು ಎಚ್ಚತ್ತು "ರಾಮ ರಾಮ" ಎಂದು ನಾಮೋಚ್ಚಾರ ಮಾಡಿದನು. ಅದನ್ನು ಕೇಳಿ ಮಾರುತಿಗೆ ಆನಂದವಾಯಿತು. ಇವನು ಯಾವನೋ ಸಜ್ಜನನಿರುವದರಿಂದ ಇವನ ಗುರುತನ್ನು ಅವಶ್ಯವಾಗಿ ಮಾಡಿಕೊಳ್ಳತಕ್ಕದ್ದು. ಸಾಧುಗಳಿಂದ ರಾಮಕಾರ್ಯಕ್ಕೆ ಹಾನಿಯುಂಟಾಗಲಾರದು, ಎಂದು ಆಲೋಚಿಸಿ, ಆತನು ಬ್ರಾಹ್ಮಣರೂಪವನ್ನು ಧರಿಸಿ ವಿಭೀಷಣನನ್ನು ಕೂಗಿ ಕರೆದನು. ಅದನ್ನು ಕೇಳಿದ ಕೂಡಲೆ ವಿಭೀಷಣನು ಎದ್ದು ಆತನ ಬಳಿಗೆ ಬಂದು ನಮಸ್ಕರಿಸಿ ಕುಶಲಪ್ರಶ್ನಗಳನ್ನು ಕೇಳಿ ಆ ಬ್ರಾಹ್ಮಣ ವೇಷಧಾರಿಯಾದ ಮಾರುತಿಯನ್ನು ಕುರಿತು— ಎಲೈ ಬ್ರಾಹ್ಮಣರೇ, ನಿಮ್ಮ ವೃತ್ತಾಂತವನ್ನು ಸರಳಮನಸ್ಸಿನಿಂದ ಹೇಳಬೇಕು. ನೀವು ಹರಿಭಕ್ತರೊಳಗಿನವರಿರುವಿರೇನು? ನಿಮ್ಮನ್ನು ನೋಡಿ ನನ್ನ ಅಂತಃಕರಣದಲ್ಲಿ ಅತಿಶಯವಾದ ಪ್ರೇಮವು ಉತ್ಪನ್ನವಾಗಿರುವದು. ಅಥವಾ ನೀವೇ ದೀನವತ್ಸಲ ರಾಮನಿದ್ದು, ನನ್ನನ್ನು ಮಹಾಭಾಗ್ಯಶಾಲಿಯಾಗ ಮಾಡಲು ಬಂದಿರುವಿರೋ?

ವಿಭೀಷಣನ ಈ ಮಾತುಗಳನ್ನು ಕೇಳಿ ಮಾರುತಿಯು ಯಾವತ್ತು ವೃತ್ತಾಂತವನ್ನು ತಿಳಿಸಿ ತನ್ನ ಹೆಸರನ್ನು ಹೇಳಿದನು. ಅದನ್ನು ಕೇಳಿದ ಕೂಡಲೆ ಇಬ್ಬರ ಶರೀರಗಳೂ ರೋಮಾಂಚಿತಗಳಾಗಿ, ಅವರ ಮನಸ್ಸುಗಳು ರಾಮಗುಣಸ್ಮರಣದಲ್ಲಿ ತಲ್ಲೀನವಾದವು. ಆಗ ವಿಭೀಷಣನು— ಎಲೈ ವಾಯುಪುತ್ರನೇ ಕೇಳು. ಹಲ್ಲುಗಳ ಇರುಕಿನಲ್ಲಿ ಸಿಕ್ಕ ನಾಲಿಗೆಯಂತೆ ನಾನು ಇಲ್ಲಿ ವಾಸಿಸಿರುವೆನು. ಎಲೈ ತಾತನೇ, ನಾನು ಅನಾಥನೆಂದು ತಿಳಿದು ಭಾನುಕುಲನಾಥನು ಎಂದಾದರೂ ನನ್ನ ಮೇಲೆ ಕೃಪೆ ಮಾಡಿಯಾನೇನು? ಈ ತಾಮಸ ದೇಹದಿಂದ ಪರಮೇಶ್ವರನ ವಿಷಯದ ಯಾವ ಸಾಧನವೂ ಆಗುವದಿಲ್ಲ; ಮತ್ತು ಆತನ ಚರಣಕಮಲದಲ್ಲಿ ಭಕ್ತಿಯೂ ಉತ್ಪನ್ನವಾಗುವದಿಲ್ಲ. ಎಲೈ ಹನುಮಂತಾ, ಹರಿಕೃಪೆಯಹೊರತು ಸಂತದರ್ಶನವಾಗುವದಿಲ್ಲೆಂಬದರ ನಂಬಿಗೆಯು ಇಂದು ನನಗೆ ಆಯಿತು- ರಘುವೀರನ ಕೃಪೆಯಾದದ್ದರಿಂದಲೇ ನೀನಾಗಿ ನನಗೆ ದರ್ಶನ ಕೊಟ್ಟೆ. ಅನ್ನಲು, ಮಾರುತಿಯು— ಎಲೈ ವಿಭೀಷಣಾ, ಕೇಳು. ತನ್ನ ದಾಸರಮೇಲೆ ನಿರಂತರ ಪ್ರೇಮ ಮಾಡುವದು ಪ್ರಭುವಿನ ರೀತಿಯಾಗಿರುವದು. ನೀನೇ ಹೇಳು ನೋಡೋಣ, ನಾನು ಯಾವ ದೊಡ್ಡ ಕುಲೀನನು? ಹೇಳಿಕೇಳಿ ಕಪಿಯು, ಚಂಚಲನು, ಎಲ್ಲ ಬಗೆಯಿಂದ ನಿಕೃಷ್ಟನು ಆಗಿರುವೆನು. ಪ್ರಾತಃಕಾಲದಲ್ಲಿ ನಮ್ಮ ಹೆಸರು ಉಚ್ಚರಿಸಿದವರಿಗೆ ಅಂದು ಊಟವೂ ಸಿಗುವದಿಲ್ಲ. ನಾನು ಇಂಥ ಅಧಮನಾಗಿದ್ದರೂ, ಎಲೈ ಮಿತ್ರನೇ, ರಘುವೀರನು ನನ್ನ ಮೇಲೆ ಕೃಪೆಯನ್ನು ಮಾಡಿದನು. ಎಂದು ನುಡಿವಾಗ ಶ್ರೀರಾಮನಗುಣಗಳ ಸ್ಮರಣವಾಗಿ ಮಾರುತಿಯ ನೇತ್ರಗಳು ಅಶ್ರುಪೂರ್ಣವಾದವು! ರಾಮನ ಗುಣಗಳನ್ನು ವರ್ಣಿಸುವಾಗ ಅವರಿಬ್ಬರಿಗೂ ಹೇಳಲಿಕ್ಕೆ ಬಾರದ ಸುಖವಾಯಿತು. ಆಮೇಲೆ ವಿಭೀಷಣನು ಸೀತೆಯು ಇರುವ ಸ್ಥಳವನ್ನು, ಆಕೆಯು ಇರುವ ರೀತಿಯನ್ನೂ ಮಾರುತಿಗೆ ಹೇಳಿ ಸೀತೆಯನ್ನು ಕಾಣುವ ಯಾವತ್ತು ಯುಕ್ತಿಗಳನ್ನು ಹೇಳಿದನು. ಬಳಿಕ ಮಾರುತಿಯು ವಿಭೀಷಣನ ಅಪ್ಪಣೆಯನ್ನು ಪಡೆದು ಪುನಃ ಮೊದಲಿನ ರೂಪವನ್ನು ಧರಿಸಿ, ಸೀತೆಯು ಇರುವ ಅಶೋಕ ವನಕ್ಕೆ ಬಂದು, ಸೀತೆಯು ಕುಳಿತಿರುವ ಅಶೋಕವೃಕ್ಷದ ಮೇಲೆ ಕುಳಿತು, ಪ್ರಹರರಾತ್ರಿಯನ್ನು ಕಳೆದನು. ಸೀತೆಯ ಶರೀರವು ಅತ್ಯಂತ ಕೃಶವಾಗಿದ್ದು, ಆಕೆಯ ತಲೆಗೂದಲುಗಳೆಲ್ಲ ಜಡೆಗಟ್ಟಿ ಒಂದು ಹೆರಳು ಆಗಿತ್ತು. ರಘುಪತಿಯ ಗುಣಗಳನ್ನು ಆಕೆಯು ಮನಸ್ಸಿನಲ್ಲಿ ಚಿಂತಿಸುತ್ತಿದ್ದಳು. ತನ್ನ ಪಾದಗಳಲ್ಲಿ ದೃಷ್ಟಿಯನ್ನಿಟ್ಟು ತನ್ನ ಮನಸ್ಸನ್ನು ರಾಮಚರಣದಲ್ಲಿ ಇಟ್ಟಿದ್ದಳು. ಇಂಥ ದೀನಮುದ್ರೆಯ ಜಾನಕಿಯನ್ನು ನೋಡಿ ಮಾರುತಿಗೆ ಬಹಳ ದುಃಖವಾಯಿತು. ಮಾರುತಿಯು ಗಿಡದ ಎಲೆಗಳ ಮರೆಗೆ ಕುಳಿತು ಇನ್ನು ಏನುಮಾಡಬೇಕೆಂದು ಆಲೋಚಿಸುತ್ತಿರಲು, ರಾವಣನು, ಸಿಂಗಾರವಾಗಿ ಸ್ತ್ರೀಯರೊಡನೆ ಅಲ್ಲಿಗೆ ಬಂದನು. ಆತನು ಸೀತೆಗೆ ಸಾಮ-ದಾನ-ಭೇದ-ದಂಡೋಪಾಯಗಳಿಂದ ತಿಳಿಯಹೇಳಿ, ಆದುರಾತ್ಮನು ಆಕೆಯನ್ನು

ಕುರಿತು—ಎಲೈ ಸುಮುಖೀ, ನನ್ನ ಮಾತನ್ನು ಕೇಳು. ನೀನು ಸುಜ್ಞಳಿರುವೆ. ಮಂಡೋದರಿಯೇ ಮೊದಲಾದ ಯಾವತ್ತು ರಾಣಿಯರನ್ನು ನಿನ್ನ ದಾಸಿಯರನ್ನಾಗಿ ಮಾಡುವದನ್ನ ಪ್ರತಿಜ್ಞೆ ಇರುತ್ತದೆ. ಒಮ್ಮೆಯಾದರೂ ನನ್ನ ಕಡೆಗೆ ನೋಡು, ಅನ್ನಲು, ವೈದೆಹಿಯು ಪ್ರತಿವ್ರತಾ ಧರ್ಮದಂತೆ ಪರಪುರುಷನೊಡನೆ ಏಕಾಂತದಲ್ಲಿ ಮಾತಾಡಬಾರದೆಂದು ತಿಳಿದು, ಒಂದು ಹುಲ್ಲುಕಡ್ಡಿಯನ್ನು ನಡುವೆ ಹಿಡಿದು ತನ್ನ ಪ್ರಾಣಪತಿಯ ಸ್ಮರಣೆ ಮಾಡಿ ರಾವಣನನ್ನು ಕುರಿತು— ಎಲೈ ರಾವಣನೇ, ಕಾಜಿನ ಪ್ರಕಾಶವು ಕಮಲಿನಿಯನ್ನು ಎಂದಾದರೂ ಅರಳಿಸಬಹುದೋ ಹೇಗೆಂಬದನ್ನು ನೀನೇ ಮನಸ್ಸಿನಲ್ಲಿ ತಿಳಿದು ನೋಡು. ಎಲೈ ದುಷ್ಟನೇ, ರಘುವೀರನ ಬಾಣದ ನೆನಪು ನಿನಗಿಲ್ಲವೇ? ಶಠಾ, ಆಶ್ರಮದಲ್ಲಿ ಯಾರೂ ಇಲ್ಲದಾಗ ನನ್ನನ್ನು ಹರಣಮಾಡಿ ತಂದೆ. ಎಲೇ ಅಧಮಾ, ನಿರ್ಲಜ್ಜಾ, ನಿನಗೆ ನಾಚಿಕೆಯು ಹೇಗೆ ಬರಲಿಲ್ಲ? ಎಂದು ನಿಷೇಧಿಸಲು, ತನ್ನನ್ನು ಕಾಜಿಗೂ, ರಾವಣನನ್ನು ಸೂರ್ಯನಿಗೂ ಹೋಲಿಸಿದ್ದನ್ನೂ, ಶಠಾ, ಅಧಮಾ, ನಿರ್ಲಜ್ಜಾ, ಎಂದು ಕಠೋರ ಮಾತುಗಳನ್ನಾಡಿದ್ದನ್ನೂ ಕೇಳಿ ರಾವಣನು ಅತ್ಯಂತ ಕ್ರುದ್ಧನಾಗಿ ತನ್ನ ಖಡ್ಗವನ್ನು ಹಿರಿದು— ಎಲೈ ಸೀತೇ, ನನ್ನ ಅಪಮಾನಮಾಡಿರುವದರಿಂದ ಈ ತೀಕ್ಷ್ಣ ಖಡ್ಗದಿಂದ ನಿನ್ನ ಶಿರಸ್ಸನ್ನು ತುಂಡರಿಸುವೆನು. ಇಲ್ಲದಿದ್ದರೆ, ನನ್ನ ಮಾತಿಗೆ ಕೂಡಲೆ ಒಪ್ಪಿಕೋ. ಎಲೈ ಸುಮುಖೀ, ಹಾಗೆ ಮಾಡದಿದ್ದರೆ ನಿಶ್ಚಯವಾಗಿ ನೀನು ಜೀವಕ್ಕೆ ಎರವಾಗುವೆ.

ರಾವಣನ ಈ ಮಾತುಗಳನ್ನು ಕೇಳಿ ಸೀತೆಯು— ದುಷ್ಟ ದಶಕಂಧರಾ, ಆನೆಯ ಸೊಂಡಿಲೆಯಂತೆ ಇರುವ ಪ್ರಭುವಿನ ಸುಂದರವಾದ ಭುಜವಾದರೂ ನನ್ನ ಕೊರಳಿಗೆ ಬೀಳಬೇಕು, ಇಲ್ಲವೆ ನಿನ್ನ ಖಡ್ಗವಾದರೂ ನನ್ನ ಕೊರಳಿಗೆ ಬೀಳಬೇಕು, ಎಂದು ನಾನು ಪಣಮಾಡಿರುವೆನೆಂಬವನ್ನು ಲಕ್ಷದಲ್ಲಿಡು. ನಿನ್ನ ತೀಕ್ಷ್ಣವಾದ ಖಡ್ಗದ ಪ್ರಕಾಶವಾದ ಧಾರೆಯು ನನ್ನ ದುಃಖಭಾರವನ್ನು ಕಡಿಮೆಮಾಡಲಿ ಅನ್ನಲು, ಅದನ್ನು ಕೇಳಿ ರಾವಣನು ಆಕೆಯನ್ನು ಹೊಡೆಯಲಿಕ್ಕೆ ಧಾವಿಸಿದನು. ಆಗ ಮಂಡೋದರಿಯು ಆತನಿಗೆ ನೀತಿಯನ್ನು ಹೇಳಿ ಶಾಂತಗೊಳಿಸಿದಳು. ಆ ಮೇಲೆ ರಾವಣನು ರಾಕ್ಷಸಿಯರನ್ನು ಕರೆಸಿ—ನೀವು ಸೀತೆಯನ್ನು ಹಲವು ವಿಧವಾಗಿ ಪೀಡಿಸುತ್ತ ಹೋಗಿರಿ. ಇನ್ನು ಒಂದು ತಿಂಗಳಲ್ಲಿ ಈಕೆಯು ನನ್ನ ಮಾತು ನಡಿಸದಿದ್ದರೆ, ನಾನು ಖಡ್ಗದಿಂದ ಈಕೆಯ ಶಿರಚ್ಛೇದನ ಮಾಡುವೆನು. ಎಂದು ಆಜ್ಞಾಪಿಸಿ ತನ್ನ ಮಂದಿರಕ್ಕೆ ಹೊರಟು ಹೋದನು. ಇತ್ತ ಆ ರಾಕ್ಷಸಿಯರು ಅನೇಕ ವಿಕ್ರಾಳರೂಪಗಳನ್ನು ಧರಿಸಿ ಸೀತೆಗೆ ಅಂಜಿಕೆ ತೋರಿಸತೊಡಗಿದರು. ಅವರಲ್ಲಿ ತ್ರಿಜಟೆಯೆಂಬ ರಾಕ್ಷಸಿಯು ರಾಮಚರಣದಲ್ಲಿ ಅನುರಕ್ತಳಿದ್ದು, ಅತ್ಯಂತ ವಿವೇಕಸಂಪನ್ನಳಾಗಿದ್ದಳು. ಆಕೆಯು ಯಾವತ್ತು ರಾಕ್ಷಸಿಯರನ್ನು ಕರೆದು, ತನಗೆ ಬಿದ್ದಸ್ವಪ್ನವನ್ನು ಹೇಳುವದಕ್ಕಾಗಿ ಅವರನ್ನು ಕುರಿತು— ರಾಕ್ಷಸಿಯರೇ

ನೀವು ಸೀತೆಯ ಸೇವೆಯನ್ನು ಮಾಡಿ ಹಿತವನ್ನು ಸಾಧಿಸಿಕೊಳ್ಳಿರಿ. ಕನಸಿನಲ್ಲಿ ನಾನು ಭಯಂಕರ ಸಂಗತಿಯನ್ನು ಕಂಡೆನು. ವಾನರರು ಲಂಕೆಯನ್ನು ಸುಟ್ಟು ಯಾವತ್ತು ರಾಕ್ಷಸ ಸೈನ್ಯವನ್ನು ಸಂಹರಿಸಿದರು. ರಾವಣನು ಭುಜಹೀನನೂ, ಕ್ಷೌರಮಾಡಿಸಿದವನೂ ಆಗಿ ಬತ್ತಲೆ ಕತ್ತೆಯ ಮೇಲೆ ಕುಳಿತು ದಕ್ಷಿಣ ದಿಕ್ಕಿನ ಕಡೆಗೆ ಹೋಗುತ್ತಿದ್ದನು. ವಿಭೀಷಣನಿಗೆ ಲಂಕೆಯು ಪ್ರಾಪ್ತವಾಗಿ, ಪಟ್ಟಣದಲ್ಲಿ ರಘುವೀರನ ಡಂಗುರವು ಸಾರಿತು-ಬಳಿಕ ರಾಮನು ಸೀತೆಯನ್ನು ಕರೆಕಳುಹಿಸಿದನು. ನಾನು ನಂಬಿಗೆಯಿಂದ ಹೇಳುವೆನು. ಈ ಕನಸು ಒಂದೆರಡು ದಿನಗಳಲ್ಲಿ ಅನುಭವಕ್ಕೆ ಬರುವದು, ಎಂದು ಹೇಳಿದಳು. ತ್ರಿಜಟೆಯ ಮಾತುಗಳನ್ನು ಕೇಳಿದ ಕೂಡಲೆ ಎಲ್ಲ ರಾಕ್ಷಸಿಯರು ಭಯಭೀತರಾಗಿ ಸೀತೆಯ ಚರಣಗಳಿಗೆರಗಿ ಎಲ್ಲರೂ ಅತ್ತಿತ್ತ ಹೋಗಿಬಿಟ್ಟರು. ಇನ್ನು ಒಂದು ತಿಂಗಳ ಮೇಲೆ ದುರಾತ್ಮನು ತನ್ನನ್ನು ಸಂಹರಿಸುವನೆಂದು ಮನಸ್ಸಿನಲ್ಲಿ ದುಃಖಿಸುತ್ತ ಕೈಜೋಡಿಸಿ ಸೀತೆಯು ತ್ರಿಜಟೆಯನ್ನು ಕುರಿತು— ತಾಯಿಯೇ. ಈ ವಿಪತ್ತಿನಲ್ಲಿ ನನಗೆ ನಿನ್ನ ಆಧಾರವೇ ಇರುವದು. ಈ ದೇಹವನ್ನು ತ್ಯಜಿಸುವ ಯಾವದಾದರೊಂದು ಉಪಾಯವನ್ನು ನೀನು ನನಗೆ ಹೇಳು. ಇನ್ನು ನನಗೆ ದುಃಸಹ ವಿರಹವು ಸಹನವಾಗುವದಿಲ್ಲವು. ಕಟ್ಟಿಗೆಗಳನ್ನು ತಂದು ಚಿತೆಯನ್ನು ರಚಿಸಿ, ಎಲ್ಲೆ ತಾಯಿಯೇ, ಈ ದೇಹಕ್ಕೆ ಅಗ್ನಿ ಸಂಸ್ಕಾರವನ್ನು ಮಾಡು. ನಿನ್ನ ಪ್ರಾರ್ಥಿಸುವೆ. ರಾಮನ ಮೇಲಿನ ನನ್ನ ಪ್ರೇಮವನ್ನು ನೀನೇ ನಿಜವಾಗಿ ಮಾಡಿ ತೋರಿಸು, ಅನ್ನಲು, ಕಿವಿಗಳಿಗೆ ಶೂಲದಂತೆ ಬಾಧಿಸುವ ಸೀತೆಯ ಈ ಮಾತುಗಳನ್ನು ತ್ರಿಜಟೆಯಿಂದ ಹೇಗೆ ಕೇಳುವದಾದೀತು? ಆಕೆಯು ಸೀತೆಯ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಪ್ರಭುವಿನ ಪ್ರತಾಪ-ಬಲ-ಸುಯಶಸ್ಸುಗಳನ್ನು ವರ್ಣಿಸಿ ಆಕೆಯನ್ನು ಕುರಿತು—ಎಲ್ಲೆ ಜಾನಕೀ, ರಾತ್ರಿಯಾದದ್ದರಿಂದ ಈಗ ಬೆಂಕಿಯು ಸಿಗಲಾರದು. ಎಂದು ಹೇಳಿ, ತನ್ನ ಮನೆಯ ಹಾದಿಯನ್ನು ಹಿಡಿದಳು. ಆಗ ಸೀತೆಯು— ದೈವವೇ ಪ್ರತಿಕೂಲವಾಗಿರುವದರಿಂದ ಬೆಂಕಿಯು ಸಿಗುವದಿಲ್ಲ, ನನ್ನ ತ್ರಾಸವೂ ತಪ್ಪುವದಿಲ್ಲ. ಆಕಾಶದಲ್ಲಿ ಅಗ್ನಿಯಂತೆ ಇಷ್ಟು ನಕ್ಷತ್ರಗಳು ಲಕಲಕಿಸುತ್ತಿರುವವು, ಅವುಗಳಲ್ಲಿ ಒಂದಾದರೂ ಭೂಮಿಯ ಮೇಲೆ ಬೀಳುವದಿಲ್ಲ. ಚಂದ್ರನು ಅಗ್ನಿಮಯನಿದ್ದು ನಾನು ಹತಭಾಗ್ಯಳಾದದ್ದರಿಂದಲೇ ಬೆಂಕಿಯನ್ನು ಸುರಿಸುವದಿಲ್ಲ. ಎಲ್ಲೆ ಅಶೋಕವೃಕ್ಷವೇ, ನಿನ್ನ ಎಳೆ ಚಿಗರುಗಳು ಅಗ್ನಿಯಂತೆ ಇರುವದರಿಂದ ನೀನಾದರೂ ನನಗೆ ಅಗ್ನಿಯನ್ನು ಕೊಡು, ನನ್ನ ಸತ್ವವನ್ನು ಪರಿಕ್ಷಿಸಬೇಡ.

ಸೀತೆಯು ಹೀಗೆ ಅತ್ಯಂತವಿರಹವ್ಯಾಕುಲಳಾದದ್ದನ್ನು ನೋಡುವ ಮಾರುತಿಗೆ ಆ ಕ್ಷಣವು ಕಲ್ಪದಂತೆ ಹೋಯಿತು. ಆತನು ಮನಸ್ಸಿನಲ್ಲಿ ವಿಚಾರಮಾಡಿ ಮುದ್ರಿಕೆಯನ್ನು ಕೆಳಗೆ ಒಗೆದನು. ಅಶೋಕವೃಕ್ಷವೇ ತನಗೆ ಅಗ್ನಿಯನ್ನು ಕೊಟ್ಟಿತೆಂದು ತಿಳಿದು ಸೀತೆಯು ಎದ್ದು ಆ ಉಂಗುರವನ್ನು ಕೈಯಲ್ಲಿ ತಕ್ಕೊಂಡಳು. ಆ ಮನೋಹರವಾದ

ನಾಮನಾಮಾಂಕಿತ ಸುಂದರ ಮುದ್ರಿಕೆಯನ್ನು ನೋಡಿ ಗುರುತಿಸಿ ಸೀತೆಯು ಬೆರಗಾದಳು. ಹರ್ಷ-ವಿಷಾದಗಳಿಂದ ಆಕೆಯ ಮನಸ್ಸು ವ್ಯಗ್ರವಾಯಿತು. ಆಕೆಯು ಮನಸ್ಸಿನಲ್ಲಿ ವಿಚಾರಮಾಡುತ್ತ—ಈ ಮುದ್ರಿಕೆಯು ಇಲ್ಲಿಗೆ ಹೇಗೆ ಬಂದಿರಬಹುದು? ರಘುರಾಜನು ಅಜಿಂಕ್ಯನಾದದ್ದರಿಂದ ಆತನನ್ನು ಗೆದ್ದು ಈ ಉಂಗುರವನ್ನು ಯಾರೂ ತಂದಿರಲಿಕ್ಕಿಲ್ಲ. ಮಾಯೆಯಿಂದ ಇಂಥ ಮುದ್ರಿಕೆಯನ್ನು ಮಾಡುವದು ಶಕ್ಯವಿರುವದಿಲ್ಲ, ಎಂದು ಬಗೆಬಗೆಯಾಗಿ ಎಣಿಕೆ ಹಾಕುತ್ತಿರುವದನ್ನು ತಿಳಿದು ಮಾರುತಿಯು ಸವಿನಯಾತುಗಳನ್ನು ಆಡತೊಡಗಿದನು. ಆತನು ರಾಮಚಂದ್ರನ ಗುಣಗಳನ್ನು ವರ್ಣಿಸಿದನು. ಅದನ್ನು ಕೇಳಿ ಸೀತೆಯ ದುಃಖವು ಇಲ್ಲದಂತಾಯಿತು. ಆ ಮೇಲೆ ಮಾರುತಿಯು ಮೊದಲಿನಿಂದ ಯಾವತ್ತು ಇತಿಹಾಸವನ್ನು ಹೇಳಲು, ಸೀತೆಯು ಚಿತ್ತಗೊಟ್ಟು ಕೇಳಿದಳು. ಬಳಿಕ ಆಕೆಯು—"ಶ್ರವಣಾಮೃತಕ್ಕೆ ಸಮಾನವಾದ ಕಥೆಯನ್ನು ನನಗೆ ಹೇಳಿದಾತನು ಪ್ರತ್ಯಕ್ಷ ನನ್ನೆದುರಿಗೆ ಯಾಕೆ ಬರಲೊಲ್ಲನು?" ಅನ್ನಲು, ಮಾರುತಿಯು ಆಕೆಯ ಬಳಿಗೆ ಹೋದನು. ಆದರೆ ಆಕೆಯ ಮನಸ್ಸಿಗೆ ಸಂಶಯವು ಉತ್ಪನ್ನವಾಗಿ, ಆಕೆಯು ಮಾರುತಿಯ ಕಡೆಗೆ ಬೆನ್ನು ಮಾಡಿ ಕುಳಿತುಕೊಂಡಳು. ಆಗ ಮಾರುತಿಯು—ಮಾತೇ, ಜಾನಕೀ, ನಾನು ಆ ಕರುಣಾನಿಧಾನನ ಆಣೆ ಮಾಡಿ ಹೇಳುವೆನು, ನಾನು ನಿಜವಾಗಿಯೇ ರಾಮದೂತನಿರುವೆನು. ಈ ಮುದ್ರಿಕೆಯನ್ನು ನಾನೇ ತಂದೆನು. ರಾಮನು ನಿನಗೆ ಗುರುತಿಗಾಗಿ ಅದನ್ನು ಕೊಟ್ಟಿರುವನು, ಎಂದು ಹೇಳಿದನು. ಅದಕ್ಕೆ ಸೀತೆಯು—ಮನುಷ್ಯನಿಗೂ, ವಾನರನಿಗೂ ಗೆಳೆತನವು ಹೇಗೆ ಉಂಟಾಯಿತು? ಎಂದು ಕೇಳಲು, ಮಾರುತಿಯು ಗೆಳೆತನವು ಉಂಟಾದ ವೃತ್ತಾಂತವನ್ನೆಲ್ಲ ಹೇಳಿದನು. ಕಪಿಯ ಆ ಪ್ರೇಮಯುಕ್ತ ಭಾಷಣವನ್ನು ಕೇಳಿ ಸೀತೆಯ ಮನಸ್ಸಿನಲ್ಲಿ ವಿಶ್ವಾಸವು ಉತ್ಪನ್ನವಾಯಿತು. ಈತನು ತ್ರಿಕರಣಪೂರ್ವಕವಾಗಿ ಕೃಪಾಸಿಂಧು ರಾಮಚಂದ್ರನ ದಾಸನೇ ಇರುವನೆಂದು ಆಕೆಗೆ ನಂಬಿಗೆಯಾಗಲು, ಆಕೆಯ ಪ್ರೇಮವು ಉಕ್ಕಿಬಂದಿತು. ಆಕೆಯ ಕಣ್ಣುಗಳಲ್ಲಿ ಪ್ರೇಮಾಶ್ರುಗಳುಂಟಾಗಿ, ಆಕೆಯ ಮೈಮೇಲೆ ರೋಮಾಂಚಗಳು ಉತ್ಪನ್ನವಾದವು. ಆಕೆಯು ಮಾರುತಿಯನ್ನು ಕುರಿತು—ಹನುಮಂತಾ, ನಾನು ವಿರಹಸಾಗರದಲ್ಲಿ ಮುಳುಗುತ್ತಿರುವಾಗ ಲಕ್ಷ್ಮಣನೊಡನೆ ಸುಖನಿಧಾನನಾದ ಖರರಿಪುವಿನ ಕುಶಲವರ್ತಮಾನವನ್ನು ನನಗೆ ಹೇಳು. ರಘುರಾಜನು ಕೋಮಲ ಮನಸ್ಸಿನವನೂ, ದಯಾಲುವೂ ಆಗಿದ್ದು, ಎಲೈ ಮಾರುತಿಯೇ, ಯಾವ ಕಾರಣದಿಂದ ನನ್ನ ಮೇಲೆ ಇಷ್ಟು ನಿಷ್ಠುರತನವನ್ನು ಮಾಡಿದನು? ಸ್ವಭಾವಾತನ ಸಹಜವಾಣಿಯು ಸೇವಕರಿಗೆ ಸುಖದಾಯಕವಾಗುವದೋ, ಆ ರಘುನಾಯಕನು ಎಂದಾದರೂ ನನ್ನ ನೆನಪು ಮಾಡುವನೇನು? ಆ ಶ್ಯಾಮವರ್ಣದ ಕೋಮಲಮೂರ್ತಿಯನ್ನು ನೋಡಿ ನನ್ನ ಮನಸ್ಸು ಯಾವಾಗ ಶಾಂತವಾದೀತು? ಹಾಯ್ ಹಾಯ್! ನನ್ನ ನಾಥನು ನನ್ನನ್ನು ಪೂರಾ ಮರೆತುಬಿಟ್ಟನಲ್ಲವೆ? ಎಂದು ನುಡಿಯುತ್ತಿರು

ವಾಗ ಆಕೆಯ ಮುಖದಿಂದ ಶಬ್ದಗಳು ಹೊರಡದಾದವು. ಆಕೆಯ ಕಣ್ಣುಗಳು ಅಶ್ರು ಪೂರ್ಣವಾದವು!

ಸೀತೆಯು ಅತ್ಯಂತ ವಿರಹವ್ಯಾಕುಲಳಾದದ್ದನ್ನು ನೋಡಿ ಮಾರುತಿಯು ಮೃದು ನುಡಿಗಳನ್ನು ಆಡತೊಡಗಿದನು—ಎಲೈ ಮಾತೆಯೇ, ಲಕ್ಷ್ಮಣನೊಡನೆ ದಯಾನಿಧಾನನಾದ ಪ್ರಭುವು ಕ್ಷೇಮದಿಂದಿದ್ದು, ನಿನ್ನ ದುಃಖದಿಂದ ದುಃಖಿತನಾಗಿರುವನು. ಎಲೈ ಜನನಿಯೇ, ಮನಸ್ಸಿನಲ್ಲಿ ಯಾವ ಸಂಶಯವನ್ನೂ ಹಿಡಿಯಬೇಡ. ನಿನ್ನ ಪ್ರೇಮಕ್ಕಿಂತಲೂ ರಾಮನ ಪ್ರೇಮವು ನಿನ್ನ ಮೇಲೆ ದ್ವಿಗುಣಿತವಾಗಿರುವದು. ಎಲೈ ಜನನೀ ಇನ್ನು ಧೈರ್ಯತಾಳಿ ರಘುಪತಿಯ ನಿರೂಪವನ್ನು ಶ್ರವಣಮಾಡು, ಎಂದು ನುಡಿಯುವಷ್ಟರಲ್ಲಿ ಆತನ ಕಂಠಬಿಗಿದು ಆತನ ನೇತ್ರಗಳು ಅಶ್ರುಪೂರ್ಣವಾದವು. ಮತ್ತು ಆತನು— ತಾಯಿ, ರಾಮನು ಆಡಿದ ಮಾತುಗಳಿವು, ಲಕ್ಷಗೊಟ್ಟು ಕೇಳು—"ಎಲೈ ಸೀತೆಯೇ, ನಿನ್ನ ವಿಯೋಗದಿಂದ ನನಗೆ ಯಾವತ್ತೂ ವಿಪರೀತವಾಗಿರುವದು. ನೂತನವಾದ ತರು ಪಲ್ಲವಗಳು ನನಗೆ ಅಗ್ನಿಯಂತೆ ತೋರುತ್ತಿದ್ದು, ರಾತ್ರಿಯು ಕಾಳರಾತ್ರಿಯಂತೆ ತೋರುತ್ತಿರುವದು. ಚಂದ್ರನು ಸೂರ್ಯನಂತೆಯೂ, ಕಮಲವನವು ಭರ್ಚಿಗಳವನದಂತೆಯೂ, ಮೇಘಗಳು ಕಾದ ಎಣ್ಣೆಯನ್ನು ಸುರಿಸುತ್ತಿರುವಂತೆಯೂ ತೋರುತ್ತಿರುವವು. ಪ್ರಿಯೇ, ತನ್ನ ದುಃಖವನ್ನು ಪರರಿಗೆ ಹೇಳುವದರಿಂದ ಅದು ಕಿಂಚಿತ್ ಕಡಿಮೆಯಾಗುವದು; ಆದರೆ ಅದನ್ನು ಯಾರಮುಂದೆ ಹೇಳಬೇಕೆಂಬದೇ ನನಗೆ ತಿಳಿಯಲೊಲ್ಲದು. ಎಲೈ ಪ್ರಿಯೇ, ನಿನ್ನ ಹಾಗು ನನ್ನ ಪ್ರೇಮದೊಳಗಿನ ತತ್ವವನ್ನು ಕೇವಲ ನನ್ನ ಮನಸ್ಸೇ ತಿಳಿಯುತ್ತಿದ್ದು, ಅದು ಯಾವಾಗಲೂ ನಿನ್ನ ಬಳಿಯಲ್ಲಿಯೇ ಇರುತ್ತಿರುವದು. ಇಷ್ಟರಿಂದಲೇ ಪ್ರೇಮ ರಸವನ್ನು ಗುರುತಿಸಿಕೊಳ್ಳು"

ಪ್ರಭುವಿನ ಈ ಸಂದೇಶವನ್ನು ಕೇಳಿದಕೂಡಲೆ ಜಾನಕಿಯು ಪ್ರೇಮನಿಮಗ್ನಳಾಗಿ ಮೈಮರೆತಳು. ಆಗ ಮಾರುತಿಯು—ತಾಯಿ, ಧೈರ್ಯತಾಳು. ಸೇವಕರಿಗೆ ಸುಖವನ್ನೀಯುವ ರಾಮಚಂದ್ರನ ಸ್ಮರಣಮಾಡಿ, ಆ ರಘುಪತಿಯ ಪ್ರಭಾವವನ್ನು ಲಕ್ಷದಲ್ಲಿಟ್ಟು ಭೀತಿಯನ್ನು ಪರಿತ್ಯಜಿಸಿ ನನ್ನ ಮಾತುಗಳನ್ನು ಕೇಳು. ರಾಕ್ಷಸಸಮುದಾಯವು ಪತಂಗದಂತೆ ಇದ್ದು, ರಘುಪತಿಯ ಬಾಣಗಳು ಅಗ್ನಿಯಂತೆಯಿರುವದರಿಂದ ರಾಕ್ಷಸರು ದಗ್ಧರಾಗಿರುವರೆಂದು ತಿಳಿದು ಹೃದಯದಲ್ಲಿ ಧೈರ್ಯತಾಳು. ರಘುವೀರನಿಗೆ ನಿನ್ನ ಗೊತ್ತು ಹತ್ತಿದ್ದರೆ ಆತನು ತಡಮಾಡುತ್ತಿದ್ದಿಲ್ಲ. ಜಾನಕೀ, ರಾಮಬಾಣದ ಮುಂದೆ ರಾಕ್ಷಸರ ಪಾಡೇನು? ನಾನು ಈಗಲೇ ನಿನ್ನನ್ನು ಕರಕೊಂಡಾದರೂ ಹೋಗುತ್ತಿದ್ದೆನು; ಆದರೆ ರಾಮನ ಅಣೆಯೆಂದರೂ ನನಗೆ ಆತನು ಹಾಗೆ ಮಾಡೆಂದು ಹೇಳಿರುವದಿಲ್ಲ. ಎಲೈ ತಾಯಿಯೇ, ಸ್ವಲ್ಪೇ ದಿವಸ ಧೈರ್ಯತಾಳು. ರಘುವೀರನು ಕಪಿಗಳೊಡನೆ ಬಂದು ರಾಕ್ಷಸರನ್ನು ಕೊಂದು ನಿನ್ನನ್ನು ಕರಕೊಂಡು ಹೋಗುವನು. ನಾರದಾದಿಕರು ಆತನ

ಯಶಸ್ಸನ್ನು ತ್ರೈಲೋಕ್ಯಗಳಲ್ಲಿ ಗಾಯನ ಮಾಡುವರು, ಅನ್ನಲು, ಸೀತೆಯು—ಬಾಳಾ ಎಲ್ಲ ವಾನರರು ನಿನ್ನಂತೆಯೇ ಇರುವರೇನು? ರಾಕ್ಷಸವೀರರು ಮಹಾಬಲಾಢ್ಯರಾದದರಿಂದ, ನನ್ನ ಮನಸ್ಸಿನಲ್ಲಿ ಬಹು ಸಂಶಯವು ಉತ್ಪನ್ನವಾಗುತ್ತಿರುವದು, ಎಂದು ಕೇಳಿದಳು. ಆಗ ಮಾರುತಿಯು ತನ್ನ ಸುವರ್ಣಪರ್ವತಾಕಾರದ ದೇಹವನ್ನು ಪ್ರಕಟಮಾಡಿದನು. ಸಮರಭಯಂಕರನೂ, ಅತ್ಯಂತ ಬಲಾಢ್ಯನೂ ಆದ ಆ ವೀರನನ್ನು ನೋಡಿ ಸೀತೆಯ ಮನಸ್ಸಿನಲ್ಲಿ ವಿಶ್ವಾಸವು ಉತ್ಪನ್ನವಾಯಿತು. ಆಮೇಲೆ ಮಾರುತಿಯು ತನ್ನ ಮೊದಲಿನ ಲಘುರೂಪವನ್ನು ಧರಿಸಿ——ಎಲ್ಯೆ ಮಾತೆಯೆ, ವಾನರರಲ್ಲಿ ಬುದ್ಧಿಯೂ ಶಕ್ತಿಯೂ ಬಹಳವಾಗಿರುವದಿಲ್ಲ; ಆದರೂ ಪ್ರಭುವಿನ ಪ್ರತಾಪದಿಂದ ಸಣ್ಣದಾದ ಹಾವಾದರೂ ಗರುಡನನ್ನು ನುಂಗಿಬಿಡಬಹುದು!

ಭಕ್ತಿ, ಪರಾಕ್ರಮ, ತೇಜ, ಬಲಗಳಿಂದ ತುಂಬಿರುವ ಮಾರುತಿಯ ಈ ಮಾತುಗಳನ್ನು ಕೇಳಿ ಸೀತೆಯು ಪ್ರಸನ್ನಳಾದಳು. ಆಕೆಯು ಮಾರುತಿಯನ್ನು ರಾಮಪ್ರಿಯನೆಂದು ತಿಳಿದು ಆತನನ್ನು ಕುರಿತು—"ಎಲೈ ತಾತನೇ, ನೀನು ಬಲ-ಶೀಲಗಳ ನಿಧಿಯಾಗಿ, ಜರಾರಹಿತನೂ, ಗುಣನಿಧಿಯೂ ಆಗು. ಬಾಳಾ, ರಘುನಾಯಕನು ನಿನ್ನ ಮೇಲೆ ಅತ್ಯಂತ ಪ್ರೇಮಮಾಡುವನು" ಎಂದು ವರಪ್ರದಾನಮಾಡಿದಳು. "ರಘುನಾಯಕನು ಅತ್ಯಂತ ಪ್ರೇಮ ಮಾಡುವನು." ಎಂಬ ಶಬ್ದಗಳು ಕಿವಿಗೆ ಬಿದ್ದಕೂಡಲೆ ಹನುಮಂತನು ನಿರ್ಭರ ಪ್ರೇಮದಲ್ಲಿ ನಿಮಗ್ನನಾದನು. ಆತನು ಪುನಃ ಪುನಃ ಸೀತೆಯ ಚರಣಗಳಲ್ಲಿ ಮಸ್ತಕವಿಟ್ಟು ಕೈಜೋಡಿಸಿ—ಮಾತೇ, ಈಗ ನಾನು ಕೃತಕೃತ್ಯನಾದೆನು; ಯಾಕಂದರೆ, ನಿನ್ನ ಆಶೀರ್ವಾದವು ಅಮೋಘವಾದದ್ದೆಂದು ಖ್ಯಾತಿಯು ಇರುವದು. ಎಲೈ ತಾಯಿಯೇ ಕೇಳು. ಈ ಸುಂದರವಾದ ಫಲವೃಕ್ಷಗಳನ್ನು ನೋಡಿ ನನಗೆ ಬಹಳ ಹಸಿವೆಯಾಗಿರುವದು. ಅನ್ನಲು, ಸೀತೆಯು—ಬಾಳಾ, ಕೇಳು. ದೊಡ್ಡ ದೊಡ್ಡ ರಾಕ್ಷಸವೀರರು ಈ ವನವನ್ನು ಕಾಯುತ್ತಿರುವರು. ಎಂದು ಹೇಳಿದಳು. ಅದಕ್ಕೆ ಮಾರುತಿಯು —ತಾಯಿಯೇ, ನಿನಗೆ ಮನಃಪೂರ್ವಕವಾಗಿ ನನ್ನ ಬೇಡಿಕೆಯು ಸೇರುತ್ತಿದ್ದರೆ ಆ ರಾಕ್ಷಸರ ಭೀತಿಯು ನನಗೆ ಕಿಂಚಿತ್ತಾದರೂ ಇರುವದಿಲ್ಲ. ಎಂದು ಹೇಳಿದನು. ಮಾರುತಿಯು ಬುದ್ಧಿ—ಬಲ—ನಿಪುಣನಿರುವನೆಂದು ತಿಳಿದು ಸೀತೆಯು ಆತನಿಗೆ—"ಬಾಳಾ, ಹೃದಯದಲ್ಲಿ ರಘುಪತಿಯನ್ನು ಧ್ಯಾನಿಸಿ ಹೋಗಿ ಮಧುರಫಲಗಳನ್ನು ತಿನ್ನು" ಎಂದು ಅಪ್ಪಣೆಕೊಟ್ಟಳು. ಆಗ ಮಾರುತಿಯು ಸೀತೆಯನ್ನು ವಂದಿಸಿ ವನವನ್ನು ಹೊಕ್ಕು ಹಣ್ಣುಗಳನ್ನು ತಿನ್ನುತ್ತಾ ಗಿಡಗಳನ್ನು ಮುರಿಯುತೊಡಗಿದನು. ಕಾವಲುಗಾರರಾಗಿದ್ದ ಅನೇಕವೀರರಲ್ಲಿ ಕೆಲವರನ್ನು ಕೊಂದನು. ಕೆಲವರು ರಾವಣನ ಕಡೆಗೆ ಕೂಗುತ್ತಾ ಹೋಗಿ ಆತನನ್ನು ಕುರಿತು—ಮಹಾರಾಜ, ಒಂದು ಪ್ರಚಂಡವಾದ ವಾನರವು ಬಂದಿದು

ದು ಅಶೋಕವನವನ್ನು ಹಾಳುಮಾಡಿರುವದು. ಅದು ಹಣ್ಣುಗಳನ್ನು ತಿಂದು ಗಿಡಗಳನ್ನು ಮುರಿದು ರಾಕ್ಷಸವೀರರನ್ನು ಕೊಂದುಕೊಂದು ನೆಲದಮೇಲೆ ಬೀಸಾಡುತ್ತಿರುವದು, ಎಂದು ಹೇಳಿದರು ಆಗ ರಾವಣನು ಅನೇಕವೀರರನ್ನು ಕಳುಹಲು, ಮಾರುಯು ಅವರನ್ನು ನೋಡಿ ಗರ್ಜಿಸಿ ಅವರೆಲ್ಲರನ್ನು ಸಂಹರಿಸಿದನು. ಅವರಲ್ಲಿ ಅರೆಜೀವವಾದವರು ಆಕ್ರೋಶಮಾಡುತ್ತ ಓಡಿದರು. ರಾವಣನು ಪುನಃ ತನ್ನ ಮಗನಾದ ಅಕ್ಷನನ್ನು ಕಳಿಸಲು, ಆತನು ಅನೇಕ ವೀರರನ್ನು ಕರಕೊಂಡು ಹೊರಟನು. ಆತನು ಬರುತ್ತಿರುವದನ್ನು ನೋಡಿ ಮಾರುತಿಯು ಒಂದು ವೃಕ್ಷವನ್ನು ತಕ್ಕೊಂಡು ಅವನ ಮೇಲೆ ಏರಿಹೋಗಿ ಅವನನ್ನು ಕೊಂದು ಭಯಂಕರ ಗರ್ಜನೆಯನ್ನು ಮಾಡಿದನು. ಮಾರುತಿಯು ಎಷ್ಟೋ ರಾಕ್ಷಸರನ್ನು ಕೊಂದನು. ಎಷ್ಟೋ ರಾಕ್ಷಸರನ್ನು ಹಿಚಿಕಿದನು. ಎಷ್ಟೋ ರಾಕ್ಷಸರನ್ನು ಧೂಳಿಯಲ್ಲಿ ಕೂಡಿಸಿದನು. ಕೆಲವು ರಾಕ್ಷಸರು ರಾವಣನ ಬಳಿಗೆ ಕೂಗುತ್ತ ಹೋಗಿ—ಈ ಮರ್ಕಟವು ಅತ್ಯಂತ ಬಲಿಷ್ಠವಾಗಿರುವದು ಎಂದು ಹೇಳಿದರು.

ಅಕ್ಷನ ವಧವಾದದ್ದನ್ನು ಕೇಳಿ ರಾವಣನು ಕ್ರುದ್ಧನಾಗಿ, ಮಹಾಬಲಾಢ್ಯನಾದ ಮೇಘನಾದನೆಂಬ ತನ್ನ ಹಿರಿಯಮಗನನ್ನು ಕಳಿಸುವಾಗ ಆತನನ್ನು ಕುರಿತು–ಎಲೈ ಮಗನೇ, ಆ ಕಪಿಯನ್ನು ಕೊಲ್ಲಬೇಡ, ಕಟ್ಟಿಕೊಂಡೇ ತಕ್ಕೊಂಡುಬಾ. ಅದು ಎಲ್ಲಿಂದ ಬಂದಿರುತ್ತದೆಂಬದನ್ನಾದರೂ ಕೇಳೋಣ, ಎಂದು ಹೇಳಿದನು. ಅತುಲ ಪರಾಕ್ರಮಿಯಾದ ಆ ಇಂದ್ರಜಿತುವು ಬಂಧುವಿನ ಮರಣದ ಸುದ್ದಿಯನ್ನು ಕೇಳಿ ಸಿಟ್ಟಿನಿಂದ ಹೊರಟನು. ಮಾರುತಿಯು ಆತನನ್ನು ನೋಡಿ, ಈತನು ಮಹಾವೀರನಿರುವನೆಂದು ತಿಳಿದು ಹಲ್ಲು ಕಡಿಯುತ್ತ ಗರ್ಜಿಸಿ ಆತನ ಮೇಲೆ ಏರಿಹೋದನು. ಮಾರುತಿಯು ಒಂದು ಅತ್ಯಂತ ವಿಶಾಲವಾದ ವೃಕ್ಷವನ್ನು ಕಿತ್ತುಕೊಂಡು ಅದರ ಹೊಡತದಿಂದ ಇಂದ್ರಜಿತುವನ್ನು ವಿರಥನಾಗಮಾಡಿದನು. ಬಳಿಕ ಅವರಿಬ್ಬರು ವೀರರಲ್ಲಿ ಅಗಾಧವಾದ ಯುದ್ಧವು ಅಪಾರವು ನಡೆಯಿತು. ಕಡೆಗೆ ಮೇಘನಾದನು ಬ್ರಹ್ಮಾಸ್ತ್ರವನ್ನು ಮಾರುತಿಯ ಮೇಲೆ ಪ್ರಯೋಗಿಸಿದನು. ಆಗ ಮಾರುತಿಯು ಮನಸ್ಸಿನಲ್ಲಿ –ಈಗ ನಾನು ಬ್ರಹ್ಮಾಸ್ತ್ರದ ಮಾನವನ್ನು ಕಾಯದಿದ್ದರೆ, ಅದರ ಅಪಾರವಾದ ಮಹಿಮೆಗೆ ಗೌಣತ್ವವುಂಟಾಗುವದು. ಎಂದು ಆಲೋಚಿಸಿ ಇಂದ್ರಜಿತುವಿನ ಬ್ರಹ್ಮಾಸ್ತ್ರಕ್ಕೆ ಅಂಕಿತನಾಗಿ ಬೀಳ ಬೀಳುತ್ತಲೇ ಆತನ ಸೈನ್ಯವನ್ನು ಸಂಹರಿಸಿದನು. ಕಪಿಯು ಮೂರ್ಛಿತನಾಗಿರುವದನ್ನು ನೋಡಿ ಇಂದ್ರಜಿತುವು ಆತನನ್ನು ನಾಗಪಾಶದಿಂದ ಬಂಧಿಸಿ ತಕ್ಕೊಂಡು ಹೋದನು. ಶಂಕರನು ಪಾರ್ವತಿಯನ್ನು ಕುರಿತು—ಎಲೈ ಭವಾನಿಯೇ, ಯಾವನ ನಾಮಜಪದಿಂದ ಜ್ಞಾನಿಗಳಾದ ಮನುಷ್ಯರು ಭವಬಂಧನಗಳನ್ನು ಹರಿದು ಚಲ್ಲುವರೋ, ಅಂಥವನ ದಾಸನು ಕಟ್ಟಲ್ಪಡುವದು ಶಕ್ಯವಾದರೂ ಇರುವದೆಯೇ? ಆದರೆ ಪ್ರಭುವಿನ ಕಾರ್ಯ

ಕ್ಕಾಗಿ ಮಾರುತಿಯು ತನ್ನನ್ನು ಕಟ್ಟಿಸಿಕೊಂಡನು. ಕಪಿಯನ್ನು ಕಟ್ಟಿಕೊಂಡು ಬಂದಿರುವರೆಂಬುದನ್ನು ಕೇಳಿ ರಾಕ್ಷಸರು ಧಾವಿಸಿ ಆ ಕೌತುಕವನ್ನು ನೋಡುವದಕ್ಕಾಗಿ ಎಲ್ಲರೂ ರಾವಣನ ಸಭೆಗೆ ಬಂದರು. ಮಾರುತಿಯು ಹೋಗಿ ರಾವಣನ ಸಭೆಯನ್ನು ನೋಡಿದನು. ಆತನ ವಿಶಾಲವಾದ ವೈಭವವು ಅವರ್ಣನೀಯವಾಗಿ ಇದ್ದಿತು. ಯಾವತ್ತುದೇವತೆಗಳೊಡನೆ ದಿಕ್ಪಾಲಕರು ಅಂಜಿಕೆಯಿಂದ ಕೈಜೋಡಿಸಿ, ನಮ್ರರಾಗಿ ರಾವಣನ ಹುಬ್ಬುಗಳ ಕಡೆಗೆ ನೋಡುತ್ತಲಿದ್ದರು. ಆತನ ಈ ಪ್ರತಾಪವನ್ನು ನೋಡಿಯೂ, ಸರ್ಪಸಮೂಹದಲ್ಲಿ ಗರುಡನು ನಿರ್ಭಯನಾಗಿರುವಂತೆ ಮಾರುತಿಯು ರಾವಣನ ಸಭೆಯಲ್ಲಿ ನಿರ್ಭಯನಾಗಿದ್ದನು.

ರಾವಣನು ಹನುಮಂತನನ್ನು ನೋಡಿ ನಕ್ಕು ಕೆಟ್ಟ ಮಾತುಗಳನ್ನು ಆಡತೊಡಗಿದನು. ಅಷ್ಟರಲ್ಲಿ ಆತನಿಗೆ ನಂದಿಕೇಶ್ವರನ ಶಾಪ ನೆನಪಾಗಲು, ವಿಷಾದವಾಯಿತು. ಆತನು ಮಾರುತಿಯನ್ನು ಕುರಿತು—ಎಲೈ ಕಪಿಯೇ, ನೀನು ಯಾರು? ಯಾರಬಲದಿಂದ ನೀನು ಈ ತೋಟವನ್ನು ನಾಶಮಾಡಿದೆ? ನೀನು ಎಂದೂ ನನ್ನನ್ನು ಕಿವಿಯಿಂದ ಕೇಳಿರುವದಿಲ್ಲವೇ? ನೀನು ಅತ್ಯಂತ ಉದ್ಧಟನೂ, ಶಠನೂ ಆಗಿರುವಂತೆ ನನಗೆ ತೋರುತ್ತದೆ. ಯಾವ ತಪ್ಪಿಗಾಗಿ ನೀನು ರಾಕ್ಷಸರನ್ನು ಕೊಂದೆ? ಎಲೈ ಶಠನೇ, ಹೇಳು. ನಿನಗೆ ನಿನ್ನ ಪ್ರಾಣದ ಅಂಜಿಕೆಯೂ ಇರುವದಿಲ್ಲವೇ?" ಅನ್ನಲು, ಮಾರುತಿಯು—ರಾವಣಾ, ಕೇಳು. ಯಾವಾತನ ಬಲದಿಂದ ಮಾಯೆಯು ಕೋಟಿಗಟ್ಟಲೆ ಬ್ರಹ್ಮಾಂಡಗಳನ್ನು ನಿರ್ಮಿಸುವಳೋ, ಯಾವಾತನ ಬಲದಿಂದ ಬ್ರಹ್ಮ–ವಿಷ್ಣು–ಮಹೇಶ್ವರರು ಸೃಷ್ಟಿ–ಸ್ಥಿತಿ–ಲಯಗಳನ್ನು ಮಾಡುವರೋ, ಯಾವಾತನ ಪ್ರತಾಪದಿಂದ ಗಿರಿಕಾನನಗಳಿಂದ ಸಹಿತವಾದ ಬ್ರಹ್ಮಾಂಡವನ್ನು ಸಹಸ್ರ ಮುಖ ಶೇಷನು ತನ್ನ ಮಸ್ತಕದಲ್ಲಿ ಧರಿಸುವನೋ, ಯಾವ ಸುರ–ರಕ್ಷಕನು ನಾನಾವಿಧ ದೇಹಗಳನ್ನು ಧರಿಸಿ ನಿಮ್ಮಂಥ ಶಠರನ್ನು ಶಿಕ್ಷಿಸುವನೋ, ಯಾವನು ಕಠಿಣವಾದ ಶಿವ ಧನುಸ್ಸನ್ನು ಖಂಡಿಸಿ ನಿನ್ನಿಂದ ಸಹಿತವಾಗಿ ಯಾವತ್ತು ರಾಜರಮದವನ್ನು ಇಳಿಸಿದನೋ, ಯಾವಾತನು ಖರ–ದೂಷಣ–ತ್ರಿಶಿರ–ವಾಲಿಯವರಂಥ ಅಸಾಧಾರಣ ಬಲಿಷ್ಠರನ್ನು ವಧಿಸಿದನೋ, ಯಾವಾತನ ಬಲದ ಲವಲೇಶಮಾತ್ರದಿಂದ ನೀನು ಯಾವತ್ತು ವಿಶ್ವವನ್ನು ಜಯಿಸಿದೆಯೋ, ಯಾವನ ಪ್ರಿಯ ಪತ್ನಿಯನ್ನು ನೀನು ಕದ್ದುಕೊಂಡು ಬಂದೆಯೋ ಆತನ ದೂತನು ನಾನಿರುತ್ತೇನೆ. ನಾನು ನಿನ್ನ ಪರಾಕ್ರಮವನ್ನು ಅರಿತಿರುವೆನು. ಸಹಸ್ರಬಾಹುವಾದ ಕಾರ್ತವೀರ್ಯನೊಡನೆ ಯುದ್ಧಮಾಡುವಾಗ ನೀನೇ ಇದ್ದೆ; ವಾಲಿಯೊಡನೆ ಯುದ್ಧಮಾಡಿ ಜಯಿಸಿದವನೂ ನೀನೆಯೇ! ಅನ್ನಲು, ರಾವಣನು ಈ ಮಾತುಗಳನ್ನು ನಗೆಯಮೇಲೆ ಹಾಕಿಕೊಂಡನು. ಮಾರುತಿಯು ಪುನಃ ಆತನನ್ನು ಕುರಿತು—ರಾವಣಾ, ನನಗೆ ಹಸಿವೆಯಾದುದರಿಂದ ಹಣ್ಣುಗಳನ್ನು ತಿಂದೆನು; ಗಿಡಮುರಿಯುವದಂತೂ ಕಪಿಯ ಸ್ವಭಾ

ವರೇ! ಎಲೈ ರಾಕ್ಷಸ ರಾಜನೇ, ಎಲ್ಲರಿಗೂ ತಮ್ಮ ತಮ್ಮ ದೇಹವು ಅತ್ಯಂತ ಪ್ರಿಯ ವಾಗಿರುವಾಗ, ರಾಕ್ಷಸರು ನನ್ನನ್ನು ಹೊಡೆಯಬರಲು, ನಾನು ಅವರನ್ನು ಕೊಂದೆನು. ಆ ಮೇಲೆ ನಿನ್ನ ಮಗನು ನನ್ನನ್ನು ಕಟ್ಟಿಕೊಂಡು ಬಂದನು; ಆದರೆ ಕಟ್ಟಿದ್ದಕ್ಕಾಗಿ ನನಗೇನೂ ನಾಚಿಕೆ ಯುಂಟಾಗಿರುವದಿಲ್ಲ; ಯಾಕೆಂದರೆ, ನಾನು ಪ್ರಭುವಿನ ಕಾರ್ಯವನ್ನು ಮಾಡಲು ಇಚ್ಛಿಸುತ್ತಿರುವೆನು. ಎಲೈ ರಾವಣನೇ, ನಾನು ಕೈ ಜೋಡಿಸಿ ನಿನಗೆ ಹೇಳಿ ಕೊಳ್ಳುವೆನು. ನೀನು ಅಭಿಮಾನವನ್ನು ಬಿಟ್ಟು ನನ್ನ ಮಾತುಗಳನ್ನು ಕೇಳು. ನೀನು ನಿನ್ನ ಕುಲವಾವುದೆಂಬದನ್ನು ವಿಚಾರಮಾಡಿ ಭ್ರಮವನ್ನು ತ್ಯಜಿಸಿ ಭವಭಂಜನ ಪ್ರಭುವನ್ನು ಭಜಿಸು. ಯಾವನ ಭಯದಿಂದ ಯಮನೂ ಗಡಗುಟ್ಟಿನಡುಗುವನೋ, ಸುರಾಸುರ ಪ್ರಭೃತಿ ಚರಾಚರವಿಶ್ವವನ್ನು ಯಾವನು ಸಂಹರಿಸುವನೋ ಆತನೊಡನೆ ಎಂದೂ ಶತ್ರುತ್ವವನ್ನು ಬಳಿಸಬೇಡ. ನನ್ನ ಮಾತಿನಿಂದ ಜಾನಕಿಯನ್ನು ಕೊಟ್ಟುಬಿಡು. ಪ್ರಣತಪಾಲಕನೂ, ಕರುಣಾಸಾಗರನೂ, ಖಳರಿಪುವೂ, ರಘುನಾಯಕನೂ ಆದ ಪ್ರಭುವಿಗೆ ನೀನು ಶರಣುಹೋದರೆ, ನಿನ್ನ ಅಪರಾಧವನ್ನು ಮರೆತು ಆತನು ನಿನ್ನನ್ನು ರಕ್ಷಿಸುವನು. ಶ್ರೀರಾಮನ ಚರಣಕಮಲಗಳನ್ನು ಹೃದಯದಲ್ಲಿಧರಿಸಿ ನೀನು ನಿರ್ಬಾಧವಾಗಿ ಲಂಕೆಯ ರಾಜ್ಯವನ್ನು ಆಳು. ಪುಲಸ್ತ್ಯಋಷಿಯ ನಿರ್ಮಲಯಶೋರೂಪ ಚಂದ್ರಮನಿಗೆ ನೀನು ಕಲಂಕಪ್ರಾಯನಾಗಬೇಡ. ರಾಮದ್ರೋಹಿಯಾದವನನ್ನು ಸಹಸ್ರಾವಧಿ ಬ್ರಹ್ಮ-ವಿಷ್ಣು-ಮಹೇಶ್ವರರಾದರೂ ರಕ್ಷಿಸಲು ಸಮರ್ಥರಾಗಲಾರರು. ನೀನು ಅಜ್ಞಾನವನ್ನೂ ಅಭಿಮಾನವನ್ನೂ ತ್ಯಜಿಸು; ಯಾಕಂದರೆ ಅವೇ ಮೋಹಕ್ಕೆ ಕಾರಣವಾಗಿದ್ದು, ಅತ್ಯಂತ ದುಃಖಪ್ರದವಾಗಿರುವವು. ನೀನು ಕೃಪಾಸಾಗರನಾದ ಭಗವಾನ್ ರಘುಪತಿರಾಮಚಂದ್ರನಲ್ಲಿ ಭಕ್ತಿಯನ್ನಿಡು.

ಹೀಗೆ ಹನುಮಂತನು ಭಕ್ತಿ-ಜ್ಞಾನ-ವೈರಾಗ್ಯಗಳಿಂದ ಕೂಡಿದ ಅತ್ಯಂತಹಿತಕರವಾದ ಉಪದೇಶವನ್ನು ಮಾಡಿದರೂ, ಅತ್ಯಂತ ಗರ್ವಿಷ್ಠನಾದ ರಾವಣನು ನಕ್ಕು-"ಮಂಗನು ನೀನು ನನಗೆ ಒಳ್ಳೇಜ್ಞಾನಿಯಾದ ಗುರುವು ಭೆಟ್ಟಿಯಾಗಿರುವೆ. ದುಷ್ಟಾ, ನಿನ್ನ ಮರಣವು ಸಮೀಪಿಸಿರುವದರಿಂದಲೇ ನನಗೆ ಉಪದೇಶಮಾಡುತ್ತಿರುವೆ" ಅನ್ನಲು, ಮಾರುತಿಯು-ರಾವಣಾ, ನಿನ್ನ ಮಾತು ಮಾತ್ರ ತಿರುವು ಮುರುವು ಆಗಿರುವದು; ನೀನಂದಂತೆ ಮರಣವೇನೋ ನಿಶ್ಚಯವಾಗಿಬಂದಗಿರುವದು; ಆದರೆ ಅದು ನನಗಲ್ಲ ನಿನಗೆ; ಯಾಕಂದರೆ, ನೀನು ಭ್ರಮಿಷ್ಠನಾಗಿರುವೆಯೆಂಬದು ನನಗೆ ಮೇಲೆಯೇ ಕಾಣುತ್ತದೆ, ಎಂದು ಉತ್ತರಕೊಟ್ಟನು. ಅದನ್ನು ಕೇಳಿದ ಕೂಡಲೆ ರಾವಣನು ಸಿಟ್ಟಾಗಿ-ಈ ಮೂರ್ಖನ ಪ್ರಾಣವನ್ನು ಯಾರಾದರೂ ಬೇಗನೆ ಯಾಕೆ ಹರಣಮಾಡುವದಿಲ್ಲ ಎಂದು ಗರ್ಜಿಸಲು, ರಾಕ್ಷಸವೀರರು ಮಾರುತಿಯನ್ನು ಕೊಲ್ಲುವದಕ್ಕಾಗಿಧಾವಿಸಿದರು. ಆಗ ಸಚಿವರೊಡನೆ ವಿಭೀಷಣನು ಅಣ್ಣನ ಸಮೀಪಕ್ಕೆಬಂದು ತಲೆಬಾಗಿಸಿ ಹಲವು ಬಗೆ

ಯಿಂದ ಆತನಿಗೆ ಹೇಳಿಕೊಂಡು ಆತನನ್ನು ಕುರಿತು—ಹೀಗೆ ಮಾಡಿದರೆ ನೀತಿಗೆ ವಿರೋಧವಾಗುವದರಿಂದ ಈ ದೂತನನ್ನು ಕೊಲ್ಲಬಾರದು. ಸ್ವಾಮಿಯೇ, ಈತನಿಗೆ ಬೇರೆ ಯಾವದಾದರೊಂದು ಶಿಕ್ಷೆಯನ್ನು ಕೊಡಬೇಕು, ಎಂದು ಬೇಡಿಕೊಳ್ಳಲು, ಎಲ್ಲರೂ—ಎಲೈ ಬಂಧುವೇ, ತಾವು ಯೋಗ್ಯಆಲೋಚನೆಯನ್ನು ಹೇಳಿದಿರಿ, ಎಂದು ಅಭಿನಂದಿಸಿದರು. ಅದನ್ನು ಕೇಳಿದಕೂಡಲೆ ರಾವಣನು ನಕ್ಕು—"ಈ ಮಂಗವನ್ನು ವಿದ್ರೂಪವಾಗಿ ಮಾಡಿ ಕಳಿಸಿಕೊಡಿರಿ. ಮಂಗಗಳಿಗೆ ತಮ್ಮ ಬಾಲಗಳ ಮೇಲೆ ಪ್ರೀತಿಯು ಬಹಳ; ಆದ್ದರಿಂದ ಇದರ ಬಾಲಕ್ಕೆ ಎಣ್ಣೆಯಲ್ಲಿಎದ್ದಿದ ಅರಿವೆಗಳನ್ನುಸುತ್ತಿ ಅದಕ್ಕೆ ಬೆಂಕೆಯನ್ನು ಹಚ್ಚಿಬಿಡರಿ. ಈ ಬಾಲವಿಲ್ಲದ ಮಂಗವು ತಿರುಗಿ ತನ್ನ ಮೂರ್ಖಪ್ರಭುವನ್ನು ಕರಕೊಂಡು ಬಂದೀತು! ಇದು ಇಷ್ಟ್ಯೊಂದಾಗಿ ಹೇಳಿದ ತನ್ನ ಪ್ರಭುವಿನ ಪ್ರತಾಪವು ಎಷ್ಟಿರುತ್ತದೆಂಬದನ್ನು ನೋಡುವಸಂಧಿಯಾದರೂ ನನಗೆ ದೊರೆಯಲಿ" ಎನ್ನಲು, ಮಾರುತಿಯು ಮನಸ್ಸಿನಲ್ಲಿ ನಕ್ಕು—ರಾವಣಾ, ನಿನಗೆ ಸರಸ್ವತಿಯೇ ಸಹಾಯಕಳಾಗಿರುವಂತೆ ನನಗೆ ತೋರುತ್ತದೆ, ಎಂದು ಸೂಚಿಸಿದನು. ರಾವಣನ ಅಪ್ಪಣೆಯಾದಕೂಡಲೆ ಮುಖ್ಯ ಮುಖ್ಯ ರಾಕ್ಷಸರು ಆತನು ಹೇಳಿದಂತೆ ವ್ಯವಸ್ಥೆ ಮಾಡತೊಡಗಿದರು. ಆಗ ಮಾರುತಿಯ ಬಾಲವು ಅಮರ್ಯಾದಿತವಾಗಿ ಬೆಳೆದು, ಲಂಕಾಪಟ್ಟಣದೊಳಗಿನ ಅರಿವೆ, ಎಣ್ಣೆ, ತುಪ್ಪಗಳೆಲ್ಲ ತೀರಿಹೋದವು. ಹನುಮಂತನು ಇದೊಂದು ಆಟವನ್ನೇಮಾಡಿದನು. ಪುರನಿವಾಸಿಗಳು ಈ ಕೌತುಕವನ್ನು ನೋಡುವದಕ್ಕಾಗಿ ಹಿಂದುಹಿಂದಾಗಿ ನಿಂತು, ಅವರು ಮಾರುತಿಯನ್ನು ಒಮ್ಮೊಮ್ಮೆ ಒದ್ದು ಗಹಗಹಿಸಿ ನಗತೊಡಗಿದರು. ಆಮೇಲೆ ಅವರು ಡೊಳ್ಳು ಬಾರಿಸುತ್ತ ಚಪ್ಪಳೆಇಕ್ಕುತ್ತ ಪಟ್ಟಣದ ತುಂಬೆಲ್ಲಆತನನ್ನು ಮೆರಿಸಿ, ಆಮೇಲೆಆತನ ಬಾಲಕ್ಕೆ ಬೆಂಕೆಯನ್ನು ಹಚ್ಚಿದರು.

ತನ್ನ ಬಾಲಕ್ಕೆ ಬೆಂಕೆಯು ಚನ್ನಾಗಿ ಹತ್ತಿದ್ದನ್ನು ನೋಡಿ ಮಾರುತಿಯು ಕೂಡಲೆ ಸೂಕ್ಷ್ಮದೇಹವನ್ನು ಧರಿಸಿ ಟಣ್ಣನೆ ಹಾರಿ ಒಂದುಬಂಗಾರದ ಮನೆಯ ಮಾಳಿಗೆಯನ್ನು ಹತ್ತಿದನು. ಆಗ ಮಾತ್ರ ರಾಕ್ಷಸಸ್ತ್ರೀಯರು ಬೆದರಿ ಬಿದ್ದರು. ಆಗ ಭಗವಂತನ ಪ್ರೇರಣೆಯಿಂದ ಅನೇಕ ಪ್ರಕಾರದ ವಾಯುಗಳು ಬೀಸತೊಡಗಿದವು. ಮಾರುತಿಯು ಉತ್ಕಟ ಹಾಸ್ಯಮಾಡಿ ಗರ್ಜಿಸಿ ಬೆಳೆಯುತ್ತ ಬೆಳೆಯುತ್ತ ಆಕಾಶಕ್ಕೆ ಮುಟ್ಟಿದನು. ಆತನು ಅತ್ಯಂತ ಚಾಪಲ್ಯದಿಂದ ಈ ಮನೆಯಿಂದ ಆ ಮನೆಗೆ, ಆಮನೆಯಿಂದ ಈಮನೆಗೆ ಹಾರುತ್ತ ನಡೆದನು. ಯಾವತ್ತು ಪಟ್ಟಣವು ಸುಡತೊಡಗಿತು. ಜನರು ಮುಂದುಗಾಣದೆ ಎಡತಾಕ ತೊಡಗಿದರು. "ಎಲೈ ತಾತನೆ, ಎಲೈ ಮಾತೆಯೇ!!" "ಈ ಪ್ರಸಂಗದಿಂದ ನಮ್ಮನ್ನು ಯಾರು ಉಳಿಸುವರು" ಇತ್ಯಾದಿ ಕೂಗುಗಳು ಒಂದೇ ಸವನೇ ಕೇಳತೊಡಗಿವು. ಜನರು ತಮ್ಮ ತಮ್ಮೊಳಗೆ—ನಾವು ಮೊದಲೇ ಹೇಳಿದೆವು, ಇದು ಕಪಿಯಲ್ಲ, ಕಪಿಯರೂಪದಿಂದ ಯಾವನೋ ಒಬ್ಬದೇವನು

ಬಂದಿರುವನೆಂದು! ಸಾಧುವಿನ ಅಪಮಾನಗೊಳಿಸಿದ್ದರ ಪರಿಣಾಮವು ಹೀಗಾಗತಕ್ಕದ್ದೇ ಸರಿ! ನೋಡಿರಿ, ಅನಾಥ ನಗರದಂತೆ ಈ ನಗರವು ಹೇಗೆ ಸುಡುತ್ತಿರುವದು! ಎಂದು ಮಾತುಗಳಾಡಿಕೊಳ್ಳುತ್ತಿರುವರು. ಒಬ್ಬ ವಿಭೀಷಣನ ಮನೆಯನ್ನು ಬಿಟ್ಟು ಯಾವತ್ತು ಲಂಕಾಪಟ್ಟಣವನ್ನು ಮಾರುತಿಯು ಸುಟ್ಟು ನಾಶಗೊಳಿಸಿದನು. ಎಲೈ ಪಾರ್ವತಿಯೇ, ಶ್ರೀರಾಮನೇ ಅಗ್ನಿಯನ್ನು ನಿರ್ಮಿಸಿದ್ದರಿಂದ ರಾಮಭಕ್ತನಾದ ವಿಭೀಷಣನ ಮನೆಯೊಂದನ್ನು ಅಗ್ನಿಯು ಸುಡಲಿಲ್ಲವು. ಈಮೇರೆಗೆ ಮಾರುತಿಯು ಒಳಗಿನಿಂದ ಹೊರಗಿನಿಂದ ಲಂಕಾಪಟ್ಟಣವನ್ನೆಲ್ಲ ಒಂದು ನಿಮಿಷದಲ್ಲಿ ಸುಟ್ಟು ಸಮುದ್ರದಲ್ಲಿ ಹೋಗಿ ಹಾರಿಕೊಂಡನು. ಮಾರುತಿಯು ತನ್ನ ಬಾಲವನ್ನು ನಂದಿಸಿ, ಶ್ರಮ ಪರಿಹಾರಮಾಡಿಕೊಂಡು, ಪುನಃ ಲಘುರೂಪ ಧಾರಣಮಾಡಿಕೊಂಡು ಬಂದು ಕೈಜೋಡಿಸಿಕೊಂಡು ಸೀತೆಯ ಎದುರಿಗೆ ನಿಂತುಕೊಂಡು —“ತಾಯಿಯೇ, ಶ್ರೀ ರಾಮನು ಗುರುತುಕೊಟ್ಟಂತೆ ನೀನೂ ಏನಾದರೂ ನನಗೆ ಗುರುತುಕೊಡು, ಎಂದು ಕೇಳಿಕೊಳ್ಳಲು, ಸೀತೆಯು ಆತನಿಗೆ ಚೂಡಾಮಣಿಯನ್ನು ಕೊಟ್ಟಳು. ಮಾರುತಿಯು ಆನಂದದಿಂದ ಅದನ್ನು ಸ್ವೀಕರಿಸಿದನು. ಆಗ ಸೀತೆಯು ಮಾರುತಿಯನ್ನು ಕುರಿತು—ಎಲೈ ಮಾರುತೀ, ಪ್ರಭುವಿಗೆ ಪ್ರಣಾಮಪೂರ್ವಕವಾಗಿ ನನ್ನ ವಿನಂತಿಯನ್ನು ಹೀಗೆ ಹೇಳು. ದೇವಾ, ನೀನು ಪೂರ್ಣಕಾಮನಿದ್ದರೂ ನಾನು ಮಾತ್ರ ದೀನಳಿದ್ದು, ನೀನು ದೀನರ ವಿಷಯವಾಗಿ ದಯಾರ್ದ್ರನಾಗಿರುವೆ. ಎಲೈ ನಾಥನೆ, ನಿನ್ನ ಬಿರುದನ್ನು ಕಾಯ್ದುಕೊಂಡು ನನ್ನ ಮೇಲಿನ ಈ ದೊಡ್ಡ ವಿಪತ್ತನ್ನು ಪರಿಹರಿಸು. ಎಲೈ ಮಾರುತೀ, ಜಯಂತನ ಕಥೆಯ ನೆನಪನ್ನು ಪ್ರಭುವಿಗೆ ಮಾಡಿಕೊಟ್ಟು, ಪ್ರಭುವಿನ ಬಾಣದಪ್ರತಾಪದ ಗುರುತನ್ನು ಆತನಿಗೆ ಮಾಡಿಕೊಡು. ಒಂದು ತಿಂಗಳೊಳಗೆ ಪ್ರಭುವು ಬಾರದಿದ್ದರೆ ನಾನು ಜೀವದಿಂದ ಆತನ ಕಣ್ಣಿಗೆ ಬೀಳಲಿಕ್ಕಿಲ್ಲವೆಂತಲೂ ಹೇಳು. ಎಲೈ ವತ್ಸನೇ, ನೀನೇ ಹೇಳು, ಇನ್ನು ನಾನು ಯಾವರೀತಿಯಿಂದ ನನ್ನ ಪ್ರಾಣವನ್ನಿಡಬೇಕು! ಎಲೈ ತಾತನೆ, ನೀನು ಕೂಡ ಈಗ ಹೋಗಬೇಕೆನ್ನುತ್ತೀ. ನಿನ್ನನ್ನು ನೋಡಿ ನನ್ನ ಹೃದಯವು ಶಾಂತವಾಗಿತ್ತು; ಆದರೆ ಈಗ ನೀನು ಹೋದೆಯೆಂದರೆ ನನಗೆ ಪುನಃ ಅದೇ ಹಗಲು ಅದೇ ರಾತ್ರಿಯು!

ಸೀತೆಯನ್ನು ಸಮಾಧಾನಪಡಿಸಿ, ಹಲವು ಬಗೆಯಿಂದ ಆಕೆಗೆ ಧೈರ್ಯ ಹೇಳಿ ಮಾರುತಿಯು ಆಕೆಯ ಚರಣಕಮಲಗಳಮೇಲೆ ಮಸ್ತಕವಿಟ್ಟು ರಾಮನ ಬಳಿಗೆ ಹೋಗುವದಕ್ಕಾಗಿ ಹೊರಟನು. ಮಾರುತಿಯು ಹೋಗುವಾಗ ಅತ್ಯಂತ ಭಯಂಕರವಾದ ಗರ್ಜನೆಯನ್ನು ಮಾಡಿದನು. ಅದನ್ನು ಕೇಳಿದ ಕೂಡಲೆ ರಾಕ್ಷಸಸ್ತ್ರೀಯರ ಗರ್ಭಪಾತವೇ ಆಯಿತು. ಬಳಿಕ ಮಾರುತಿಯು ಸಮುದ್ರವನ್ನು ದಾಟಿ ಪಾರಾಗಿ ಹೋದನು. ಆಗ ಆತನ “ಕಿಲಕಿಲ” ಎಂಬ ಶಬ್ದವನ್ನು ಕಪಿಗಳು ಕೇಳಿದರು. ಮಾರುತಿಯನ್ನು

ನೋಡಿ ಎಲ್ಲ ಕಪಿಗಳಿಗೆ ಆನಂದವಾಗಿ, ಅವರ ಪುನರ್ಜನ್ಮವಾದಂತೆ ತೋರಿತು. ಯಾವತ್ತು ಕಪಿಗಳು ಹರ್ಷಿತರಾಗಿ ಮಾರುತಿಯನ್ನು ಕಂಡರು. ಆ ಮೇಲೆ ಎಲ್ಲರೂ ರಘುನಾಯಕನಕಡೆಗೆ ಹೋಗುವದಕ್ಕಾಗಿ ಹೊರಟರು. ಹಾದಿಯಲ್ಲಿ ಕಪಿಗಳು ಕೇಳಿದ್ದರಿಂದ ಮಾರುತಿಯು ಅವರಿಗೆ ನಡೆದ ಆಶ್ಚರ್ಯಕಾರಕ ಸಂಗತಿಗಳನ್ನು ಹೇಳುತ್ತಿದ್ದನು. ಬಳಿಕ ಅವರೆಲ್ಲರೂ ಸುಗ್ರೀವನ ಮಧುವನವನ್ನು ಪ್ರವೇಶಿಸಿ, ಅಂಗದನೊಡನೆ ಎಲ್ಲರೂ ಮಧುರ ಫಲಗಳನ್ನು ಭಕ್ಷಿಸತೊಡಗಿದರು. ಆಗ ವನರಕ್ಷಕರು ನಿರ್ಭಂಧಿಸಲು, ಅವರಿಗೆ ಗುದ್ದುಗಳನ್ನು ಹಾಕಿದ್ದರಿಂದ ಎಲ್ಲ ರಕ್ಷಕರು ಓಡಿಹೋದರು. ಅವರು ಸುಗ್ರೀವನಬಳಿಗೆ ಹೋಗಿ—ಯುವರಾಜನಾದ ಅಂಗದನು ವನದೊಳಗಿನ ಎಲ್ಲ ಹಣ್ಣುಗಳನ್ನು ತಿಂದು ಹಾಳುಮಾಡಿಬಿಟ್ಟನು, ಎಂದು ದೂರಿಕೊಂಡರು. ಅದನ್ನು ಕೇಳಿದ ಕೂಡಲೆ ಸುಗ್ರೀವನಿಗೆ ಅತ್ಯಂತ ಹರ್ಷವಾಯಿತು. ಕಪಿಗಳು ಪ್ರಭುಕಾರ್ಯವನ್ನು ಮಾಡಿಕೊಂಡು ಬಂದರೆಂದು ಆತನು ತರ್ಕಿಸಿದನು; ಯಾಕಂದರೆ ಸೀತೆಯ ಶೋಧವಾಗದಿದ್ದರೆ ಕಪಿಗಳು ಹಣ್ಣು ತಿನ್ನುವದು ಶಕ್ಯವೇ ಇದ್ದಿಲ್ಲ. ಸುಗ್ರೀವನು ಈ ಮೇರೆಗೆ ಆಲೋಚಿಸುತ್ತಿರಲು, ಕಪಿಸಮೂಹವು ಆತನ ಬಳಿಗೆ ಬಂದು ತಲುಪಿತು. ಅವರು ಬಂದಕೂಡಲೆ ಸುಗ್ರೀವನ ಚರಣಗಳಿಗೆ ವಂದಿಸಿದರು. ಸುಗ್ರೀವನು ಪ್ರೇಮದಿಂದಅವರನ್ನು ಆಲಿಂಗಿಸಿದನು. ಆತನು ಕಪಿಗಳನ್ನು ಕುರಿತು ಕುಶಲಪ್ರಶ್ನ ಮಾಡಲು ಅವರು—ತಮ್ಮ ಕುಶಲವಾಗಿರುವ ಚರಣಗಳನ್ನು ನೋಡಿ ನಾವು ಕುಶಲರಾಗಿರುವೆವು. ವಿಶೇಷಸಂಗತಿಯೆಂದರೆ, ರಾಮಕೃಪೆಯಿಂದ ಕಾರ್ಯವಾಯಿತು. ಎಲೈ ನಾಥನೆ, ಮಾರುತಿಯು ಕಾರ್ಯಮಾಡಿ ಎಲ್ಲ ಕಪಿಗಳ ಜೀವವನ್ನು ಉಳಿಸಿದನು. ಎಂದು ಹೇಳಿದ ಕೂಡಲೆ ಸುಗ್ರೀವನು ಪುನಃ ಮಾರುತಿಯನ್ನು ಅಪ್ಪಿಕೊಂಡನು. ಬಳಿಕ ಯಾವತ್ತು ಕಪಿಗಳನ್ನು ಕೂಡಿಕೊಂಡು ಸುಗ್ರೀವನು ರಘುರಾಯನ ಬಳಿಗೆ ಹೊರಟನು.

ಕಪಿಗಳು ಕೃತಕಾರ್ಯರಾಗಿ ಬರುವದನ್ನು ನೋಡಿ ರಾಮಚಂದ್ರನು ಹರ್ಷಿತನಾದನು. ಅವರಿಬ್ಬರು ಬಂಧುಗಳು ಸ್ಫಟಿಕ ಶಿಲೆಯಮೇಲೆ ಕುಳಿತುಕೊಂಡಿದ್ದರು. ಎಲ್ಲ ಕಪಿಗಳು ಬಂದು ಅವರ ಚರಣಗಳಿಗೆ ಸಾಷ್ಟಾಂಗವಾಗಿ ಎರಗಿದರು. ಕರುಣಾನಿಧಾನನಾದ ರಘುಪತಿಯು ಎಲ್ಲರನ್ನು ಪ್ರೇಮದಿಂದ ಕಂಡು ಕುಶಲವನ್ನು ವಿಚಾರಿಸ ತೊಡಗಿದನು. ಆಗ ಎಲ್ಲರೂ—ಎಲೈ ಪ್ರಭುವೇ, ನಿನ್ನ ಚರಣಕಮಲವನ್ನು ನೋಡಿ ನಾವು ಕುಶಲರಾದೆವು, ಎಂದು ಹೇಳಿದರು. ಆಗ ಜಾಂಬುವಂತನು —ಎಲೈ ರಘುರಾಯನೇ ಕೇಳು. ಯಾರಮೇಲೆ ಪ್ರಭುಗಳಾದ ನೀವು ಕೃಪೆ ಮಾಡುವಿರೋ, ಅವರಿಗೆ ಎಲ್ಲ ಕಡೆಯಲ್ಲಿಯೂ, ಯಾವಾಗಲೂ ಶುಭವೇ ಇರುವದು. ಅವರ ಮೇಲೆ ದೇವತೆಗಳೂ, ನರರೂ, ಮುನಿಗಳೂ ಪ್ರಸನ್ನರಾಗಿರುವವರು. ಅವರು ವಿಜಯಿಗಳೂ, ವಿನಯಶಾಲಿಗಳೂ, ಗುಣಸಾಗರರೂ ಆಗಿ, ಅವರ ಉಜ್ವಲಯಶಸ್ಸು ತ್ರೈಲೋಕ್ಯದಲ್ಲಿ ದಿವಿಗುಟ್ಟು

ತ್ತಿರುವದು. ಪ್ರಭುವಿನ ಕೃಪೆಯಿಂದ ಎಲ್ಲ ಕಾರ್ಯವೂ ಸಿದ್ಧವಾಗಿ ನಮ್ಮ ಜನ್ಮದ ಸಾಫಲ್ಯವಾಯಿತು. ಎಲೈ ನಾಥನೇ, ಹನುಮಂತನು ಮಾಡಿದ ಪರಾಕ್ರಮದ ವರ್ಣನವನ್ನು ಶೇಷನು ಮಾಡಲಾರನು. ಎಂದು ಹೇಳಿ, ಮಾರುತಿಯು ಯಾವತ್ತು ಚರಿತ್ರವನ್ನು ರಾಮಚಂದ್ರನಿಗೆ ಹೇಳಿದನು. ಅದನ್ನು ಕೇಳಿದಕೂಡಲೆ ಕೃಪಾಸಾಗರ ಪ್ರಭುವು ಅತ್ಯಂತ ಪ್ರಸನ್ನನಾದನು. ಆತನು ಪುನಃ ಮಾರುತಿಯನ್ನು ಬಿಗಿಯಾಗಿ ಅಪ್ಪಿಕೊಂಡನು. ಆತನು ಮಾರುತಿಗೆ—ಮಾರುತೀ, ಜಾನಕಿಯು ಯಾವರೀತಿಯಿಂದ ಇದ್ದು ತನ್ನ ಪ್ರಾಣರಕ್ಷಣಮಾಡುತ್ತಿರುವಳು ಹೇಳು. ಎಂದು ಕೇಳಲು, ಮಾರುತಿಯು—ಸೀತೆಯ ಮುಖದಮೇಲೆ ತಮ್ಮ ನಾಮದಕಾವಲು ಹಗಲು ರಾತ್ರಿ ಅಖಂಡವಾಗಿ ಇರುವದು. ತಮ್ಮಧ್ಯಾನದಿಂದ ಆಕೆಯಹೃದಯದ್ವಾರವು ಕಟ್ಟಿಗಿರುವದು. ಆಕೆಯನೇತ್ರಗಳೂ ತಮ್ಮ ಚರಣಗಳಲ್ಲಿಯೇ ನಟ್ಟಿರುವವು. ಅಂದ ಬಳಿಕ ಆಕೆಯ ಪ್ರಾಣಗಳು ಹೋಗಲಿಕ್ಕೆ ಹಾದಿಯೆತ್ತದೊರೆಯಬೇಕು? ನಾನು ಬರುವಾಗ ಸೀತೆಯು ನನ್ನ ಕೈಯಲ್ಲಿ ಈ ಚೂಡಾಮಣಿಯನ್ನು ಗುರುತಿಗಾಗಿ ಕೊಟ್ಟಿರುವಳು, ಎಂದು ಹೇಳಿ ಚೂಡಾಮಣಿಯನ್ನು ಕೊಡಲು, ಪ್ರಭುವು ಅದನ್ನು ಎದೆಗವಚಿಕೊಂಡನು. ಆಗ ಮಾರುತಿಯು ಪುನಃ ರಾಮನನ್ನು ಕುರಿತು—ಪ್ರಭೋ, ಜಾನಕಿಯು ಎರಡೂ ಕಣ್ಣುಗಳಲ್ಲಿ ನೀರು ತಂದು ನಿನ್ನನ್ನು ಕುರಿತು—“ಎಲೈ ದೀನ ಬಂಧುವೇ, ಲಕ್ಷ್ಮಣನಿಂದ ಸಹಿತವಾಗಿ ನಿನ್ನ ಚರಣಗಳಿಗೆ ವಂದಿಸುವೆನು. ತ್ರಿಕರಣಪೂರ್ವಕವಾಗಿ ನಾನು ನಿನ್ನ ದಾಸಿಯಿದ್ದು ನನ್ನಯಾವ ಅಪರಾಧಕ್ಕಾಗಿ ನೀನು ನನ್ನನ್ನು ಪರಿತ್ಯಜಿಸಿದೆ? ನಿನ್ನ ವಿಯೋಗವಾದಕೂಡಲೆ ನನ್ನ ಪ್ರಾಣಗಳು ಹೋಗದಿರುವದೊಂದು ಅವಗುಣವೆಂಬದನ್ನು ನಾನು ಅರಿತಿರುವೆನು. ಎಲೈ ನಾಥನೆ, ನನ್ನ ಪ್ರಾಣಗಳು ಹೋಗದಿರುವದಕ್ಕೆ ಈ ನೇತ್ರಗಳ ಅಪರಾಧವು ಕಾರಣವಾಗಿರುವದು. ವಿರಹಾಗ್ನಿಯು ಶ್ವಾಸರೂಪವಾಯುವಿನ ಸಹಾಯದಿಂದ ನನ್ನ ದೇಹರೂಪವಾದ ಅರಳೆಯನ್ನು ಕ್ಷಣದಲ್ಲಿ ಸುಟ್ಟುಬಿಡುತ್ತಿತ್ತು; ಆದರೆ ನಿನ್ನ ದರ್ಶನವಾಗಬೇಕೆಂಬ ಸ್ವಾರ್ಥದ ಲೋಭದಿಂದ ಈ ನೇತ್ರಗಳು ನೀರು ಸುರಿಸುತ್ತಿರುವದರಿಂದ, ವಿರಹಾಗ್ನಿಯಿಂದ ದೇಹವು ದಗ್ಧವಾಗಲೊಲ್ಲದು.” ಎಂದು ಅರಿಕೆಮಾಡಿಕೊಂಡಿರುವಳು. ಎಲೈ ದೀನದಯಾಲುವೇ, ಸೀತೆಯವಿಪತ್ತು ಬಹು ಕಠಿಣವಾಗಿರುವದರಿಂದ ಅದನ್ನು ವರ್ಣಿಸದಿರುವದೇ ಒಳ್ಳೆಯದು. ಕರುಣಾನಿಧೇ, ಸೀತೆಗೆ ಒಂದೊಂದು ನಿಮಿಷವು ಕಲ್ಪದಂತೆ ಹೋಗುತ್ತಿರುವದರಿಂದ, ನೀನು ಬೇಗನೆ ಹೊರಟು ಬಾಹುಬಲದಿಂದ ಖಲಸೈನ್ಯವನ್ನು ಗೆದ್ದು, ಸೀತೆಯನ್ನು ಕರಕೊಂಡು ಬರಬೇಕು. ಅನ್ನಲು, ಶ್ರೀರಾಮನು—

ರಾಮ—(ಕಣ್ಣುಗಳಲ್ಲಿ ನೀರು ತಂದು)—ತ್ರಿಕರಣಪೂರ್ವಕವಾಗಿ ನನ್ನಲ್ಲಿಯೇ ಅನುರಕ್ತರಾಗಿರುವವರಿಗೆ ಸ್ವಪ್ನದಲ್ಲಿಯಾದರೂ ವಿಪತ್ತಿನ ಸಂಚಯವಿರಬಹುದೇ?

ಮಾರುತಿ—ಪ್ರಭುವೇ, ನಿನ್ನ ಸ್ಮರಣ-ಭಜನಗಳಿಲ್ಲದ್ದೇ ನಿಜವಾದ ವಿಪತ್ತು.

ಅಂದಬಳಿಕ ಸೀತೆಗೆ ನಿಜವಾದ ವಿಪತ್ತು ಇಲ್ಲವೆಂಬದು ನಿಜವು; ಆದರೆ ನಾಥನೆ, ರಾಕ್ಷಸರ ಕಥೆಯೇನು? ಶತ್ರುಗಳನ್ನು ಗೆದ್ದು ಜಾನಕಿಯನ್ನು ಕರಕೊಂಡು ಬರಬೇಕು.

ರಾಮ—ಮಾರುತಿಯೇ, ನಿನ್ನಂತೆ ನನ್ನಮೇಲೆ ಉಪಕಾರಮಾಡುವವನು ಸುರ-ನರ-ಮುನಿಮೊದಲಾದ ದೇಹಧಾರಿಗಳಾದ ಜೀವರಲ್ಲಿ ಯಾವನೂ ಇರುವದಿಲ್ಲ. ನಿನ್ನ ಉಪಕಾರವನ್ನು ತೀರಿಸಲಿಕ್ಕೆ ನಾನೇನು ಮಾಡಬೇಕು? ನನ್ನ ಮನಸ್ಸಿಗೆ ನಿನ್ನ ಉಪಕಾರವನ್ನು ತಿಳಿದುಕೊಳ್ಳುವ ಯೋಗ್ಯತೆಯೂ ಇರುವದಿಲ್ಲ. ಎಲೈ ವತ್ಸಾ, ನಾನು ಮನಸ್ಸಿನಲ್ಲಿ ಬಹಳ ವಿಚಾರಮಾಡಿ ನೋಡಿದೆನು; ಆದರೆ ನಿನ್ನ ಉಪಕಾರದಿಂದ ನಾನು ಮುಕ್ತನಾಗುವಹಾಗೆ ತೋರುವದಿಲ್ಲವು.

ಮಾರುತಿ (ಪ್ರೇಮವಶನಾಗಿ ಸಾಷ್ಟಾಂಗವೆರಗಿ)—ಭಗವನ್, ತ್ರಾಹಿ ತ್ರಾಹಿ!

ರಾಮ [ಮಾರುತಿಯನ್ನು ಹಿಡಿದೆತ್ತಿ ಆತನ ಕೈಹಿಡಿದು ಹತ್ತರ ಕುಳ್ಳಿರಿಸಿಕೊಂಡು] ಎಲೈ ಹನುಮಂತಾ, ಆ ಶ್ರೇಷ್ಠವೂ, ದುರ್ಗಮವೂ ಆದ ರಾವಣರಕ್ಷಿತ ಲಂಕೆಯನ್ನು ನೀನು ಹೇಗೆ ಸುಟ್ಟೆ?

ಮಾರುತಿ [ನಿರಭಿಮಾನದಿಂದ]—ಈ ಹರಿಯಿಂದ ಆ ಹರಿಗೆ, ಆ ಹರಿಯಿಂದ ಈ ಹರಿಗೆ ಹಾರುವದಷ್ಟು ಮಂಗಗಳ ಪುರುಷಾರ್ಥವು! ಸಮುದ್ರವನ್ನು ಹಾರಿ, ರಾಕ್ಷಸರನ್ನು ಕೊಂದು, ಅಶೋಕವನ್ನು ಹಾಳು ಮಾಡಿ, ಬಂಗಾರದ ಲಂಕಾಪಟ್ಟಣವನ್ನು ಸುಟ್ಟದ್ದು, ಶ್ರೀ ರಘುರಾಮನೇ, ನಿನ್ನ ಪ್ರತಾಪವು! ಎಲೈ ನಾಥನೇ, ಅದರಲ್ಲಿ ನನ್ನ ದೊಡ್ಡಸ್ತನವೇನೂ ಇಲ್ಲವು. ಪ್ರಭುವೇ, ನೀನು ಯಾರಿಗೆ ಅನುಕೂಲನಾಗಿರುವೆಯೋ ಅವರಿಗೆ ದುಷ್ಕರವಾದದ್ದೇನೂ ಇರುವದಿಲ್ಲ. ನಿನ್ನ ಪ್ರತಾಪದಿಂದ ಯಃಕಶ್ಚಿತ ಅರಳೆಯು ಕೂಡ ವಡಬಾಗ್ನಿಯನ್ನು ಸುಟ್ಟುಬಿಟ್ಟೀತು. ಎಲೈ ನಾಥನೇ, ಇನ್ನು ನನಗೆ ನಿನ್ನ ಸುಖಕಾರಕವಾದ ಅನಪಾಯಿನೀ (ನಾಶರಹಿತವಾದ) ಭಕ್ತಿಯನ್ನು ಕೊಡು.

ರಾಮ (ಅತ್ಯಂತ ವಾತ್ಸಲ್ಯದಿಂದ)—ಏವಮಸ್ತು.

ಎಲೈ ಪಾರ್ವತಿಯೇ, ಈ ಮೇರಿಗೆ ಸ್ವಾಮಿಸೇವಕರ ಸಂವಾದವಾಯಿತು. ಶ್ರೀ ರಾಮನ ಸ್ವಭಾವವನ್ನು ಅರಿತವರಿಗೆ ನಾಮಭಜನೆಯು ಹೊರತು ಎರಡನೆಯದೇನೂ ರೋಚಿಸಲಾರದು. ಈ ಸಂವಾದವು ಮನಸ್ಸಿಗೆ ನಟ್ಟವನಿಗೆ ರಘುಪತಿಯ ಚರಣದಲ್ಲಿ ಭಕ್ತಿಯು ಉಂಟಾಗುವದು. ರಾಮಚಂದ್ರನ ಆ ಮಾತುಗಳನ್ನು ಕೇಳಿದಕೂಡಲೆಯಾ ವತ್ತು ಕಪಿಸಮೂಹವು—"ಜಯ ಜಯ ಕೃಪಾಲು ಸುಖಕಂದ" ಎಂದು ಜಯಘೋಷ ಮಾಡಿತು. ಬಳಿಕ ಶ್ರೀ ರಾಮನು ಸುಗ್ರೀವನನ್ನು ಕರೆದು, ಬೇಗನೆ ಹೊರಡುವ ಸಿದ್ಧತೆ ಮಾಡಬೇಕೆಂದು ಆಜ್ಞಾಪಿಸಿದನು. ಕೂಡಲೆ ಸುಗ್ರೀವನು ಯಾವತ್ತು ಕಪಿಗಳಿಗೆ ಸಿದ್ಧವಾಗಿರಲು ಅಪ್ಪಣೆಮಾಡಿದನು. ಯಾವತ್ತು ವಾನರ-ನಾಯಕರು ತಮ್ಮ ಪರಿವಾರದೊಡನೆ ಸಿದ್ಧವಾಗಿ ಬರಲು, ರಘುರಾಜನು ಅವರೆಲ್ಲರನ್ನು ಕೃಪಾದೃಷ್ಟಿಯಿಂದ ನೋಡಿದನು.

ರಾಮಕೃಪೆಯು ಬಲವು ಪ್ರಾಪ್ತವಾದದ್ದರಿಂದ ಒಂದೊಂದು ಕಪಿಯು ರೆಕ್ಕೆಗಳುಳ್ಳ ಪರ್ವತದಂತೆ ಆಯಿತು. ಬಳಿಕ ರಾಮನು ಆನಂದದಿಂದ ಪ್ರಯಾಣ ಬೆಳಿಸಿದನು. ಆಗ ಅನೇಕ ಸುಂದರವಾದ ಶುಭಶಕುನಗಳು ಆಗತೊಡಗಿದವು. ಮಂಗಲಮಯವಾದ ಕೀರ್ತಿಯುಳ್ಳ ಪ್ರಭುವಿನ ಪ್ರಸ್ಥಾನ ಸಮಯದಲ್ಲಿ ಶುಭಶಕುನಗಳಾದದ್ದು ಸ್ವಾಭಾವಿಕವೇ ಸರಿ. ಅತ್ತ ಜಾನಕಿಯ ಎಡಗಣ್ಣು, ಎಡಭುಜಗಳು ಹಾರಹತ್ತಿದ್ದರಿಂದ ಪ್ರಭುವು ಹೊರಟನೆಂದು ಆಕೆಯು ತಿಳಿದಳು. ಅದೇ ಕಾಲದಲ್ಲಿ ರಾವಣನಿಗೆ ಅಶುಭಶಕುನಗಳು ಆಗತೊಡಗಿದವು.

ವಾನರ ಸೈನ್ಯವು ಮುಂದಕ್ಕೆ ಸಾಗಿತು. ಅದನ್ನು ವರ್ಣಿಸುವದು ಯಾರಿಗೆ ಶಕ್ಯವು? ಅಸಂಖ್ಯ ಕಪಿಗಳೂ, ಕರಡಿಗಳೂ ಗರ್ಜಿಸತೊಡಗಿದವು. ಉಗುರುಗಳೇ ಅವುಗಳ ಆಯುಧಗಳಾಗಿದ್ದು, ಅವು ಪರ್ವತಗಳನ್ನೂ, ಗಿಡಗಳನ್ನೂ ಹಿಡಿದುಕೊಂಡಿದ್ದವು. ಅವು ಸ್ವೇಚ್ಛೆಯಿಂದ ಆಕಾಶಮಾರ್ಗದಿಂದಲೂ, ಭೂಮಾರ್ಗದಿಂದಲೂ ಹೋಗುತ್ತಲಿದ್ದವು. ಅವುಗಳ ಸಿಂಹನಾದಕ್ಕೆ ದಿಗ್ಗಜಗಳು ಕಂಪಿಸಿ ಚೀರಿದವು. ಪೃಥ್ವಿಯು ನಡುಗತೊಡಗಿತು. ಪರ್ವತಗಳು ಅಲ್ಲಾಡತೊಡಗಿದವು. ಸಮುದ್ರವು ಉಕ್ಕೇರತೊಡಗಿತು. ಚಂದ್ರ–ಸೂರ್ಯ–ದೇವ–ಮುನಿ–ಸರ್ಪ–ಕಿನ್ನರ ಮೊದಲಾದವರಿಗೆ ತಮ್ಮ ದುಃಖನಿವಾರಣವಾಗುತ್ತಿರುವದನ್ನು ನೋಡಿ ಹರ್ಷವಾಯಿತು. ಕೋಟ್ಯವಧಿ ಮರ್ಕಟವೀರರು "ಕಟಕಟ" ಶಬ್ದಮಾಡುತ್ತ, ಹಾರುತ್ತ, ಶ್ರೀ ರಾಮನ ಅಮಿತಗುಣಗಳ ಜಯಘೋಷ ಮಾಡುತ್ತಲಿದ್ದರು. ಶೇಷನು ಇಂಥ ಉದಾರನು, (ಸಹನಶೀಲನು) ಆದರೆ, ಆತನಿಗೂ ಕಪಿಸೈನ್ಯದ ಭಾರವು ಸಹನವಾಗದಾಗಿ, ಮೇಲೆ ಮೇಲೆ ಆತನಿಗೆ ಮೂರ್ಛೆಯು ಬರತೊಡಗಿತು; ಆದ್ದರಿಂದ ಆತನು ಆಗಾಗ್ಗೆ ಆದಿಕೂರ್ಮನ ಕಠೋರ ಪೃಷ್ಠಭಾಗವನ್ನು ತನ್ನ ತೀಕ್ಷ್ಣ ದಂತಗಳಿಂದ ಹಿಡಿದು ಜೋಲಿಯ ಸಂಬಾಳಿಸುತ್ತಿರುವಾಗ, ಆತನು ರಘುವೀರನ ಶುಭ ಪ್ರಯಾಣದ ಸಂಗತಿಯನ್ನು ಕಚ್ಛಪನ ನಿಶ್ಚಲವೂ, ಪವಿತ್ರವೂ ಆದ ಬೆನ್ನ ಮೇಲೆ ಬರೆದಿಡುತ್ತಿರುವಂತೆ ತೋರಿತು. ಈ ಮೇರೆಗೆ ಕೃಪಾನಿಧಿಯಾದ ರಾಮನು ಮಾರ್ಗ ಕ್ರಮಿಸುತ್ತ ಸಮುದ್ರತೀರಕ್ಕೆ ಬಂದನು. ಆಗ ಕಪಿಗಳು ಅಲ್ಲಲ್ಲಿಗೆ ಹೋಗಿ ಮನಸ್ಸಿಗೆ ಬಂದಂತೆ ಹಣ್ಣುಗಳನ್ನು ತಿನ್ನತೊಡಗಿದವು.

ಇತ್ತ ಲಂಕೆಯಲ್ಲಿ ರಾಕ್ಷಸರು ಲಂಕಾದಹನವಾದಂದಿನಿಂದ ಚಿಂತೆಗೊಳಗಾಗಿದ್ದರು. ಇನ್ನು ರಾಕ್ಷಸಕುಲದ ಪರಿಣಾಮವೇನಾಗುವದೋ ಎಂದು ಶಂಕಿಸತೊಡಗಿದರು. ಒಬ್ಬ ದೂತನ ಪರಾಕ್ರಮವೇ ಇಷ್ಟು ಇರುವಾಗ, ಆ ದೂತನ ಒಡೆಯನು ಬಂದ ಬಳಿಕ ಲಂಕೆಯ ಗತಿಯೇನಾಗುವದೋ ಎಂದು ಎಲ್ಲರೂ ವಿಚಾರಿಸತೊಡಗಿದರು. ಈ ಮೇರೆಗೆ ಪುರಜನರು ಚಿಂತಾತುರರಾಗಿರುವದನ್ನು ದೂತಮುಖದಿಂದ ಮಂಡೋದರಿಯು ಕೇಳಿ, ದುಃಖಿತಳಾದಳು. ಆಕೆಯು ಪತಿಯ ಚರಣಗಳಿಗೆರಗಿ ಕೈಜೋಡಿಸಿ ನಿಂತು

ಕೊಂಡು— ಪ್ರಾಣನಾಥ, ಶ್ರೀಹರಿಯೊಡನೆ ದ್ವೇಷಬಳಿಸುವದನ್ನು ಬಿಟ್ಟುಬಿಡಿರಿ. ನಾನು ಹೇಳುವದು ಅತ್ಯಂತ ಹಿತಕರವಾದದ್ದೆಂಬದನ್ನು ಲಕ್ಷದಲ್ಲಿಡಿರಿ. ಯಾವಾತನ ಕೃತಿಯನ್ನು ಕೇಳಿದಕೂಡಲೆ ರಾಕ್ಷಸಿಯರ ಗರ್ಭಪಾತವಾಗುವದೋ, ಆತನ ಸ್ತ್ರೀಯನ್ನು ಎಲೈ ನಾಥನೇ, ನಿನ್ನಲ್ಲಿ ದೊಡ್ಡಿಸ್ತನವಿದ್ದರೆ ಸಚಿವರನ್ನು ಕರೆಸಿ ಅವರ ಸಂಗಡ ಕಳಿಸಿ ಕೊಡಬೇಕು. ನಿನ್ನ ಕುಲವನ್ನು ನಾಶಮಾಡುವದಕ್ಕಾಗಿಯೇ ಸೀತೆಯು ಇಲ್ಲಿಗೆ ಬಂದಿರುವಳು. ಎಲೈ ಪ್ರಭುವೇ, ಸೀತೆಯನ್ನು ತಿರುಗಿ ಕಳಿಸದೆ ಶಂಭುವಿನ ಅಥವಾ ಬ್ರಹ್ಮದೇವನ ಕೈಯಿಂದಲೂ ನಿಮ್ಮ ಕಲ್ಯಾಣವಾಗದು; ಆದ್ದರಿಂದ ಸರ್ವಗುಣ ಸಂಪನ್ನನಾದ ರಾಮನ ಬಾಣಗಳು ನಿಮ್ಮ ರಾಕ್ಷಸಸೈನ್ಯವನ್ನು ಸಂಹರಿಸತೊಡಗುವದರೊಳಗೇ ನಿಮ್ಮ ಹಟಮಾರಿತನವನ್ನು ಬಿಟ್ಟು, ಯುಕ್ತಿಸಬೇಕು, ಎಂದು ಉಪದೇಶಿಸಲು, ಅದನ್ನು ಕೇಳಿ ಜಗತ್ಪ್ರಸಿದ್ಧ ಅಹಂಮನ್ಯನಾದ ದುರಾತ್ಮ ರಾವಣನು—"ಸ್ತ್ರೀಯರು ಸ್ವಾಭಾವಿಕವಾಗಿಯೇ ಅಂಜುಬುರುಕರಿರುವರು. ಅವರು ಸುಖದಲ್ಲಿ ಉರಳಾಡುತ್ತಿದ್ದರೂ, ನಿಷ್ಕಾರಣವಾಗಿ ಮನಸ್ಸಿನಲ್ಲಿ ಅಂಜಿಕೆಯಿಂದ ಕೊಳೆಯುತ್ತಿರುವರು. ಮರ್ಕಟಸೈನ್ಯವು ಒದಗಿದ್ದೇ ಆದರೆ ರಾಕ್ಷಸರು ಅವರನ್ನು ತಿಂದು ತೃಪ್ತರಾದಾರು. ಯಾವಾತನ ಭೀತಿಯಿಂದ ಲೋಕಪಾಲರು ನಡುಗುತ್ತಿರುವರೋ, ಆತನ ಸ್ತ್ರೀಯು ಅಂಜುವದು ನಗೆಗೇಡಾಗಿರುವದು, ಎಂದು ನುಡಿದು ನಕ್ಕು ಆಕೆಯನ್ನು ಎದೆಗವಚಿಕೊಂಡನು. ಬಳಿಕ ಆತನು ಅಧೀವಾದ ಆಡ್ಯತೆಯಿಂದ ಸಭಾಗೃಹದಕಡೆಗೆ ಹೋಗುವದಕ್ಕಾಗಿ ಹೊರಟನು. ಗಂಡನ ದೈವವೇ ಪ್ರತಿಕೂಲವಾಗಿರುವದನ್ನು ತಿಳಿದು ಮಂಡೋದರಿಯು ಮನಸ್ಸಿನಲ್ಲಿ ಚಿಂತಿಸತೊಡಗಿದಳು. ಸಭೆಯಲ್ಲಿ ರಾವಣನು ಕುಳಿತಿರುವಾಗ ಶತ್ರುವಿನ ರಾವಣ ಸೈನ್ಯವು ಸಮುದ್ರವನ್ನು ದಾಟಿಬಂದಿತೆಂಬ ಸುದ್ದಿಯು ಬಂದಿತು. ಆಗ ರಾವಣನು ಸಚಿವರ ಆಲೋಚನೆಯನ್ನು ಕೇಳಲು, ಅವರು—"ಸುರಾಸುರರನ್ನು ಗೆಲ್ಲುವಾಗ ನಿಮಗೆ ಶ್ರಮವಾಗದಿರಲು, ಮನುಷ್ಯರು—ಮಂಗಗಳ ಗಣನೆಯೇನು!" ಎಂದು ಹೇಳಿದರು. ಸಚಿವರು, ವೈದ್ಯರು, ಗುರುಗಳು ಈ ಮೂವರು ಭೀತಿಯಿಂದ ಅಥವಾ ಲೋಭದಿಂದ ಸೋರೆಯು ಮುಂದೆ ಸವಿಸವಿಮಾತಾಡಹತ್ತಿದರೆ ಕ್ರಮವಾಗಿ ರಾಜ್ಯ, ಶರೀರ, ಧರ್ಮ ಇವುಗಳ ನಾಶವು ಬೇಗನೆ ಆಗುವದೆಂದು ತಿಳಿಯಬೇಕು. ರಾವಣನ ಗತಿಯೂ ಹೀಗೆಯೇ ಆಯಿತು. ಯಾವತ್ತು ಸಭಾಸದರಿಂದ ಆಗಾಗ್ಗೆ ಮುಖಸ್ತುತಿಯೇ ಆತನ ಕಿವಿಗಳಿಗೆ ಬೀಳತೊಡಗಿತು.

ಹೀಗಿರುವಾಗ ವಿಭೀಷಣನು ಯೋಗ್ಯ ಸಂಧಿಯನ್ನು ನೋಡಿ ಸಭೆಗೆ ಬಂದು ಅಣ್ಣನ ಚರಣಗಳಿಗೆರಗಿ ಪುನಃ ಅಣ್ಣನನ್ನು ವಂದಿಸಿ ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಬಳಿಕ ಆತನು ರಾವಣನ ಅಪ್ಪಣೆ ಪಡೆದು ಅವನನ್ನು ಕುರಿತು—ಎಲೈ ಕೃಪಾಲೋ, ನನ್ನ ಆಲೋಚನೆಯನ್ನು ಕೇಳುತ್ತಿದ್ದರೆ ನಾನು ಯಥಾಮತಿ ಹಿತದಮಾತನ್ನು ಹೇಳುವೆನು.

ನಿನಗೆ ಕಲ್ಯಾಣ, ಸತ್ಕೀರ್ತಿ, ಸದ್ಬುದ್ಧಿ, ಸದ್ಗತಿ, ನಾನಾವಿಧ ಸುಖಗಳು ಇವುಗಳ ಇಚ್ಛೆ ಯಿದ್ದರೆ, ಪರಸ್ತ್ರೀಯರ ಮುಖವನ್ನು ಎಲೈಸ್ವಾಮಿಯೇ, ಗಣೇಶ ಚತುರ್ಥಿಯ ಚಂದ್ರ ನಂತೆ ವರ್ಜ್ಯವೆಂದು ತಿಳಿಯಬೇಕು. ಹದಿನಾಲ್ಕು ಲೋಕಗಳ ಚಕ್ರವರ್ತಿರಾಜನಿ ದ್ದರೂ ಭೂತದ್ರೋಹದಿಂದ ಗತಿಗಾಣನು. ಸರ್ವಗುಣಸಂಪನ್ನನೂ, ಚತುರನೂ ಆದವನನ್ನು ಅಲ್ಪಲೋಭಕ್ಕಾಗಿ ಯಾರೂ ಒಳ್ಳೆಯವನೆಂದು ಅನ್ನುವದಿಲ್ಲ. ಎಲೈ ನಾಥನೇ, ಕಾಮ, ಕ್ರೋಧ, ಮದ, ಲೋಭಗಳು ಯಾವತ್ತು ನರಕಗಳ ದ್ವಾರಗಳೆಂದು ತಿಳಿದು ಅವನ್ನು ಬಿಟ್ಟು, ಸಂತರು ಭಜಿಸುತ್ತಿರುವ ರಘುವೀರನ ಭಕ್ತಿಯನ್ನು ಮಾಡು. ಎಲೈ ತಾತನೇ, ರಾಮನು ಕೇವಲ ನರನೂ ಅಲ್ಲ ಭೂಪಾಲಕನೂ ಅಲ್ಲ; ಆತನು ಅಖಿಲ ಭುವನಗಳ ಸ್ವಾಮಿಯೂ, ಕಾಲನಕಾಲನೂ, ಬ್ರಹ್ಮಸ್ವರೂಪನೂ, ನಿರ್ವಿಕಾರನೂ, ಜನ್ಮ ರಹಿತನೂ, ಭಗವಂತನೂ, ವ್ಯಾಪಕನೂ, ಅಜಿತನೂ, ಅನಾದಿಯೂ, ಅನಂತನೂ, ಪೃಥ್ವೀ-ಬ್ರಾಹ್ಮಣ-ದೇವ-ಧೇನುಗಳರಕ್ಷಕನೂ, ಕೃಪಾಸಾಗರನೂ, ಸ್ವೇಚ್ಛೆಯಿಂದ ಮಾನವದೇಹವನ್ನು ಧರಿಸುವವನೂ, ಭಕ್ತಜನರ ರಂಜಕನೂ, ಖಲನಾಶಕನೂ, ವೇದ ಧರ್ಮ-ಪ್ರತಿಪಾಲಕನೂ ಆಗಿರುವನೆಂಬದು ಎಲೈ ಬಂಧುವೇ, ಲಕ್ಷದಲ್ಲಿರಲಿ. ಆ ಶರ ಣಾಗತರಕ್ಷಕನ ಮುಂದೆ ವೈರಭಾವವನ್ನು ಬಿಟ್ಟು ನಮ್ರನಾಗು. ಎಲೈ ನಾಥನೇ, ಪ್ರಭು ವಿಗೆ ಜಾನಕಿಯನ್ನು ಕೊಟ್ಟುಬಿಟ್ಟು ಆತನಿಗೆ ಶರಣುಹೋಗು. ಶರಣುಬಂದವರು ವಿಶ್ವದ್ರೋಹದ ಪಾತಕವನ್ನು ಮಾಡಿದ್ದರೂ ಆತನು ಹೊರದೂಡಿರುವದಿಲ್ಲ. ಎಲೈ ರಾವಣನೇ, ಯಾವನ ನಾಮವು ತಾಪತ್ರಯಗಳನ್ನು ಶಾಂತಗೊಳಿಸುವದೋ ಆ ಪ್ರಭುವೇ ಪ್ರತ್ಯಕ್ಷಬಂದಿರುವನೆಂಬದನ್ನು ಲಕ್ಷದಲ್ಲಿಡು. ಎಲೈ ದಶಕಂಧರನೇ, ಪುನಃ ಪುನಃ ನಿನ್ನ ಚರಣಗಳಿಗೆರಗಿ ಪ್ರಾರ್ಥಿಸುವೆನು, ಅಭಿಮಾನ-ಮೋಹ-ಮದಗಳನ್ನು ತ್ಯಜಿಸಿ ಕೋಸಲಾಧೀಶನಾದ ಶ್ರೀರಾಮನಿಗೆ ಶರಣುಹೋಗು. ಎಲೈ ತಾತನೇ, ಪುಲಸ್ತ್ಯಮುನಿಯು ತನ್ನ ಶಿಷ್ಯರಮುಂದೆ ಹೇಳಿಕಳಿಸಿದ ಮಾತುಗಳನ್ನೇ ಯೋಗ್ಯಪ್ರಸಂಗದಲ್ಲಿ ತಡ ಮಾಡದೆ ನಾನುಹೇಳಿರುವೆನು. ಎಂದು ಬೋಧಿಸಿದನು. ಮಾಲ್ಯವಂತನೆಂಬ ಸುಜ್ಞಮಂತ್ರಿ ಯೂವಿಭೀಷಣನಮಾತಿಗೆ ಸಂತೋಷಪಟ್ಟು, ವಿಭೀಷಣನಮಾತುಗಳನ್ನು ಹೃದಯದಲ್ಲಿಟ್ಟು ಕೊಳ್ಳೆಂದು ರಾವಣನನ್ನು ಬೋಧಿಸಿದನು; ಆದರೆ ರಾವಣನು-"ಇವರಿಬ್ಬರೂ ಶತ್ರು ಶತ್ರುವಿನ ದೊಡ್ಡಿಸ್ತನವನ್ನೇ ಹೊಗಳುತ್ತಿರುವದರಿಂದ ಇವರನ್ನು ಯಾರಾದರೂ ಯಾಕೆ ಹೊರದೂಡುವದಿಲ್ಲವೆ"ಂದು ಪ್ರಶ್ನೆ ಮಾಡಲು, ಕೂಡಲೆ ಮಾಲ್ಯವಂತನು ತನ್ನ ಮನೆಗೆ ಹೋಟುಹೋದನು. ಬಳಿಕ ವಿಭೀಷಣನು ಕೈಜೋಡಿಸಿ ಪುನಃ ರಾವಣನನ್ನು ಕುರಿತು-ಸುಮತಿ ಅಥವಾ ಕುಮತಿ ಇವು ಪ್ರತಿಒಬ್ಬನ ಹೃದಯದಲ್ಲಿವಾಸಿಸುವವು; ಆದರೆ ಸುಮತಿಯಿದ್ದಲ್ಲಿ ಸಂಪತ್ತಿಯೂ, ಕುಮತಿಯಿದ್ದಲ್ಲಿ ಕಡೆಗೆವಿಪತ್ತಿಯೂ ಎಂಬ ಸಿದ್ಧಾಂತವನ್ನು ವೇದಗಳೂ, ಪುರಾಣಗಳೂ ಹೇಳುತ್ತಿರುವವು. ನಿನ್ನ ಹೃದಯದಲ್ಲಿ

ಸದ್ಯಕ್ಕೆ ದುರ್ಬುದ್ಧಿಯು ವಾಸಿಸುತ್ತಿರುವದು; ಆದ್ದರಿಂದ ನಿನಗೆ ಹಿತವು ಅನಹಿತವಾಗಿಯೂ, ಶತ್ರುಗಳು ಮಿತ್ರರಾಗಿಯೂ ಕಾಣುತ್ತಿರುವರು; ಅಂತೇ ರಾಕ್ಷಸಕುಲಕ್ಕೆ ಕಾಲರಾತ್ರಿಯಂತೆ ಇರುವ ಸೀತೆಯ ಅಭಿಲಾಷೆಯನ್ನು ನೀನು ಹಿಡಿದಿರುತ್ತೀ. ಎಲೈ ತಾತನೇ, ನಿನ್ನ ಕಾಲುಬಿದ್ದು ಇಷ್ಟೇ ಬೇಡಿಕೊಳ್ಳುವೆನು, ನೀನು ಜಾನಕಿಯನ್ನು ರಾಮನಿಗೆ ಕೊಟ್ಟುಬಿಡು. ನನ್ನದಿಷ್ಟೇ ಇಚ್ಛೆಯನ್ನು ಪೂರ್ಣಮಾಡು. ಇದರಿಂದ ನಿನ್ನ ಕಲ್ಯಾಣವಾಗುವದು.

ವಿಭೀಷಣನ ಈ ನೀತಿಪ್ರಚುರ ಭಾಷಣವನ್ನು ಕೇಳಿದ ಕೂಡಲೆ ರಾವಣನು ಸಂತಾಪದಿಂದ ಎದ್ದು—ದುಷ್ಟ, ನಿನ್ನ ಮರಣವು ಸಮೀಪಿಸಿರುವದು. ಎಲೈ ನೀಚನೇ, ನಾನು ಬದುಕಿಸಿರುವೆನೆಂತಲೇ ನೀನು ಬದುಕಿರುತ್ತೀ. ಮೂರ್ಖಾ, ನಿನಗೆ ಈಗ ಶತ್ರುವಿನಪಕ್ಷವು ಒಳ್ಳೆಯದಾಗಿ ಕಾಣುತ್ತದೇನು? ಎಲೈ ದುಷ್ಟನೇ, ನನ್ನ ಬಾಹುಬಲದಿಂದ ಗೆಲ್ಲದೆಇದ್ದವನು ಈ ಜಗತ್ತಿನಲ್ಲಿ ಯಾವನಿರುವನೆಂಬವನ್ನು ಯಾಕೆ ಹೇಳಲೊಲ್ಲಿ? ನನ್ನ ರಾಜ್ಯದಲ್ಲಿದ್ದು ತಪಸ್ವಿಗಳ ಮೇಲೆ ಪ್ರೇಮಮಾಡುತ್ತಿರುವೆಯೇನು? ಎಲೈ ಶಠನೇ, ಹಾಗಿದ್ದರೆ ನೀನು ಅವರನ್ನೇ ಕೂಡಿ ನೀತಿಯನ್ನು ಹೇಳುತ್ತ ಕುಳಿತುಕೋ; ಎಂದು ನುಡಿದು ವಿಭೀಷಣನನ್ನು ಕಾಲಿನಿಂದ ಒದ್ದನು. ಆದರೆ ವಿಭೀಷಣನು ಪುನಃ ಪುನಃ ಆತನ ಕಾಲುಗಳನ್ನೇ ಹಿಡಿದುಕೊಂಡನು. ಎಲೈ ಪಾರ್ವತೀ, ತಮಗೆ ಕೆಡಕುಮಾಡುವವರಿಗೆ ಒಳಿತುಮಾಡುವದರಲ್ಲಿಯೇ ಸಂತರ ದೊಡ್ಡಸ್ತನವು ಇರುವದು. ವಿಭೀಷಣನು ಪುನಃ ರಾವಣನಿಗೆ—ನೀನು ನನಗೆ ತಂದೆಯಂತೆಯೇ ಇರುವೆ; ಅಂದಬಳಿಕ ನನ್ನನ್ನು ಬಡಿದದ್ದು ಒಳಿತೇ ಆಯಿತು; ಆದರೆ ನಾಥನೇ, ರಾಮನಿಗೆ ಶರಣುಹೋಗುವದರಲ್ಲಿಯೇ ನಿನ್ನ ಹಿತವಿರುವದು. ಎಂದು ಹೇಳಿ ಸಚಿವರೊಡನೆ ಆಕಾಶಮಾರ್ಗದಿಂದ ಹೋಗಹತ್ತಿ ಎಲ್ಲರಿಗೂ ಕೇಳಿಸುವಂತೆ—ಎಲೈ ರಾವಣನೇ, ನಿನ್ನ ಎಲ್ಲ ಸಭಾಸದರು ಕಾಲವಶರಾಗಿರುವರು. ಈಗ ನಾನು ಸತ್ಯಸಂಕಲ್ಪನಾದ ಪ್ರಭು ಶ್ರೀರಾಮಚಂದ್ರನಿಗೆ ಶರಣುಹೋಗುತ್ತೇನೆ. ಇಂದಿನಿಂದ ನನಗೆ ದೋಷವಿಡಬೇಡ, ಎಂದು ಹೇಳಿ ವಿಭೀಷಣನು ಹೊರಟು ಹೋದಾಗಲೇ ರಾಕ್ಷಸರು ಆಯುಷ್ಯಹೀನರಾದರು. ಎಲೈ ಪಾರ್ವತಿಯೇ, ಸುತರ ಅವಮಾನವು ಕೂಡಲೆ ಯಾವತ್ತುಕಲ್ಯಾಣವನ್ನು ನಾಶಗೊಳಿಸುತ್ತದೆ ವಿಭೀಷಣನು ರಾವಣನನ್ನು ತ್ಯಜಿಸಿದಾಗಲೇ ಆ ಭಾಗ್ಯಹೀನನು ವೈಭವಶೂನ್ಯನಾದನು. ವಿಭೀಷಣನು ರಾಮನ ಬಳಿಗೆ ಹೋಗುವಾಗ, ಆ ಪ್ರಭುವಿನ ಕೋಮಲಚರಣಗಳನ್ನು ಯಾವಾಗ ಕಂಡೇನೆಂದು ಆತುರಪಡತೊಡಗಿದನು. ಆತನು ಸಮುದ್ರವನ್ನು ದಾಟಿಹೋಗಲು ವಾನರರಿಗೆ ವೈರಿಗಳಕಡೆಯವನೊಬ್ಬ ದೂತನಿರಬಹುದೆಂದು ತೋರಿತು. ಅವರು ಆತನನ್ನು ಅಲ್ಲಿಯೇ ನಿಲ್ಲಿಸಿ, ಸುಗ್ರೀವನ ಬಳಿಗೆ ಹೋಗಿ ಎಲ್ಲ ಸುದ್ದಿಯನ್ನು ಹೇಳಿದರು. ಆಗ ಸುಗ್ರೀವನು ರಘುರಾಜನನ್ನು ಕುರಿತು—ಪ್ರಭುವೇ, ರಾವಣನ ತಮ್ಮನು

ನಿನ್ನನ್ನು ಕಾಣಬಂದಿರುವನಂತೆ. ಎಂದು ಹೇಳಲು, ರಾಮನು—ಮಿತ್ರ, ಇನ್ನು ಹೇಗೆ ಮಾಡಬೇಕೆಂದು ಕೇಳಿದನು. ಅದಕ್ಕೆ ಸುಗ್ರೀವನು--ಎಲೈ ನರಪತಿಯೇ, ರಾಕ್ಷಸ ಮಾಯೆಯು ಅಗಮ್ಯವಾಗಿರುವದು. ಅವರಿಗೆ ಸ್ವೇಚ್ಛೆಯಿಂದ ಬೇಕಾದರೂಪಗಳನ್ನು ಧರಿಸಲಿಕ್ಕೆ ಬರುವದು. ವಿಭೀಷಣನು ಯಾವಕಾರಣದಿಂದ ಬಂದಿರುವನೆಂಬದು ಯಾರಿಗೆ ಗೊತ್ತು? ಆ ಶಠನು ನಿನ್ನಬಳಿಗೆ ಗೂಢಸಂಗತಿಗಳನ್ನು ತಿಳಿದುಕೊಂಡು ಹೋಗುವದ ಕ್ಕಾಗಿ ಬಂದಿರಬಹುದು; ಆದ್ದರಿಂದ ಅವನನ್ನು ಬಂಧಿಸಿ ಇಡುವದು ಯೋಗ್ಯವೆಂದು ನನಗೆ ತೋರುತ್ತದೆ. ಎಂದು ಹೇಳಲು, ಶ್ರೀರಾಮನು--ಮಿತ್ರಾ, ನೀನು ನೀತಿಯುನ್ನಂತು ಚೆನ್ನಾಗಿ ಹೇಳಿದೆ; ಆದರೆ ಶರಣಾಗತರ ಭಯಹರಣ ಮಾಡುವದು ನನ್ನ ಬಿರುದಾಗಿರು ವದು; ತನಗೆ ಕೇಡು ಒದಗೀತೆಂದು ತಿಳಿದು ಶರಣಾಗತನನ್ನುಹೊರದೂಡುವವರು ನರಾ ಧಮರೂ, ಪಾಪಾತ್ಮರೂ ಇರುವರು. ಅವರ ಮುಖಾವಲೋಕನಮಾಡಿದರೂ ಹಾನಿ ಯಾಗುವದು. ಕೋಟ್ಯವಧಿ ಬ್ರಹ್ಮಹತ್ಯ ಮಾಡಿದವರೂ ನನಗೆ ಶರಣುಬಂದರೆ ಅವ ರನ್ನು ನಾನು ತ್ಯಜಿಸಲಾರೆನು. ಜೀವಮಾತ್ರರು ನನಗೆ ಶರಣುಬಂದಾಗ ಅವರ ಕೋಟ್ಯ ವಧಿ ಜನ್ಮಗಳ ಪಾತಕಗಳನ್ನು ನಾಶಗೊಳಿಸುವೆನು. ನನಗೆ ಶರಣುಬಾರದಿರುವದೇ ಪಾಪಿ ಷ್ಠರ ಮೂಲಸ್ವಭಾವವಾಗಿರುವದರಿಂದ, ವಿಭೀಷಣನು ದುರಾತ್ಮನಾಗಿದ್ದರೆ ನನಗೆ ಶರ ಣುಬರುತ್ತಿದ್ದನೋ? ಶುದ್ಧಾಂತಃಕರಣವುಳ್ಳ ನನ್ನ ದಾಸರಿಗೇ ನನ್ನ ಪ್ರಾಪ್ತಿಯಾಗುವದು. ನನಗೆ ಕಪಟವೂ, ಛಲವೂ, ಛಿದ್ರವೂ ಸೇರುವದಿಲ್ಲ. ರಾವಣನು ಗುಪ್ತಸಂಗತಿಗಳನ್ನು ತಿಳಿದುಕೊಂಡು ಬರುವದಕ್ಕಾಗಿ ಆತನನ್ನು ಕಳಿಸಿದ್ದಗೂ, ಅದರಲ್ಲಿ ಭೀತಿಯಾಗಲಿ, ಹಾನಿಯಾಗಲಿ ಏನೂ ಇರುವದಿಲ್ಲ. ಎಲೈ ಮಿತ್ರನೇ, ಪೃಥ್ವಿಯಲ್ಲಿರುವ ನಿಶಾಚರರೆಲ್ಲ ರನ್ನು ಲಕ್ಷ್ಮಣನು ಕ್ಷಣಮಾತ್ರದಲ್ಲಿ ನಾಶಮಾಡುವನು. ನನಗೆ ಅಂಜಿ ಶರಣುಬಂದವ ನನ್ನು ನಾನು ನನ್ನ ಪ್ರಾಣಗಳಂತೆ ರಕ್ಷಿಸುವೆನು; ಆದ್ದರಿಂದ ವಿಭೀಷಣನು ಶರಣಾಗ ತನಾದವನಾದರೂ ಆಗಿರಲಿ, ಗುಪ್ತಹೇರನಾದರೂ ಆಗಿರಲಿ ಆತನನ್ನು ನನ್ನಬಳಿಗೆ ಕರೆ ದುಕೊಂಡು ಬರಬೇಕು.

ಶ್ರೀರಾಮನ ಈ ಆಜ್ಞೆಯನ್ನು ಕೇಳಿ "ಪ್ರಭುವು ಶರಣಾಗತರಕ್ಷಕನೆಂ"ಬಮಾತು ಮನಸ್ಸಿನಲ್ಲಿ ಬಂದು ಮಾರುತಿಗೆ ಪರಮಹರ್ಷವಾಯಿತು. ಆತನೂ, ಅಂಗದನೇ ಮೊದಲಾದ ವಾನರರೂ ಜಯಘೋಷಮಾಡಿ ಹೊರಟರು. ಅವರು ವಿಭೀಷಣನನ್ನು ಆದರಪೂರ್ವಕವಾಗಿ ಮುಂದೆಮಾಡಿಕೊಂಡು ಕರುಣಾಕರನಾದ ರಘುಪತಿಯಬಳಿಗೆ ಬಂದರು. ಕಣ್ಣುಗಳಿಗೆ ಆನಂದವನ್ನುಂಟುಮಾಡುವ ಉಭಯ ಬಂಧುಗಳನ್ನು ವಿಭೀಷ ಣನು ದೂರದಿಂದ ನೋಡಿದನು. ರೂಪನಿಧಾನನಾದ ರಾಮಚಂದ್ರನನ್ನು ಆತನು ಎವೆ ಯಿಕ್ಕದೆ ದಿಟ್ಟಿಸಿ ನೋಡುತ್ತ ನಿಂತುಕೊಂಡನು. ಆ ನೀಲಮೇಘಶ್ಯಾಮಸುಂದರಮೂ ರ್ತಿಯನ್ನು ನೋಡುವಾಗ ವಿಭೀಷಣನ ಶರೀರದಲ್ಲಿ ರೋಮಾಂಚಗಳು ಉತ್ಪನ್ನವಾದವು.

ಆತನ ನೇತ್ರಗಳು ಅಶ್ರುಪೂರ್ಣವಾದವು. ಆತನು ಮೃದುಶಬ್ದಗಳಿಂದ--ಎಲೈ ಸುರರಕ್ಷಕಪ್ರಭುವೇ, ನಾನು ರಾಕ್ಷಸಕುಲಸಂಭೂತನಾದ ರಾವಣನ ತಮ್ಮನಿರುವೆನು. ಗೂಗೆಗಳ ಪ್ರೇಮವು ಸ್ವಾಭಾವಿಕವಾಗಿಯೇ ರಾತ್ರಿಯಮೇಲೆ ಇರುವಂತೆ, ಈ ತಮೋಗುಣಪ್ರಧಾನವಾದ ರಾಕ್ಷಸಯೋನಿಯ ಪ್ರವೃತ್ತಿಯು ಪಾಪದಕಡೆಗೆ ಇರುವದು. ಎಲೈ ಭವಭಂಜನ ಪ್ರಭುವೇ, ನಿನ್ನ ಸದ್ಯಶಸ್ಸನ್ನು ಕೇಳಿ ನಾನು ಬಂದಿರುವೆನು, ರಘುವೀರಾ, ನನ್ನನ್ನು ರಕ್ಷಿಸು. ಎಂದು ನುಡಿದು ವಿಭೀಷಣನು ಪ್ರಭುವಿಗೆ ಸಾಷ್ಟಾಂಗವೆರಗಿದನು. ಆಗ ಪ್ರಭುವು ಅತ್ಯಂತ ಹರ್ಷಿತನಾಗಿ ತಟ್ಟನೆ ಎದ್ದನು. ವಿಭೀಷಣನ ದೀನವಚನಗಳನ್ನುಕೇಳಿ ಪ್ರಭುವಿನ ಮನಸ್ಸು ಸಂತುಷ್ಟವಾಯಿತು. ಆತನು ತನ್ನ ವಿಶಾಲಬಾಹುಗಳಿಂದ ಆತನನ್ನು ಅಪ್ಪಿಕೊಂಡನು. ಬಳಿಕ ಲಕ್ಷ್ಮಣನಿಂದ ಸಹಿತವಾಗಿ ಎಲ್ಲರನ್ನೂ ವಿಭೀಷಣನು ಕಂಡನು. ಆ ಮೇಲೆ ಭಕ್ತಭಯಹರಣನಾದ ಪ್ರಭುವು ವಿಭೀಷಣನನ್ನು ಹತ್ತರ ಕುಳ್ಳಿರಿಸಿಕೊಂಡು—ಎಲೈ ಲಂಕಾಪತಿವಿಭೀಷಣಾ, ಸಾಂಗಪರಿವಾರದೊಡನೆ ನೀನು ಕುಶಲನಾಗಿ ಇರುವೆಯಷ್ಟೆ? ನಿನಗೆ ಕೆಟ್ಟಸ್ಥಳದಲ್ಲಿರಬೇಕಾಗುವದು. ಎಲೈ ಮಿತ್ರನೇ, ನಿನಗೆ ಹಗಲು ರಾತ್ರಿ ದುಷ್ಟರ ಸಹವಾಸವಿದ್ದದ್ದರಿಂದ ನಿನ್ನ ಧರ್ಮರಕ್ಷಣವು ಹೇಗೆ ಆಗುತ್ತಿತ್ತು? ನನಗೆ ನಿನ್ನ ರೀತಿಯೆಲ್ಲ ಗೊತ್ತಿರುವದು. ನೀನು ಅತ್ಯಂತ ನೀತಿನಿಪುಣನಾಗಿದ್ದು, ಅನೀತಿಯು ಲೇಶವೂ ನಿನಗೆ ಸೇರುವದಿಲ್ಲ. ಅಪ್ಪಾ, ನರಕವಾಸವು ಒದಗಿದರೂ ಚಿಂತೆಯಿಲ್ಲ, ಬ್ರಹ್ಮನು ದುಷ್ಟಸಂಗತಿಯನ್ನು ಮಾತ್ರ ಕೊಡಬಾರದು, ಅನ್ನಲು, ವಿಭೀಷಣನು—ಎಲೈ ರಘುರಾಯಾ, ನೀನು ನನ್ನನ್ನು ನಿನ್ನ ದಾಸನೆಂದು ತಿಳಿದು ಕೃಪೆಮಾಡಿ ಈ ಚರಣದರ್ಶನಮಾಡಿಸಿದ್ದರಿಂದ ನಾನು ಕುಶಲನಾಗಿರುವೆನು. ಶೋಕಮೂಲವಾದ ಕಾಮವನ್ನು ತ್ಯಜಿಸಿ ರಾಮನನ್ನು ಭಜಿಸುವವರೆಗೆ ಜೀವನ ಮನಸ್ಸಿಗೆ ಸ್ವಪ್ನದಲ್ಲಿಯಾದರೂ ಶಾಂತಿಯಾಗಲಿ, ಸೌಖ್ಯವಾಗಲಿ ದೊರೆಯಲಾರವು. ಧನುರ್ಧಾರಿಯಾದ ರಾಮರೂಪವು ಹೃದಯದಲ್ಲಿ ವಾಸಿಸದಿರುವವರೆಗೆ ಲೋಭ, ಮೋಹ, ಮತ್ಸರ, ಮದ, ಮಾನ ಮೊದಲಾದ ದುಷ್ಟವಿಕಾರಗಳು ಆ ಹೃದಯದಲ್ಲಿ ವಾಸಿಸುವವು. ರಾಮರೂಪ ಸೂರ್ಯನು ಹೃದಯದಲ್ಲಿ ಉದಯವಾಗುವವರೆಗೆ ರಾಗ–ದ್ವೇಷಗಳೆಂಬ ಗೂಗೆಗಳಿಗೆ ಸುಖವನ್ನುಂಟುಮಾಡುವ ಮಮತಾರೂಪವಾದ ಘೋರಕಗ್ಗತ್ತಲೆಯು ಜೀವನ ಮನಸ್ಸಿನಲ್ಲಿ ವಾಸಿಸುತ್ತಿರುವದು. ಎಲೈ ರಾಮನೇ, ನಿನ್ನ ಪದಕಮಲಗಳನ್ನು ನೋಡಿ ಇಂದು ನನ್ನ ಭಯಭಾರವು ನಷ್ಟವಾಗಿ, ನಾನು ಸುಖಿಯಾಗಿರುವೆನು. ಎಲೈ ದಯಾಘನನೇ, ನೀನು ಅನುಕೂಲವಾಗಿರುವವನಿಗೆ ತ್ರಿವಿಧತಾಪದಿಂದುಂಟಾಗುವ ವ್ಯಥೆಯು ಬಾಧಿಸುವದಿಲ್ಲವು. ಎಂದೂ ಸದಾಚರಣಮಾಡದ, ಅತ್ಯಂತ ಅಧಮನಾದ ರಾಕ್ಷಸನನ್ನು, ಮುನಿಜನರ ಧ್ಯಾನದಲ್ಲಿಯೂ ಬಾರದಿರುವ ರೂಪವುಳ್ಳ ನೀನು ಆನಂದದಿಂದ ಆಲಿಂಗಿಸಿದೆ! ಅಂದ ಬಳಿಕ ನನ್ನ ಭಾಗ್ಯವನ್ನು ಎಷ್ಟೆಂದು ವರ್ಣಿಸಬೇಕು!

ವಿಭೀಷಣನ ಈ ವಿನಯದ ಮಾತುಗಳನ್ನು ಕೇಳಿ ಶ್ರೀರಾಮನು—ಎಲೈ ಮಿತ್ರನೇ, ಕೇಳು. ನನ್ನ ಸ್ವಭಾವವನ್ನು ಭುಶುಂಡಿಯು, ಶಂಕರನು, ಪಾರ್ವತಿಯು ಅರಿಯುವರು. ಮನುಷ್ಯನು ಚರಾಚರವಿಶ್ವದ ದ್ವೇಷಿಯಾಗಿದ್ದರೂ ಅವನು ಮದ, ಮೋಹ, ಕಪಟ, ಛಲ ಮೊದಲಾದವುಗಳನ್ನು ತ್ಯಜಿಸಿ, ಭಯಭೀತನಾಗಿ ನನಗೆ ಶರಣು ಬಂದರೆ, ಆತನನ್ನು ಕೂಡ ತತ್ಕಾಲ ಸಾಧು ಸಮಾನನನ್ನಾಗಿ ಮಾಡುವೆನು. ತಾಯಿ ತಂದೆಗಳು, ಬಂಧುಗಳು, ಮಕ್ಕಳು, ಹೆಂಡಿರು, ದೇಹ, ಧನ, ಮಾನ, ಮಿತ್ರರು, ಪರಿವಾರ ಮೊದಲಾದ ಯಾವತ್ತು ವಿಷಯಗಳಲ್ಲಿರುವ ಮಮತಾರೂಪವಾದ ನೂಲಿನ ಗಟ್ಟಿಮುಟ್ಟಿಯಾದ ಹಗ್ಗವನ್ನು ಹೊಸೆದು, ಅದರಿಂದ ತನ್ನ ಮನಸ್ಸನ್ನು ನನ್ನ ಚರಣಗಳಲ್ಲಿ ಕಟ್ಟಿ, ಸಮದೃಷ್ಟಿ, ನಿಷ್ಕಾಮ, ಅಶೋಕ, ನಿರ್ಭಯ, ನಿರಾನಂದವುಳ್ಳವನಾಗಿರುವ ಸಜ್ಜನನು, "ಹೀನನ ಹೃದಯದಲ್ಲಿ ಧನವು ವಾಸಿಸುವಂತೆ," ನನ್ನ ಹೃದಯದಲ್ಲಿ ವಾಸಿಸುವನು. ನಿನ್ನಂಥ ಸಂತರು ನನಗೆ ಪ್ರಿಯರಾಗಿರುವರು. ಅವರ ಸಲುವಾಗಿಯೇ ನಾನು ಅವತರಿಸುವೆನಲ್ಲದೆ, ಅನ್ಯ ಕಾರಣವೇನು ಇಲ್ಲವು. ಸಗುಣೋಪಾಸಕರೂ, ಪರಹಿತತತ್ಪರರೂ, ನೀತಿನಿಯಮಗಳಲ್ಲಿ ಅಚಲರಾದವರೂ, ಬ್ರಾಹ್ಮಣರ ಪಾದಗಳಲ್ಲಿ ಪ್ರೇಮವುಳ್ಳವರೂ ಆದವರು ನನಗೆ ಪ್ರಾಣಕ್ಕಿಂತಲೂ ಪ್ರಿಯರಾಗಿರುವರು. ಎಲೈ ಲಂಕಾಪತಿಯೇ ಕೇಳು. ನಿನ್ನಲ್ಲಿ ಇವೆಲ್ಲ ಗುಣಗಳು ಇರುವದರಿಂದಲೇ ನೀನು ನನಗೆ ಅತಿಶಯ ಪ್ರಿಯನಾಗಿರುವೆ ಎಂದು ನುಡಿಯಲು, ವಾನರಸಮೂಹವು—"ಜಯದಯಾನಿಧಾನ" ಎಂದು ಒಂದೇಸವನೆ ಘೋಷಮಾಡತೊಡಗಿತು. ಪ್ರಭುವಿನ ವಚನಾಮೃತಪಾನದಿಂದ ವಿಭೀಷಣನ ತೃಪ್ತಿಯಾಗಲಿಲ್ಲವು. ಆತನು ಪುನಃ ಪುನಃ ಪ್ರಭುವಿನ ಚರಣಗಳಿಗೆರಗತೊಡಗಿದನು. ಆತನ ಅಪಾರವಾದ ಪ್ರೇಮವು ಹೃದಯದಲ್ಲಿ ಹಿಡಿಸದಾಯಿತು. ಆತನು ಪ್ರಭುವನ್ನು ಕುರಿತು—ಎಲೈ ಚರಾಚರಸ್ವಾಮಿಯೇ, ಪ್ರಣತವತ್ಸಲಾ, ಸರ್ವಾಂತರ್ಯಾಮಕ ದೇವಾ, ಕೇಳು. ಈ ಮೊದಲೆ ಮನಸ್ಸಿನಲ್ಲಿದ್ದ ವಾಸನೆಯು ಪ್ರಭುಪದ-ಪ್ರೀತಿಯ ನದಿಯಲ್ಲಿ ತೇಲಿಹೋಯಿತು. ದಯಾಳುವೇ, ಶಂಕರನ ಮನಸ್ಸಿಗೆ ಆನಂದವನ್ನುಂಟುಮಾಡುವ ನಿನ್ನ ವಿಷಯದ ಪಾವನ ಭಕ್ತಿಯನ್ನು ನನಗೆಕೊಡು, ಎಂದು ವಿಭೀಷಣನು ಪ್ರಾರ್ಥಿಸಲು, ರಣಧೀರ ಪ್ರಭುವು "ತಥಾಸ್ತು" ಎಂದು ನುಡಿದು ಕೂಡಲೆ ಸಮುದ್ರೋದಕವನ್ನು ತರಿಸಿ—ಮಿತ್ರಾ, ನಿನ್ನ ಇಚ್ಛೆಯಿಲ್ಲದಿದ್ದರೂ ಈ ಜಗತ್ತಿನಲ್ಲಿ ನನ್ನ ದರ್ಶನವು ಅಮೋಘವಾಗಿರುವದು, ಎಂದು ಹೇಳಿ, ಆತನಿಗೆ ಲಂಕಾರಾಜ್ಯದ ಅಭಿಷೇಕವನ್ನು ಮಾಡಿದನು. ಆಗ ಆಕಾಶದಲ್ಲಿ ಅಪಾರವಾದ ಪುಷ್ಪವೃಷ್ಟಿಯಾಯಿತು. ರಾವಣನ ಕ್ರೋಧಾಗ್ನಿಯಿಂದ ಉಸುರ್ಗಳೆನು ಬೇಯುತ್ತಿರುವ ವಿಭೀಷಣನಿಗೆ ಪ್ರಭುವು ಅಖಂಡ ರಾಜ್ಯವನ್ನು ಕೊಟ್ಟು ಬದುಕಿಸಿದನು. ಹತ್ತುತಲೆಗಳೊಡನೆ ಯಾವ ಸಂಪತ್ತನ್ನು ಶ್ರೀಶಂಕರನು ರಾವಣನಿಗೆ ಅರ್ಪಿಸಿದ್ದನೋ, ಅದೇ ಸಂಪತ್ತನ್ನು ರಘುನಾಯಕನು, ನಿನ್ನ ಭಕ್ತಿಗೆ

ಇದು ಏನೂ ಅಲ್ಲೆಂಬ ಸಂಕೋಚದಿಂದ ವಿಭೀಷಣನಿಗೆ ಕೊಟ್ಟನು. ಇಂಥ ವಿಭುವಿಗೆ ವಿಮುಖರಾಗುವವರು ಪಶುಗಳೇಸರಿ!

ಬಳಿಕ ರಘುಪತಿಯು, ಈ ಗಂಭೀರವಾದ ಸಮುದ್ರವನ್ನು ಹೇಗೆ ದಾಟಿಹೋಗ ಬೇಕೆಂದು ಸುಗ್ರೀವ, ವಿಭೀಷಣಾದಿ ವೀರರನ್ನು ಕೇಳಲು, ಲಂಕಾಪತಿಯಾದ ವಿಭೀಷಣನು—ಎಲೈ ರಘುನಾಯಕನೇ, ನಿನ್ನ ಬಾಣವು ಕೋಟ್ಯವಧಿ ಸಮುದ್ರಗಳನ್ನು ಶೋಷಿಸುವಂತಹದಿದ್ದರೂ, ನೀತಿದೃಷ್ಟಿಯಿಂದ ಸಾಗರರಾಜನಲ್ಲಿಗೆ ಹೋಗಿ ಆತನನ್ನು ಬೇಡಿಕೊಳ್ಳುವದು ಯೋಗ್ಯವು. ಪ್ರಭುವೇ, ಸಾಗರನು ನಿನ್ನ ಕುಲಗುರುವಾಗಿರುವದರಿಂದ ಆತನು ವಿಚಾರಪೂರ್ವಕವಾಗಿ ಉಪಾಯವನ್ನು ಹೇಳಬಹುದು; ಅದರಿಂದ ಯಾವತ್ತು ಕಪಿಗಳೂ, ಕರಡಿಗಳೂ ಪ್ರಯಾಸವಿಲ್ಲದೆ ಸಾಗರವನ್ನು ದಾಟಿ ಹೋಗಬಹುದು; ಎಂದು ಹೇಳಿದನು. ಅದಕ್ಕೆ ರಾಮನು—ಮಿತ್ರಾ, ನೀನು ಒಳ್ಳೆಯ ಉಪಾಯವನ್ನು ಹೇಳಿದೆ. ಅದರಂತೆ ಮಾಡುವೆನು. ಇದರ ಮೇಲೆಯೂ ದೈವಾನುಕೂಲವಾಗದಿದ್ದರೆ ನೋಡಬೇಕು. ಅನ್ನಲು, ಅಣ್ಣನ ಈ ಮಾತುಗಳು ಲಕ್ಷ್ಮಣನ ಮನಸ್ಸಿಗೆ ಬರಲಿಲ್ಲ. ರಾಮನ ನಿರಾಶೆಯ ಮಾತುಗಳನ್ನು ಕೇಳಿ ಆತನಿಗೆ ಬಹಳ ದುಃಖವಾಯಿತು. ಆತನು ಅಣ್ಣನಿಗೆ—ದೈವದ ಮೇಲೆ ನಂಬಿಗೆಯಿಡುವದೇಕೆ? ಕ್ಷುಬ್ಧಮನಸ್ಸಿನಿಂದ ಸಮುದ್ರವನ್ನು ಒಣಗಿಸಿ ಸಂಡಿಗೆಮಾಡಿಬಿಡು. ಅಂಜುಬರುಕರು ಮಾತ್ರ ಎಲ್ಲ ಭಾರವನ್ನು ದೈವದಮೇಲೆ ಹಾಕುವರು. "ದೈವ ದೈವ, ಎಂದು ಸೋಮಾರಿಗಳು ಕೂಗಾಡತಕ್ಕದ್ದು, ಎಂದು ಹೇಳಿದನು. ಅದನ್ನು ಕೇಳಿ ರಘುವೀರನು ನಕ್ಕು—"ಹಾಗೆಯೇಮಾಡುತ್ತೇನೆ ಆ ನಿನ್ನ ಮನಸ್ಸು ಸ್ವಸ್ಥವಾಗಿರಲಿ," ಎಂದು ಹೇಳಿ ಲಕ್ಷ್ಮಣನನ್ನು ಸಮಾಧಾನಪಡಿಸಿ, ಸಮುದ್ರತೀರಕ್ಕೆ ಹೋದನು. ಆತನು ಮೊದಲು ಸಮುದ್ರನಾಥನನ್ನು ನಮಸ್ಕರಿಸಿ, ಆತನ ತೀರದಲ್ಲಿ ದರ್ಭಾಸನಹಾಕಿ ಕುಳಿತುಕೊಂಡನು. ಇತ್ತ ವಿಭೀಷಣನು ಲಂಕೆಯಿಂದ ಶ್ರೀರಾಮನಬಳಿಗೆ ಬರುವಾಗ ಆತನ ಹಿಂದಿನಿಂದ ರಾವಣನು ಗುಪ್ತಚಾರರನ್ನು ಕಳಿಸಿದ್ದನು. ಆ ರಾಕ್ಷಸರು ತಮ್ಮ ಮಾಯೆಯಿಂದ ಕಪಿರೂಪಗಳನ್ನು ಧರಿಸಿ, ಯಾವತ್ತು ಸಂಗತಿಗಳನ್ನು ನೋಡುತ್ತಲಿದ್ದರು; ಆದರೆ ಶರಣಾಗತವತ್ಸಲನಾದ ಪ್ರಭುವಿನ ಗುಣಗಳನ್ನು ಅವರು ಮನಸ್ಸಿನಲ್ಲಿ ಶ್ಲಾಘಿಸತೊಡಗಿದರು. ಕಡೆಗೆ ಅವರಿಂದ ತಡೆಯುವದಾಗದೆ ಪ್ರಸಿದ್ಧರೀತಿಯಿಂದ ಅವರು ರಾಮನ ಗುಣಗಳನ್ನು ಹೊಗಳಹತ್ತಿದರು. ಅತ್ಯಂತ ಪ್ರೇಮಭರದಲ್ಲಿ ಅವರ ಮಾಯೆಯು ವಿಸ್ಮರಣವಾಗಿ ಅವರ ರಾಕ್ಷಸರೂಪವು ಪ್ರಕಟವಾಗಲು, ಕಪಿಗಳು—"ಇವರು ರಾವಣನ ಗುಪ್ತಚಾರರೆಂ"ದು ತಿಳಿದು ಅವರನ್ನು ಸೈನ್ಯದಲ್ಲಿ ಮೆರೆಸುತ್ತ, ಹೊಡೆಯುತ್ತ ಸುಗ್ರೀವನಬಳಿಗೆ ಕರಕೊಂಡು ಹೋದರು. ಆಗ ಸುಗ್ರೀವನು ಇವರನ್ನು ಕುರೂಪಿಗಳಾಗಮಾಡಿ ಬಿಟ್ಟುಬಿಡಿರೆಂದು ಆಜ್ಞಾಪಿಸಲು, ಕಪಿಗಳು ಆ ರಾಕ್ಷಸರ ಕಿವಿಮೂಗುಗಳನ್ನು ಕೊಯ್ಯಹೋದರು. ಆಗ ರಾಕ್ಷಸರು ಶ್ರೀರಾ

ಮನ ಆಣೆಯಿಟ್ಟು ಹಾಗೆ ಮಾಡದಂತೆ ಪ್ರಾರ್ಥಿಸಲು, ಲಕ್ಷ್ಮಣನಿಗೆ ಅಂತಃಕರಣಹುಟ್ಟಿ, ಆತನು ರಾವಣನಿಗೊಂದು ಪತ್ರವನ್ನು ಕೊಟ್ಟು ಆ ಚಾರರನ್ನು ಬಿಟ್ಟುಬಿಟ್ಟನು.

ಆ ಚಾರರು ಲಕ್ಷ್ಮಣನ ಚರಣಗಳಮೇಲೆ ಮಸ್ತಕವಿಟ್ಟು ರಾಮನ ಗುಣಗಳ ಗಾಯನಮಾಡುತ್ತ ತಿರುಗಿ ಲಂಕೆಗೆ ಬಂದು ರಾವಣನಿಗೆ ವಂದಿಸಿದರು. ಆಗ ರಾವಣನು ನಕ್ಕು—ಎಲೈ ಶುಕನೇ, ವರ್ತಮಾನವೇನು? ವಿಭೀಷಣನ ಗತಿಯೇನಾಯಿತು? ಆ ಮೂರ್ಖನು ರಾಜ್ಯವಾಳುತ್ತಿರುವಾಗ ಹೊರಟುಹೋದನು. ಅವನ ಗತಿಯು ಗೋದಿಯೊಳಗಿನ ನುಸಿಯಂತೆ ಆಗುವದು; ಅಂದರೆ ಧಾನ್ಯದೊಡನೆ ನುಸಿಗಳು ಬೀಸಿಹೋಗುವಂತೆ ರಾಮನೊಡನೆ ಅವನು ನಾಶವಾಗುವನು! ಶುಕಾ, ಕಾಲನಪ್ರೇರಣೆಯಿಂದ ನನ್ನ ಮೇಲೆ ಸಾಗಿಬರುತ್ತಿರುವ ಕಪಿ-ಕರಡಿಗಳ ಸೈನ್ಯದ ವಿಚಾರವೇನು? ಅದರಂತೆ, ಸಮುದ್ರನ ಸಮಾಚಾರವನ್ನೂ, ಆ ತಪಸ್ವಿಗಳ ಸಮಾಚಾರವನ್ನೂ ನನಗೆ ಹೇಳು. ಅವರಿಗೆ ನನ್ನ ಅಂಜಿಕೆಯಿಂದ ಬಹಳ ತ್ರಾಸವಾಗುತ್ತಿರುವದು. ಅವರಿಗೂ ನಿನಗೂ ಭೆಟ್ಟಿಯಾದರೂ ಆಯಿತೋ, ಅಥವಾ ನನ್ನ ಪ್ರತಾಪವನ್ನು ಕೇಳಿ ಅವರು ಅಯೋಧ್ಯೆಗೆ ತಿರುಗಿ ಹೋಗಿದ್ದರೋ? ಶತ್ರುವಿನ ಮನಸ್ಸಿನ ಹಾಗು ಆತನ ಸೈನ್ಯದ ಸ್ಥಿತಿಯನ್ನು ಹೇಳು, ಎಂದು ಪ್ರಶ್ನಮಾಡಲು ಶುಕನು—ನಾಥನೇ, ಕೃಪೆಮಾಡಿ ನನ್ನನ್ನು ವಿಚಾರಿಸಿದಂತೆ, ಸಿಟ್ಟಾಗದೆ ನಾನು ಹೇಳುವವನ್ನು ಕೇಳು. ನಿನ್ನ ತಮ್ಮನಾದ ವಿಭೀಷಣನು ಅಲ್ಲಿಗೆ ಹೋದ ಕೂಡಲೆ ರಾಮನು ಆತನಿಗೆ ಲಂಕೆಯ ಪಟ್ಟವನ್ನು ಕಟ್ಟಿದನು. ನಾವು ರಾವಣನದೂತರೆಂಬದು ಗೊತ್ತಾಗಲು, ವಾನರರು ನಮ್ಮನ್ನು ಬಹಳವಾಗಿ ಪೀಡಿಸಿದರು. ಅವರು ನಮ್ಮ ಕಿವಿಮೂಗು ಕೊಯ್ಯಬರಲು, ನಾವು ರಾಮನ ಆಣೆಯಿಟ್ಟಿದ್ದರಿಂದ ನಮ್ಮನ್ನು ಬಿಟ್ಟುಬಿಟ್ಟರು. ಮಹಾರಾಜ, ರಾಮನಸೈನ್ಯವನ್ನು ವರ್ಣಿಸುವದು ಶತಕೋಟಿಮುಖಗಳಿಗೂ ಶಕ್ಯವಲ್ಲ. ಆ ಸೈನ್ಯದಲ್ಲಿ ನಾನಾವರ್ಣದ ಹಾಗು ವಿಕ್ರಾಳವದನದ ವಿಶಾಲದೇಹವುಳ್ಳ ಭಯಂಕರ ಕರಡಿಗಳೂ, ಕಪಿಗಳೂ ಇರುವರು. ನಿನ್ನ ಮಗನನ್ನು ಕೊಂದು ಲಂಕಾಪಟ್ಟಣವನ್ನು ಸುಟ್ಟಕಪಿಯು, ಎಲ್ಲರ ಮಾನದಿಂದ ಅಲ್ಪಬಲನಾಗಿರುವನು. ದ್ವಿವಿದ, ಮಯಂದ, ನೀಲ, ನಲ, ಅಂಗದ, ವಿಕಟಾಸ್ಯ, ದಧಿಮುಖ, ಕೇಸರಿ, ಕುಮುದ, ಗವ, ಜಾಂಬುವಂತ ಮೊದಲಾದ ವೀರರು ಕೇವಲ ಬಲದರಾಶಿಯೇ ಆಗಿರುವರು. ಇವರೆಲ್ಲ ಕಪಿಗಳು ಸುಗ್ರೀವನಿಗೆ ಸಮಾನರಾದ ಬಲಶಾಲಿಗಳಿರುವರು. ಅಂಥ ಆ ಕೋಟ್ಯವಧಿ ಕಪಿಗಳ ಲೆಕ್ಕವನ್ನು ಯಾರು ಮಾಡಬೇಕು? ರಾಮನ ಕೃಪೆಯಿಂದ ಅವರಿಗೆ ಅತುಲ ಬಲವು ಪ್ರಾಪ್ತವಾಗಿರುವದು. ಮಹಾರಾಜನೇ, ನಿನ್ನನ್ನು ಗೆಲ್ಲಲಾರದಂಥ ಒಬ್ಬ ವಾನರನೂ ಆ ಸೈನ್ಯದಲ್ಲಿ ಇಲ್ಲವು. ಆ ವಾನರರೆಲ್ಲರು ಕ್ರೋಧದಿಂದ ಕೈಮಸೆಯುತ್ತಿರುವರು; ಆದರೆ ರಘುನಾಥನು ಅಪ್ಪಣೆಕೊಡಲೊಲ್ಲನು. ಅವರು ತಮ್ಮತಮ್ಮೊಳಗೆ—ಈ ಸಮುದ್ರವನ್ನು ಒಣಗಿಸಿಬಿಡೋಣ, ಅಥವಾ ವಿಶಾಲವಾದಪರ್ವತಗಳನ್ನು ಹಾಕಿ ಇದನ್ನು

ತುಂಬಿ ಬಿಡೋಣ, ರಾವಣನನ್ನು ತಿಕ್ಕಿ ಒರಸಿ ಧೂಳಿಯಲ್ಲಿ ಕೂಡಿಸಿ ಬಿಡೋಣ, ಎಂದು ಮಾತಾಡುವರು! ಅವರ ಆ ವೀರಾವೇಶವನ್ನು ನೋಡಿದ್ದರೆ, ಇವರು ಲಂಕೆಯನ್ನು ನುಂಗಿ ಬಿಡುವರೆಂಬಂತೆ ತೋರುತ್ತದೆ. ಇನ್ನು ಶ್ರೀರಾಮನ ತೇಜ–ಬುದ್ಧಿ–ಬಲಗಳ ವಿಪುಲತೆಯನ್ನು ವರ್ಣಿಸುವದಂತು ಆದಿಶೇಷನಿಗೂ ಶಕ್ಯವಲ್ಲ. ರಾಮನ ಒಂದು ಬಾಣವು ನೂರಾರು ಸಮುದ್ರಗಳನ್ನು ಒಣಗಿಸಿ ಬಿಡಬಹುದು; ಆದರೂ ರಾಮನು ನೀತಿನಿಪುಣನೂ, ದಯಾವಂತನೂ ಇರುವದರಿಂದ, ಆತನು ವಿಭೀಷಣನ ಆಲೋಚನೆಯಂತೆ ಸಾಗರನ ಬಳಿಯಲ್ಲಿ ಹಾದಿಯನ್ನು ಕೇಳಿಕೊಳ್ಳುತ್ತಿರುವನು.

ಶುಕರಾಕ್ಷಸನ ಈ ಮಾತುಗಳನ್ನು ಕೇಳಿ ರಾವಣನು ನಕ್ಕನು. ಅಂಥ ಬುದ್ಧಿವಂತನಾದದ್ದರಿಂದಲೇ ರಾಮನು ಕಪಿಗಳಸಹಾಯವನ್ನು ಪಡೆದಿರುವನು; ಹುಟ್ಟು ಅಂಜುಬುರುಕನಾದವನ ಆಲೋಚನೆಯಿಂದ ಸಮುದ್ರನನ್ನು ಹಾದಿಕೇಳುತ್ತಿರುವನು. ಮೂರ್ಖಾ, ಶುಕಾ, ವ್ಯರ್ಥವಾಗಿ ಅವನ ದೊಡ್ಡಸ್ತನವನ್ನು ಏಕೆ ಹೇಳುವೆ? ಶತ್ರುವಿನ ಬಲದ, ಹಾಗು ಬುದ್ಧಿಯ ಗಡಿಯು ನನಗೆ ಗೊತ್ತಾಗಿಹೋಗಿರುವದು! ಆ ಅಂಜುಬುರುಕ ವಿಭೀಷಣನು ಸಚಿವನಾಗಿರುವವನ ಐಶ್ವರ್ಯವೂ, ವಿಜಯವೂ ಎಲ್ಲಿಯವರೆಗೆ ತಡೆಯುವವು? ಎಂದು ಕೇಳಿದನು. ದುಷ್ಟರಾವಣನ ಆ ಮಾತುಗಳನ್ನು ಕೇಳಿ ಶುಕನ ಸಿಟ್ಟು ಹೆಚ್ಚಾಯಿತು. ಇದು ಯೋಗ್ಯಕಾಲವೆಂದು ತಿಳಿದು ತನ್ನ ಬಳಿಯಲ್ಲಿದ್ದ ಪತ್ರವನ್ನು ಮುಂದೆಮಾಡಿ ಶುಕನು ರಾವಣನನ್ನು ಕುರಿತು—ಸ್ವಾಮಿ, ರಘುನಾಥನ ತಮ್ಮನು ಈ ಪತ್ರವನ್ನು ಕೊಟ್ಟಿರುವನು. ಅದನ್ನು ಓದಿ ನಿಮ್ಮ ಅಂತಃಕರಣವನ್ನು ಶಾಂತಮಾಡಿಕೊಳ್ಳಬೇಕು, ಎಂದು ಹೇಳಿದನು. ಆಗ ರಾವಣನು ಎಡಗೈಯಿಂದ ಆ ಪತ್ರವನ್ನು ತೆಕ್ಕೊಂಡು ಸಭೆಯವರನ್ನು ಕರೆಸಿ ಅದನ್ನು ಓದಿಸಿದನು. ಆ ಪತ್ರದಲ್ಲಿ ಲಕ್ಷ್ಮಣನು—"ಪಾಪಿಷ್ಠ ಶಠನೇ, ಸುಮ್ಮನೆ ಬಾಯಿಬಡಕತನದಲ್ಲಿ ಮನಸ್ಸನ್ನು ರಮಿಸಿಕೊಳ್ಳುತ್ತ ಕುಲವನ್ನು ನಾಶಗೊಳಿಸಬೇಡ. ರಾಮನೊಡನೆ ವಿರೋಧಬಳಿಸಿ ನೀನು ಬ್ರಹ್ಮ–ವಿಷ್ಣು–ಮಹೇಶ್ವರರಿಗೆ ಶರಣು ಹೋದರೂ ಬದುಕಲಾರಿ. ಯಾವತ್ತು ಅಭಿಮಾನವನ್ನು ಬಿಟ್ಟು ವಿಭೀಷಣನಂತೆ ಪ್ರಭುವಿನ ಚರಣಗಳಿಗೆ ಶರಣುಬಾ. ಇಲ್ಲದಿದ್ದರೆ ಎಲೈ ಖಲನೇ, ರಾಮಶರಾಗ್ನಿಯಲ್ಲಿ ಕುಲಸಹಿತವಾಗಿ ಪತಂಗದಂತೆ ನೀನುನಷ್ಟವಾಗಿ ಹೋದೀ," ಎಂದು ಬರೆದಿದ್ದನು. ಅದನ್ನು ಕೇಳಿ ರಾವಣನು ಮನಸ್ಸಿನಲ್ಲಿ ಬೆದರಿದನು; ಆದರೆ ಸುಳ್ಳೇ ನಗುತ್ತ ಎಲ್ಲರಿಗೂ ಕೇಳಿಸುವಂತೆ—ಭೂಮಿಯಲ್ಲಿ ಬಿದ್ದು ಆಕಾಶವನ್ನು ಹಿಡಿಯಲಿಚ್ಛಿಸುವವನಂತೆ ಈ ಕ್ಷುದ್ರ ತಾಪಸನವಾಗ್ವಿಲಾಸವಿರುತ್ತದೆ, ಅನ್ನಲು, ಶುಕನು—ಸ್ವಾಮಿ, ಇನ್ನೆಲ್ಲ ಸಂಗತಿಯು ಸತ್ಯವಾಗಿರುವದು. ರಾಮನೊಡನೆ ದ್ವೇಷವು ಸಲ್ಲನು. ಆತನು ರಾಜನಾದರೂ ಅತ್ಯಂತ ಕೋಮಲಸ್ವಭಾವದವನಾದದ್ದರಿಂದ, ನೀವು ಆತನನ್ನು ಕಂಡರೆ ನಿಮ್ಮ ಮೇಲೆ ಕೃಪೆಮಾಡುವನು. ನಿಮ್ಮ ಒಂದು ಅಪರಾಧವನ್ನು ಆತನುಮನಸ್ಸಿನಲ್ಲಿ ಹಿಡಿಯಲಾ

ರನು. ಜಾನಕಿಯನ್ನು ರಘುನಾಥನಿಗೆ ಕೊಟ್ಟು ಬಿಡಬೇಕು, ಎಂದು ಹೇಳಿದನು. ಕಡೆಯ ಮಾತನ್ನು ಕೇಳಿದ ಕೂಡಲೆ ಆ ಶಠನಾದ ರಾವಣನು ಶುಕನನ್ನು ಕಾಲಿನಿಂದ ಒದ್ದನು. ಆಗ ಶುಕನು ರಾವಣನಿಗೆ ಕಡೆಯ ನಮಸ್ಕಾರವನ್ನು ಮಾಡಿ ಅಲ್ಲಿಂದ ಹೊರಟು ಕೃಪಾಸಾಗರನಾದ ರಾಮನ ಬಳಿಗೆ ಬಂದನು. ಶುಕನು ರಾಮನನ್ನು ನಮಸ್ಕರಿಸಿ ತನ್ನ ವೃತ್ತಾಂತವನ್ನು ಹೇಳಿದನು. ಆ ಮೇಲೆ ರಾಮನ ಕೃಪೆಯಿಂದ ಆತನಿಗೆ ಪೂರ್ವದ ಗತಿಯು ಪ್ರಾಪ್ತವಾಯಿತು. ಎಲೈ ಪಾರ್ವತೀ, ಈ ಶುಕನು ಪೂರ್ವದಲ್ಲಿ ಜ್ಞಾನವಂತ ಮುನಿಯಾಗಿದ್ದು, ಅಗಸ್ತ್ಯರ ಶಾಪದಿಂದ ರಾಕ್ಷಸನಾಗಿದ್ದನು. ಆತನು ರಾಮನನ್ನು ಪುನಃ ವಂದಿಸಿ ತನ್ನ ಆಶ್ರಮಕ್ಕೆ ಹೊರಟು ಹೋದನು.

ಮೂರು ದಿನಗಳಾದರೂ ಆ ಜಡಬುದ್ಧಿಯ ಸಾಗರನು ರಾಮಚಂದ್ರನ ಪ್ರಾರ್ಥನೆಯನ್ನು ಮನ್ನಿಸಲೊಲ್ಲನು. ಆಗ ರಾಮನು ಕ್ರುದ್ಧನಾಗಿ "ಭೀತಿಯಿಲ್ಲದೆ ಪ್ರೀತಿಯಿಲ್ಲ" ಎಂದುಕೊಂಡು ಲಕ್ಷ್ಮಣನನ್ನು ಕುರಿತು—ಲಕ್ಷ್ಮಣಾ, ಚಾಪಬಾಣಗಳನ್ನು ತೆಗೆದುಕೊಂಡು ಬಾ, ನನ್ನ ಬಾಣಾಗ್ನಿಯಿಂದ ಈ ಸಮುದ್ರವನ್ನು ಒಣಗಿಸಿಬಿಡುವೆನು. ಶಠನೊಡನೆ ನಮ್ರತನವೂ, ಕುಟಿಲನೊಡನೆ ಪ್ರೀತಿಯೂ, ಸ್ವಾಭಾವಿಕವಾಗಿಯೇ ಕೃಪಣನಾದವನಿಗೆ ಸುಂದರ ನೀತಿಯೂ, ಮಾಯಾಬದ್ಧನಿಗೆ ಜ್ಞಾನಬೋಧವೂ, ಅತಿಲೋಭಿಗೆ ವೈರಾಗ್ಯದ ಉಪದೇಶವೂ, ಸಿಟ್ಟಿನವನಿಗೆ ಶಾಂತಿಕಥನವೂ, ಕಾಮುಕರಿಗೆ ಹರಿಕಥೆಯೂ ಕಲ್ಲುನೆಲದಲ್ಲಿ ಬೀಜಬಿತ್ತಿ ಫಲವನ್ನು ಇಚ್ಛಿಸಿದಹಾಗೆಯೇ ಸರಿ, ಎಂದು ರಘುಪತಿಯು ಧನುಸ್ಸಿಗೆ ಬಾಣವನ್ನು ಹೂಡಿದನು. ಈ ರೀತಿಯು ಲಕ್ಷ್ಮಣನಮನಸ್ಸಿಗೆ ಬಂದಿತು. ಆಗ ಸಮುದ್ರನಲ್ಲಿ ವಡವಾಗ್ನಿಯು ಉತ್ಪನ್ನವಾಗಿ ಯಾವತ್ತು ಜಲಚರಗಳು ತಳಮಳಿಸತೊಡಗಿದವು. ಇದನ್ನರಿತ ಕೂಡಲೆ ಸಾಗರನು ಅಹಂಭಾವವನ್ನು ಬಿಟ್ಟು ಬ್ರಾಹ್ಮಣರೂಪದಿಂದ ಸುವರ್ಣದ ಹರಿವಾಣದಲ್ಲಿ ನಾನಾವಿಧ ರತ್ನಗಳನ್ನು ತುಂಬಿಕೊಂಡು ಬಂದನು. ನೀಚಮನುಷ್ಯರಿಗೆ ವಿನಯವು ಕೆಲಸದ್ದಲ್ಲ. ಅವರು ಬೆದರಿಕೆಯಿಂದಲೇ ಹಾದಿಗೆ ಬರುವರು. ಆ ಬ್ರಾಹ್ಮಣರೂಪಿಯಾದ ಸಾಗರನು ಭಯಭೀತನಾಗಿ ಪ್ರಭುವಿನ ಚರಣಗಳನ್ನು ಹಿಡಿದುಕೊಂಡು— ಎಲೈ ನಾಥನೇ, ನನ್ನ ಎಲ್ಲ ಅಪರಾಧಗಳನ್ನು ಕ್ಷಮಿಸಬೇಕು. ಪ್ರಭುವೇ, ಪೃಥ್ವೀ-ಅಪ್-ತೇಜ-ವಾಯುಗಳ ಕೃತಿಯು ಸ್ವಾಭಾವಿಕವಾಗಿಯೇ ಜಡವು. ನಿನ್ನಿಂದ ಪ್ರೇರಿತವಾದ ಮಾಯೆಯು ಪಂಚಮಹಾಭೂತಗಳನ್ನು ಉತ್ಪನ್ನಮಾಡಿರುವದು. ಈ ಪಂಚಮಹಾಭೂತಗಳೇ ಸೃಷ್ಟಿಯ ಕಾರಣವೆಂದು ಯಾವತ್ತು ಶಾಸ್ತ್ರಗ್ರಂಥಗಳು ಹೇಳುತ್ತಿರುವವು. ಪ್ರಭುವೇ, ನಿನ್ನ ಆಜ್ಞೆಯಂತೆ ಅವರವರು ವರ್ತಿಸಿ ಸುಖನಿಮಗ್ನರಾಗುವರು. ಪ್ರಭುವು ನನ್ನನ್ನು ಶಿಕ್ಷಿಸಿದ್ದು ಒಳಿತಾಯಿತು. ಇದಲ್ಲದೆ ಮರ್ಯಾದೆಯನ್ನು ನೀನೇ ನಿಯಮಿಸಿ ಕೊಟ್ಟಿರುವೆ. ನಗಾರಿಯೂ, ಮೂರ್ಖನೂ, ಶೂದ್ರನೂ, ಪಶುವೂ, ಸ್ತ್ರೀಯೂ ಇವರು ಪೆಟ್ಟು ತಿನ್ನಲಿಕ್ಕೆ ತಕ್ಕವರಾಗಿರುವರು. ಪ್ರಭುವಿನ ಪ್ರತಾಪದಿಂದ ನಾನು ಒಣಗಿ ಹೋಗಿ ಸೈನ್ಯವು

ಪಾರಾಗಿ ಹೋದೀತು; ಆದರೆ ನನ್ನ ಮರ್ಯಾದಾಪಾಲನದ ದೊಡ್ಡಿಸ್ತನವು ಉಳಿಯು ವಾರದು. ಪ್ರಭುವಿನ ಅಪ್ಪಣೆಯು ಮೀರಲಿಕ್ಕೆ ಬಾರದ್ದೆಂದು ವೇದಗಳು ಹೇಳುತ್ತಿರುವವು. ಇದರಮೇಲೆ ತಮಗೆ ಸರಿದೋರಿದಂತೆ ಮಾಡಬಹುದು.

ಸಾಗರನ ಈ ಅತ್ಯಂತ ದೀನವಾಣಿಯನ್ನು ಕೇಳಿ ಕೃಪಾಳುವಾದ ರಾಮನು ವಕ್ಕ್ಯ—ಅಪ್ಪಾ, ಯಾತರಿಂದ ಕಪಿಸೈನ್ಯವು ಪಾರಾಗಿ ಹೋಗುವದೋ, ಅಂಥದೊಂದು ಯುಕ್ತಿಯನ್ನು ಹೇಳು, ಎಂದು ಕೇಳಿದನು. ಅದಕ್ಕೆ ಸಾಗರನು—ಎಲೈ ನಾಥನೇ, ನೀಲ-ನಲ ಎಂಬ ಇಬ್ಬರು ವಾನರರು ಬಂಧುಗಳಾಗಿರುವರು. ಅವರಿಗೆ ಚಿಕ್ಕಂದಿನ ಲ್ಲಿಯೇ ಋಷಿಗಳ ಆಶೀರ್ವಾದವಾಗಿರುವದು. ಅವರು ಮುಟ್ಟಿದಕೂಡಲೆ ಪ್ರಚಂಡ ಪರ್ವತವು ಕೂಡ ನಿನ್ನ ಕೃಪೆಯಿಂದ ನೀರಮೇಲೆ ತೇಲುವದು. ನಾನಾದರೂ ಪ್ರಭುವಿನ ಪ್ರತಾಪವನ್ನು ಲಕ್ಷ್ಯದಲ್ಲಿಟ್ಟು, ಶಕ್ತ್ಯನುಸಾರ ಸಹಾಯಮಾಡುವೆನು. ಎಲೈ ನಾಥನೇ, ಈ ಉಪಾಯದಿಂದ ನನಗೆ ಸೇತುವನ್ನು ಕಟ್ಟಬೇಕು. ಅದರಿಂದ ನಿನ್ನ ಸದ್ಯಶಸ್ಸನ್ನು ತ್ರೈಲೋಕ್ಯವು ಗಾಯನಮಾಡುವದು. ಈಗ ಹೂಡಿರುವ ಬಾಣದಿಂದ ನನ್ನ ಉತ್ತರದ ದಂಡೆಯಮೇಲಿರುವ ಪಾಪರಾಶಿಖಲಜನರನ್ನು ಸಂಹರಿಸಬೇಕು, ಎಂದು ಪ್ರಾರ್ಥಿಸಲು, ದಯಾಘನನೂ, ರಣಧೀರನೂ ಆದ ರಾಮನು ಸಮುದ್ರನ ಮಾನಸಿಕ ವ್ಯಥೆಯನ್ನು ಬೇಗನೆ ಪರಿಹರಿಸಿದನು. ರಾಮನ ಆ ಅತ್ಯಂತ ತೇಜಸ್ಸನ್ನೂ, ಬಲವನ್ನೂ, ಪೌರುಷವನ್ನೂ ನೋಡಿ ಸಮುದ್ರನು ಹರ್ಷಿತನಾದನು. ಆತನು ಉತ್ತರದದಂಡೆಯು ಜನರ ಇತಿಹಾಸವನ್ನೆಲ್ಲ ಕೇಳಿದಬಳಿಕ ರಾಮನ ಚರಣಕ್ಕೆರಗಿ ಹೊರಟುಹೋದನು. ರಘುಪತಿಗೆ ಆತನ ಆಲೋಚನೆಯು ಒಪ್ಪಿಗೆಯಾಯಿತು. ಈ ಕಲಿಮಲಹಾರಕ ಚರಿತ್ರವನ್ನು ತುಲಸೀದಾಸನು ನಾನು ಯಥಾಮತಿ ಗಾಯನಮಾಡಿರುವೆನು. ರಘುಪತಿಯು ಗುಣಗಣವು ಸುಖದ ತವರಮನೆಯಾಗಿದ್ದು, ಸಂಶಯವನ್ನೂ, ದುಃಖವನ್ನೂ ನಷ್ಟ ಮಾಡುವಂಥಹದಿರುವದು. ಎಲೈ ನೀಚಮನಸ್ಸೇ, ಯಾವತ್ತು ಆಶೆಯು ಅವಲಂಬನವನ್ನೂ ಬಿಟ್ಟು ಆ ಗುಣಗಣದ ಶ್ರವಣವನ್ನೂ, ಗಾಯನವನ್ನೂ ನಿರಂತರವಾಗಿ ಮಾಡುತ್ತಿರು. ರಘುನಾಯಕನ ಗುಣಗಾನವು ಯಾವತ್ತು ಮಂಗಲಗಳನ್ನು ಕೊಡುವಂತಹದಿರುವದು. ಅದನ್ನು ಆದರಪೂರ್ವಕವಾಗಿ ಶ್ರವಣಮಾಡುವವರು, ನಾವೆಯು ಇಲ್ಲದೆ ಭವಸಾಗರವನ್ನು ದಾಟುವರು.

———o———

॥ ಶ್ರೀ ಗಣೇಶಾಯನಮಃ ॥

ಶ್ರೀ ಜಾನಕೀವಲ್ಲಭೋ ವಿಜಯತೇ.

# ರಾಮಚರಿತ-ಮಾನಸ

## ಶ್ರೀ ತುಲಸೀ-

# ರಾಮಾಯಣಾಮೃತ

## ಷಷ್ಠಸೋಪಾನ

### - ಲಂಕಾಕಾಂಡ -

ಲವ, ನಿಮಿಷ, ಪರಮಾಣು, ಯುಗ, ವರ್ಷ, ಕಲ್ಪ ಇವು ಯಾವನ ಪ್ರಚಂಡ ಬಾಣಗಳಿದ್ದು, ಕಾಲವೇ ಯಾವನ ಧನುಷ್ಯವಾಗಿರುವದೋ ಆ ರಾಮಚಂದ್ರನನ್ನು, ಎಲೈ ಮನಸ್ಸೇ, ನೀನು ಭಜಿಸುವದಿಲ್ಲವೇ? ಸಾಗರನ ಅವಾಕುಗಳನ್ನು ಕೇಳಿ ಪ್ರಭು ರಾಮಚಂದ್ರನು ಸುಗ್ರೀವಾದಿ ಸಚಿವರನ್ನು ಕರೆಸಿ—ಇನ್ನು ವಿಲಂಬದಿಂದ ಪ್ರಯೋಜನವೇನು? ಸೇತುವೆಯನ್ನು ಕಟ್ಟಿರಿ; ಅಂದರೆ ಸೈನ್ಯವು ಸಮುದ್ರವನ್ನು ದಾಟಿಹೋಗುವದು, ಅನ್ನಲು, ಜಾಂಬುವಂತನು ಕೈಮುಗಿದು—ಎಲೈ ಭಾನುಕುಲ-ಕೇತುವೇ, ಸ್ವಾಮಿನ್, ನಿನ್ನ ನಾಮವೇ ಸೇತುವಿನಂತೆ ಇದ್ದು, ಅದರಮೇಲಿಂದ ನರರು ಭವಸಾಗರವನ್ನು ದಾಟಿಹೋಗುವರು; ಅಂದಮೇಲೆ ಅತ್ಯಲ್ಪವಾದ ಸಮುದ್ರವನ್ನು ದಾಟಿ ಹೋಗಲಿಕ್ಕೆ ಎಷ್ಟು ಹೊತ್ತು ಹತ್ತುವದು! ಎಂದು ಕೇಳಿದನು. ಅದನ್ನು ಕೇಳಿ ಮಾರುತಿಯು—ಪ್ರಭು—ಪ್ರತಾಪರೂಪವಾದ ಪ್ರಖರವಡವಾನಲದಿಂದ ಮೊದಲೇ ಸಮುದ್ರದ ನೀರು ಬತ್ತಿಹೋಗಿತ್ತು; ಆದರೆ ನಮ್ಮ ಶತ್ರುಗಳ ದುಃಖಾಶ್ರುಗಳಿಂದ ಅದು ಪುನಃ ತುಂಬಿದ್ದರಿಂದ ಅದು ಉಪ್ಪು ಆಯಿತು, ಅನ್ನಲು, ಹನುಮಂತನ ಆ ಅತಿಶಯೋಕ್ತಿಯನ್ನು ಕೇಳಿ ರಾಮಚಂದ್ರನು ಹರ್ಷಿತನಾಗಿ ಆತನ ಕಡೆಗೆ ನೋಡಹತ್ತಿದನು. ಬಳಿಕ ಜಾಂಬುವಂತನು ನಳ-ನೀಲರೆಂಬ ಉಭಯಬಂಧುಗಳನ್ನು ಕರೆಸಿ ಅವರಿಗೆ ಯಾವತ್ತು ವೃತ್ತಾಂತವನ್ನು ಹೇಳಿ ಅವರನ್ನು ಕುರಿತು—ನೀವು ರಾಮಪ್ರತಾಪವನ್ನು ಮನಸ್ಸಿನ

ಸ್ಮರಿಸಿ ಸೇತುವನ್ನು ಕಟ್ಟಿರಿ. ಅಂದರೆ ನಿಮಗೆ ಏನೂ ಪ್ರಯಾಸವಾಗುವದಿಲ್ಲ. ಎಂದು ಹೇಳಿ, ಉಳಿದ ಯಾವತ್ತು ವಾನರ ವೀರರನ್ನು ಕುರಿತು—ಎಲೈ ಕರಡಿ-ಕಪಿಗಳೇ, ರಾಮಚರಣ ಕಮಲಗಳನ್ನು ಹೃದಯದಲ್ಲಿ ಧರಿಸಿ ಒಂದು ಕೌತುಕವನ್ನು ಮಾಡಿರಿ. ನೀವೆಲ್ಲರೂ ಓಡುತ್ತಹೋಗಿ ಹಲವು ವೃಕ್ಷಗಳನ್ನೂ, ಪರ್ವತಗಳನ್ನೂ ಹೊತ್ತುಕೊಂಡು ಬರ್ರಿ, ಎಂದು ಹೇಳಿದನು. ಕೂಡಲೆ ಅವರೆಲ್ಲರು "ಹೂ ಹೂ ಹಾ ಹಾ" ಅನ್ನುತ್ತ ರಘುವೀರನ ನಾನಾವಿಧ ಪ್ರತಾಪಗಳ ಜಯಘೋಷಮಾಡುತ್ತ ಹೊರಟರು. ವಾನರ ಮಂಡಲಿಯು ವಿಶಾಲಪರ್ವತಗಳನ್ನು ತಂದುಕೊಡುವದು, ಅವನ್ನು ನಲ-ನೀಲರು ಚಂಡಿನಂತೆ ಹಿಡಿದು ಸೇತುವನ್ನು ಕಟ್ಟುವರು. ಸೇತುವಿನ ಅತಿ ಸುಂದರ"ರಚನೆಯಾದ್ದನ್ನು ನೋಡಿ ಕೃಪಾನಿಧಿ ರಾಮಚಂದ್ರನು ನಕ್ಕು—ಈ ಭೂಪ್ರದೇಶವು ಸರ್ವೋತ್ಕೃಷ್ಟವಾಗಿದ್ದು, ಅತ್ಯಂತ ರಮಣೀಯವಾಗಿರುವದು. ಇದರ ಅಪಾರವಾದ ಮಹಿಮೆಯು ಅವರ್ಣನೀಯವಾಗಿರುವದು. ಈ ಸ್ಥಳದಲ್ಲಿ ಶಂಕರನನ್ನು ಸ್ಥಾಪಿಸಬೇಕೆಂದು ನನ್ನ ಮನಸ್ಸಿನಲ್ಲಿರುವದು, ಅನ್ನಲು, ಅದನ್ನು ಕೇಳಿ ಸುಗ್ರೀವನು, ದೂತರನ್ನು ಕರೆಸಿ ಯಾವತ್ತು ಮುನೀಶ್ವರರನ್ನು ಅಲ್ಲಿಗೆ ಬರಮಾಡಿಕೊಂಡನು. ಪ್ರಭುವು ಲಿಂಗಸ್ಥಾಪನೆಮಾಡಿ ವಿಧ್ಯುಕ್ತ ಪೂಜಿಸಿ—"ನನಗೆ ಶಂಕರನಂತೆ ಪ್ರಿಯರಾದವರು ಬೇರೆ ಯಾರೂ ಇಲ್ಲವು. ಶಿವದ್ರೋಹಿಯಾಗಿದ್ದು, ನನ್ನ ಭಕ್ತನೆನಿಸುವನನಿಗೆ ಎಂದೂ ನನ್ನ ಪ್ರಾಪ್ತಿಯಾಗುವದಿಲ್ಲ. ಶಂಕರವಿಮುಖನಾಗಿ ನನ್ನ ಭಕ್ತಿಯನ್ನು ಇಚ್ಛಿಸುವ ಮಂದಮತಿ-ಮೂಢನು ನರಕದ ಅಧಿಕಾರಿಯೇ ಆಗಿರುವನು. ಶಂಕರಪ್ರಿಯರಿದ್ದು ನನ್ನ ದ್ರೋಹಮಾಡುವವರೂ, ಶಂಕರನ ದ್ರೋಹಮಾಡಿ ನನ್ನನ್ನು ಪ್ರೀತಿಸುವವರೂ ಕಲ್ಪಪರ್ಯಂತವಾಗಿ ಘೋರನರಕದಲ್ಲಿ ವಾಸಿಸುವರು. ರಾಮೇಶ್ವರನ ದರ್ಶನಮಾಡಿಕೊಳ್ಳುವವರು ದೇಹಾವಸಾನವಾದ ನಂತರ ವೈಕುಂಠಕ್ಕೆ ತೆರಳುವರು. ಭಾಗೀರಥಿಯಿಂದ ರಾಮೇಶ್ವರನಿಗೆ ಅಭಿಷೇಕಮಾಡುವವರು ಸಾಯುಜ್ಯಮುಕ್ತಿಯನ್ನು ಹೊಂದುವರು. ನಿಷ್ಕಾಮದಿಂದಲೂ, ಶುದ್ಧಮನಸ್ಸಿನಿಂದಲೂ ರಾಮೇಶ್ವರನನ್ನು ಸೇವಿಸುವವನಿಗೆ ಶಂಕರನು ನನ್ನ ಭಕ್ತಿಯನ್ನು ಕೊಡುವನು. ಅದರಂತೆ ಈ ಸೇತುವಿನ ದರ್ಶನಮಾಡಿಕೊಳ್ಳುವವನು ಅನಾಯಾಸವಾಗಿ ಭವಸಾಗರವನ್ನು ದಾಟಿಹೋಗುವನು, ಎಂದು ಹೇಳಲು, ರಾಮನ ವಚನಗಳು ಸರ್ವರ ಹೃದಯಗಳಲ್ಲಿ ನೆಲೆಗೊಂಡವು. ಬಳಿಕ ಮುನಿಗಳು ತಮ್ಮ ತಮ್ಮ ಸ್ಥಳಗಳಿಗೆ ತಿರುಗಿ ಹೋದರು.

ಎಲೈ ಪಾರ್ವತೀ, ಚತುರರಾದ ನೀಲ-ನಳರು ಸೇತುವೆಯನ್ನು ಕಟ್ಟಿದರು. ಅವರ ಯಶಸ್ಸು ಸರ್ವತ್ರ ಪಸರಿಸಿತು. ಸ್ವತಃ ನೀರಲ್ಲಿ ಮುಳುಗುತ್ತ, ಮುಂದಿಯನ್ನೂ ಮುಳುಗಿಸುವ ಕಲ್ಲುಗಳು ನಾವೆಗಳಂತೆ ಸಮುದ್ರದ ಮೇಲೆ ತೇಲ ತೊಡಗಿದ್ದು, ಸಮುದ್ರದ ಮಹಿಮೆಯಲ್ಲ, ಕಲ್ಲಿನ ಗುಣವಲ್ಲ, ಅಥವಾ ಕಪಿಗಳ ಕರ್ತೃತ್ವವೂ ಅಲ್ಲ-

ಶ್ರೀರಘುಪತಿಯ ಪ್ರತಾಪದಿಂದಲೇ ಕಲ್ಲುಗಳು ಸಮುದ್ರದಲ್ಲಿ ತೇಲ ತೊಡಗಿದವು. ಇಂಥಶ್ರೀ ರಾಮಪ್ರಭುವನ್ನು ಬಿಟ್ಟು ಅನ್ಯ ಪ್ರಭುಗಳನ್ನು ಭಜಿಸುವವರು ಮಂದಮತಿಗಳೇ ಸರಿ. ಅತ್ಯಂತ ದೃಢತರವಾದ ಸೇತುವನ್ನು ನೋಡಿ ರಾಮಚಂದ್ರನು ಮನಸ್ಸಿನಲ್ಲಿ ಪ್ರಸನ್ನನಾದನು. ಅದರ ಮೇಲಿಂದ ಕರಡಿ–ಕಪಿಗಳ ಸೈನ್ಯವು ಹೋಗ ತೊಡಗಿತು. ಆಗಿನ ಪ್ರಸಂಗವನ್ನು ವರ್ಣಿಸುವದು ಶಕ್ಯವಲ್ಲ. ಆ ಸೇತುಬಂಧನವನ್ನೇರಿ ಕೃಪಾಳು ರಘುರಾಜನು ಸಮುದ್ರದ ವಿಸ್ತಾರವನ್ನು ನೋಡತೊಡಗಿದನು. ಪ್ರಭುವಿನ ದರ್ಶನ ಮಾಡಿಕೊಳ್ಳುವದಕ್ಕಾಗಿ ಅನೇಕ ಜಲಚರಗಳ ಸಮುದಾಯವು ನೀರಮೇಲೆ ಪ್ರಕಟವಾಗಿ, ಪ್ರಭುವನ್ನು ನೋಡತೊಡಗಿ ಮನಸ್ಸಿನಲ್ಲಿ ಪ್ರಸನ್ನವಾಗಿ ಸುಖಿಯಾಯಿತು. ಆಜಲಚರಗಳ ಬುಡದಲ್ಲಿ ನೀರು ಕಾಣದಷ್ಟು ಅವು ದಟ್ಟವಾಗಿ ಪಸರಿಸಿದ್ದವು. ಸೇತುವಿನಮೇಲೆ ಬಹಳ ದಟ್ಟಣೆಯಾಗಲು, ಕೆಲವು ಕಪಿಗಳು ಆಕಾಶಮಾರ್ಗದಿಂದ ಹೋಗತೊಡಗಿದವು; ಕೆಲವು ಜಲಚರಗಳ ಮೇಲೆ ಕಾಲಿಟ್ಟು ಹೋಗತೊಡಗಿದವು. ಹೀಗೆ ರಾಮಲಕ್ಷ್ಮಣರು ಈ ಕೌತುಕವನ್ನು ನೋಡುತ್ತ ಯಾವತ್ತು ಸೈನ್ಯದೊಡನೆ ಆಚೆಯ ದಂಡೆಗೆ ಹೋದರು. ಆಗ ಪ್ರಭುವು ಎಲ್ಲ ವಾನರರಿಗೆ ಫಲಮೂಲಗಳನ್ನು ಭಕ್ಷಿಸಿಸಲು ಅಪ್ಪಣೆ ಕೊಡಲು, ಋತುಮಾನದ ನಿರ್ಬಂಧವಿಲ್ಲದೆ ಎಲ್ಲ ವೃಕ್ಷಗಳು ಫಲಗಳಿಂದ ಜಗ್ಗಿದವು; ವಾನರರು ಯಥೇಷ್ಟವಾಗಿ ಹಣ್ಣುಗಳನ್ನು ತಿಂದು ಗಿಡಗಳನ್ನು ಅಲ್ಲಾಡಿಸುವರು. ಲಂಕೆಯ ಮೇಲೆ ವೃಕ್ಷಪಾಷಾಣಗಳನ್ನು ಬೀಸಿ ಒಗೆಯುವರು. ಅವರು ಅಲ್ಲಲ್ಲಿ ತಿರುಗಾಡುತ್ತಿರುವಾದ ರಾಕ್ಷಸರು ಎದುರಾಗಲು, ಅವರನ್ನು ಕುಣಿಸಿಬಿಡುತ್ತಿದ್ದರು; ಹಲ್ಲುಗಳಿಂದ ಅವರ ಕಿವಿಮೂಗುಗಳನ್ನು ಕಡಿದುಬಿಡುತ್ತಿದ್ದರು; ರಾಕ್ಷಸರು ರಾಮನ ಯಶಸ್ಸನ್ನು ವರ್ಣಿಸಲು ಅವರನ್ನು ಹಾಗೇ ಬಿಡುತ್ತಿದ್ದರು. ಕಿವಿಮೂಗುಗಳನ್ನು ಕಡಿಸಿಕೊಂಡ ರಾಕ್ಷಸರು ರಾವಣನ ಬಳಿಗೆ ದೂರಿಕೊಳ್ಳುತ್ತಿದ್ದರು. "ಸಮುದ್ರಕ್ಕೆ ಸೇತುವಕಟ್ಟಿದರೆ"ಂಬ ಶಬ್ದವು ಕಿವಿಗೆ ಬಿದ್ದಕೂಡಲೆ ರಾವಣನು ಮನಸ್ಸಿನಲ್ಲಿ ಬೆದರಿ, ಬಾಯಿಗೆ ಬಂದಂತೆ ಬಡಬಡಿಸತೊಡಗಿ, ಮೇಲೆ ಮೇಲೆ ನಗುತ್ತ ಮನೆಗೆ ಹೋದನು.

ಶ್ರೀರಾಮನು ಸಹಜವಾದ ಲೀಲೆಯಿಂದ ಸೈನ್ಯದೊಡನೆ ಸಮುದ್ರವನ್ನು ದಾಟಬಂದನೆಂಬ ಸುದ್ದಿಯನ್ನು ಕೇಳಿ ಮಂಡೋದರಿಯು ಪತಿಯ ಕೈಯನ್ನು ಹಿಡಕೊಂಡು ತನ್ನ ಮಂದಿರಕ್ಕೆ ಕರಕೊಂಡು ಹೋಗಿ ಪತಿಯಚರಣಕ್ಕೆರಗಿ ಅತ್ಯಂತ ಪ್ರೇಮಳವಾಣಿಯಿಂದ—ಎಲೈ ಪ್ರಾಣನಾಥನೇ, ನನ್ನ ಮೇಲೆ ಸಿಟ್ಟಾಗದೆ ನನ್ನ ಮಾತುಗಳನ್ನು ಕೇಳಬೇಕು. ಎಲೈ ಪ್ರಭುವೇ, ಬುದ್ಧಿಯಿಂದಲೂ, ಪರಾಕ್ರಮದಿಂದಲೂ ಗೆಲ್ಲಲು ಶಕ್ಯವಾಗಿರುವವರ ಸಂಗಡಲೇ ದ್ವೇಷವನ್ನು ಬಳಿಸಶಕ್ಯದ್ದು. ಕ್ಷುದ್ರವಾದ ದೀಪದ ಹುಳಕ್ಕೂ, ಸೂರ್ಯನಿಗೂ ಇರುವಷ್ಟು ಅಂತರವು ನಿಮಗೂ, ರಾಮಚಂದ್ರನಿಗೂ ಇರುವದು. ಯಾವನು ಹಯಗ್ರೀವಾವತಾರದಿಂದ ಅತ್ಯಂತ ಬಲಾಢ್ಯರಾದ ಮಧುಕೈಟಭ

ದೈತ್ಯರನ್ನೂ, ನೃಸಿಂಹಾವತಾರದಿಂದ ಮಹಾಬಲಾಢ್ಯನಾದ ಹಿರಣ್ಯಕಸಿಪುವನ್ನೂ ಸಂಹರಿಸಿದನೋ, ಯಾವನು ವಾಮನಾವತಾರದಿಂದ ಬಲಿಯನ್ನು ಕಟ್ಟಿ ಪಾತಾಳಕ್ಕೆ ಮೆಟ್ಟಿದನೋ, ಯಾವನು ಪರಶುರಾಮಾವತಾರದಿಂದ ಕಾರ್ತವೀರ್ಯನ ಸಂಹಾರ ಮಾಡಿದನೋ ಆತನೇ ಈಗ ಭೂಭಾರ ಹರಣಕ್ಕಾಗಿ ರಾಮರೂಪದಿಂದ ಅವತರಿಸಿರುವನು. ಎಲೈ ಪ್ರಾಣನಾಥನೇ, ಕಾಲ-ಕರ್ಮ-ಜೀವಗಳು ಯಾವನ ಅಧೀನದಲ್ಲಿರುವವೋ ಅವನೊಡನೆ ವಿರೋಧ ಬಳಿಸಬಹುದೇ? ಶ್ರೀರಾಮನ ಚರಣಕಮಲಗಳಲ್ಲಿ ಮಸ್ತಕವಿಟ್ಟು, ಆತನಿಗೆ ಜಾನಕಿಯನ್ನು ತಿರುಗಿ ಒಪ್ಪಿಸು. ಎಲೈ ನಾಥನೇ, ಈ ಜಗತ್ತಿನಲ್ಲಿ ಬಂದು ಮಾಡತಕ್ಕದ್ದನ್ನೆಲ್ಲ ನೀನು ಮಾಡಿರುವೆ. ದೇವದೈತ್ಯರೊಡನೆ ಚರಾಚರಾವಿಶ್ವವನ್ನೆಲ್ಲ ಗೆದ್ದು ಬಿಟ್ಟಿರುವೆ; ಆದ್ದರಿಂದ ನೀನು ಮಗನಿಗೆ ರಾಜ್ಯವನ್ನು ಒಪ್ಪಿಸಿ ವನಕ್ಕೆ ಹೋಗಿ ರಘುಪತಿಯ ಭಜನ ಮಾಡುತ್ತ ಇರಬೇಕು. ಎಲೈ ನಾಥನೇ, ವಾರ್ಧಕ್ಯದಲ್ಲಿ ರಾಜನು ಅರಣ್ಯವಾಸಮಾಡಬೇಕೆಂಬ ನೀತಿಯನ್ನು ಸಂತರೇ ಹೇಳಿರುವರು; ಆದ್ದರಿಂದ ಮಮತೆ-ಉನ್ಮಾದಗಳನ್ನು ಬಿಟ್ಟು ರಘುನಾಥನನ್ನು ಭಜಿಸತಕ್ಕದ್ದು. ಪ್ರಭು-ಕೋಸಲೇಶ್ವರನ ಪ್ರಾಪ್ತಿಗಾಗಿ ಮುನೀಶ್ವರರೂ ಪ್ರಯತ್ನಮಾಡುತ್ತಿರುವರು; ರಾಜರು ರಾಜ್ಯವನ್ನು ತ್ಯಜಿಸಿ ವಿರಕ್ತರಾಗುತ್ತಿರುವರು; ಆದರೆ ಆ ಕೋಸಲೇಶ್ವರನು ಕೃಪೆಮಾಡುವದಕ್ಕಾಗಿ ತಾನಾಗಿ ನಿನ್ನ ಬಳಿಗೆ ನಡೆದು ಬಂದಿರುವನು. ನನ್ನ ಪ್ರಾರ್ಥನೆಯನ್ನು ತಾವು ಮನ್ನಿಸಿದರೆ ತ್ರೈಲೋಕ್ಯದಲ್ಲಿ ತಮ್ಮ ಅತ್ಯಂತ ಪವಿತ್ರವಾದ ಕೀರ್ತಿಯಾಗುವದು; ನನ್ನ ಸೌಭಾಗ್ಯವೂ ಅಖಂಡವಾಗಿ ಉಳಿಯುವದು!

ಹೀಗೆ ನುಡಿಯುವಾಗ ಮಂಡೋದರಿಯ ನೇತ್ರಗಳು ಅಶ್ರುಪೂರ್ಣವಾದವು; ಶರೀರವು ಕಂಪಿಸತೊಡಗಿ ಆಕೆಯು ರಾವಣನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು; ಆದರೆ ರಾವಣನು ಆಕೆಯನ್ನು ಹಿಡಿದೆತ್ತಿ ತನ್ನ ಪ್ರಭಾವವನ್ನೇ ವರ್ಣಿಸಿಕೊಂಡನಲ್ಲದೆ, ಆಕೆಯ ಬೋಧವನ್ನು ಲಕ್ಷಿಸಲಿಲ್ಲ. ಆತನು ಬಗೆಬಗೆಯಿಂದ ಹೆಂಡತಿಯನ್ನು ಸಮಾಧಾನಗೊಳಿಸಿ ಸಭೆಗೆ ಹೋಗಿ ಕುಳಿತನು. ತನ್ನ ಪತಿಯು ಕಾಲವಶನಾಗಿರುವದರಿಂದ ಆತನಿಗೆ ಅಭಿಮಾನವು ಉತ್ಪನ್ನವಾಗಿರುವದೆಂದು ಮಂಡೋದರಿಯು ಮನಸ್ಸಿನಲ್ಲಿ ತಿಳಿದುಕೊಂಡಳು. ರಾವಣನು ಸಭೆಯಲ್ಲಿ ಮಂತ್ರಿಗಳನ್ನು ಕುರಿತು— ಇನ್ನು ಶತ್ರುವಿನೊಡನೆ ಯಾವರೀತಿಯಿಂದ ಯುದ್ಧಮಾಡಬೇಕೆಂದು ಕೇಳಲು ಅವರು— ಎಲೈ ರಾಕ್ಷಸಾಧಿಪತಿಯೇ, ಸ್ವಾಮಿನ್, ಪುನಃ ಪುನಃ ಈ ಮಾತನ್ನು ಯಾಕೆ ಕೇಳುವೆ? ಇದರಲ್ಲಿ ಇಷ್ಟು ವಿಚಾರ ಮಾಡುವಂಥ ಅಂಜಿಕೆಯ ಪ್ರಸಂಗವೇನಿರುವದು ಹೇಳು. ಮನುಷ್ಯರು-ಕಪಿಗಳು, ಕರಡಿಗಳು ನಮ್ಮ ನಿತ್ಯದ ಆಹಾರವಾಗಿರುವವು, ಎಂದು ಹೇಳಿದರು. ಇವರ ಮಾತುಗಳನ್ನು ಕೇಳಿ ರಾವಣ-ಪುತ್ರನಾದ ಪ್ರಹಸ್ತನು ಕೈಜೋಡಿಸಿ ತಂದೆಯನ್ನು ಕುರಿತು—ಪ್ರಭೋ, ನೀತಿಗೆ ವಿರೋಧವಾಗಿ ನಡೆಯಬಾರದು. ಈ ಮಂತ್ರಿಗಳ ಬುದ್ಧಿಯು

ತೀರ ಅಕುಂಚಿತವಾಗಿರುವದು. ಇವರೆಲ್ಲರು ಮುಖಸ್ತುತಿಯನ್ನು ಮಾಡುತ್ತಿರುವರು. ಮಹಾರಾಜ, ಹೀಗೆ ಮಾಡಿದರೆ ಗೊತ್ತಿಗೆ ಹತ್ತಲಾರದು. ಒಬ್ಬ ವಾನರನು ಸಮುದ್ರವನ್ನು ದಾಟಬಂದಮಾತ್ರದಿಂದ ಎಲ್ಲರೂ ಮನಸ್ಸಿನಲ್ಲಿಯೇ ಆತನನ್ನು ಹೊಗಳುತ್ತಿರುವರು; ಆದರೆ ಕಪಿಯು ಲಂಕಾಪಟ್ಟಣವನ್ನೆಲ್ಲ ಸುಡುವಾಗ ಇವರು ಆತನನ್ನು ಯಾಕೆ ತಿನ್ನಲಿಲ್ಲ? ಎಲೈ ರಾಕ್ಷಸವೀರರೇ, ಆಗೇನು ನಿಮಗೆ ಹಸಿವೆಯಾಗಿದ್ದಿಲ್ಲವೋ? ಕೇಳಲಿಕ್ಕೆ ಮಧುರವು, ಆದರೆ ಪರಿಣಾಮದಲ್ಲಿ ದುಃಖದಾಯಕವಾದ ಆಲೋಚನೆಯನ್ನು ಮಂತ್ರಿಗಳು ಮಹಾರಾಜನಿಗೆ ಹೇಳಿರುವರು. ಲೀಲೆಯಿಂದ ಸಮುದ್ರವನ್ನು ಕಟ್ಟಿ ಸೈನ್ಯದೊಡನೆ ಸುವೇಲಪರ್ವತದಮೇಲೆ ಇಳಿದುಕೊಂಡಿರುವವನು ವಾಸ್ತವವಾಗಿ ಮನುಷ್ಯನಿರುವನೆಂದು ತಿಳಿದಿರೋ? ಎಲೈ ಬಂಧುಗಳೇ, ನೀವೆಲ್ಲರೂ ಗಲ್ಲ ಉಬ್ಬಿಸಿ "ಅವರನ್ನು ತಿಂದುಬಿಡವೆವೆ"ಂದು ಅನ್ನುತ್ತಿರುವದು ಉಚಿತವಲ್ಲ. ಎಲೈ ತಾತನೇ, ನನ್ನ ಮಾತುಗಳನ್ನು ಅತ್ಯಂತ ಆದರದಿಂದ ಕೇಳು. ನಾನು ಅಂಜುಬುರುಕನೆಂದು ಮನಸ್ಸಿನಲ್ಲಿ ತಿಳಿಯಬೇಡ. ಸವಿಸವಿ ಮಾತುಗಳನ್ನು ಆಡುವವರೂ, ಕೇಳುವವರೂ ಇಂಥವರೇ ಜಗತ್ತಿನಲ್ಲಿ ಬಹುಜನರಿರುವರಲ್ಲದೆ, ಅತ್ಯಂತ ಹಿತಕರವಾದ, ಪರಂತು ಕೇಳಲಿಕ್ಕೆ ಕಠೋರವಾಗಿರುವ ಮಾತುಗಳನ್ನು ಆಡುವವರೂ, ಕೇಳುವವರೂ ಆದ ಮಹಾತ್ಮರು ಅತ್ಯಂತ ವಿರಲರು. ಈಗ ನೀವು ಮೊದಲು ವಕೀಲನನ್ನು ಕಳಿಸಿ ಸೀತೆಯನ್ನು ಒಪ್ಪಿಸಿ ಒಡಂಬಡಿಕೆ ಮಾಡಿಕೊಳ್ಳುವದೇ ಯೋಗ್ಯವಾದ ನೀತಿಯು. ಸೀತೆಯನ್ನು ಸ್ವೀಕರಿಸಿ ಅವರು ತಿರುಗಿ ಹೋದರೆ ಅವರೊಡನೆ ದ್ವೇಷ ಬಳಿಸಲಾಗದು; ಅವರು ಕೇಳದಿದ್ದರೆ, ರಣಾಂಗಣದಲ್ಲಿ ಅವರಿಗೆ ಎದುರಾಗಿ ಯುದ್ಧಮಾಡತಕ್ಕದ್ದು. ಪ್ರಭುವೇ, ನನ್ನ ಈ ಆಲೋಚನೆಯನ್ನು ಮನ್ನಿಸಿದರೆ ಎರಡೂಬಗೆಯಿಂದ ನಿನ್ನ ಕೀರ್ತಿಯೇ ಆಗುವದು.

ಮಗನ ಈ ಮಾತುಗಳನ್ನು ಕೇಳಿ ರಾವಣನು ಸಂತಾಪಗೊಂಡು— ಎಲೈ ಶಠನೇ, ನಿನಗೆ ಇಂಥ ಬುದ್ಧಿಯನ್ನು ಯಾರು ಕಲಿಸಿದರು? ಈಗಿನಿಂದಲೇ ನಿನ್ನ ಮನಸ್ಸಿನಲ್ಲಿ ಇಷ್ಟು ಅಂಜಿಕೆಯುಂಟಾಗಿರುವದಲ್ಲವೇ? ನೀನು ನಮ್ಮ ಕುಲಕ್ಕೆ ಕಂಟಕನಾಗಿ ಹುಟ್ಟಿದೆ! ಎಂದು ತಿರಸ್ಕರಿಸಿದನು. ತಂದೆಯ ಈ ಕಠೋರವಾದ ಮರ್ಮಭೇದಕ ವಚನಗಳನ್ನು ಕೇಳಿ ಪ್ರಹಸ್ತನು— "ಸಾಯುತ್ತಿರುವವನಿಗೆ ಔಷಧವು ಸೇರದಿರುವಂತೆ, ನನ್ನ ಹಿತಕರವಾದ ಆಲೋಚನೆಯು ತಮಗೆ ಸೇರುವದಿಲ್ಲವು." ಎಂದು ಸ್ಪಷ್ಟವಾಗಿ ಹೇಳಿ, ತನ್ನ ಮನೆಗೆ ಹೊರಟು ಹೋದನು. ಸಂಧ್ಯಾಸಮಯವಾದದ್ದರಿಂದ ರಾವಣನು ತನ್ನ ಇಪ್ಪತ್ತು ತೋಳುಗಳನ್ನು ನೋಡಿಕೊಳ್ಳುತ್ತ ಮನೆಗೆ ಹೋದನು. ಲಂಕೆಯ ಶಿಖರದಲ್ಲಿ ಒಂದು ಚಿತ್ರವಿಚಿತ್ರವಾದ ವಿಲಾಸಸ್ಥಾನವಿದ್ದು, ಅಲ್ಲಿ ಗಾಯಕರ ಸಮ್ಮೇಲನವಷ್ಟೆ ಆಗುತ್ತಿತ್ತು. ರಾತ್ರಿ ರಾವಣನು ಅಲ್ಲಿಗೆ ಹೋದಕೂಡಲೆ, ಕಿನ್ನರರು ಆತನ ಗುಣಗಳ ಗಾಯನ ಮಾಡತೊಡಗಿದರು. [illegible]

ಕುಶಲರಾದ ಅಪ್ಸರೆಯರು ನರ್ತನ ಮಾಡತೊಡಗಿದರು. ಇಂದ್ರನ ನೂರುಮಡಿವಿಲಾಸ ವನ್ನು ರಾವಣನು ಭೋಗಿಸತೊಡಗಿದನು. ಅತ್ಯಂತ ಬಲಾಢ್ಯನಾದ ಶತ್ರುವು ಎದೆಯ ಮೇಲಿದ್ದರೂ ಆತನ ಮನಸ್ಸಿನಲ್ಲಿ ಸ್ವಲ್ಪವೂ ಉದ್ವೇಗವು ಉಂಟಾಗಿದ್ದಿಲ್ಲ. ಹೀಗಿರು ವಾಗ ಇತ್ತ ಸುವೇಲಪರ್ವತದಮೇಲೆ ಪ್ರಭು ಶ್ರೀರಾಮನುಪುಷ್ಪಶಯ್ಯೆಯ ಮೃಗಚರ್ಮದ ಮೇಲೆ ಸುಗ್ರೀವನ ತೊಡೆಯಲ್ಲಿ ತಲೆಯಿಟ್ಟು ವಿಶ್ರಮಿಸಿದ್ದನು. ಆಗ ಆತನ ಎಡಗ ಡೆಯಲ್ಲಿ ಧನುಷ್ಯವೂ, ಬಲಗಡೆಯಲ್ಲಿ ಬತ್ತಳಿಕೆಯೂ ಇದ್ದು, ಅವನು ತನ್ನ ಎರಡೂ ಕರ ಕಮಲಗಳಿಂದ ಬಾಣವನ್ನು ತೀಡುತ್ತಿದ್ದನು. ವಿಭೀಷಣನು ಕಿವಿಮಾತಿನಿಂದ ಆತನೊಡನೆ ಏನೋ ಆಲೋಚಿಸುತ್ತಿದ್ದನು. ಮಹಾಭಾಗ್ಯಶಾಲಿಗಳಾದಅಂಗದ-ಹನುಮಂತರು ಪ್ರಭು ವಿನ ಕಾಲುಗಳನ್ನು ಒತ್ತುತ್ತಿದ್ದರು. ಬೆನ್ನಿಗೆ ಬತ್ತಳಿಕೆಯನ್ನು ಕಟ್ಟಿ ಕೈಯಲ್ಲಿ ಧನುರ್ಬಾ ಣಗಳನ್ನು ಹಿಡಿದು ಲಕ್ಷ್ಮಣನು ಪ್ರಭುವಿನ ಬೆನ್ನ ಹಿಂದೆ ವೀರಾಸನವನ್ನು ಹಾಕಿಕೊಂಡು ಕುಳಿತುಕೊಂಡಿದ್ದನು. ಈ ವಿಧದ ಪ್ರಭುವನ್ನು ಧ್ಯಾನಿಸುವ ಮನುಷ್ಯರು ಧನ್ಯರೇ ಸರಿ. ಪ್ರಭುವು ಪೂರ್ವದಿಕ್ಕಿನಲ್ಲಿ ಚಂದ್ರನನ್ನು ನೋಡುತ್ತಿರುವಾಗ ಆತನಲ್ಲಿಯ ಕಲಂಕದ ಕಡೆಗೆ ಆತನ ಲಕ್ಷವು ಹೋಯಿತು. ಆಗ ಆತನು ತನ್ನ ಪರಿವಾರವನ್ನು ಕುರಿತು— ಈ ಕಲಂಕವು ಚಂದ್ರನಿಗೆ ಯಾಕೆ ಉಂಟಾಗಿರುವದೆಂಬದನ್ನು ನಿಮ್ಮ ನಿಮ್ಮ ಬುದ್ಧಿಯಂತೆ ಹೇಳಿರಿ ನೋಡೋಣ, ಅನ್ನಲು ಎಲ್ಲರೂ ಹೇಳಿದರೆಂತೆಂದರೆ—

ಸುಗ್ರೀವ— ದೇವಾಧಿದೇವನೇ, ಆ ಕಲಂಕವು ಚಂದ್ರನ ಮೇಲೆ ಬಿದ್ದ ಪೃಥ್ವಿಯ ಪ್ರತ್ಯಕ್ಷ ನೆರಳು ಆಗಿರುವದು.

ಕೆಲವೊಬ್ಬರು— ರಾಹುವು ಚಂದ್ರನನ್ನು ನುಂಗುವಾಗ ಆತನ ಹೃದಯಕ್ಕಾದ ಗಾಯವೇ ಈ ಕಲಂಕವಾಗಿರುವದು.

ಇನ್ನೊಬ್ಬರು—ಬ್ರಹ್ಮದೇವನು ರತಿಯ ಮುಖವನ್ನು ಮಾಡುವಾಗ ಚಂದ್ರನೊಳ ಗಿಂದ ಆತನ ಉತ್ಕೃಷ್ಟ ಭಾಗವನ್ನು ತಕ್ಕೊಳ್ಳಲು, ಆತನ ಹೃದಯದಲ್ಲಿ ಛಿದ್ರವುಬಿದ್ದು, ಅದರ ಮೇಲೆಯೇ ಈ ಆಕಾಶದ ನೆರಳು ಬಿದ್ದಿರುವದು.

ಶ್ರೀರಾಮನು— ಹಾಲಾಹಲವಿಷವು ಚಂದ್ರನ ಪ್ರೀತಿಯ ಸಹೋದರನಾದದ್ದರಿಂದ ಚಂದ್ರನು ಆತನಿಗೆ ತನ್ನ ಹೃದಯದಲ್ಲಿ ಸ್ಥಳವನ್ನು ಕೊಟ್ಟನು. ಅಂತೇ ಆತನು ತನ್ನ ವಿಷಯುಕ್ತ ಕಿರಣಗಳಿಂದ ವಿರಹಿಗಳಾದ ಸ್ತ್ರೀಪುರುಷರನ್ನು ಸುಡುತ್ತಿರುವನು.

ಮಾರುತಿ— ಪ್ರಭುವೇ, ಚಂದ್ರನು ನಿನ್ನ ಭಕ್ತನಾಗಿರುವದರಿಂದ ನಿನ್ನ ಶ್ಯಾಮಲ ಮೂರ್ತಿಯು ಆತನ ಹೃದಯದಲ್ಲಿರುತ್ತಿರುವದು; ಆದ್ದರಿಂದ ಈ ಕಪ್ಪು ನಿನ್ನ ಮೂರ್ತಿ ಯದೇ ಆಗಿರುವದು.

ಮಾರುತಿಯ ಈ ಮಾತುಗಳನ್ನು ಕೇಳಿ ರಘುಪತಿಯು ನಕ್ಕನು. ಆತನು ದಕ್ಷಿಣ ದಿಕ್ಕಿನ ಕಡೆಗೆ ನೋಡಿ ವಿಭೀಷಣನನ್ನು ಕುರಿತು—ವಿಭೀಷಣಾ, ಇತ್ತ ದಕ್ಷಿಣದಿಕ್ಕಿನಕಡೆಗೆ

ನೋಡು. ಮೇಘಪಟಲದಲ್ಲಿ ವಿದ್ಯುಲ್ಲತೆಯು ಮಿನುಗಹತ್ತಿರುವದು. ಮೇಘದ ಮಧುರ ವಾದ ಗಂಭೀರಗರ್ಜನೆಯಾಗುತ್ತಿರುವದು. ಇದಲ್ಲದೆ ಭಯಂಕರವಾದ ಅಣೇಕಲ್ಲುಗಳ ಮಳೆಯಾಗುತ್ತಿರುವಂತೆಯೂ ಕೇಳುತ್ತಿರುವದು, ಅನ್ನಲು ವಿಭೀಷಣನು —ದಯಾಘನಾ, ಅದು ಮೇಘಪಟಲವೂ ಅಲ್ಲ, ವಿದ್ಯುಲ್ಲತೆಯೂ ಅಲ್ಲ. ಅದು ಲಂಕೆಯ ಶಿಖರದ ಮೇಲಿರುವ ರಾವಣನ ವಿಲಾಸಗೃಹದಲ್ಲಿಯ ಗಾಯನ-ನರ್ತನಗಳ ಸಮಾರಂಭವಾಗಿ ರುವದು. ಮೇಘಪಟಲದಂತೆ ತೋರುವದು ರಾವಣನ ವಿಶಾಲವಾದ ಛತ್ರವಾಗಿದ್ದು, ಮಂಡೋದರಿಯ ಕಿವಿಯೊಳಗಿನ ಕುಂಡಲಗಳ ಹೊಳಪು ವಿದ್ಯುಲ್ಲತೆಯಾಗಿರುವದು. ಅಪ್ರತಿಮವಾದ ಮೃದಂಗ, ತಾಲ, ವೀಣೆ ಮೊದಲಾದವುಗಳಧ್ವನಿಯೇ ಮೇಘಧ್ವನಿಯೂ, ಪಾಷಾಣವೃಷ್ಟಿಯೂ ಆಗಿರುವವು. ಎಂದು ಹೇಳಿದನು. ರಾವಣನ ಈ ಅಭಿಮಾನವನ್ನು ನೋಡಿ ಪ್ರಭುವು ಧನುಸ್ಸಿಗೆ ಬಾಣವನ್ನು ಹೂಡಿ, ಆ ಒಂದೇ ಬಾಣದಿಂದ ರಾವಣನಛತ್ರ, ಕಿರೀಟ, ಕುಂಡಲಗಳು ಕಳಚಿ ಬೀಳುವಂತೆ ಅದನ್ನು ಹೊಡೆದನು. ಅವು ಮೂರೂ ಸದ್ದಿಲ್ಲದೆ ನೆಲಕ್ಕೆ ಬಿದ್ದ ಮರ್ಮವು ಯಾರಿಗೂ ಗೊತ್ತಾಗಲಿಲ್ಲ. ಇಂಥ ಅದ್ಭುತ ಕಾರ್ಯ ಮಾಡಿ ರಾಮನಬಾಣವು ತಿರುಗಿಬಂದು ಆತನ ಬತ್ತಲಿಕೆಯಲ್ಲಿಸೇರಿತು. ಆ ಮಹ ದಾನಂದ ಪ್ರಸಂಗದಲ್ಲಿ ಅಪಶಕುನವಾದದ್ದನ್ನು ನೋಡಿ ರಾವಣನಸಭೆಯು ಶಂಕಿತವಾ ಯಿತು. ಭೂಕಂಪವಿಲ್ಲ, ಗಾಳಿಯೂ ವಿಶೇಷವಾಗಿಇಲ್ಲ, ಅಸ್ತ್ರ-ಶಸ್ತ್ರಗಳಾದರೂ ಯಾರ ಕ್ಕೂ ಬೀಳಲಿಲ್ಲ; ಆದ್ದರಿಂದ ಇದು ಬಹು ದೊಡ್ಡ ಅಪಶಕುನವಾಯಿತೆಂದು ರಾವಣ ಸಭೆಯು ಭಯಗ್ರಸ್ತವಾಯಿತು. ಆಗ ರಾವಣನು ನಕ್ಕು ಒಂದು ಯುಕ್ತಿಯನ್ನು ಯೋಚಿಸಿ—“ತಲೆಗಳು ಬೀಳುವದೂ ಯಾವನಿಗೆ ಶುಭಶಕುನವಾಗುವದೋ ಅವನಿಗೆ ಕೇವಲ ಕಿರೀಟ ಬಿದ್ದದ್ದು ಅಪಶಕುನವೇನು? ನೀವು ನಿಮ್ಮ ನಿಮ್ಮ ಮನೆಗಳಿಗೆ ಹೋಗಿ ಸ್ವಸ್ಥವಾಗಿ ಮಲಗಿಕೊಳ್ಳಿರಿ,, ಎಂದು ಹೇಳಿದನು. ಆಗ ಎಲ್ಲರೂ ಆತನನ್ನು ವಂದಿಸಿ ಹೊರಟುಹೋದರು; ಆದರೆ ಮಂಡೋದರಿಗೆ ಸಮಾಧಾನವಾಗದೆ ಆಕೆಯು ಪತಿ ಯನ್ನು ಕುರಿತು—ಪ್ರಭುವೇ, ರಾಮನೊಡನೆ ವಿರೋಧ ಬೆಳೆಸಬೇಡ. ಆತನು ಮನು ಷ್ಯನೆಂದು ತಿಳಿದು ಹಟಹಿಡಿಯಬೇಡ. ವೇದಗಳು ಯಾವನ ಅಂಗಾಂಗಗಳಲ್ಲಿ ಸ್ವರ್ಗಾದಿ ಲೋಕಗಳನ್ನು ಕಲ್ಪಿಸುವವೋ ಅದೇ ವಿರಾಟಸ್ವರೂಪಿಯಾದ ಭಗವಂತನು ಶ್ರೀರಾ ಮನಾಗಿರುವನು. ಸಪ್ತ ಪಾತಾಳಗಳು ಆ ವಿಶ್ವರೂಪನ ಚರಣಗಳಾಗಿದ್ದು, ಬ್ರಹ್ಮ ಲೋಕವು ಆತನ ತಲೆಯಾಗಿರುವದು. ಉಳಿದ ಲೋಕಗಳೆಲ್ಲ ಆತನ ಅಂಗಾಂಗಗಳಲ್ಲಿ ವಾಸ್ತವ್ಯವಾಗಿರುವವು. ಭಯಂಕರ ಕಾಲನು ಆತನ ಭ್ರುಕುಟೀವಿಲಾಸವು; ಸೂರ್ಯನು ಆತನ ನೇತ್ರಗಳು; ಮೇಘಮಾಲೆಗಳು ಆತನ ಕೇಶಗಳು; ಅಶ್ವಿನೀಕುಮಾರರು ಆತನ ಮೂಗು; ದಿವಸರಾತ್ರಿಗಳು ಆತನ ನಿಮಿಷೋನ್ಮೇಷಗಳು; ದಶದಿಕ್ಕುಗಳು ಆತನ ಕಿವಿ ಗಳು; ವಾಯುವು ಆತನ ಶ್ವಾಸವು; ವೇದಗಳು ಆತನ ವಾಣಿಗಳು ಎಂದು ವೇದಗಳು

ಹೇಳಿರುವವು. ಲೋಭವು ಆತನ ತುಟಿಯು; ಯಮನು ಆತನ ಭಯಂಕರವಾದ ಕೋರೆ ದಾಡೆಯು; ಮಾಯೆಯು ಆತನ ನಗೆಯು; ದಿಕ್ಪಾಲಕರು ಬಾಹುಗಳು; ಅಗ್ನಿಯು ಮುಖವು; ಸಮುದ್ರವು ನಾಲಿಗೆಯು; ಉತ್ಪತ್ತಿ-ಸ್ಥಿತಿ-ಲಯಗಳು ಆತನ ಲೀಲೆಗಳು; ಅಷ್ಟಾದಶವನಸ್ಪತಿಭಾರವು ಆತನ ರೋಮಾವಲಿಯು; ಪರ್ವತಗಳು ಆತನ ಅಸ್ಥಿಗಳು; ನದಿಗಳು ಆತನ ರಕ್ತವಾಹಿನಿಗಳಜಾಲವು; ಸಮುದ್ರವು ಆತನ ಉದರವು; ನರಕಗಳು ಆತನ ಅಧೋಭಾಗದ ಇಂದ್ರಿಯಗಳು; ಹೀಗೆ ಜಗದಾತ್ಮನಾದ ಭಗವಂತನ ವಿಷಯ ವಾಗಿ ಅನೇಕ ಕಲ್ಪನೆಗಳನ್ನು ಮಾಡಿರುವರು. ಶಿವನು ಆ ವಿರಾಟಪುರುಷನ ಅಹಂಕಾರ ವಾಗಿದ್ದು, ಬ್ರಹ್ಮದೇವನು ಆತನ ಬುದ್ಧಿಯಾಗಿರುವನು. ಚಂದ್ರನು ಆತನ ಮನಸ್ಸಾ ಗಿದ್ದು, ಮಹತ್ತತ್ವವು ಆತನ ಚಿತ್ತವಾಗಿರುವದು. ಇಂಥ ವಿರಾಟರೂಪಿಯಾದ ಭಗ ವಾನ್ ರಾಮಚಂದ್ರನು ಮನುಷ್ಯರೂಪದಿಂದ ಸಂಚಾರಮಾಡುತ್ತಿರುವನು. ಎಲೈ ಪ್ರಾಣ ನಾಥನೇ, ಹೀಗೆ ಭಾವಿಸಿ ಪ್ರಭುವಿನೊಡನೆ ದ್ವೇಷಿಸುವದನ್ನು ಬಿಟ್ಟು, ಆತನ ಚರಣಗ ಳಲ್ಲಿ ಪ್ರೇಮವಿಡಿರೆಂದರೆ ನನ್ನ ಸೌಭಾಗ್ಯವು ಅಖಂಡವಾಗಿ ಉಳಿಯುವದು.

ಮಂಡೋದರಿಯ ಈ ಮಾತುಗಳನ್ನು ಕೇಳಿ ರಾವಣನು ಹಾಸ್ಯಪೂರ್ವಕವಾಗಿ- ಆಹೋ! ಮೋಹದಮಹಿಮೆಯು ಪ್ರಬಲವಾಗಿರುವದು. ಕವಿಗಳು ಸ್ತ್ರೀಯರಹೃದಯ ದಲ್ಲಿ-ಸಾಹಸ, ಅಸತ್ಯ, ಚಾಂಚಲ್ಯ, ಕಪಟ, ಭಯ, ಅವಿವೇಕ, ಅಪವಿತ್ರತೆ, ನಿರ್ದಯ ಎಂಬ ಎಂಟುಗುಣಗಳು ಸ್ವಾಭಾವಿಕವಾಗಿಯೇ ಇರುವವೆಂದು ಸತ್ಯವಾಗಿ ಹೇಳಿರು ವರು. ಶತ್ರುವಿನ ಸ್ವರೂಪವನ್ನು ಹೀಗೆ ಸಮಗ್ರವಾಗಿ ವರ್ಣಿಸಿ ನನಗೆ ನೀನು ಒಳ್ಳೇ ಬೆದರಿಕೆಯನ್ನು ಹಾಕಿದೆ! ಆದರೆ ಪ್ರಿಯೇ, ಅವೆಲ್ಲ ಐಶ್ವರ್ಯಗಳು ಸ್ವಾಭಾವಿಕವಾ ಗಿಯೇ ನನ್ನ ಸ್ವಾಧೀನವಾಗಿರುತ್ತವೆ. ನಿನ್ನ ಈ ಭಾಷಣವು ನನ್ನ ಮೇಲಿರುವ ನಿನ್ನ ಪ್ರಸನ್ನತೆಯ ದ್ಯೋತಕವಾಗಿರುತ್ತದೆಂಬದು ಈಗ ನನಗೆ ತಿಳಿಯಿತು. ಎಲೈ ಪ್ರಿಯೇ, ನಿನ್ನ ಚಾತುರ್ಯವನ್ನು ನಾನು ತಿಳಿದೆನು. ಶತ್ರುವಿನ ನೆವದಿಂದ ನನ್ನ ಪ್ರಭಾವವನ್ನೇ ನೀನು ವರ್ಣಿಸಿದೆ. ಮೃಗಲೋಚನೇ, ನಿನ್ನ ಮಾತುಗಳು ಬಹುಗೂಢವಾಗಿರುವವು. ಆ ಗೂಢಾರ್ಥವನ್ನು ತಿಳಿದು ಕೊಳ್ಳುವದರಿಂದ ಆನಂದವಾಗುವದಲ್ಲದೆ, ಅಂಜಿಕೆಯು ದೂರವಾಗುವದು, ಎಂದು ಹೇಳಿದನು. ಮಂಡೋದರಿಯು ಕಾಲವಶತೆಯಿಂದ ತನ್ನ ಪತಿಯು ಭ್ರಮಿಷ್ಠನಾಗಿರುವನೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿದಳು. ಈ ಮೇರೆಗೆ ವಿನೋದದಲ್ಲಿ ರಾತ್ರಿಯೆಲ್ಲ ಕಳೆದು ಹೋಗಲು, ಸ್ವಭಾವದಿಂದಲೇ ನಿರ್ಭಯನಾದ ಆ ಮದಾಂಧ ಲಂಕಾಧಿಪತಿಯು ಸಭಾಸ್ಥಾನಕ್ಕೆ ಹೋದನು.

ಇತ್ತ, ಬೆಳಗಾದಕೂಡಲೆ ರಘುಪತಿಯು ತನ್ನ ಎಲ್ಲ ಸಚಿವರ ಆಲೋಚನೆಯನ್ನು ಕೇಳಿ, ಜಾಂಬುವಂತನ ಸೂಚನೆಯಂತೆ ಅಂಗದನನ್ನು ರಾವಣನಬಳಿಗೆ ದೂತನನ್ನಾಗಿ ಕಳಿಸುವದನ್ನು ನಿಶ್ಚಯಿಸಿ ಆತನನ್ನು ಕುರಿತು-ಎಲೈ ವಾಲಿತನಯನೇ, ನೀನು ಬುದ್ಧಿ-

ಬಲ-ಗುಣಗಳನಿಧಿಯಾಗಿರುವೆ. ನನ್ನ ಕಾರ್ಯವೂ, ಶತ್ರುವಿನ ಹಿತವೂ ಸಾಧಿಸುವಂತೆ ಶತ್ರುವಿನೊಡನೆ ಮಾತಾಡು, ಎಂದು ಹೇಳಲು, ಪ್ರಭುವಿನ ಅಪ್ಪಣೆಯನ್ನು ಶಿರಸಾವಹಿಸಿ, ಆತನ ಚರಣಗಳಿಗೆರಗಿ ಎದ್ದು ಪ್ರಭುವನ್ನು ಕುರಿತು—ಎಲೈ ಪ್ರಭುವೇ, ರಾಮಾ, ನೀನು ಯಾರಮೇಲೆ ಕೃಪೆಮಾಡುವೆಯೋ, ಅವನೇ ಗುಣಸಾಗರನು. ಎಲೈ ನಾಥನೇ, ನಿನ್ನ ಎಲ್ಲ ಕಾರ್ಯಗಳೂ ಸ್ವಯಂಸಿದ್ಧವಾಗಿಯೇ ಇರುವವು. ಆದರೆ ನನಗೆ ಮಾತ್ರ ದೊಡ್ಡಿಸ್ತನ ಕೊಡುವೆ- ಎಂದು ನುಡಿಯುವಾಗ ಆತನ ಶರೀರವು ರೋಮಾಂಚಿತವಾಗಿ, ಆತನು ಹರ್ಷಿತನಾದನು. ಪ್ರಭುವಿನ ಚರಣಗಳಿಗೆರಗಿ ಆತನ ಪ್ರಭಾವವನ್ನು ಹೃದಯದಲ್ಲಿ ಸ್ಮರಿಸಿ ಎಲ್ಲರನ್ನು ನಮಸ್ಕರಿಸಿ ಆ ವಾನರಶ್ರೇಷ್ಠನು ಹೊರಟನು. ಪ್ರಭುವಿನ ಪ್ರತಾಪದಿಂದ ಆ ಶೂರನಾದ ರಣಧುರಂಧರ ಅಂಗದನು ಮನಸ್ಸಿನಲ್ಲಿ ಸ್ವಾಭಾವಿಕವಾಗಿಯೇ ನಿಶ್ಶಂಕನಾದನು. ಆತನು ಲಂಕಾಪಟ್ಟಣವನ್ನು ಹೊಕ್ಕಕೂಡಲೆ, ಆಡುತ್ತಿದ್ದ ರಾವಣನ ಮಗನು ಆತನಿಗೆ ಎದುರಾದನು. ಅವರಿಬ್ಬರಲ್ಲಿ ವಾದವಿವಾದವಾಗಲು, ಅವರಿಬ್ಬರೂ ಆವೇಶಗೊಂಡರು. ಅವರಿಬ್ಬರೂ ಅತುಲ ಬಲಶಾಲಿಗಳೂ, ತರುಣರೂ ಆಗಿದ್ದರು. ರಾವಣಪುತ್ರನು ಅಂಗದನನ್ನು ಒದೆಯುವದಕ್ಕಾಗಿ ಕಾಲನ್ನು ಎತ್ತಿದನು. ಕೂಡಲೆ ಅಂಗದನು ಅದೇ ಕಾಲನ್ನು ಹಿಡಿದು ಗರಗರ ತಿರುಗಿಸಿ ಆ ರಾವಣಪುತ್ರನನ್ನು ನೆಲಕ್ಕೆ ಅಪ್ಪಳಿಸಿ ಪ್ರಾಣಹರಣಮಾಡಿದನು. ರಾಕ್ಷಸ ಸಮುದಾಯವು ಅಂಗದನ ಈ ಮಹಾಬಲವನ್ನು ನೋಡಿ ಅತ್ತಿತ್ತ ಓಡಿಹೋಯಿತು. ರಾವಣಪುತ್ರನ ವಧೆಯನ್ನು ಕೇಳಿ ಎಲ್ಲರೂ ಸುಮ್ಮನೆಯಿದ್ದರು. ಮೊದಲು ಬಂದಿದ್ದ ಕಪಿಯೇ ಪುನಃ ಬಂದನೆಂದು ಲಂಕಾಪಟ್ಟಣದಲ್ಲಿ ಹಾಹಾಕಾರವುಂಟಾಯಿತು. ಇನ್ನೇನು ಗತಿಯಾಗುವದೋ ಎಂದು ರಾಕ್ಷಸರು ಚಿಂತಿಸುತ್ತ, ಕೇಳದಿದ್ದರೂ ಅಂಗದನಿಗೆ ಹಾದಿಯನ್ನು ತೋರಿಸತೊಡಗಿದರು. ಆ ಧೀರನು ಸಭಾದ್ವಾರಕ್ಕೆ ಹೋಗಿ ಸಿಂಹನಂತೆ ಒಳ್ಳೇ ಠೀವಿಯಿಂದ ನಿಂತುಕೊಂಡು ನಾಲ್ಕೂಕಡೆಗೆ ನೋಡತೊಡಗಿದನು.

ಅಂಗದನು ಕೂಡಲೆ ಒಬ್ಬ ರಾಕ್ಷಸನನ್ನು ರಾವಣನಕಡೆಗೆ ಕಳಿಸಲು, ಆ ರಾಕ್ಷಸನು ಒಬ್ಬ ಕಪಿಯು ಬಂದ ವರ್ತಮಾನವನ್ನು ರಾವಣನಿಗೆ ಹೇಳಿದನು. ಆಗ ರಾವಣನು—ಎಲ್ಲಿಯ ಕಪಿಯು ಬಂದಿರುವನು, ಕರಕೊಂಡು ಬಾ ಅನ್ನಲು, ಅನೇಕ ದೂತರು ಓಡುತ್ತ ಬಂದು ಆ ಕಪಿಶ್ರೇಷ್ಠನನ್ನು ರಾವಣನ ಬಳಿಗೆ ಕರಕೊಂಡು ಹೋದರು. ರಾವಣನಿಗೆ ಅಂಗದನು ಜೀವವುಳ್ಳ ಕಾಡಿಗೆಯ ಪರ್ವತದಂತೆ ತೋರಿದನು. ಅತ್ಯಂತ ಬಲಿಷ್ಠನಾದ ಅಂಗದವೀರನು ಮನಸ್ಸಿನಲ್ಲಿ ಸ್ವಲ್ಪವಾದರೂ ಅಂಜದೆ, ದಿಟ್ಟತನದಿಂದ ಸಭೆಯನ್ನು ಪ್ರವೇಶಿಸಲು, ಅವನನ್ನು ನೋಡಿದಕೂಡಲೆ ಎಲ್ಲ ಸಭಾಸದರು ಎದ್ದು ನಿಂತರು. ಅದರಿಂದ ರಾವಣನು ಮತ್ತಿಷ್ಟು ರೇಗಿಸಿದನು. ಅಂಗದನು ಮದೋನ್ಮತ್ತ ಆನೆಗಳ ಮೇಲೆ ಸಾಗಿಹೋಗುವ ಸಿಂಹನಂತೆ ಸ್ವಲ್ಪವಾದರೂ ಹೆದರದೆ ರಾಮಪ್ರತಾಪ

ವನ್ನು ಹೃದಯದಲ್ಲಿ ಸ್ಮರಿಸುತ್ತ ಆ ಪ್ರಭುವನ್ನು ಮನಸ್ಸಿನಲ್ಲಿ ನಮಸ್ಕರಿಸಿ ಸಭೆಯಲ್ಲಿ ಹೋಗಿ ಕುಳಿತುಕೊಂಡನು. ಆಗ ರಾವಣನು-

ರಾವಣ—ಎಲೈ ವಾನರಾ, ನೀನು ಯಾರು?

ಅಂಗದ—ಎಲೈ ದಶಕಂಧರಾ, ನಾನು ರಘುವೀರನ ದೂತನು. ನನ್ನ ತಂದೆಗೂ ನಿನಗೂ ಸ್ನೇಹವಿದ್ದದ್ದರಿಂದ ನಿನ್ನ ಹಿತಕ್ಕೋಸ್ಕರ ನಾನು ಬಂದಿರುವೆನು. ನಿನ್ನ ಜನ್ಮವು ಶ್ರೇಷ್ಠಕುಲದಲ್ಲಿ ಆಗಿದ್ದು, ನೀನು ಪುಲಸ್ತ್ಯ ಋಷಿಯ ಮೊಮ್ಮಗನಾಗಿರುತ್ತೀ. ಶಿವ-ಬ್ರಹ್ಮರ ಆರಾಧನವನ್ನೂ ನೀನು ಹಲವು ಬಗೆಯಿಂದ ಮಾಡಿರುತ್ತೀ. ಅವರ ವರಪ್ರಸಾದದಿಂದ ನೀನು ಕೃತಾರ್ಥನಾಗಿರುವೆಯಲ್ಲದೆ, ಲೋಕಪಾಲರೊಡನೆ ಯಾವತ್ತು ರಾಜರನ್ನು ಗೆದ್ದುಬಿಟ್ಟಿರುತ್ತೀ; ಅದರಂತೆ ನೀನು ರಾಜ್ಯಮದದಿಂದ ಅಥವಾ ಮೋಹವಶತೆಯಿಂದ ಲೋಕಮಾತೆಯಾದ ಜಾನಕಿಯನ್ನು ಹರಣ ಮಾಡಿ ತಂದಿರುತ್ತೀ; ಆದರೆ ನನ್ನ ಹಿತೋಪದೇಶವನ್ನು ಕೇಳು; ಅಂದರೆ ಪ್ರಭುವು ನಿನ್ನ ಯಾವತ್ತು ಅಪರಾಧಗಳನ್ನು ಕ್ಷಮಿಸುವನು. ಹಲ್ಲಲ್ಲಿ ಹುಲ್ಲುಕಚ್ಚಿ, ಕೊರಳಮೇಲೆ ಕೊಡಲಿಯನ್ನಿಟ್ಟುಕೊಂಡು, ಸಂಗಡ ನಿನ್ನ ಹೆಂಡಿರನ್ನೂ, ಪರಿವಾರವನ್ನೂ ಕರಕೊಂಡು, ಜಾನಕಿಯನ್ನು ಸನ್ಮಾನದಿಂದ ಮುಂದೆ ಮಾಡಿಕೊಂಡು, ಹೀಗೆ ನಿರ್ಭಯನಾಗಿ ಪ್ರಭುವಿನಬಳಿಗೆ ಹೋಗಿ—"ಎಲೈ ಶರಣಾಗತವತ್ಸಲ ರಘುಕುಲ ಶ್ರೇಷ್ಠಾ, ಇನ್ನು ನನ್ನನ್ನು ರಕ್ಷಿಸು ರಕ್ಷಿಸು" ಎಂದು ಪ್ರಾರ್ಥಿಸು, ಅಂದರೆ ನಿನ್ನ ದೀನವಾಣಿಯನ್ನು ಕೇಳಿದಕೂಡಲೆ ಪ್ರಭುವು ನಿನಗೆ ಅಭಯವನ್ನೀಯುವನು.

ರಾವಣ—ಎಲೈ ನೀಚಾ, ಮರ್ಕಟಾ, ಜೋಕೆಯಿಂದ ಏಕೆ ಮಾತಾಡುವದಿಲ್ಲ? ಮೂರ್ಖಾ, ನಾನು ದೇವತೆಗಳ ಶತ್ರುವೆಂಬದು ನಿನಗೆ ಗೊತ್ತಿಲ್ಲವೆ? ಇರಲಿ, ನಿನ್ನ ಹಾಗು ನಿನ್ನ ತಂದೆಯ ಹೆಸರನ್ನಾದರೂ ಹೇಳು; ಅಂದರೆ ಯಾವಸಂಬಂಧದಿಂದ ನಾನು ಆತನ ಮಿತ್ರನಾಗಿರುವೆನೆಂಬದಾದರೂ ನನಗೆ ತಿಳಿದೀತು.

ಅಂಗದ—ನನ್ನ ಹೆಸರು "ಅಂಗದ" ಎಂಬದಿದ್ದು, ನಾನು ವಾಲಿಯ ಮಗನಾಗಿರುವೆನು. ವಾಲಿಯು ಹಾಗು ನಿನ್ನ ಭೆಟ್ಟಿಯು ಎಂದಾದರೂ ಆಗಿರುವದೇನು?

ರಾವಣ [ಬೆದರಿ]—ವಾಲಿ ಎಂಬ ಹೆಸರಿನವನೊಬ್ಬ ವಾನರನಿದ್ದದ್ದನ್ನು ನಾನು ಬಲ್ಲೆನು. ಅಂಗದಾ, ನೀನು ಆ ವಾಲಿಯ ಮಗನೇನು? ಎಲಾ, ಕುಲಕ್ಕೆ ಅಗ್ನಿಸ್ವರೂಪನಾಗಿಯೂ, ಕುಲಘಾತಕನಾಗಿಯೂ ನೀನು ಹುಟ್ಟಿದೆಯಲ್ಲವೋ? ನೀನು ಗರ್ಭದಲ್ಲಿರುವಾಗಲೇ ಯಾಕೆ ಪತನಹೊಂದಲಿಲ್ಲ? ವ್ಯರ್ಥವಾಗಿ ಹುಟ್ಟಿಬಂದೆ! ನಿನ್ನ ಮುಖದಿಂದಲೇ ನೀನು ತಾಪಸನ ದೂತನೆಂದು ಹೇಳಿಕೊಳ್ಳುತ್ತಿರುವೆ; ಆದರೆ ವಾಲಿಯ ಕ್ಷೇಮಸಮಾಚಾರವನ್ನಾದರೂ ಹೇಳು. ಈಗ ಆತನು ಎಲ್ಲಿರುವನು?

ಅಂಗದ—ಇನ್ನು ಹತ್ತೇ ದಿವಸಗಳಲ್ಲಿ ನೀನು ಪ್ರತ್ಯಕ್ಷ ವಾಲಿಯಬಳಿಗೆ ಹೋಗಿ ನಿನ್ನ ಆ ಮಿತ್ರನನ್ನು ಆಲಿಂಗಿಸಿ ಆತನ ಕ್ಷೇಮಸಮಾಚಾರವನ್ನು ವಿಚಾರಿಸು. ರಾಮ ನೊಡನೆ ದ್ವೇಷ ಬಳಸುವದರಿಂದ ಕ್ಷೇಮವು ಹೇಗೆ ಆಗುವದೆಂಬ ಸುದ್ದಿಯನ್ನು ಆತನು ನಿನಗೆ ಹೇಳುವನು. ಎಲೈ ಶಠನೇ, ಕೇಳು. ಹೃದಯದಲ್ಲಿ ರಾಮಚಂದ್ರನು ವಾಸಿಸದ ವನ ಹೃದಯದಲ್ಲಿಯೇ ಭೇದಬುದ್ಧಿಯು ಉತ್ಪನ್ನವಾಗುತ್ತದೆ. ನಿಜವಾಗಿಯೇ ನಾನು ಕುಲಘಾತಕನಾಗಿದ್ದು, ನೀನು ಮಾತ್ರ ಕುಲರಕ್ಷಕನಾಗಿರುವೆ. ಈ ಮಾತನ್ನು ಕಿವು ಡರೂ, ಕುರುಡರೂ ಒಪ್ಪಲಿಕ್ಕಿಲ್ಲ; ನಿನಗಂತು ಇಪ್ಪತ್ತಿಪ್ಪತ್ತು ಕಿವಿಗಳೂ, ಕಣ್ಣುಗಳೂ ಇರುತ್ತವೆ. ಶಿವ–ಬ್ರಹ್ಮಾದಿದೇವತೆಗಳಿಂದಲೂ, ಮುನಿಗಣದಿಂದಲೂ ಸೇವಿತನಾಗಿರು ವವನ ದೂತನಾಗಿ ನಾನು ಕುಲವನ್ನು ಮುಣುಗಿಸುವೆನೆಯೆ? ಈ ವಿಚಾರವುಂಟಾದ ಕೂಡಲೆ ನಿನ್ನ ಹೃದಯವು ಯಾಕೆ ಸೀಳಲಿಲ್ಲ?

ರಾವಣ (ಕಣ್ಣುಕೆಕ್ಕರಿಸಿ)—ದುಷ್ಟಾ, ನಾನು ಯಾವತ್ತು ಧರ್ಮ–ನೀತಿಗಳನ್ನು ಅರಿತದ್ದರಿಂದಲೇ ನಿನ್ನ ಈ ಕಠೋರ ವಚನಗಳನ್ನು ಸಹಿಸುವೆನು.

ಅಂಗದ—ಪರಸ್ತ್ರೀಯನ್ನು ಕದಿಯುವ ನಿನ್ನ ಧರ್ಮಶೀಲತ್ವವನ್ನು ನಾವು ತಿಳಿಯು ವೆವು; ಮತ್ತು ಶತ್ರುವಿನದೂತನನ್ನು ರಕ್ಷಿಸುವ ನಿನ್ನ ನೀತಿಯನ್ನಂತು ನಾವು ಈ ಮೊದಲೆ ನೋಡಿರುವೆವು. ಎಲೈ ಧರ್ಮಾತ್ಮಾ, ಇನ್ನೂ ನೀನು ನಿನ್ನ ಆ ಧರ್ಮ–ನೀತಿಗಳಲ್ಲಿ ಯಾಕೆ ಮುಣುಗಿ ಸಾಯಲೊಲ್ಲಿ! ಕಿವಿ ಮೂಗು ಕೊಯ್ದ ತಂಗಿಯನ್ನು ನೋಡಿ ಯೂ ನೀನು ಕ್ಷಮೆಯನ್ನೇ ಮಾಡಿದ್ದು ಕೇವಲ ಧರ್ಮಬುದ್ಧಿಯಿಂದಲೆ. ನಿನ್ನ ಧರ್ಮ ತತ್ವವು ಜಗತ್ತಿನಲ್ಲಿ ಪ್ರಸಿದ್ಧವಾಗಿರುವದು. ನಿನ್ನ ದರ್ಶನವು ನನಗೆ ಆದದ್ದು ದೊಡ್ಡ ಭಾಗ್ಯವೇ ಸರಿ.

ರಾವಣ—ಎಲೈ ಮೂರ್ಖಕೀಟಕಾ, ಲೋಕಪಾಲರ ಬಲವನ್ನು ಹರಣಮಾಡಿದ್ದ ಹಾಗು ಕೈಲಾಸಪರ್ವತವನ್ನು ಎತ್ತಿಹಿಡಿದ ನನ್ನ ಈ ಯಾವತ್ತು ಬಾಹುಗಳನ್ನು ನೋಡು. ನಿಮ್ಮ ಇಡಿಯ ಸೈನ್ಯದಲ್ಲಿ ನನ್ನೊಡನೆ ಕಾದುವ ವೀರನು ಯಾವನಿರುವನು ಹೇಳು? ನಿನ್ನ ಪ್ರಭುವು ಸ್ತ್ರೀವಿರಹದಿಂದ ಕ್ಷೀಣಬಲನಾಗಿರುವನು. ಮತ್ತು ಆತನ ತಮ್ಮನು ಅಣ್ಣನ ದುಃಖದಿಂದ ದುಃಖಿತನಾಗಿ ಮಲಿನನಾಗಿರುವನು. (ಉದಾಸೀನನಾಗಿರುವನು) ನೀನೂ, ಸುಗ್ರೀವನೂ ನದಿಯ ದಂಡೆಯ ಮೇಲಿನ ಗಿಡಗಳಂತೆ ದೂಡಿದರೆ ಬೀಳುವವ ರಾಗಿರುವಿರಿ. ನನ್ನ ತಮ್ಮ ವಿಭೀಷಣನಂತು ತೀರ ಅಂಜುಬುರುಕನು. ನಿಮ್ಮ ಮಂತ್ರಿ ಯಾದ ಜಾಂಬುವಂತನು ತೀರ ಮುದುಕನಾಗಿರುವದರಿಂದ ಯುದ್ಧದಲ್ಲಿ ಹೇಗೆ ತಡೆಯು ವನು? ನಲ–ನೀಲರಂತು ಶಿಲ್ಪಕಾರರು. ಇನ್ನು ಮಹಾ ಬಲಿಷ್ಠನಾದವನೊಬ್ಬನೇ ಒಬ್ಬ ವಾನರನು ನಿಮ್ಮ ಸೈನ್ಯದಲ್ಲಿರುವನು. ಅವನು ಈ ಮೊದಲೇ ಲಂಕೆಯನ್ನು ಸುಟ್ಟನು.

ಅಂಗದ— ಎಲೈ ರಾಕ್ಷಸರಾಜನೇ, ಸತ್ಯವನ್ನು ನುಡಿದೆ. ನಿಜವಾಗಿಯೇ ಆ ಕಪಿಯು ಲಂಕೆಯನ್ನು ಸುಟ್ಟನೇನು? ಇಂಥ ಕ್ಷುದ್ರಕಪಿಯು ರಾವಣನ ಲಂಕಾಪಟ್ಟಣ ವನ್ನು ಸುಟ್ಟನೆಂಬ ಮಾತನ್ನು ಯಾರಾದರೂ ನಿಜವೆಂದು ನಂಬಬಹುದೆ? ರಾವಣಾ, ನೀನು ಮಹಾವೀರನೆಂದು ಹೊಗಳಿದ ಮಾರುತಿಯು ಸುಗ್ರೀವನ ಒಬ್ಬ ಯಃಕಶ್ಚಿತ ದೂತ ನಾಗಿರುವನು. ಬೇಗಬೇಗನೆ ನಡೆದ ಮಾತ್ರದಿಂದ ಯಾವನೂ ವೀರನಾಗುವದಿಲ್ಲ. ಅವ ನನ್ನು ಕೇವಲ ಸೀತಾಶೋಧಕ್ಕಾಗಿ ಕಳಿಸಿರಲು, ಪ್ರಭುವಿನ ಅಪ್ಪಣೆಯಿಲ್ಲದೆ ಲಂಕೆಯನ್ನು ಸುಟ್ಟದ್ದರಿಂದ, ಅವನು ತಿರುಗಿ ಸುಗ್ರೀವನ ಕಡೆಗೆ ಬರಲೇ ಇಲ್ಲ. ಆ ಅಂಜಿಕೆಯಿಂದ ನಿಜ ವಾಗಿಯೇ ಆವನು ಎಲ್ಲಿಯೋ ಅಡಗಿಕೊಂಡು ಕೂತಿರುವನು. ದಶಕಂಠಾ, ಸತ್ಯವಾಗಿ ನುಡಿದ ನಿನ್ನ ಮಾತನ್ನು ಕೇಳಿ ನನಗೆ ಸಿಟ್ಟು ಬರುವದಿಲ್ಲ. ನಿನ್ನೊಡನೆ ಯುದ್ಧಮಾಡಿ ದರೆ ಚಂಡಕಾಣುವಂತಹನೊಬ್ಬನೂನಮ್ಮ ಸೈನ್ಯದಲ್ಲಿರುವದಿಲ್ಲ. ಯಾಕಂದರೆ ಸಮಾ ನಸ್ಕಂಧರಲ್ಲಿಯೇ ಪ್ರೀತಿಯನ್ನಾಗಲಿ, ವೈರವನ್ನಾಗಲಿ ಮಾಡಬೇಕೆಂದು ನೀತಿಯಿರು ವದು. ಸಿಂಹವು ಬೆಟ್ಟೇಬೆನಕನನ್ನೂ ಕೊಲ್ಲಹತ್ತಿದರೆ ಯಾರಾದರೂ ಸೈ ಅನ್ನಬಹುದೆ? ಎಲೈ ರಾವಣನೇ, ಕೇಳು. ನಿನ್ನನ್ನು ಕೊಲ್ಲುವದರಿಂದ ಶ್ರೀರಾಮನಿಗೆ ಲಘುತ್ವವುಂಟಾ ಗುತ್ತಿದ್ದರೂ ಕ್ಷತ್ರಿಯರ ಸಿಟ್ಟು ತಡೆಯಲಿಕ್ಕೆ ಬಾರದ್ದಾಗಿರುವದು.

ರಾವಣ (ನಕ್ಕು)—ವಾನರರಲ್ಲಿ ಒಂದು ದೊಡ್ಡ ಸದ್ಗುಣವಿರುವದು. ಸಾಕಿದ ವರ ಹಿತಕ್ಕಾಗಿ ಅವು ಬೇಕಾದ ಉಪಾಯಗಳನ್ನು ಮಾಡುವವು; ಆದ್ದರಿಂದ ವಾನರ ಜಾತಿಯು ಧನ್ಯವಾದದ್ದು. ಪ್ರಭುಕಾರ್ಯಕ್ಕಾಗಿ ಅವು ನಾಚಿಕೆಯಿಲ್ಲದೆ ಬೀಕಾ ದಲ್ಲಿ ಕುಣಿದು ಜನರನ್ನು ಸಂತೋಷ ಪಡಿಸಿ ಸೇವಾಧರ್ಮವನ್ನು ವಿಶ್ವಾಸಪೂರ್ವಕ ನಡಿಸುವವು. ಎಲೈ ಅಂಗದನೇ, ನಿನ್ನ ಜಾತಿಯೇ ಶ್ರೇಷ್ಠವಾದದ್ದು; ಅಂದ ಬಳಿಕ ನೀನಾದರೂ ನಿನ್ನ ಪ್ರಭುವನ್ನು ಮೇಲುಗಟ್ಟಿ ಯಾಕೆ ಮಾತಾಡಲಿಕ್ಕಿಲ್ಲ? ನಾನು ಗುಣ ಗ್ರಾಹಕನೂ, ಅತ್ಯಂತ ಸುಜ್ಞನೂ ಆದದ್ದರಿಂದಲೇ ನಿನ್ನ ಈ ಬಿರಸುಮಾತುಗಳನ್ನು ಕಿವಿಯಮೇಲೆ ಹಾಕಿಕೊಳ್ಳುವದಿಲ್ಲ.

ಅಂಗದ—ನಿನ್ನ ಗುಣಗ್ರಾಹಕತೆಯನ್ನು ಮಾರುತಿಯು ನನ್ನ ಮುಂದೆ ವರ್ಣಿ ಸಿರುವನು. ಆತನು ನಿನ್ನ ವನವನ್ನು ಹಾಳುಮಾಡಿದರೂ, ನಿನ್ನ ಮಗನನ್ನುಕೊಂದರೂ, ನಿನ್ನ ಪಟ್ಟಣವನ್ನು ಸುಟ್ಟರೂ ನೀನು ಆತನಿಗೆ ಏನೂ ಅಪಕಾರಮಾಡಲಿಲ್ಲವಂತೆ. ನಿನ್ನ ಈ ಸ್ವಭಾವವನ್ನು ವಿಚಾರಿಸಿಯೇ ಎಲೈ ರಾವಣಾ, ನಾನೂ ಸಾಹಸಮಾಡಿಇಲ್ಲಿಗೆ ಬಂದು ನೋಡಿದೆನು; ಆದರೆ ಮಾರುತಿಯು ಹೇಳಿದಂತೆ ನಿನಗೆ ನಾಚಿಕೆಯೂ, ಸಿಟ್ಟೂ, ಅಭಿಮಾನವೂ ಸ್ವಲ್ಪವೂ ಇರುವದಿಲ್ಲ.

ರಾವಣ—ಎಲೈ ಕಪಿಯೇ, ನಿನ್ನಲ್ಲಿ ಇಂಥ ಬುದ್ಧಿಯಿರುವದರಿಂದಲೇ ನೀನು ನಿನ್ನ ತಂದೆಯನ್ನು ತಿಂದುಬಿಟ್ಟೆ.

ಅಂಗದ—ತಂದೆಯನ್ನು ಕೊಂದು ಪುನಃ ನಿನ್ನನ್ನೂ ಕೊಂದುಬಿಡುತ್ತಿದ್ದೆನು; ಆದರೆ ನೀನು ವಾಲಿಯ ವಿಮಲ ಯಶಸ್ಸಿನ ಸ್ಮಾರಕನಾಗಿರುವೆಯೆಂಬ ವಿಚಾರವು ಮನಸ್ಸಿನಲ್ಲಿ ಬಂದದ್ದರಿಂದ ಎಲೈ ಅಧಮಾ, ಉನ್ಮತ್ತಾ, ನಿನ್ನನ್ನು ನಾನು ಕೊಲ್ಲುವದಿಲ್ಲ. ಎಲೈ ರಾವಣಾ, ಜಗತ್ತಿನಲ್ಲಿ ರಾವಣರೆನ್ನುವವರು ಎಷ್ಟು ಜನರಿರುವರು ಹೇಳು ನೋಡೋಣ ? ನಾನು ನನ್ನ ಕಿವಿಯಿಂದ ಕೇಳಿದ್ದನ್ನು ಹೇಳುವೆನು ಕೇಳು. ಒಬ್ಬ ರಾವಣನು ಪಾತಾಳ ಲೋಕಕ್ಕೆ ಬಲಿಯನ್ನು ಗೆಲ್ಲುವದಕ್ಕಾಗಿ ಹೋಗಿರಲು, ಅಲ್ಲಿಯ ಹುಡುಗರು ಅಶ್ವ ಶಾಲೆಯಲ್ಲಿ ಅವನನ್ನು ಹೆಡಮುರಿಗೆಕಟ್ಟಿ ಚೆಲ್ಲಿಕೊಟ್ಟಿದ್ದರು. ಹುಡುಗರು ಅವನ ಬಳಿಗೆ ಹೋಗಿ ಆಟವೆಂದು ಅವನನ್ನು ಹೊಡೆಯುತ್ತಿದ್ದರು. ಕಡೆಗೆ ಬಲಿಗೆ ದಯವುಂಟಾದದ್ದರಿಂದ ಅವನು ಆ ರಾವಣನನ್ನು ಬಿಟ್ಟುಬಿಟ್ಟನು. ಮತ್ತೊಬ್ಬ ರಾವಣನನ್ನು ಸಹಸ್ರಾರ್ಜುನನು ನೋಡಿ, ಇದೊಂದು ವಿಚಿತ್ರ ಪ್ರಾಣಿಯೆಂದು ಓಡುತ್ತಾ ಹೋಗಿ ಹಿಡಿದು ಮೋಜಿಗಾಗಿ ಮನೆಗೆ ಒಯ್ದನು. ಕಡೆಗೆ ಪುಲಸ್ತ್ಯ ಮುನಿಯು ಹೋಗಿ ಅವನನ್ನು ಬಿಡಿಸಿದನು. ಮೂರನೇ ಒಬ್ಬ ರಾವಣನನ್ನು ವರ್ಣಿಸಲಿಕ್ಕೆ ನನಗೆ ಬಹಳ ಸಂಕೋಚವಾಗುತ್ತದೆ. ಆ ರಾವಣನು ನನ್ನ ತಂದೆಯಾದ ವಾಲಿಯ ಬಗಲಲ್ಲಿ ಸಿಕ್ಕಿದ್ದನು. ಈ ಮೂವರು ರಾವಣರಲ್ಲಿ ನೀನು ಯಾರೆಂಬದನ್ನು ಜಂಭವಾಡದೆ ನಿಜವಾಗಿ ಹೇಳು.

ರಾವಣ—ಎಲೈ ಶಠಾ, ಅಂಗದಾ, ಯಾವನ ಭುಜಬಲೀಲೆಯನ್ನು ಕೈಲಾಸಪರ್ವತವು ಅರಿಯುವದೋ, ಯಾವನ ಶೌರ್ಯವು ಶಂಕರನಿಗೆ ಗೊತ್ತಿರುವದೋ, ಯಾವನ ಬಾಹುಗಳ ಪ್ರಭಾವವನ್ನು ದಿಕ್ಪಾಲಕರು ಅರಿಯುವರೋ, ಯಾವನು ಸ್ವಹಸ್ತದಿಂದ ಶಿರಃಕಮಲಗಳನ್ನು ಕೊಯ್ದು ತ್ರಿಪುರಾರಿಯನ್ನು ಅರ್ಚಿಸಿರುವನೋ, ಆ ರಾವಣನು ನಾನು. ಅಂಥ ನನ್ನ ಮುಂದ ಮನುಷ್ಯನಾದ ರಾಮನನ್ನು ವರ್ಣಿಸುವೆಯಾ ? ನಿನ್ನ ರಾಮನು ಶೂರನಾಗಿದ್ದರೆ, ನಿನ್ನನ್ನು ದೂತನನ್ನಾಗಿಮಾಡಿ ಸಂಧಾನಕ್ಕೆ ಯಾಕೆ ಕಳಿಸಿರುವನು ?

ಅಂಗದ—ಎಲೈ ಉನ್ಮತ್ತ, ರಾವಣಾ ನೋಡಿ ಮಾತಾಡು. ಸಾಕ್ಷಾತ್ ಪರಶುರಾಮನ ಗರ್ವವನ್ನು ದರ್ಶನಮಾತ್ರದಿಂದ ಹರಣಮಾಡಿದ ರಾಮನನ್ನು ಸಾಧಾರಣ ಮನುಷ್ಯನೆಂದು ತಿಳಿಯುವೆಯಾ ? ಕಾಮದೇವನು ಸಾಧಾರಣ ಧನುರ್ಧರನೇ ? ಭಾಗೀರಥಿಯು ಸಾಧಾರಣ ನದಿಯೇ ? ಕಾಮಧೇನುವು ಯಃಕಶ್ಚಿತ ಆಕಳೇ ? ಕಲ್ಪತರುವು ಒಂದು ವೃಕ್ಷವೇ ? ಅನ್ನದಾನವು ಸಾಮಾನ್ಯ ದಾನವೇ ? ಅಮೃತವು ಸಾಮಾನ್ಯವಾದ ರಸವೇ ? ಗರುಡನು ಸಾಮಾನ್ಯವಾದ ಪಕ್ಷಿಯೇ ? ಎಲೈ ಮತಿಮಂದನೇ, ವೈಕುಂಠವು ಸಾಮಾನ್ಯ ಲೋಕವೇನು ? ರಘುನಾಥನ ನಿರ್ಬಾಧಿತ ಭಕ್ತಿಯು

ಒಂದು ಕ್ಷುಲ್ಲಕ ಲೋಭವೇ ? ಹನುಮಂತನು ಸಾಮಾನ್ಯ ವಾನರನೇ ? ಎಲೈ ಅಧಮಾ, ಶಿರಸ್ಸೂ, ಕೈಲಾಸಪರ್ವತವೂ ಮಾತ್ರ ನಿನ್ನ ನೆನಪಿನಲ್ಲಿರುವವು, ಅವುಗಳ ಉಚ್ಚಾರವನ್ನು ಪುನಃ ಪುನಃ ಮಾಡುವೆ; ಆದರೆ ಸಹಸ್ರಾರ್ಜುನ, ಬಲಿ, ವಾಲಿ ಇವರನ್ನು ಗೆದ್ದ ನಿನ್ನ ತೋಳುಗಳನ್ನು ತೋರಿಸದೆ ಹೊಟ್ಟೆಯಲ್ಲಿಯೇ ಮುಚ್ಚಿಕೊಂಡುಬಿಟ್ಟೆ. ದೇಹವನ್ನು ಧಷ್ಟಪುಷ್ಟ ಮಾಡಿಕೊಂಡ ಮಾತ್ರದಿಂದ, ಅಥವಾ ತಲೆಗಳನ್ನು ಕೊಯ್ದುಕೊಂಡಮಾತ್ರದಿಂದ ಯಾರೂ ಶೂರರಾಗುವದಿಲ್ಲ. ಗಾರುಡಿಗನು ತನ್ನ ಕೈಯಿಂದ ತನ್ನ ಯಾವತ್ತೂ ಶರೀರದ ಚೂರುಗಳನ್ನು ಮಾಡುವನು- ಆದರೆ ಅವನನ್ನು ಯಾರೂ ಶೂರರೆಂದು ಕರೆದಿರುವದಿಲ್ಲ- ಮೋಹವಶವಾಗಿ ಪತಂಗವೂ ದೀಪಜ್ಯೋತಿಯಲ್ಲಿ ತನ್ನನ್ನು ಸುಟ್ಟುಕೊಳ್ಳುವದು ; ಕತ್ತೆಯೂ ಭಾರವನ್ನು ಹೊತ್ತುಕೊಂಡು ನಿಲ್ಲುವದು ; ಆದರೆ ಅವುಗಳಿಗೆ ಯಾರಾದರೂ ಶೂರರೆಂಬ ಪದವಿಯನ್ನು ಕೊಡುವರೋ ಹೇಗೆ ವಿಚಾರಮಾಡು. ಎಲೈ ದುಷ್ಟಾ, ಇನ್ನು ನಿನ್ನ ಗರ್ವವನ್ನು ಸಾಕುಮಾಡು. ಶ್ರೀರಾಮನು ನನ್ನನ್ನು ಒಡಂಬಡಿಕೆಮಾಡಿಕೊಳು. ವದಕ್ಕಾಗಿ ನಿನ್ನಬಳಿಗೆ ಕಳಿಸಿರುವದಿಲ್ಲ. ನರಿಯನ್ನು ಕೊಲ್ಲುವದರಲ್ಲಿ ಸಿಂಹದ ದೊಡ್ಡಿಸ್ತನವೇನೆಂದು ತಿಳಿದು ನನ್ನನ್ನು ನಿನ್ನ ಬಳಿಗೆ ಕಳಿಸಿರುವನು. ಎಲೈ ಅಧಮ-ದೇವ-ಶತ್ರುವೇ, ಅಪ್ಪಣೆಯಿಲ್ಲದ್ದರಿಂದಾಗುವ ಶಿಕ್ಷೆಯ ಅಂಜಿಕೆಯು ನನಗಿಲ್ಲದಿದ್ದರೆ ನಿನ್ನನ್ನು ಭೂಮಿಯಲ್ಲಿ ಅಪ್ಪಳಿಸಿ, ನಿನ್ನ ಸೈನ್ಯವನ್ನೆಲ್ಲ ಸಂಹರಿಸಿ, ನಿನ್ನ ಪಟ್ಟಣವನ್ನು ಹಾಳುಗೆಡವಿ, ಎಲೈ ನೀಚನೇ, ನಿನ್ನ ಹೆಂಡಿರೊಡನೆ ಜಾನಕಿಯನ್ನು ಕರಕೊಂಡುಹೋಗುತ್ತಿದ್ದೆನು ; ಆದರೆ ಹೀಗೆ ಮಾಡುವದರಲ್ಲಿ ಮಹತ್ವವಿರುವದೆಂತಲೂ ಅಲ್ಲ ; ಯಾಕೆಂದರೆ ಸತ್ತವನನ್ನು ಕೊಲ್ಲುವದರಲ್ಲಿ ಅರ್ಥವೇನು? ಮದ್ಯಪಿಯೂ, ಕಾಮುವಶನೂ, ಕೃಪಣನೂ, ಮಹಾ ಮೂಢನೂ, ಅತಿ ದರಿದ್ರನೂ, ಅಪಯಶಸ್ವಿಯೂ, ಅತಿವೃದ್ಧನೂ, ಸದಾ ರೋಗಿಯೂ, ಸದಾ ಕ್ರೋಧಿಯೂ, ವಿಷ್ಣುದ್ರೋಹಿಯೂ, ವೇದಗಳನ್ನೂ ಸಂತರನ್ನೂ ದ್ವೇಷಿಸುವವನೂ, ಉದರಪರಾಯಣನೂ, ನಿಂದಕನೂ, ಪಾಪರಾಶಿಯೂ ಈ ಹದಿನಾಲ್ಕು ಜನರು ಬದುಕಿಯೂ ಪ್ರೇತಕ್ಕೆ ಸಮಾನವಾಗಿರುವರು.

ಈ ಮೇರೆಗೆ ಅವರಿಬ್ಬರ ಸಂಭಾಷಣವು ನಡೆದಿರುವಾಗ ರಾವಣನು ರಾಮನನ್ನು ಪುನಃ ಪುನಃ ನಿಂದಿಸಿದ್ದರಿಂದ ಅಂಗದನು ಕ್ರೋಧ ಸಂತಪ್ತನಾಗಿ ಹಲ್ಲು ಕಡಿದು ತೋಳುಗಳನ್ನು ತಟ್ಟಿ ಎರಡೂ ಕೈಗಳನ್ನು ನೆಲಕ್ಕೆ ಅಪ್ಪಳಿಸಿದನು. ಕೂಡಲೆ ಧರಣೀ ಕಂಪವಾಗಿ ಭಯರೂಪ ಝುಂಝಾಮಾರುತನ ಹೊಡತಕ್ಕೆ ಸಿಕ್ಕು ಸಭಾಸದರು ಓಡತೊಡಗಿದರು. ಬೀಳುತ್ತಿದ್ದ ರಾವಣನು ಜೋಲಿಯ ಹಿಡಿದು ಕುಳಿತುಕೊಂಡನು. ಆತನ ಸುಂದರ ಕಿರೀಟಗಳು ನೆಲಕ್ಕೆ ಬಿದ್ದವು. ಅವುಗಳಲ್ಲಿ ಕೆಲವನ್ನು ಅಂಗದನು ತನ್ನ ತಲೆಯ ಮೇಲಿಟ್ಟುಕೊಂಡು, ಕೆಲವನ್ನು ರಾಮನ ಕಡೆಗೆ ಬೀಸಿ ಒಗೆದನು. ಅವನ್ನು ಮಾರು

ತಿಯು ಹಿಡಿದು ರಾಮನ ಬಳಿಗೆ ಒಯ್ದನು. ಬಳಿಕ ಅಂಗದನು ರಾಮಪ್ರತಾಪವನ್ನು ಸ್ಮರಿಸಿ ತನ್ನ ಕಾಲನ್ನು ಕೂಡಿದ್ದ ಸಭೆಯಲ್ಲಿ ಊರಿ—ಎಲೈ ಶಠಾ, ರಾವಣಾ, ಈ ಕಾಲನ್ನು ನೀನು ಕಿತ್ತರೆ ನಾನು ಜಾನಕಿಯನ್ನು ಸೋಲುವೆನು, ರಾಮನೂ ಬಂದಹಾದಿಯಿಂದ ತಿರುಗಿ ಹೋಗುವನು, ಎಂದು ಪ್ರತಿಜ್ಞೆಮಾಡಿದನು. ಆಗ ರಾವಣನು ಯಾವತ್ತು ವೀರರನ್ನು ಕುರಿತು— ಎಲೈ ವೀರರೇ, ಈ ಮಂಗನನ್ನು ಕಾಲು ಹಿಡಿದು ನೆಲಕ್ಕೆ ಅಪ್ಪಳಿಸಿರಿ, ಎಂದು ಹೇಳಲು, ಇಂದ್ರಜಿತುವೇ ಮೊದಲಾದ ಬಲಾಢ್ಯವೀರರು ಆನಂದದಿಂದ ನಾಲ್ಕೂ ಕಡೆಯಿಂದ ಎದ್ದರು. ಆದರೆ ವಿಶ್ವಪ್ರಯತ್ನಮಾಡಿದರೂ ಯಾರಿಂದಲೂ ಕಾಲನ್ನು ಸರಿಸುವದಾಗಲಿಲ್ಲ; ಆದ್ದರಿಂದ ಯಾವತ್ತು ವೀರರು ತಲೆತಗ್ಗಿಸಿ ಕುಳಿತುಕೊಂಡರು. ಯಾವ ರಾಕ್ಷಸರೂ ಎಷ್ಟು ಪ್ರಯತ್ನಮಾಡಿದರೂ ಅದು ಚಲಿಸಲಿಲ್ಲ. ಕೋಟ್ಯವಧಿ ಸಂಕಟಗಳೊದಗಿದರೂ ಸಂತರ ಮನಸ್ಸು ನೀತಿಯಿಂದ ಚಲಿಸದಿರುವಂತೆ,ಅಂಗದನ ಕಾಲು ಭೂಮಿಯಲ್ಲಿ ಸ್ಥಿರವಾಗಿ ನಿಂತಿತ್ತು. ಅಂಗದನ ಈ ಶಕ್ತಿಯನ್ನು ನೋಡಿ ಎಲ್ಲರೂ ನಾಚಲು, ರಾವಣನು ಅಂಗದನನ್ನು ಕರೆದು ತಾನೇ ಎದ್ದನು. ಆತನು ಬಂದು ಅಂಗದನ ಕಾಲು ಹಿಡಿಯಲು ಅಂಗದನು— ರಾವಣಾ, ನನ್ನ ಕಾಲು ಹಿಡಕೊಂಡರೆ ನಿನ್ನ ಸಂರಕ್ಷಣಾವಾಗದು. ಮೂರ್ಖ, ಹೋಗಿ ಶ್ರೀ ರಾಮಚಂದ್ರನ ಕಾಲುಗಳನ್ನೇಕೆ ಹಿಡಕೊಳ್ಳುವದಿಲ್ಲ? ಎಂದು ಕೇಳಲು, ರಾವಣನು ತೀರ ಖಿನ್ನನಾಗಿ ಹಿಂದಿರುಗಿ ಅತ್ಯಂತ ತೇಜೋಹೀನನಾಗಿ ಸಿಂಹಾಸನದ ಮೇಲೆ ಕುಳಿತುಕೊಂಡನು. ಎಲೈ ಪಾರ್ವತೀ, ರಾಮನಿಗೆ ವಿಮುಖನಾದವನಿಗೆ ಸುಖವು ಹೇಗೆ ದೊರೆಯುವದು? ರಾಮನ ಭ್ರುಕುಟೀವಿಲಾಸದಿಂದ ಜಗತ್ತಿನ ಉತ್ಪತ್ತಿ ಲಯಗಳಾಗುತ್ತಿರಲು, ಆ ಪ್ರಭುವು ತೃಣವನ್ನು ವಜ್ರವಾಗಿಯೂ, ವಜ್ರವನ್ನು ತೃಣವಾಗಿಯೂ ಮಾಡುತ್ತಿರಲು, ಆತನ ದೂತನ ಪ್ರತಿಜ್ಞೆಯು ಹೇಗೆ ಸುಳ್ಳಾದೀತು? ಅಂಗದನು ರಾವಣನಿಗೆ ಹೇಳಿದ ನೀತಿಯೆಲ್ಲ ವ್ಯರ್ಥವಾಯಿತು. ಕಟ್ಟಕಡೆಯಲ್ಲಿ ಆತನು ರಾವಣನನ್ನು ಕುರಿತು— ರಾವಣಾ, ಇನ್ನು ನನ್ನ ದೊಡ್ಡಸ್ತನವನ್ನು ನಿನ್ನ ಮುಂದೆ ಏನು ಹೇಳಬೇಕು? ರಣಾಂಗಣದಲ್ಲಿ ಆಡುತ್ತಾಡುತ್ತ ನಾನು ನಿನ್ನನ್ನು ಕೊಲ್ಲದಿದ್ದರೆ ನಾನುವಾಲಿ ಪುತ್ರನೇ ಅಲ್ಲ, ಎಂದುಹೇಳಿ ಶ್ರೀರಾಮನ ಬಳಿಗೆ ಹೋದನು.

ಇತ್ತ ರಾವಣನು ಸಂಧ್ಯಾಸಮಯವಾದದ್ದರಿಂದ ತನ್ನ ಮಂದಿರಕ್ಕೆ ಹೋಗಲು, ಮಂಡೋದರಿಯು ಪುನಃ ರಾವಣನನ್ನು ಕುರಿತು— ಎಲೈ ಪ್ರಾಣನಾಥನೇ, ರಾಮನೊಡನೆ ಸರ್ವಥಾ ದ್ವೇಷವು ಬೇಡ, ಲಕ್ಷ್ಮಣನು ಕೊರೆದ ಗೆರೆಗಳನ್ನು ದಾಟುವದಾಗದಷ್ಟು ನಿನ್ನ ಪರಾಕ್ರಮವಿರುವದು. ಹಿಂದಕ್ಕೆ ಹನುಮಂತನು ಮಾಡಿದ ಪರಾಕ್ರಮವನ್ನು ನೀವುನೋಡಿದಿರಿ;ಈಗ ನೆರೆದ ಸಭೆಯಲ್ಲಿ ಅಂಗದನು ನಿಮ್ಮ ಮಾನಖಂಡನ ಮಾಡಿದ್ದನ್ನು ಅನುಭವಿಸಿದಿರಿ. ಇಂಥ ರಣಧೀರ ಅನುಚರರುಳ್ಳ ರಾಮನನ್ನು, ತಿರುತಿರುಗಿ ಮನುಷ್ಯನೆಂದು ಹೇಗೆ ತಿಳಿಯುವಿರಿ? ಅಭಿಮಾನ-ಮಮತೆ-ಮದಗಳ ಪ್ರವಾಹದಲ್ಲಿ ವ್ಯರ್ಥವಾಗಿ

ನೀವು ಹರಿದುಹೋಗುತ್ತಿರುವಿರಿ. ಹರಹರ! ಪ್ರಾಣನಾಥರೇ, ಶ್ರೀರಾಮನೊಡನೆ ವೈರವನ್ನು ಸಂಪಾದಿಸಿದಿರಿ. ನಿಮ್ಮ ಮೇಲೆ ಮೃತ್ಯುವಿನ ಸಂಪೂರ್ಣ ಅಧಿಕಾರವು ಸ್ಥಾಪಿತವಾಗಿರುವದರಿಂದ ನಿಮ್ಮ ಹೃದಯದಲ್ಲಿ ಸದ್ಬುದ್ಧಿಯು ಉತ್ಪನ್ನವಾಗಲೊಲ್ಲದು. ಮೃತ್ಯುವು ಪ್ರತ್ಯಕ್ಷವಾಗಿ ಕೈಯಲ್ಲಿ ಶಸ್ತ್ರವನ್ನು ಹಿಡಕೊಂಡು ಯಾರನ್ನೂ ಕೊಲ್ಲುವದಿಲ್ಲ ಅದು ಧರ್ಮ, ಬಲ ಬುದ್ಧಿ, ವಿಚಾರ ಇವುಗಳ ಹರಣ ಮಾಡುತ್ತದೆ. ಮೃತ್ಯುವು ಸಮೀಪಿಸಿದವನಿಗೆ ನಿಮ್ಮಂತೆಯೇ ಭ್ರಮೆಯು ಉತ್ಪನ್ನವಾಗುವದು. ಪ್ರಾಣನಾಥನೇ ಇಬ್ಬರು ಮಕ್ಕಳು ಸತ್ತದ್ದನ್ನು ನೋಡಿಯಾದರೂ ಪರಸ್ತ್ರೀಯ ಅಭಿಲಾಷೆಯನ್ನು ಬಿಟ್ಟು ಶ್ರೀರಾಮನಿಗೆ ಶರಣು ಹೋಗು, ಎಂದು ಪರಿಪರಿಯಿಂದ ಉಪದೇಶಿಸಿದಳು. ಹೆಂಡತಿಯ ಈ ಮಾತುಗಳು ರಾವಣನಿಗೆ ಕಿವಿಯಲ್ಲಿ ಬಾಣಗಳಂತೆ ನಟ್ಟು ಬಾಧಿಸ ತೊಡಗಿದವು. ಆತನು ಬೆಳಗಾಗುತ್ತಲೆ ಎದ್ದು, ಸಭೆಗೆ ಹೋಗಿ ಸಿಂಹಾಸನದ ಮೇಲೆ ಕುಳಿತುಕೊಂಡನು. ಅತ್ಯಂತವಾದ ಅಹಂಮನ್ಯತೆಯಿಂದ ಆತನ ಎಲ್ಲ ದುಃಖಗಳು ಮರೆತುಹೋದವು.

ಇತ್ತ ಶ್ರೀರಾಮನು ಚರಣಕ್ಕೆರಗುವ ಅಂಗದನನ್ನು ಆದರದಿಂದ ಹತ್ತರ ಕರೆಸಿಕೊಂಡು ಶತ್ರುಗಳಕಡೆಯ ಯಾವತ್ತು ವೃತ್ತಾಂತವನ್ನು ಕೇಳಿಕೊಂಡನು. ಪ್ರಭುವು ತನ್ನ ಕಡೆಗೆ ಬಂದಿದ್ದ ನಾಲ್ಕು ಕಿರೀಟಗಳನ್ನು ಅತ್ಯಂತ ಬಲಾಢ್ಯನಾದ ರಾವಣನಿಂದ ನೀನು ಹೇಗೆಸಂಪಾದಿಸಿದೆಯೆಂದು ಕೇಳಲು, ಅಂಗದನು—ಪ್ರಭುವೆ, ಅವು ಕಿರೀಟಗಳಲ್ಲ; ಸಾಮ—ದಾನ—ಭೇದ—ದಂಡಗಳೆಂಬ ನಾಲ್ಕುಗುಣಗಳು. ಈ ಗುಣಗಳು ಅರಸನ ಹೃದಯದಲ್ಲಿರುತ್ತವೆಂದು ವೇದಗಳು ಹೇಳುತ್ತಿರುವವು. ರಾವಣನು ಸ್ವಧರ್ಮಚ್ಯುತನಾಗಿ ಪ್ರಭುಪಾದಕ್ಕೆ ವಿಮುಖನಾದದ್ದರಿಂದ ಇಷ್ಟು ಅವನು ಮರಣಹೊಂದುವನೆಂದು ತಿಳಿದು ಅವನ ಹೃದಯದೊಳಗಿನ ಆಗುಣಗಳು ಆತನಿಂದ ಹೊರಟು ನಾಲ್ಕು ಕಿರೀಟಗಳರೂಪದಿಂದ ಪ್ರಭುವಿನ ನೀತಿ—ಧರ್ಮ—ಪರಾಯಣ ಸುಂದರಚರಣಗಳಿಗೆ ಬಂದು ಬಿದ್ದವು. ಎಂದು ಹೇಳಿದನು. ಅಂಗದನ ಈ ಚಾತುರ್ಯದ ಮಾತುಗಳನ್ನು ಕೇಳಿ ಉದಾರನಾದ ರಾಮಚಂದ್ರನು ನಕ್ಕನು. ಆ ಮೇಲೆ ಆತನು ಸುಗ್ರೀವ, ವಿಭೀಷಣಾದಿ ಸಚಿವರನ್ನು ಕುರಿತು—ಲಂಕೆಗೆ ನಾಲ್ಕು ಅಗಸೆಗಳಿವೆ. ಅವುಗಳೊಳಗಿಂದ ಲಂಕೆಯನ್ನು ಹೇಗೆ ಪ್ರವೇಶಿಸಬೇಕು ವಿಚಾರಮಾಡಿರಿ, ಎಂದು ಹೇಳಲು, ಸುಗ್ರೀವ-ಜಾಂಬುವಂತ—ವಿಭೀಷಣರು ಆಲೋಚಿಸಿ ಹೀಗೆಯೇ ಮಾಡಬೇಕೆಂದು ಗೊತ್ತುಮಾಡಿಕೊಂಡರು. ಅವರು ಕಪಿಸೈನ್ಯದಲ್ಲಿ ನಾಲ್ಕು ಭಾಗಗಳನ್ನು ಮಾಡಿ, ಅವುಗಳಮೇಲೆ ಯೋಗ್ಯಸೇನಾಪತಿಗಳನ್ನು ನಿಯಮಿಸಿ ಅವರೆಲ್ಲರಿಗೆ ಪ್ರಭುವಿನ ಪ್ರತಾಪವನ್ನು ತಿಳಿಸಿ ಹೇಳಿದರು. ಅದನ್ನು ಕೇಳಿದಕೂಡಲೆ ಯಾವತ್ತು ವಾನರರು ಗಿರಿ—ಶಿಖರಗಳನ್ನು ಎತ್ತಿಕೊಂಡು, ಒಂದೊಂದು ಭಾಗದವರು ಒಂದೊಂದು ಅಗಸೆಯಂತೆ ಲಂಕೆಯನ್ನು ಮುತ್ತಿದರು.

ಅವರು ತಮ್ಮ ಮುಖದಿಂದಲೇ ಭೇರಿ, ತುತೂರಿ ಮೊದಲಾದ ವಾದ್ಯಗಳನ್ನು ಬಾರಿಸ/ತೊಡಗಿದರು. ಆಗ ಲಂಕೆಯಲ್ಲಿ ಕೋಲಾಹಲವು ಉಂಟಾಯಿತು. ಅವನ್ನು ನೋಡಿ ರಾವಣನು—ಈ ವಾನರರ ಉದ್ಧಟತನವನ್ನು ನೋಡಿರಿ, ಎಂದು ನಕ್ಕು ರಾಕ್ಷಸ ಸೈನ್ಯವನ್ನು ಕುರಿತು—ರಾಕ್ಷಸವೀರರೇ, ಕಾಲನಪ್ರೇರಣೆಯಿಂದ ಮಂಗಗಳು ಬಂದಿರುವವು; ನಮ್ಮ ರಾಕ್ಷಸರೆಲ್ಲ ನೀವು ಹಸಿದಿರುವಿರಿ; ಕುಳಿತಲ್ಲಿಯೇ ಬ್ರಹ್ಮದೇವನು ಆಹಾರವನ್ನು ಒದಗಿಸಿಕೊಟ್ಟಂತಾಗಿರುವದು; ಆದ್ದರಿಂದ ನೀವು ನಾಲ್ಕೂಕಡೆಯಿಂದ ಹೋಗಿ ಕಪಿಗಳನ್ನೂ, ಕರಡಿಗಳನ್ನೂ ಹಿಡಿ ಹಿಡಿದು ನುಂಗಿಬಿಡಿರಿ, ಎಂದು ಹೇಳಿದನು.

ರಾವಣನ ಅಪ್ಪಣೆಯಾದಕೂಡಲೆ ರಾಕ್ಷಸರು ವಿವಿಧ ಆಯುಧಗಳನ್ನು ಧರಿಸಿ ಯುದ್ಧಕ್ಕೆ ಹೊರಟು, ಕೋಟೆಗಳ ಹುಡೆಯ ಮೇಲೆ ಹತ್ತಿದರು. ವಿವಿಧ ರಣವಾದ್ಯಗಳು ಬಾರಿಸತೊಡಗಿದವು. ಅದರಿಂದ ವೀರರ ಆವೇಶವು ಹೆಚ್ಚತೊಡಗಿತು. ಉಭಯಪಕ್ಷದವರಲ್ಲಿ ಯುದ್ಧವು ಆರಂಭವಾಯಿತು. ಪ್ರಚಂಡರಾದ ವಾನರರೂ, ಕರಡಿಗಳೂ ಪರ್ವತ ಶಿಖರಗಳನ್ನು ಕೋಟೆಯ ಗೋಡೆಯಮೇಲೆ ಅಪ್ಪಳಿಸತೊಡಗಿದರು—ರಾಕ್ಷಸರನ್ನು ಕಾಲುಹಿಡಿದು ನೆಲಕ್ಕೆ ಅಪ್ಪಳಿಸತೊಡಗಿದರು. ಎಷ್ಟೋವಾನರರು ಹಾರುತ್ತ ಕೋಟೆಯ ಗೋಡೆಗಳನ್ನು ಹತ್ತಿಹೋಗಿ ಮನೆ ಮನೆಗಳ ಮೇಲೆ ಹತ್ತಿ ರಾಮಯಶಸ್ಸಿನ ಗಾಯನ ಮಾಡತೊಡಗಿದರು. ರಾಮಪ್ರತಾಪದಿಂದ ಪ್ರಬಲವಾದ ಕಪಿಸೈನ್ಯವು ರಾಕ್ಷಸರ ಸೈನ್ಯವನ್ನು ನಾಶಮಾಡತೊಡಗಲು, ಅದು ದಾರಿ ಸಿಕ್ಕತ್ತ ಓಡತೊಡಗಿತು. ಲಂಕಾನಗರದಲ್ಲ ಭಯಂಕರ ಹಾಹಾಕಾರವುಂಟಾಯಿತು. ಹುಡುಗರೂ, ಹೆಂಗಸರೂ ದೈನ್ಯದಿಂದ ಆಕ್ರೋಶಮಾಡತೊಡಗಿ, ಎಲ್ಲರೂ ರಾವಣನನ್ನು ಬೈಯತೊಡಗಿದರು.

ತನ್ನ ಸೈನ್ಯದಗತಿಯನ್ನು ನೋಡಿ ರಾವಣನು ಸಿಟ್ಟಾಗಿ, ಓಡಿ ಹೋಗುವರಾಕ್ಷಸರನ್ನು ಹಿಂದಕ್ಕೆ ತಿರುಗಿಸಿ—ಯುದ್ಧದಲ್ಲಿ ಬೆನ್ನು ತೋರಿಸುವವರನ್ನು ನಾನು ಕೈಮುಟ್ಟಿ ಸಂಹರಿಸುವೆನು. ಇಷ್ಟುದಿನ ನನ್ನ ಅನ್ನವನ್ನುಂಡು ಚಕ್ಕಂದವಾಡಿ ಈಗ ಮಾತ್ರ ಸಮರಾಂಗಣದಲ್ಲಿ ನಿಮಗೆ ಪ್ರಾಣವು ಪ್ರಿಯವಾಗಿರುವದೇ! ಅನ್ನಲು, ರಾವಣನ ಉಗ್ರ ಸ್ವರೂಪವನ್ನು ನೋಡಿ ಎಲ್ಲರೂ ಬೆದರಿದರು. ವೀರರಿದ್ದವರು ನಾಚಿ ಎಲ್ಲರೂ ಆವೇಶದಿಂದ ಯುದ್ಧಕ್ಕೆಸಾಗಿದರು ಯುದ್ಧದಲ್ಲಿ ಎದುರಾಗಿ ಸಮರ ಭೂಮಿಯಲ್ಲಿ ಪ್ರಾಣಬಿಡುವದೇ ವೀರರಿಗೆ ಭೂಷಣವೆಂದು ನಿಶ್ಚಯಿಸಿ ಜೀವನ ಆಸೆಬಿಟ್ಟು ಕಪಿಸೈನ್ಯದಮೇಲೆ ಬಿದ್ದರು. ಅವರ ವೀರಾವೇಶದ ಹೊಡತದಿಂದ ಕಪಿಸೈನ್ಯವು ತತ್ತರಿಸಿತು. ಕಪಿಗಳು ಯುದ್ಧದ ಭೂಮಿಯಲ್ಲಿ ನಿಲ್ಲಲಾರದೆ ಓಡತೊಡಗಿದರು. ಅವರಲ್ಲಿ ಕೆಲವರು "ಅಂಗದ–ಹನುಮಂತರು ಎಲ್ಲಿರುವರು"! "ನಳ–ನೀಲರು ಎತ್ತಹೋದರು!" ಎಂದು ಕೂಗಿಕೊಳ್ಳಹತ್ತಿದರು. ತನ್ನ ಸೈನ್ಯವು ತತ್ತರಿಸಿದ ಸುದ್ದಿಯು ಹನುಮಂತನಿಗೆ ಹತ್ತಿತು.

ಣನು ಪಶ್ಚಿಮದ ಅಗಸಿಯಲ್ಲಿ ಮಹಾಬಲಾಢ್ಯನಾದ ಮೇಘನಾದನೊಡನೆ ಕಾದುತ್ತಿದ್ದನು. ಆ ಅಗಸಿಯು ಅತ್ಯಂತ ಭದ್ರವಾದದ್ದರಿಂದ ಬೇಗನೆ ಕೈಸೇರಲೊಲ್ಲದು-ಕಡೆಗೆ ಹನುಮಂತನು ಅತ್ಯಂತ ಕ್ರುದ್ಧನಾಗಿ ಪ್ರಲಯಕಾಲದ ಮೇಘವಂತೆ ಗರ್ಜಿಸಿ ಪರ್ವತವನ್ನು ತಕ್ಕೊಂಡು ಲಂಕೆಯ ಕೋಟೆಯಮೇಲೆ ಹಾರಿಹೋಗಿ ಮೇಘನಾದನ ಮೇಲೆ ಬಿದ್ದು ಅವನ ರಥವನ್ನು ಮುರಿದು ಸಾರಥಿಯನ್ನು ಕೊಂದು, ಅವನ ಎದೆಗೆ ಲತ್ತಾಪ್ರಹಾರಮಾಡಿದನು. ಮೇಘನಾದನು ವಿಕಲನಾದದ್ದನ್ನು ನೋಡಿ ಮತ್ತೊಬ್ಬ ಸಾರಥಿಯು ಅವನನ್ನು ರಥದಲ್ಲಿ ಹಾಕಿಕೊಂಡು ಬೇಗನೆ ಮನೆಗೆ ಕರಕೊಂಡು ಹೋದನು. ಹನುಮಂತನು ಒಬ್ಬನೇ ಲಂಕೆಯ ಕೋಟೆಯ ಮೇಲೆ ಕಾದುತ್ತಿರುವದನ್ನು ಕೇಳಿ ಅಂಗದನು ಕೋಟೆಯ ಮೇಲೆ ಹಾರಿಹೋದನು. ಆಗ ಅತ್ಯಂತ ಕ್ರುದ್ಧರಾದ ಆ ಇಬ್ಬರು ಕಪಿ-ಶ್ರೇಷ್ಠರು ಹೃದಯದಲ್ಲಿ ರಾಮನನ್ನು ಸ್ಮರಿಸಿ ಲಂಕೆಯಲ್ಲಿ ಮಾಡಿದ ಅನಾಹುತವನ್ನು ವರ್ಣಿಸುವದು ಶಕ್ಯವಲ್ಲ. ಅವರು ರಾವಣನ ಮನೆಯನ್ನು ಹತ್ತಿ ಅಲ್ಲಿಂದ ಶ್ರೀ ರಾಮನ ಹೆಸರಿನ ಡಂಗುರವನ್ನು ಸಾರಿದರು. ಆ ಮಂದಿರವು ಕಳಸಸಹಿತವಾಗಿ ನೆಲಕ್ಕೆ ಬೀಳಲು, ಅದನ್ನು ನೋಡಿ ರಾವಣನಿಗೆ ನಡಗು ಹುಟ್ಟಿತು. ರಾವಣನ ಸ್ತ್ರೀಯರು ಅಂಜಿ ಎದೆ ಎದೆಬಡಕೊಳ್ಳಹತ್ತಿದರು. ಆ ಇಬ್ಬರು ಕಪಿಗಳು ಆ ಸ್ತ್ರೀಯರನ್ನು ಅಂಜಿಸುತ್ತ, ಅಲ್ಲಿಯ ಒಂದೊಂದು ಸುವರ್ಣಸ್ತಂಭಗಳನ್ನು ಕೈಯಲ್ಲಿ ತಕ್ಕೊಂಡು ಪುನಃ ಹಾವಳಿಯನ್ನು ನಡಿಸಿದರು. ಅವರು ಸೈನ್ಯದಲ್ಲಿ ಹಾರಿಮಾಡಿದ ರಾಕ್ಷಸ ಸಂಹಾರಕ್ಕೆ ಅಳವಿಲ್ಲ. ರಾಕ್ಷಸರ ರುಂಡಗಳನ್ನು ರಾವಣನ ಕಡೆಗೆ ಒಗೆಯಲು, ಅವು ಒಡೆದ ಮಸರ ಗಡಿಗೆಗಳಂತೆ ಅವನ ಮುಂದೆ ಬೀಳುತ್ತಿದ್ದವು. ಪ್ರಮುಖ ರಾಕ್ಷಸರ ಶಿರಸ್ಸುಗಳನ್ನು ಶ್ರೀ ರಾಮನ ಕಡೆಗೆ ಒಗೆಯಲು, ಆಯಾರಾಕ್ಷಸರ ಹೆಸರುಗಳನ್ನು ವಿಭೀಷಣನು ಪ್ರಭುವಿನ ಮುಂದೆ ಹೇಳುತ್ತಿರುವಾಗ, ಆ ದಯಾಲು ರಘುಪತಿಯು ವೈರದಿಂದಾದರೂ ತನ್ನ ಸ್ಮರಣ ಮಾಡುವರೆಂದು ತಿಳಿದು ಅವರನ್ನು, ವೈಕುಂಠಕ್ಕೆ ಕಳಿಸುತ್ತಿದ್ದನು. ಹೀಗೆ ನರಮಾಂಸ ಭಕ್ಷಕರೂ ಸದ್ಗತಿಯನ್ನು ಹೊಂದುತ್ತಿರುವಾಗ ಪ್ರಭುವಿನ ದಯಾಲುತ್ವವನ್ನು ಏನು ವರ್ಣಿಸುವದು? ಪಾರ್ವತೀ, ಇಂಥ ಪ್ರಭುವಿಗೆ ಶರಣುಹೋಗದವರು ದೈವ ಹೀನರಲ್ಲವೇ!

ಹೀಗೆ ಭಯಂಕರ ಯುದ್ಧವು ನಡೆದಿರುವಾಗ ಸಂಧ್ಯಾಕಾಲವಾಗಲು ರಾಕ್ಷಸರ ಬಲವು ಹೆಚ್ಚಿತು. ಆಗ ಅವರು ಕಪಿಗಳ ಮೇಲೆ ಏರಿಬಂದು ಕಾದಹತ್ತಿದರು. ಅನಿಪಾಕಂಪನ, ಅತಿಕಾಯ ಮೊದಲಾದ ರಾಕ್ಷಸರು ತಮ್ಮ ಮಾಯೆಯನ್ನು ಆರಂಭಿಸಿದರು. ಅವರ ಮಾಯೆಯಿಂದ ಎಲ್ಲ ಕಡೆಯಲ್ಲಿ ಕಗ್ಗತ್ತಲೆಯು ಮುಸುಕಿ, ರಕ್ತ-ಪಾಷಾಣ-ಧೂಲಿಗಳ ಮಳೆಯು ಸುರಿಯಹತ್ತಿತು. ಆಗ ಕಪಿಗಳು ಕಂಗೆಟ್ಟರು. ಒಬ್ಬರಿಗೊಬ್ಬರು ಕಾಣದಂತಾಗಿ ನಾಲ್ಕೂ ಕಡೆಗೆ ಕೂಗಾಟಕ್ಕೆ ಆರಂಭವಾಯಿತು ರಘುನಾ-

ಥನು ಅಂಗದ–ಹನುಮಂತರನ್ನು ಕರೆಸಿ ರಾಕ್ಷಸಮಾಯೆಯ ಸ್ವರೂಪವನ್ನು ತಿಳಿಸಿ ಅಗ್ನೇಯಾಸ್ತ್ರದಿಂದ ಕತ್ತಲೆಯನ್ನು ದೂರಮಾಡಿದನು. ಆಗ ವಾನರರು ಸಿಟ್ಟಿನಿಂದ ಕಾದಹತ್ತಲು, ರಾಕ್ಷಸರು ಓಡತೊಡಗಿದರು. ಆಗ ವಾನರರು ಅವರ ಕಾಲುಹಿಡಿದು ಬೀಸಿ ಸಮುದ್ರದಲ್ಲಿ ಚಲ್ಲಲು, ಅವರನ್ನು ಜಲಚರಗಳು ತಿನ್ನತೊಡಗಿದವು. ಈ ಮೇರೆಗೆ ಕರಡಿ–ಕಪಿಗಳು ಅದ್ಭುತ ಕೃತ್ಯಗಳನ್ನು ಮಾಡಲು, ರಾಕ್ಷಸ ಸೈನ್ಯವು ನೆಲೆಯಿಲ್ಲದೆ ಸತ್ತಿತು. ಹೀಗೆ ಒಂದೇದಿವಸದ ಯುದ್ಧದಲ್ಲಿ ರಾಕ್ಷಸಸೈನ್ಯವು ಅರ್ಧನಾಶವಾದದ್ದನ್ನು ತಿಳಿದು ರಾವಣನು, ಮುಂದೇನು ಮಾಡಬೇಕೆಂದು ಸಚಿವರನ್ನು ಕೇಳಿದನು. ಆಗ ರಾವಣನ ಮಾತಾಮಹನಾದ ಮಾಲ್ಯವಂತನೆಂಬ ಸಚಿವಶ್ರೇಷ್ಠನು ಆತನನ್ನು ಕುರಿತು–ಅಪ್ಪಾ, ರಾವಣಾ, ನನ್ನ ಉಪದೇಶವನ್ನಾದರೂ ಸ್ವಲ್ಪ ಕೇಳು. ನೀನು ಸೀತೆಯನ್ನು ಕದ್ದುಕೊಂಡು ಬಂದಂದಿನಿಂದ ಹಲವು ದುಶ್ಚಿಹ್ನಗಳಾಗತೊಡಗಿವೆ. ರಾಮನು ಮನುಷ್ಯನಲ್ಲ, ಸಾಕ್ಷಾತ್ ಭಗವಂತನು. ಆತನೊಡನೆ ದ್ವೇಷವನ್ನು ಮಾಡದೆ ಸೀತೆಯನ್ನು ಆತನ ಬಳಿಗೆ ಕಳಿಸಿ ಆ ದಯಾನಿಧಿಗೆ ಶರಣು ಹೋಗು, ಎಂದು ಹೇಳಲು, ಆ ಮಾತ್ನ ರಾವಣನು ಸಿಟ್ಟಿನಿಂದ— ಎಲೈ ಭಾಗ್ಯಹೀನನೇ, ನಿನ್ನ ಕರಿಮೋರೆಯನ್ನು ನನಗೆ ತೋರಿಸಬೇಡ. ಏಳು ಇಲ್ಲಿಂದ ಹೊರಟುಹೋಗು. ನೀನು ವೃದ್ಧನಾಗಿರದಿದ್ದರೆ ಇಲ್ಲಿಯೇ ಕೊಂದು ಹಾಕುತ್ತಿದ್ದೆನು. ಇಂದಿನಿಂದ ನನಗೆ ನಿನ್ನ ಮೋರೆಯನ್ನು ತೋರಿಸಬೇಡ ಎಂದು ಧಿಕ್ಕರಿಸಿ ಮಾತನಾಡಿದನು. ಶ್ರೀ ರಾಮನ ಮನಸ್ಸಿನಲ್ಲಿ ಈತನನ್ನು ಕೊಲ್ಲುವದೇ ಇದ್ದ ಹಾಗೆ ತೋರುತ್ತದೆಂದು ಮನಸ್ಸಿನಲ್ಲಿ ಅಂದುಕೊಂಡು, ರಾವಣನಿಗೆ ಬಾಯಿಗೆ ಬಂದಹಾಗೆ ಅಂದು ಮಾಲ್ಯವಂತನು ಹೊರಟು ಹೋದನು. ಆಗ ಮೇಘನಾದನು ಕ್ರುದ್ಧನಾಗಿ ತಂದೆಯನ್ನು ಕುರಿತು–ಅಪ್ಪಾ, ನಾಳೆ ಪ್ರಾತಃಕಾಲದಲ್ಲಿ ನನ್ನ ಯುದ್ಧಚಾಪಲ್ಯವನ್ನು ನೋಡು, ಬಹಳಮಾತಾಡಿ ಸ್ವಲ್ಪಮಾಡುವದಕ್ಕಿಂತ ಸ್ವಲ್ಪಮಾತಾಡಿ ಬಹಳ ಮಾಡುವದೇ ಯೋಗ್ಯವು. ಅನ್ನಲು, ರಾವಣನು ಮಗನ ಮಾತಿನಿಂದ ಧೈರ್ಯತಾಳಿ ಆತನನ್ನು ಪ್ರೀತಿಯಿಂದ ತೊಡೆಯಮೇಲೆ ಕುಳ್ಳಿರಿಸಿಕೊಂಡು ಪ್ರೋತ್ಸಾಹಿಸಿದನು.

ಈ ಮೇರೆಗೆ ಮಾತುಕಥೆಗಳು ನಡೆದಿರಲು, ಬೆಳಗಾಯಿತು. ವಾನರ ಸೈನ್ಯವು ಸಂತಪ್ತವಾಗಿ ಪುನಃ ಲಂಕಾಪಟ್ಟಣವನ್ನು ಮುತ್ತಲು, ಪಟ್ಟಣದಲ್ಲಿ ಶೋಕಧ್ವನಿಯು ಉತ್ಪನ್ನವಾಯಿತು. ಆಗ ರಾಕ್ಷಸವೀರರು ಕೋಟೆಯಮೇಲಿಂದ ಪರ್ವತಶಿಖರಗಳನ್ನು ದೂಡಹತ್ತಿದರು. ಗುಂಡುಗಳ ಮಳೆಯು ಸುರಿಯಹತ್ತಿತು. ಶತ್ರುಗಳು ಕೋಟೆಯಮುತ್ತಿದ ಸುದ್ದಿಯನ್ನು ಮೇಘನಾದನು ಕೇಳಿದ ಕೂಡಲೆ ಆ ವೀರಶ್ರೇಷ್ಠನು ಕೋಟೆಯ ಕೆಳಗೆ ಇಳಿದು ಬಂದು ರಣವಾದ್ಯಗಳನ್ನು ಬಾರಿಸುತ್ತ ಶತ್ರುಗಳ ಕಡೆಗೆ ಸಾಗಿ—"ಯಾವತ್ತು ಲೋಕಗಳಲ್ಲಿ ಧನುರ್ಧರರೆಂದು ಪ್ರಖ್ಯಾತರಾಗಿರುವ ಆ ಕೋಸಲಾಧೀಶಬಂಧುದ್ವಯರು ಎಲ್ಲಿರುವರು? ನಲ–ನೀಲ–ಸುಗ್ರೀವರೂ, ಮಹಾಬಲಾಢ್ಯರಾದ

ಅಂಗದ ಹನುಮಂತರೂ ಎಲ್ಲಿರುವರು! ಬಂಧು ದ್ರೋಹಿಯಾದ ವಿಭೀಷಣನು ಎಲ್ಲಿರುವನು! ಇಂದು ಆ ಶಠನನ್ನು ನಾನು ಪ್ರತಿಜ್ಞೆಮಾಡಿ ಕೊಲ್ಲುವೆನು," ಎಂದು ನುಡಿಯುತ್ತ ಮೇಘನಾದನು ಅತ್ಯಂತ ಕ್ರುದ್ಧನಾಗಿ ತೀಕ್ಷ್ಣಬಾಣಗಳನ್ನು ಹೂಡಿ ಕಿವಿಯವರೆಗೆ ಜಗ್ಗಿ ಬಿಡತೊಡಗಲು, ಅಲ್ಲಲ್ಲಿ ವಾನರರು ಸತ್ತುಬೀಳುತ್ತಿರುವದು ಕಣ್ಣಿಗೆ ಕಾಣಿಸಹತ್ತಿತು. ಆ ಮೇಘನಾದನೆದುರಿಗೆ ಯಾರೂ ನಿಲ್ಲದಾದರು. ಕರಡಿ-ಕಪಿಗಳು ಭಯದಿಂದ ಕಂಗೆಟ್ಟು ಓಡತೊಡಗಿದರು. ಯುದ್ಧ ಮಾಡುವ ಉತ್ಸಾಹವು ಯಾರಲ್ಲಿಯೂ ಉಳಿಯಲಿಲ್ಲ. ಮೇಘನಾದನು ಯಾವತ್ತು ವಾನರರ ಶರೀರಗಳಲ್ಲಿ ಹತ್ತು ಹತ್ತು ಬಾಣಗಳನ್ನು ನಡಿಸಿದ್ದರಿಂದ ಅವರೆಲ್ಲರು ಗಾಯಹೊಂದಿ ನೆಲಕ್ಕೆ ಬಿದ್ದರು. ಮೇಘನಾದನು ಸಿಂಹನಾದ ಮಾಡತೊಡಗಿದನು. ಆಗ ಮಾರುತಿಯು ಸಿಟ್ಟಿನಿಂದ ಒಂದು ಪರ್ವತವನ್ನು ತಕ್ಕೊಂಡು ಮೇಘನಾದನ ಮೇಲೆ ದುಮುಕಲು, ಆ ರಾಕ್ಷಸನು ರಥವನ್ನು ಬಿಟ್ಟು ಆಕಾಶದಲ್ಲಿ ಉಡ್ಡಾಣ ಮಾಡಿದನು; ಮಾರುತಿಯು ಎಷ್ಟು ಕರೆದರೂ ಬರಲಿಲ್ಲ. ಮೇಘನಾದನು ಮಾರುತಿಯ ಗೊಡವೆಬಿಟ್ಟು ರಘುಪತಿಯ ಬಳಿಗೆ ಬಂದು, ಅನೇಕ ಬಾಣಗಳನ್ನೂ, ಶಸ್ತ್ರಗಳನ್ನೂ, ಆಯುಧಗಳನ್ನೂ ಪ್ರಭುವಿನಮೇಲೆ ಪ್ರಯೋಗಿಸಿದನು; ಆದರೆ ರಾಮಚಂದ್ರನು ಸಹಜಲೀಲೆಯಿಂದ ಅವನ್ನು ಖಂಡಿಸಿ ನಿವಾರಣಮಾಡಿದನು.

ಪ್ರಭುವಿನ ಈ ಪ್ರಭಾವವನ್ನರಿತು ಮೇಘನಾದನು ರೇಗಿಸಿ ತನ್ನ ಮಾಯೆಯನ್ನು ಪ್ರಕಾಶಿಸಿದನು. ಹರಿ-ಹರ-ಬ್ರಹ್ಮಾದಿಗಳು ಪ್ರಭುವಿನ ಮಾಯೆಯಿಂದ ಮೋಹಿತರಾಗುತ್ತಿರಲು, ಇಂದ್ರಜಿತುವು ಅಜ್ಞಾನದಿಂದ ತನ್ನ ಮಾಯೆಯನ್ನು ಪ್ರಕಟಿಸುವದೆಂದರೆ, ಆಡುತ್ತಿರುವ ಗರುಡಪಕ್ಷಿಯನ್ನು ಒಂದು ಸಣ್ಣ ಹಾವು ತೋರಿಸಿ ಅಂಜಿಸಿದ ಹಾಗೆಯೇಸರಿ. ಇಂದ್ರಜಿತುವಿನ ಮಾಯೆಯಿಂದ ಅಗ್ನಿಯು ಸುರಿಯಹತ್ತಿತು, ನಾನಾಪ್ರಕಾರದ ಪಿಶಾಚಗಳು "ಹೊಡೆಯಿರಿ," "ಕಡಿಯಿರಿ" ಎಂದು ಕೂಗಹತ್ತಿದವು. ಹೇಸಿಗೆ, ಕೀವು, ರಕ್ತ, ಕೂದಲು, ಎಲವು, ನಡನಡುವೆ ಹಲವು ಕಲ್ಲುಗಳು, ಬೂದಿಯು ಸುರಿಯಹತ್ತಿದವು. ಆ ಮಾಯೆಯನ್ನು ನೋಡಿ ಕಪಿಗಳು ತಮ್ಮ ಮರಣವು ಸಮೀಪಿಸಿತೆಂದು ತಿಳಿದರು. ಆ ಮೋಜನ್ನು ನೋಡಿ ಶ್ರೀರಾಮನು ನಕ್ಕು, ಒಂದೇಬಾಣದಿಂದ ಮೇಘನಾದನ ಯಾವತ್ತು ಮಾಯೆಯು ನಿವಾರಣಮಾಡಿದನು. ಬಳಿಕ ಆತನು ಕರಡಿ-ಕಪಿಗಳನ್ನು ಕೃಪಾದೃಷ್ಟಿಯಿಂದ ನೋಡಲು, ಅವರ ಬಲವು ಹೆಚ್ಚಿ ಹಿಂದಕ್ಕೆ ಜಗ್ಗಿಕೊಂಡರೂ ಯುದ್ಧದಿಂದ ಅವರು ಹಿಂದಿರುಗದಾದರು. ಕಡೆಗೆ ಶ್ರೀರಾಮನ ಅಪ್ಪಣೆಪಡೆದು ಲಕ್ಷ್ಮಣನು ಧನುರ್ಬಾಣಗಳನ್ನು ಧರಿಸಿ ಅಂಗದಾದಿ ವಾನರರೊಡನೆ ಈರ್ಷೆಯಿಂದ ಯುದ್ಧಕ್ಕೆ ತೆರಳಿದನು. ಆಗ ಉಭಯಪಕ್ಷದ ವೀರರೂ ದ್ವಂದ್ವಯುದ್ಧ ಮಾಡತೊಡಗಿದರು. "ಹೊಡೆಯಿರಿ-ಹೊಡೆಯಿರಿ, ಹಿಡಿಯಿರಿ-ಹಿಡಿಯಿರಿ, ಕಡಿಯಿರಿ-ಕಡಿಯಿರಿ, ತಲೆಒಡೆಯಿರಿ, ಕೈಕತ್ತರಿ, ಕಾಲುಮುರಿಯಿರಿ, ಎಂಬ ಶಬ್ದಗಳು ಎಲ್ಲ ಕಡೆಗೆ ಕೇಳಿಸತೊಡಗಿದವು.

ಆಕಾಶದಲ್ಲಿ ದೇವತೆಗಳು ಈ ಕೌತುಕವನ್ನು ನೋಡುತ್ತಿರುವಾಗ ಅವರಿಗೆ ಸಡಸಡುವೆ ವಿಸ್ಮಯಾನಂದಗಳು ಉಂಟಾಗುತ್ತಿದ್ದವು. ಲಕ್ಷ್ಮಣ—ಮೇಘನಾದರಿಬ್ಬರೂ ವೀರರು ಈರ್ಷೆಯಿಂದ ಕಾದತೊಡಗಿದರು. ಇಬ್ಬರೂ ಸೋಲಲಿಲ್ಲರು. ಆಗ ಮೇಘನಾದನು ಅನೀತಿಯುಕ್ತವಾದ ಉಪಾಯಗಳನ್ನು ಮಾಡತೊಡಗಿದನು. ಆಗ ಶೇಷಾವತಾರನಾದ ಲಕ್ಷ್ಮಣನು ಕ್ರೋಧಾವಿಷ್ಟನಾಗಿ ಕೂಡಲೆ ಮೇಘನಾದನ ರಥವನ್ನು ಚೂರುಚೂರು ಮಾಡಿ ಸಾರಥಿಯನ್ನು ಯಮಸದನಕ್ಕಟ್ಟಿದನು. ಆಗ ಮೇಘನಾದನು ನಿಶ್ಚಯವಾಗಿ ಈತನು ನನ್ನ ಪ್ರಾಣಹರಣಮಾಡುವನೆಂದು ತಿಳಿದು ಕಡೆಗೆ ತನ್ನ ದ್ವೇಷಿಷ್ಟಮಾನವಾದ ಶಕ್ತಿಯನ್ನು ಬಿಟ್ಟ ಕೂಡಲೆ ಅದು ಲಕ್ಷ್ಮಣನ ಎದೆಗೆ ತಾಕಲು, ಆತನು ಮೂರ್ಛಿತನಾದನು. ಆಗ ಮೇಘನಾದನು ನಿರ್ಭಯದಿಂದ ಲಕ್ಷ್ಮಣನಬಳಿಗೆ ಹೋಗಿ ಆತನನ್ನು ಎತ್ತ ತೊಡಗಿದನು; ಆದರೆ ಆತನಂತೆ ಕೋಟ್ಯವಧಿರಾಕ್ಷಸವೀರರು ಲಕ್ಷ್ಮಣನನ್ನು ಎತ್ತಹೋದರೂ, ಜಗದಾಧಾರನಾದ ಆ ಪ್ರಭುಶ್ರೇಷ್ಠನು ಎತ್ತಲಿಲ್ಲ; ಆಗ ಮೇಘನಾದನು ನಾಚಿ ಹಿಂದಿರುಗಿ ಹೋದನು.

ಇತ್ತ ಶ್ರೀರಾಮನು "ಲಕ್ಷ್ಮಣನು ಎಲ್ಲಿರುವನು!" ಎಂದು ಕೇಳುತ್ತಿರಲು, ಮಾರುತಿಯು ಲಕ್ಷ್ಮಣನನ್ನು ಎತ್ತಿಕೊಂಡು ಬಂದನು. ಆತನನ್ನು ನೋಡಿ ರಾಮಚಂದ್ರನಿಗೆ ಬಹಳದುಃಖವಾಯಿತು. ಆಗ ಜಾಂಬುವಂತನು—ಲಂಕೆಯಲ್ಲಿ ಸುಷೇಣನೆಂಬ ಹೆಸರಿನ ವೈದ್ಯನಿರುವನು. ಆತನನ್ನು ಕರಕೊಂಡುಬರುವದಕ್ಕಾಗಿ ಯಾರನ್ನಾದರೂ ಕಳಿಸಬೇಕೆಂದು ಹೇಳಲು, ಮಾರುತಿಯು ಸೂಕ್ಷ್ಮದೇಹ ಧಾರಣಮಾಡಿ ಲಂಕೆಯನ್ನು ಹೊಕ್ಕು ಸುಷೇಣನನ್ನು ಅವನ ಮನೆಸಹಿತವಾಗಿ ಹೊತ್ತುಕೊಂಡುಬಂದನು. ಸುಷೇಣನು ರಘುಪತಿಯ ಚರಣಕ್ಕೆರಗಿ ಪರ್ವತದ ಹಾಗು ಅದರಮೇಲಿರುವ ವನಸ್ಪತಿಗಳ ಹೆಸರುಗಳನ್ನು ಹೇಳಿ, ವಾಯುಪುತ್ರನನ್ನು ಕುರಿತು—ಮಾರುತೀ, ನೀನೇ ಹೋಗಿ ಬೆಳಗಾಗುವದರೊಳಗಾಗಿ ಅವನ್ನು ತೆಗೆದುಕೊಂಡುಬಾ, ಎಂದು ಹೇಳಿದನು. ಆಗ ಮಾರುತಿಯು ಶ್ರೀರಾಮನ ಚರಣಕಮಲಗಳನ್ನು ಹೃದಯದಲ್ಲಿ ಧರಿಸಿ, ತನ್ನ ಸಾಮರ್ಥ್ಯದಲ್ಲಿ ವಿಶ್ವಾಸವಿಟ್ಟು ಔಷಧಿಯನ್ನು ತರುವದಕ್ಕಾಗಿ ಹೊರಟನು. ಅತ್ತ ಈ ಗುಪ್ತಸುದ್ದಿಯನ್ನು ಒಬ್ಬ ದೂತನು ರಾವಣನಿಗೆ ಹೇಳಲು, ಆತನು ಕಾಲನೇಮಿಯೆಂಬ ರಾಕ್ಷಸನ ಮನೆಗೆ ಹೋಗಿ, ಮಾರುತಿಯ ಕಾರ್ಯಕ್ಕೆ ವಿಘ್ನವನ್ನುಂಟುಮಾಡುವದಕ್ಕಾಗಿ ಆಜ್ಞಾಪಿಸಲು, ಕಾಲನೇಮಿಯು ಈವರೆಗೆ ವಿವೇಕಿಗಳು ಮಾಡುತ್ತಬಂದಂತೆ "ನೀನು ಶ್ರೀರಾಮನಿಗೆ ಶರಣುಹೋಗಿ ಸುಖಿಯಾಗೆಂ"ದು ರಾವಣನಿಗೆ ಉಪದೇಶಮಾಡಿದನು; ಆದರೆ ಆ ದುಷ್ಟನು ಬಹಳ ಸಂತಾಪಗೊಂಡದ್ದರಿಂದ ಈ ಅತ್ಯಂತ ಪಾಪರತನಾದ ದುಷ್ಟನ ಕೈಯಲ್ಲಿ ಸಾಯುವದಕ್ಕಿಂತ ರಾಮಭಕ್ತನಾದ ಮಾರುತಿಯ ಕೈಯಲ್ಲಿಸಾಯುವದೇ ಲೇಸೆಂದು ತಿಳಿದು ಕಾಲನೇಮಿಯು ರಾವಣನ ಅಪ್ಪಣೆಯಂತೆ ಮಾರುತಿಗೆವಿಘ್ನಮಾಡುವದಕ್ಕಾಗಿ ಹೊರಟನು. ಮಾರುತಿಯು

ಬರುವಹಾದಿಯಲ್ಲಿ ಆತನು ಒಂದು ಸರೋವರವನ್ನೂ, ಅದರ ದಂಡೆಯಮೇಲೆ ಒಂದು ಮಂದಿರವನ್ನೂ, ಒಂದು ಸುಂದರ ಉಪವನವನ್ನೂ ನಿರ್ಮಿಸಿ,ತಾನು ಕಪಟಮುನಿಯ ವೇಷವನ್ನು ಧರಿಸಿ ಆ ಮಂದಿರದಲ್ಲಿ ಕುಳಿತಿದ್ದನು. ಮಾರ್ಗಸ್ಥನಾದ ಮಾರುತಿಯು ಅಲ್ಲಿಗೆ ಬಂದು, ಈ ಆಶ್ರಮದಲ್ಲಿರುವ ಮುನಿಯನ್ನು ಕೇಳಿ ಜಲಪಾನಮಾಡಿ ಶ್ರಮವನ್ನು ಪರಿಹರಿಸಿಕೊಳ್ಳಬೇಕೆಂದು ಯೋಚಿಸಿ, ಮುನಿವೇಷಧಾರಿಯಾದ ಕಾಲನೇಮಿಯನ್ನು ನಮಸ್ಕರಿಸಿ ಕುಳಿತುಕೊಂಡನು. ಆಗ ಆ ಮುನಿಯು ರಾಮನ ಗುಣಗಳನ್ನು ವರ್ಣಿಸಿ—ಮಾರುತೀ, ನನಗೆ ದಿವ್ಯದೃಷ್ಟಿಯಿರುವದರಿಂದ ನಾನು ಇಲ್ಲಿಂದಲೇ ರಾಮ-ರಾವಣರ ಯುದ್ಧವನ್ನು ನೋಡುತ್ತಿರುವೆನು. ಕಡೆಗೆ ಈ ಯುದ್ಧದಲ್ಲಿ ರಾಮನಿಗೇ ಜಯವಾಗುವದು, ಅನ್ನಲು, ಮಾರುತಿಯು ಕುಡಿಯಲಿಕ್ಕೆ ನೀರು ಕೇಳಿದನು. ಆಗ ಮುನಿಯು ತನ್ನ ಕಮಂಡಲುವನ್ನು ಮುಂದೆ ಮಾಡಿದನು. ಆಗ ಮಾರುತಿಯು ಇಷ್ಟು ನೀರು ನನಗೆ ಸಾಲವೆಂದು ಹೇಳಲು, ಮುನಿಯು—ಮಾರುತೀ, ನೀನು ಆ ಸರೋವರದಲ್ಲಿ ಸ್ನಾನಮಾಡಿ ಬೇಗನೆ ಬಾ. ಆಮೇಲೆ ನಾನು ನಿನಗೆ ದೀಕ್ಷೆಯನ್ನು ಕೊಡುವೆನು, ಅದರಿಂದ ನನ್ನಂತೆ ನಿನಗೂ ದಿವ್ಯದೃಷ್ಟಿಯುಂಟಾಗುವದು, ಎಂದು ಹೇಳಲು, ಮಾರುತಿಯು ಸರೋವರದಲ್ಲಿ ಸ್ನಾನಕ್ಕಾಗಿ ಇಳಿಯಲು, ಒಂದು ಹೆಣ್ಣು ಮೊಸಳೆಯು ಅವನ ಕಾಲನ್ನು ಹಿಡಿಯಿತು. ಆಗ ಆತನು ಮೆಟ್ಟಿಬಿದ್ದು ಮೊಸಳೆಯನ್ನು ಹೊರಗೆಳೆದು ಕೊಲ್ಲಲು, ಅದು ದಿವ್ಯದೇಹಧಾರಣಮಾಡಿ—ಮಾರುತೀ, ನಿನ್ನ ದರ್ಶನದಿಂದ ನಾನು ನಿಷ್ಪಾಪಳಾದೆನು. ಅಪ್ಸರಿ, ಮುನಿವರನ ಶಾಪದಿಂದ ಅಪ್ಸರೆಯು ನಾನು ಮುಕ್ತಳಾದೆನು. ಆ ಮಂದಿರದಲ್ಲಿರುವವನು ಮುನಿಯಲ್ಲ, ದುಷ್ಟ ನಿಶಾಚರನಿರುವನು. ನನ್ನ ಮಾತನ್ನು ಸತ್ಯವೆಂದು ನಂಬು, ಎಂದು ಹೇಳಿ, ಅಪ್ಸರೆಯು ಹೋಗಲು, ಮಾರುತಿಯು ಮುನಿಯ ಬಳಿಗೆ ಹೋಗಿ—ಮೊದಲು ದಕ್ಷಿಣೆಯನ್ನು ಹಿಡಿ. ಮಂತ್ರೋಪದೇಶವನ್ನು ಹಿಂದುಗಡೆ ಮಾಡುವೆಯಂತೆ, ಎಂದು ಹೇಳಿ ಆ ರಾಕ್ಷಸನನ್ನು ನೆಲಕ್ಕಪ್ಪಳಿಸಿದನು. ದೇಹತ್ಯಾಗಮಾಡುವಾಗ ಕಾಲನೇಮಿಯು "ರಾಮರಾಮ" ಎಂದು ಉಚ್ಚರಿಸಲು, ಅದನ್ನು ಕೇಳಿ ಮಾರುತಿಯು ಹರ್ಷಿತನಾಗಿ ಮುಂದಕ್ಕೆ ಸಾಗಿದನು.

ಕಡೆಗೆ ಮಾರುತಿಯು ಆ ಪರ್ವತವನ್ನು ಗೊತ್ತುಹಚ್ಚಿದನು; ಆದರೆ ಅದರೊಳಗಿನ ಔಷಧಿಯು ಗೊತ್ತಾಗದ್ದರಿಂದ, ಪರ್ವತವನ್ನೇ ಕಿತ್ತುಕೊಂಡು ಆಕಾಶಮಾರ್ಗದಿಂದ ಬಹುವೇಗವಾಗಿ ಅಯೋಧ್ಯೆಯ ಮೇಲಿಂದ ಹಾದು ಬರತೊಡಗಿದನು. ಆಗ ಭರತನು ಇವನಾವನೋ ರಾಕ್ಷಸನಿರಬಹುದೆಂದು ತಿಳಿದು ಧನುಸ್ಸಿಗೆ ಬಾಣವನ್ನು ಹೂಡಿ ಕಿವಿಯುವರೆಗೆ ಜಗ್ಗಿ ಮಾರುತಿಯ ಮೇಲೆ ಬಿಡಲು, ಮಾರುತಿಯು ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದು "ರಾಮ ರಾಮ! ರಘುನಾಯಕಾ!" ಎಂದು ಸ್ಮರಣ ಮಾಡತೊಡಗಿದನು. ಅಪ್ರಿಯಕರನ ನಾಮಸ್ಮರಣವನ್ನು ಕೇಳಿದ ಕೂಡಲೆ ಭರತನು ಮಾರುತಿಯ ಬಳಿಗೆ

ಹಿಡುತ್ತ ಬಂದು, ಕಪಿಯು ದುರ್ದಸೆಯನ್ನು ನೋಡಿ ಆತನನ್ನು ಎದೆಗವಚಿಕೊಂಡು ಆತನ ಮೂರ್ಛೆ ತಿಳಿಯುವದಕ್ಕಾಗಿ ಹಲವು ಯತ್ನಗಳನ್ನು ಮಾಡಿದನು; ಆದರೆ ಅದೆಲ್ಲ ವ್ಯರ್ಥವಾಗಲು, ಆತನು—"ನನ್ನನ್ನು ರಾಮನಿಂದಗಲಿಸಿದ ದುರ್ದೈವವೇ ನನಗೆ ಪುನಃ ಈ ಮಹದ್ದುಃಖವನ್ನುಂಟುಮಾಡಿರುವದು; ಆದರೂ ರಾಮಚರಣದಲ್ಲಿ ತ್ರಿಕರಣಪೂರ್ವಕವಾಗಿ ನನ್ನ ನಿಷ್ಕಪಟಪ್ರೇಮವಿದ್ದರೆ, ಮತ್ತು ರಘುಪತಿಯ ಅನುಗ್ರಹವೂ ನನ್ನ ಮೇಲಿದ್ದರೆ ಈ ಕಪಿಯು ಶ್ರಮರಹಿತನೂ, ಕ್ಲೇಶರಹಿತನೂ ಆಗಲಿ, ಎಂದು ನುಡಿಯಲು, ಆ ವಚನಗಳು ಕಿವಿಗೆಬಿದ್ದ ಕೂಡಲೆ ಮಾರುತಿಯು ಕೋಸಲಾಧೀಶನ ಜಯಜಯಕಾರವನ್ನು ಮಾಡುತ್ತ ಎದ್ದು ಕುಳಿತುಕೊಂಡನು. ಅದನ್ನು ನೋಡಿ ಭರತನು ಕಪಿಯನ್ನು ಗಟ್ಟಿಯಾಗಿ ಅಪ್ಪಿಕೊಂಡನು. ಆತನ ಶರೀರವು ರೋಮಾಂಚಿತವಾಗಿ ಕಣ್ಣುಗಳು ನೀರುದುಂಬಿದವು; ಆತನ ಹೃದಯದಲ್ಲಿ ಪ್ರೇಮವು ಹಿಡಿಸದಾಯಿತು. ಆಗ ರಘುಕುಲತಿಲಕ ರಾಮಚಂದ್ರನನ್ನು ಸ್ಮರಿಸಿ ಮಾರುತಿಯನ್ನು ಕುರಿತು—ಎಲೈ ತಾತನೇ, ಲಕ್ಷ್ಮಣ ಹಾಗು ತಾಯಿ ಜಾನಕಿಇವರೊಡನೆ ಶ್ರೀರಾಮನು ಕ್ಷೇಮದಿಂದಿರುವನೇ? ಎಂದು ಕೇಳಲು, ಮಾರುತಿಯು ಸಂಕ್ಷೇಪದಿಂದ ಯಾವತ್ತು ವೃತ್ತಾಂತವನ್ನು ಹೇಳಿದನು. ಅದನ್ನು ಕೇಳಿ ಭರತನು ಮನಸ್ಸಿನಲ್ಲಿ ದುಃಖಿತನಾಗಿ ಪಶ್ಚಾತ್ತಾಪ ಪಡುತ್ತ—ಹಾಹಾ! ದೈವಾ, ನಾನು ಈ ಜಗತ್ತಿನಲ್ಲಿ ಜನ್ಮವನ್ನಾದರೂ ಯಾಕೆ ಎತ್ತಿದೆನು? ಪ್ರಭುವಿಗೆ ನಾನು ಒಂದು ಕಾರ್ಯದಲ್ಲಿಯೂ ಉಪಯೋಗವಾಗಲಿಲ್ಲವಲ್ಲ! ಎಂದು ವಿಲಾಪಿಸಿ, ಆ ಪ್ರಬಲವೀರನು ಆ ಕಠಿಣಪ್ರಸಂಗದಲ್ಲಿಯೂ ಧೈರ್ಯತಾಳಿ ಮಾರುತಿಯನ್ನು ಕುರಿತು—ಎಲೈ ತಾತನೇ, ನೀನು ಹೋಗಹೋಗುತ್ತ ತಡವಾಗುತ್ತ.. ಇನ್ನು ಬೇಗನೆ ಕೆಲಸ ಕೆಟ್ಟೀತು. ಆದ್ದರಿಂದ ಪರ್ವತಸಹಿತವಾಗಿ ನೀನು ನನ್ನ ಬಾಣದ ಮೇಲೆ ಕುಳಿತುಕೊಳ್ಳು ಅಂದರೆ ಕೃಪಾಘನನಾದರಾಮಚಂದ್ರನ ಕಡೆಗೆ ನಿನ್ನನ್ನು ಕೂಡಲೆಮುಟ್ಟಿಸುವೆನು. ಎಂದು ಹೇಳಲು, ಮಾರುತಿಯು ಅಭಿಮಾನಕ್ಕೊಳಗಾಗಿ—ನನ್ನ ಈ ಭಾರಸಹಿತನಾಗಿ ಈತನ ಬಾಣವು ಹೇಗೆ ಹೋದೀತು, ಎಂದು ಶಂಕಿಸಿ, ಪುನಃ ರಾಮಪ್ರಭಾವವನ್ನು ವಿಚಾರಿಸಿ ಭರತನ ಚರಣಕ್ಕೆ ಸಾಷ್ಟಾಂಗವೆರಗಿ—ಎಲೈ ನಾಥನೇ, ನಿನ್ನ ಪ್ರತಾಪದ ವಿಶ್ವಾಸವನ್ನು ಹೃದಯದಲ್ಲಿಟ್ಟುಕೊಂಡು ನಾನು ಬಾಣಗತಿಯಿಂದಲೇ ಬೇಗನೆ ಹೋಗುವೆನು, ಎಂದು ಕೇಳಿ ಭರತನ ಅಪ್ಪಣೆಯನ್ನು ಪಡೆದು, ಆತನ ಚರಣಗಳಿಗೆ ಪುನಃ ವಂದಿಸಿದಮೇಲೆ ಮಾರುತಿಯು ಹೊರಟನು. ಮಾರ್ಗವನ್ನು ಕ್ರಮಿಸುವಾಗ ಅವನು ಭರತನ ಬಾಹುಬಲವನ್ನೂ, ಆತನ ಶೀಲವನ್ನೂ, ಗುಣಗಳನ್ನೂ, ಪ್ರಭುಪದದಲ್ಲಿರುವ ಆತನ ಅಪಾರವಾದ ಪ್ರೀತಿಯನ್ನೂ ಮನಸ್ಸಿನಲ್ಲಿ ತಂದು ಪುನಃ ಪುನಃ ಹೊಗಳಹತ್ತಿದನು.

ಇತ್ತ ಮಧ್ಯರಾತ್ರಿಯು ಮೀರಿದರೂ ಮಾರುತಿಯು ಬಾರದ್ದರಿಂದ ಶ್ರೀರಾಮನು ಲಕ್ಷ್ಮಣನನ್ನು ಎದೆಗವಚಿಕೊಂಡು, ಮಾನವೀ ಸ್ವಭಾವವನ್ನು ಅನುಕರಿಸಿ ಲಕ್ಷ್ಮಣನ

ಕಡೆಗೆ ನೋಡಿ– ಎಲೈ ಬಂಧುವೇ, ನನ್ನ ದುಃಖವು ನಿನಗೆ ಎಂದೂ ಸಹನವಾಗುತ್ತಿರಲಿಲ್ಲ ; ಯಾಕಂದರೆ ನಿನ್ನ ಸ್ವಭಾವವು ಯಾವಾಗಲೂ ಕೋಮಲವಾದದ್ದಿರುವದು- ಕೇವಲ ನನ್ನ ಸುಖಕ್ಕಾಗಿಯೇ ನೀನು ತಾಯಿತಂದೆಗಳನ್ನಾದರೂ ಬಿಟ್ಟು ಅರಣ್ಯದಲ್ಲಿ ಚಳಿ-ಗಾಳಿ-ಬಿಸಿಲುಗಳನ್ನು ಸಹಿಸಿದೆ; ಆದರೆ ಎಲೈ ಬಂಧುವೇ, ಆ ನಿನ್ನ ಪ್ರೀತಿಯು ಇಂದು ಎಲ್ಲಿ ಹೋಯಿತು? ನನ್ನ ಈ ದುಃಖಪ್ರಲಾಪವನ್ನು ಕೇಳಿ ನೀನು ಇನ್ನೂ ಯಾಕೆ ಏಳಲೊಲ್ಲೆ? ವನದಲ್ಲಿ ಬಂಧುವಿನ ವಿಯೋಗವಾಗುವದೆಂಬದು ನನಗೆ ಮೊದಲೇ ಗೊತ್ತಾಗಿದ್ದರೆ ನಾನು ತಂದೆಯ ವಚನವನ್ನು ಮನ್ನಿಸುತ್ತಿದ್ದಿಲ್ಲ. ಈ ಜಗತ್ತಿನಲ್ಲಿ ಮಕ್ಕಳು, ವಿತ್ತ, ಸ್ತ್ರೀ, ಗೃಹ, ಪರಿವಾರ ಇವು ಮೇಲೆ ಮೇಲೆ ಉತ್ಪನ್ನವಾಗುವವು, ನಷ್ಟವಾಗುವವು; ಆದರೆ ಎಲೈ ತಾತನೇ, ಜಗತ್ತಿನಲ್ಲಿ ಬೆನ್ನಿನಲ್ಲಿ ಬಿದ್ದ ತಮ್ಮನು ಸಿಗುವದಿಲ್ಲವು. ಈ ವಿಚಾರವನ್ನು ಮನಸ್ಸಿನಲ್ಲಿ ತಂದು ನೀನು ಬದುಕು ಕಂದಾ, ನನ್ನ ದುರ್ದೈವವು ನಿನ್ನನ್ನು ಬದುಕಿಸಿಯೇ ಇಟ್ಟರೆ, ನೀನಿಲ್ಲದ ನನ್ನ ಬಾಳು, ರೆಕ್ಕೆಯಿಲ್ಲದ ಪಕ್ಷಿಯು, ಹಾಗು ಮಣಿವಿಹೀನವಾದ ಸರ್ಪದ, ಅದರಂತೆ ಸೊಂಡೆಯಿಲ್ಲದ ಆನೆಯ ಬಾಳಿನಂತೆ ಆಗುವದು. ನಾನು ಪರಮಾವಧಿ ದೀನನಾಗುವೆನು. ನಾನು ಹೆಂಡತಿಯ ಸಲುವಾಗಿ ನನ್ನ ಪ್ರಿಯಬಂಧುವನ್ನು ಕಳಕೊಂಡು ಇನ್ನು ಅಯೋಧ್ಯೆಗೆ ಯಾವ ಮೋರೆಯಿಂದ ಹೋಗಲಿ? ಈ ವರೆಗೆ ನಾನು ಜಗತ್ತಿನಲ್ಲಿ ಹೆಂಡತಿಯನ್ನು ಕಳಕೊಂಡದ್ದೊಂದೇ ಅಪಕೀರ್ತಿಯನ್ನು ಸಹಿಸುತ್ತ ಬಂದೆನು; ಆದರೆ ಎಲೈ ನಂದನನೇ, ಈಗ ಆ ನಿಂದೆಯನ್ನೂ, ನಿನ್ನ ಶೋಕವನ್ನೂ ನನ್ನ ನಿಷ್ಠುರವೂ, ನಿರ್ದಯವೂ ಆದ ಅಂತಃಕರಣವು ಸಹಿಸುತ್ತಿರುವದರಿಂದ, ಆ ಹೆಂಡತಿಯ ವಿಯೋಗದ ಭಯವು ಈಗ ನನಗೆ ಇಲ್ಲದಾಗಿದೆ. ಎಲೈ ತಾತಾ, ನೀನು ನಿನ್ನ ತಾಯಿಗೆ ಒಬ್ಬನೇ ಒಬ್ಬ ಮಗನಾಗಿದ್ದು, ಆಕೆಯ ಪ್ರಾಣಗಳಿಗೆ ನೀನೇ ಆಧಾರವಾಗಿರುವೆಯಲ್ಲವೆ? ನಿನ್ನ ತಾಯಿಯು ನನ್ನನ್ನು ಸರ್ವಪ್ರಕಾರದಿಂದ ಸುಖದಾಯಕನೆಂತಲೂ, ಪರಮ ಹಿತಚಿಂತಕನೆಂತಲೂ ತಿಳಿದು ನಿನ್ನ ಕೈಹಿಡಿದು ಆಕೆಯು ನಿನ್ನನ್ನು ನನಗೆ ಒಪ್ಪಿಸಲಿಲ್ಲವೆ? ಎಲೈ ಬಂಧುವೇ, ಇನ್ನು ನಾನು ಹೋಗಿ ಆಕೆಗೆ ಏನು ಹೇಳಲೆಂಬದನ್ನು ನೀನು ನನಗೆ ಯಾಕೆ ಹೇಳಲೊಲ್ಲೆ!

ಈ ಮೇರೆಗೆ ಹಲವು ಬಗೆಯಿಂದ ಶೋಕವಿಮೋಚಕ ಶ್ರೀರಾಮನು ಶೋಕಿಸಿ ತನ್ನ ಕಮಲ ನೇತ್ರಗಳಿಂದ ಅಶ್ರುಗಳನ್ನು ಸುರಿಸಿದನು. ಎಲೈ ಪಾರ್ವತೀ, ರಾಮಚಂದ್ರನಂತು ಅಖಂಡ ಸಚ್ಚಿದಾನಂದನು. ಭಕ್ತ ದಯಾಘನನು ಕೇವಲ ಈ ಮಾನವಲೀಲೆಯನ್ನು ಮಾಡಿತೋರಿಸುವನು. ಪ್ರಭುವಿನ ದುಃಖವನ್ನು ನೋಡಿ ವಾನರಗಣವೂ ದುಃಖಿತವಾಯಿತು. ಅಷ್ಟರಲ್ಲಿ ಕರುಣಾರಸದಲ್ಲಿ ವೀರರಸವು ಆವಿರ್ಭಾವವಾದಂತೆ ಮಾರುತಿಯು ಅಲ್ಲಿಗೆ ಬಂದು ಮುಟ್ಟಿದನು. ಆಗ ಕೃತಜ್ಞನೂ, ಪರಮಜ್ಞಾನಿಯೂ ಆದ ಪ್ರಭು ರಾಮಚಂದ್ರನು ಮಾರುತಿಯನ್ನು ಆನಂದದಿಂದ ಕಾಣಿಸಿಕೊಂಡನು. ಆಮೇಲೆ

ಸುಷೇಣನು ತಡಮಾಡದೆ ಉಪಚರಿಸಲು, ಕೂಡಲೆ ಲಕ್ಷ್ಮಣನು ಹರ್ಷದಿಂದ ಎದ್ದು ಕುಳಿತುಕೊಂಡನು! ಆಗ ಪ್ರಭು ರಾಮಚಂದ್ರನು ಆತನನ್ನು ಎತ್ತಿ ಎದೆಗವಚಿಕೊಂಡನು. ವಾನರ-ಕರಡಿ-ಕಪಿಗಳು ಸಂತುಷ್ಟರಾದರು. ಬಳಿಕ ಮಾರುತಿಯು ಸುಷೇಣನನ್ನು ಕರತಂದಂತೆ ತಿರುಗಿ ಮುಟ್ಟಿಸಿದನು. ಈ ಸುದ್ದಿಯು ರಾವಣನಿಗೆ ಹತ್ತಲು, ಆತನು ಖೇದಪಟ್ಟು ಹಣೆಹಣೆ ಒಡೆದುಕೊಂಡನು. ಆತನು ಶೋಕಗ್ರಸ್ತನಾಗಿ ಕಡೆಗೆ ಕುಂಭಕರ್ಣನ ಬಳಿಗೆ ಬಂದನು. ಆತನು ಹಲವು ಪ್ರಯತ್ನಗಳಿಂದ ಕುಂಭಕರ್ಣನನ್ನು ಎಬ್ಬಿಸಲು. ಆತನು ಯಮನ ಎರಡನೆಯ ಪ್ರತಿಮೆಯಂತೆ ಎದ್ದು ಕುಳಿತುಕೊಂಡು ರಾವಣನನ್ನು ಕುರಿತು—ಎಲೈ ಬಂಧುವೇ, ನಿನ್ನ ಮೋರೆಯು ಯಾಕೆ ಬಾಡಿರುವದು, ಎಂದು ಕೇಳಲು, ಆ ಗರ್ವಿಷ್ಠ ರಾವಣನು ಸೀತಾಹರಣದಿಂದ ಈವರೆಗೆ ನಡೆದ ಸುದ್ದಿಯನ್ನೆಲ್ಲಾ ಆ ತಮ್ಮನಮುಂದೆ ಹೇಳಿದನು. ಅಣ್ಣನ ಮಾತುಗಳನ್ನು ಕೇಳಿ ಕುಂಭಕರ್ಣನು ದುಃಖವಿಹ್ವಲನಾಗಿ—ಎಲೈ ದುರಾತ್ಮಾ, ನೀನು ಜಗನ್ಮಾತೆಯನ್ನು ಕದ್ದುಕೊಂಡು ಬಂದು ಈಗ ಕಲ್ಯಾಣವನ್ನು ಇಚ್ಛಿಸುವೆಯಾ? ಎಲೈ ರಾಕ್ಷಸಪತಿಯೇ, ಇವನ್ನೇನು ನೀನು ನೆಟ್ಟಗೆ ಮಾಡಲಿಲ್ಲ. ಈಗ ಬಂದು ನನ್ನನ್ನು ಎಬ್ಬಿಸುವದರಲ್ಲಿ ಏನು ಅರ್ಥವದೆ! ಎಲೈ ತಾತನೇ, ಈಗಾದರೂ ನಿನ್ನ ಗರ್ವವನ್ನು ಬಿಟ್ಟು ರಾಮನಿಗೆ ಶರಣುಹೋಗು. ಅಂದರೆ ನಿನ್ನ ಕಲ್ಯಾಣವಾಗುವದು. ಎಲೈ ರಾವಣಾ, ಹನುಮಂತನಂಥ ಸೇವಕರುಳ್ಳ ರಾಮನು ಮನುಷ್ಯನೇ? ಹರಹರಾ! ಎಲೈ ರಾಕ್ಷಸಪತೀ, ಇಷ್ಟು ದೊಡ್ಡ ತಪ್ಪು ಮಾಡಿದ ನೀನು ನನಗೆ ಮೊದಲಿಗೇ ಹೇಳಲಿಕ್ಕೆ ಯಾಕೆ ಬರಲಿಲ್ಲ? ಶಿವ-ಬ್ರಹ್ಮಾದಿಗಳಿಂದ ಸೇವ್ಯನಾದ ಪ್ರಭುವಿನೊಡನೆ ನೀನು ದ್ವೇಷಬೆಳಿಸಲಾರಂಭಿಸಿರುತ್ತೀ. ಮೊದಲೇ ನೀನು ಹೇಳಿದ್ದರೆ ನಾರದಮುನಿಯು ನನ್ನ ಮುಂದೆ ಹೇಳಿದ್ದ ಭವಿಷ್ಯವನ್ನು ನಿನಗೆ ನಾನು ಹೇಳುತ್ತಿದ್ದೆನು. ಆದರೆ ಆ ಕಾಲವು ಈಗ ಕ್ರಮಿಸಿಹೋಗಿರುವದು; ಆದರೆ ಎಲೈ ಬಂಧುವೇ, ಈಗ ನನ್ನನ್ನು ನೀನು ಬಿಗಿಯಾಗಿ ಅಪ್ಪಿಕೊಂಡು ಭೆಟ್ಟಿಯನ್ನು ಮಾಡಿಕೊಳ್ಳು. ನಾನು ಹೋಗಿ ಆ ಶ್ಯಾಮಲಗಾತ್ರನೂ, ಕಮಲನಯನನೂ ಆದ ತ್ರಿತಾಪಮೋಚಕ ಪ್ರಭುವನ್ನು ನನ್ನ ಕಣ್ಣುಗಳಿಂದ ನೋಡಿ ಅವುಗಳ ಸಾರ್ಥಕ ಮಾಡಿಕೊಳ್ಳುವೆನು.

ಈಮೇರೆಗೆ ನುಡಿದು ರಾಮಚಂದ್ರನ ಗುಣಗಳನ್ನೂ, ರೂಪವನ್ನೂ ನೆನಪಿಗೆ ತಂದುಕೊಂಡು ಕುಂಭಕರ್ಣನು ಕ್ಷಣಮಾತ್ರ ತಲ್ಲೀನನಾದನು. ರಾವಣನು ಮದ್ಯದ ಕೋಟ್ಯವಧಿ ಕೊಡಗಳನ್ನೂ, ಹಲವು ಕೋಣಗಳನ್ನೂ ತರಿಸಿದನು. ಕುಂಭಕರ್ಣನು ಕೋಣಗಳನ್ನು ತಿಂದು ಮದ್ಯವನ್ನು ಕುಡಿದು ಸಿಡಿಲಿನಂತೆ ಗರ್ಜಿಸಿದನು. ಆ ಮದೋನ್ಮತ್ತ ಕುಂಭಕರ್ಣನು ರಣಮದದಿಂದ ದುಂದಾಗಿ, ಲಂಕೆಯ ದುರ್ಗವನ್ನು ಬಿಟ್ಟು ಸೈನ್ಯವನ್ನು ಸಂಗಡ ಕರಕೊಳ್ಳದೆ ಒಬ್ಬನೇ ಮುಂದಕ್ಕೆ ಸಾಗಿದನು. ಆತನನ್ನು

ನೋಡಿ ವಿಭೀಷಣನು ಎದುರಾಗಿ ಹೋಗಿ ತನ್ನ ಹೆಸರು ಹೇಳಿ ಆತನ ಚರಣಗಳಿಗೆ ಎರ
ಗಿದನು. ಕುಂಭಕರ್ಣನು ಆತನನ್ನು ಎತ್ತಿ ಎದೆಗವಚಿಕೊಂಡು, ಆತನು ರಾಮಭಕ್ತ
ನಾರುವನೆಂದು ತಿಳಿದು ಮನಸ್ಸಿನಲ್ಲಿ ಪ್ರಸನ್ನನಾದನು. ವಿಭೀಷಣನು ಅಣ್ಣನನ್ನು ಕುರಿ
ತು—ಎಲೈ ತಾತನೇ, ನಾನು ರಾವಣನಿಗೆ ಅತ್ಯಂತ ಹಿತಕರವಾದ ಆಲೋಚನೆಯನ್ನು
ಹೇಳುತ್ತಿರಲು, ಆತನು ನನ್ನನ್ನು ಒದ್ದನು ಆತನ ತ್ರಾಸದಿಂದ ನಾನು ರಘುಪತಿಯನ್ನು
ಆಶ್ರಯಿಸಲು, ಆ ಪ್ರಭುವು ನನ್ನನ್ನು ದೀನನೆಂದು ತಿಳಿದು ಅಂಗೀಕರಿಸಿದನು, ಎಂದು
ಹೇಳಿದನು. ಅದನ್ನು ಕೇಳಿ ಕುಂಭಕರ್ಣನು—ವತ್ಸಾ ಕೇಳು. ರಾವಣನು ಕಾಲವಶ
ನಾಗಿರುವದರಿಂದ ಅತ್ಯಂತ ಹಿತದ ಮಾತುಗಳನ್ನೂ ಕೇಳನು. ವಿಭೀಷಣಾ. ನೀನು ನಿಜ
ವಾಗಿಯೇ ಧನ್ಯನಿರುವೆ. ನೀನು ರಾಕ್ಷಸಕುಲಕ್ಕೆ ಭೂಷಣನಾಗಿರುವೆ; ಸೌಂದರ್ಯ-
ಸುಖಸಾಗರನಾದ ರಾಮಚಂದ್ರನ ಭಕ್ತಿಯನ್ನು ಮಾಡಿ ನೀನು ನಮ್ಮ ವಂಶವನ್ನು ವಿಖ್ಯಾ
ತವಾಗಿಮಾಡಿರುತ್ತೀ. ತ್ರಿಕರಣಪೂರ್ವಕವಾಗಿ ನಿಷ್ಕಪಟದಿಂದ ರಣಧುರಂಧರ ಶ್ರೀರಾ
ಮನಲ್ಲಿ ನೀನು ಭಕ್ತಿಯನ್ನು ಮಾಡು. ಎಲೈ ವೀರನೇ, ಇನ್ನು ನೀನು ಹೋಗು. ನನಗೆ
"ನನ್ನವು-ಹೊರಗಿನವು" ಏನೂ ತಿಳಿಯುವದಿಲ್ಲ. ನಾನೂ ಕಾಲವಶನಾಗಿರುವೆನು,
ಅನ್ನಲು, ವಿಭೀಷಣನು ಶ್ರೀರಾಮನ ಬಳಿಗೆ ಬಂದು—ಎಲೈ ಪ್ರಭುವೇ, ಪರ್ವತಪ್ರಾ
ಯುದ್ಧ ದೇಹಧಾರಿಯಾದ ರಣಧೀರ ಕುಂಭಕರ್ಣನು ಬರುತ್ತಿರುವನು, ಎಂದು ಹೇಳಿ
ದನು. ಅದನ್ನು ಬಲಾಢ್ಯವಾನರರು ಕೇಳಿದಕೂಡಲೆ ಕರಕರ ಹಲ್ಲುತಿನ್ನುತ್ತ ಗಿಡಗ
ಳನ್ನೂ, ಗುಡ್ಡಗಳನ್ನೂ ಕಿತ್ತು ಅವನಮೇಲೆ ಬೀಸಿ ಒಗೆಯಹತ್ತಿದರು; ಆದರೆ ಅದೆಲ್ಲ
ಎಕ್ಕೆಯ ಹಣ್ಣಿನ ಅರಳೆಯಿಂದ ಆನೆಯ ಗಂಡಸ್ಥಳಕ್ಕೆ ಹೊಡೆದಹಾಗಾಗಿ, ಎಷ್ಟು ಹಿಂದಿ
ರುಗಿಸಬೇಕೆಂದರೂ ಕುಂಭಕರ್ಣನು ಹಿಂದಿರುಗಲೊಲ್ಲನು. ಆಗ ಮಾರುತಿಯು ಒಮ್ಮೆ
ಗುದ್ದಲು, ಅವನಿಗೆ ಕಸವಿಸಿಯಾಗಿ ಅವನು ತಲೆತಲೆ ಬಡಕೊಳ್ಳಹತ್ತಿದನು. ಅಷ್ಟರಲ್ಲಿ
ಪುನಃ ಎದ್ದು ಹನುಮಂತನನ್ನು ತಿರುಗಿ ಗುದ್ದಿದನು. ಕೂಡಲೆ ಹನುಮಂತನು ಬೋಳಿ
ಬಂದುಬಿದ್ದನು. ಬಳಿಕ ಆವೀರ ಕುಂಭಕರ್ಣನು ನಳ-ನೀಲಾದಿಗಳನ್ನು ನೆಲಕ್ಕೆ ಅಪ್ಪಳಿಸಿ
ಅಲ್ಲಲ್ಲಿ ಒಬ್ಬೊಬ್ಬ ವೀರರನ್ನು ಭೂಮಿಯಮೇಲೆ ಉರುಳಿಸತೊಡಗಿದನು. ಆಗ ವಾನರಸೈ
ನ್ಯವು ಓಡತೊಡಗಿತು. ಅತ್ಯಂತ ಭಯಗ್ರಸ್ತರಾಗಿ ಯಾರೂ ಆತನೊಡನೆ ಯುದ್ಧಕ್ಕೆ
ನಿಲ್ಲದಾದರು. ಸುಗ್ರೀವನಿಂದ ಸಹಿತವಾಗಿ ಅಂಗದಾದಿ ಕಪಿಗಳನ್ನು ಮೂರ್ಛೆಗೊಳಿಸಿ
ಸುಗ್ರೀವನನ್ನು ಬಗಲಲ್ಲಿ ಹಿಚಿಕಿಹಿಡಿದು ಅತ್ಯಂತ ಬಲಾಢ್ಯನಾದ ಆ ವೀರನು ಮುಂದಕ್ಕೆ
ಸಾಗಿದನು. ಪಾರ್ವತೀ, ಗರುಡನು ಸರ್ಪಸಮೂಹದ ಮಧ್ಯದಲ್ಲಿ ಲೀಲೆಯನ್ನು ಮಾಡು
ತ್ತಿರುವಂತೆ, ಪ್ರಭುವು ನರಲೀಲೆಯನ್ನು ಮಾಡುತ್ತಿರುವನು. ಭೃಕುಟೀಭಂಗದಿಂದ
ಕಾಲನನ್ನೂ ಭಕ್ಷಿಸುವ ಪರಮಾತ್ಮನಿಗೆ ಹೀಗೆ ಯುದ್ಧಮಾಡುತ್ತಿರುವದು ಶೋಭಿಸು

ವದೇ! ಆದರೆ ಒಂದೇಸವನೆ ಗಾಯನಮಾಡಿ ಭವ ಸಾಗರವನ್ನು ದಾಟಲಿಕ್ಕೆ ಸಾಧನ ವಾಗುವಂತೆ, ತನ್ನ ದಿವ್ಯಚರಿತ್ರವನ್ನು ಈ ಘೋರಯುದ್ಧದ ನೆವದಿಂದ ಪ್ರಭುವು ವಿಸ್ತರಿಸುತ್ತಿರುವನು.

ಇತ್ತ ಮಾರುತಿಯು ಮೂರ್ಛೆತಿಳಿದೆದ್ದು ಸುಗ್ರೀವನನ್ನು ಹುಡುಕತೊಡಗಿದನು. ಇತ್ತ ಸುಗ್ರೀವನು ಮೂರ್ಛೆತಿಳಿದು ತಾನು ಸತ್ತಸೆಂಬಂತೆ ತೋರಿಸಿ ಆ ಕುಂಭಕರ್ಣನ ಬಗಲೊಳಗಿಂದ ಜಾರಿಹೋದನು. ಹೋಗುವಾಗ ಸುಗ್ರೀವನು ಕುಂಭಕರ್ಣನ ಮೂಗು-ಕಿವಿಗಳನ್ನು ಕಡಿದು ಹರಿದುಕೊಂಡು ಆಕಾಶದಲ್ಲಿ ಉಡ್ಡಾಣಮಾಡಿದ್ದರಿಂದ ಕುಂಭಕರ್ಣನಿಗೆ ಸುಗ್ರೀವನು ಹೋದದ್ದು ಗೊತ್ತಾಯಿತು. ಕುಂಭಕರ್ಣನು ಪುನಃ ಸುಗ್ರೀವನನ್ನು ಕಾಲು ಹಿಡಿದು ನೆಲಕ್ಕೆ ಅಪ್ಪಳಿಸಿದನು; ಆದರೆ ಸುಗ್ರೀವನು ಬಹು ಚಪಲತೆಯಿಂದ ಎದ್ದು ಆ ರಾಕ್ಷಸನನ್ನು ಹೊಡೆದು ಶ್ರೀರಾಮನ ಹೆಸರಿನಿಂದ ಜಯಘೋಷ ಮಾಡುತ್ತ ಆ ಪ್ರಭುವಿನ ಬಳಿಗೆ ಹೋದನು. ಕುಂಭಕರ್ಣನು ಮೊದಲೇ ಭಯಂಕರನು. ಅದರಲ್ಲಿ ಕಿವಿ ಮೂಗುಗಳು ಹರಿದುಹೋದದ್ದರಿಂದ ಅತ್ಯಂತ ಭಯಂಕರನಾಗಿ ತೋರಹತ್ತಿದನು. ಆತನನ್ನು ನೋಡಿ ಕಪಿಸೈನ್ಯವು ಭಯಗ್ರಸ್ತವಾಯಿತು. ಕ್ರುದ್ಧ ಕಾಲನಂತೆ ವೀರಶ್ರೀಯುಳ್ಳವನಾಗಿ ಕುಂಭಕರ್ಣನು ತೀರ ಶತ್ರುಗಳ ಸನಿಯಕ್ಕೆ ಬಂದನು. ಆತನು ಕೋಟ್ಯವಧಿ ವಾನರರನ್ನು ಹಿಡಿಹಿಡಿದು ಬಾಯಲ್ಲಿ ಹಾಕಿಕೊಳ್ಳಹತ್ತಿದನು. ಕೋಟ್ಯವಧಿ ವಾನರರನ್ನು ಹಿಡಿಹಿಡಿದು ಹಿಚಿಕಿದನು. ಕೋಟ್ಯವಧಿ ವಾನರರನ್ನು ತಿಕ್ಕಿ ತಿಕ್ಕಿ ಧೂಳಿಯಲ್ಲಿ ಕೂಡಿಸಿಬಿಟ್ಟನು. ಆ ಕರಡಿ-ಕಪಿಗಳ ಸಮುದಾಯವು ಆತನ ಮೂಗು, ಬಾಯಿ, ಕಿವಿಗಳೊಳಗಿಂದ ಹೊರಬಿದ್ದು ಓಡಿಹೋಗಹತ್ತಿತು. ಹೀಗೆ ಕುಂಭಕರ್ಣನು ವಾನರ ಸೈನ್ಯವ ನಾಶಗೊಳಿಸಿದ ಸುದ್ದಿಯನ್ನು ಕೇಳಿದ ಕೂಡಲೆ ಲಂಕೆಯಿಂದ ರಾಕ್ಷಸ ಸೈನ್ಯವು ಓಡುತ್ತ ಬಂದಿತು. ಹೀಗೆ ತನ್ನ ಸೈನ್ಯದ ದುರ್ದಸೆಯಾದದ್ದನ್ನೂ, ಅಪಾರ ರಾಕ್ಷಸ ಸೈನ್ಯವು ದುಮುಕಿದ್ದನ್ನೂ ಶ್ರೀರಾಮನು ನೋಡಿ ಸುಗ್ರೀವ ವಿಭೀಷಣಾದಿಗಳಿಗೆ ನಿಮ್ಮ ನಿಮ್ಮ ಸೈನ್ಯಗಳನ್ನು ರಕ್ಷಿಸಿರೆಂದು ಹೇಳಿ ತನ್ನ ಧನುಸ್ಸಿಗೆ ಹೆದೆಏರಿಸಿ ಟಣತ್ಕಾರ ಮಾಡಿದನು. ಅದನ್ನು ಕೇಳಿದ ಕೂಡಲೆ ಶತ್ರುಗಳ ಕಿವಿಗಳು ಗಡಚಿಕ್ಕಿದವು. ಸತ್ಯ ಪ್ರತಿಜ್ಞನಾದ ಶ್ರೀರಾಮನು ಲಕ್ಷಾವಧಿ ಬಾಣಗಳ ಮಳೆಸುರಿಸಿ ಕ್ಷಣದಲ್ಲಿ ರಾಕ್ಷಸ ಸೈನ್ಯವನ್ನು ಸಂಹರಿಸಿದನು. ರಾಮಬಾಣಗಳು ಶತ್ರುಗಳ ಸಂಹಾರಮಾಡಿ ಪುನಃ ಬತ್ತಳಿಕೆಯಲ್ಲಿ ಬಂದು ಸೇರುತ್ತಲಿದ್ದವು. ರಾಕ್ಷಸ ಸೈನ್ಯದ ನಾಶವಾದದ್ದನ್ನು ನೋಡಿ ಕುಂಭಕರ್ಣನು ಶ್ರೀರಾಮನಮೇಲೆ ಧಾವಿಸಿಹೋದನು. ಆಗ ಪೃಥ್ವಿಯು ಕಂಪಿಸತೊಡಗಿ, ಪರ್ವತಗಳು ಅಲ್ಲಾಡತೊಡಗಿದವು. ಕುಂಭಕರ್ಣನು ಒಂದು ಪರ್ವತವನ್ನು ಕಿತ್ತಿ ಬಲಗೈಯಲ್ಲಿ ಹಿಡಕೊಂಡು ಬರುತ್ತಿರಲು, ರಾಮನು ಆ ಕೈಯನ್ನು ಕತ್ತರಿಸಿದನು; ಬಳಿಕ ಆತನು ಎಡಗೈಯಲ್ಲಿ ಪರ್ವತವನ್ನು ಹಿಡಕೊಂಡು ಬರಲು, ಪ್ರಭುವು ಅದನ್ನೂ ಕತ್ತರಿಸಿದನು.

ಎರಡೂ ಕೈಗಳು ಕತ್ತರಿಸಿ ಹೋದದ್ದರಿಂದ ಆ ದುಷ್ಟನು ರೆಕ್ಕೆಯುರಿದ ಮಂದರಪರ್ವತದಂತೆ ತೋರಹತ್ತಿದನು. ಬಳಿಕ ಕುಂಭಕರ್ಣನು ಕ್ರುದ್ಧದೃಷ್ಟಿಗಳಿಂದ ರಾಮ ಚಂದ್ರನನ್ನು ನೋಡುತ್ತ ಚೀತ್ಕಾರಮಾಡಿ ಬಾಯ್ದೆರೆದು ರಾಮನ ಮೇಲೆ ಧಾವಿಸಿದನು. ಆಗ ಆಕಾಶದಲ್ಲಿ ಸಿದ್ಧರೂ ದೇವತೆಗಳೂ ತ್ರಸ್ತರಾಗಿ ಹಾ ಹಾಕಾರವನ್ನು ಮಾಡತೊಡಗಿದರು. ದೇವತೆಗಳು ಭಯಭೀತರಾಗಿರುವದನ್ನು ನೋಡಿ, ಪ್ರಭುವು ಕುಂಭಕರ್ಣನ ಬಾಯಲ್ಲಿ ಅಸಂಖ್ಯ ಬಾಣಗಳನ್ನು ತುಂಬಿದನು. ಆದರೆ ಅದನ್ನು ಲೆಕ್ಕಿಸದೆ ಆತನು ಎದುರಿನಿಂದ ಧಾವಿಸಿ ಬಂದನು. ಆಗ ಶ್ರೀರಾಮನು ಒಂದು ತೀಕ್ಷ್ಣ ಬಾಣದಿಂದ ಆತನ ಶಿರಸ್ಸನ್ನು ಹಾರಿಸಲು, ಅದು ರಾವಣನ ಮುಂದೆ ಹೋಗಿ ಬಿದ್ದು, ಆತನ ಜೀವಜ್ಯೋತಿಯು ಶ್ರೀರಾಮನ ಮುಖದಲ್ಲಿ ಪ್ರವೇಶ ಮಾಡಿತು. ಅತ್ತ ಕುಂಭಕರ್ಣನ ಬರಿಯ ಧಡವೇ ಕಾದುತ್ತಿರಲು, ಶ್ರೀರಾಮನು ಅದನ್ನು ಬಾಣದಿಂದ ಸೀಳಿದನು. ಆ ಹೋಳುಗಳು ನೆಲಕ್ಕೆ ಬೀಳಲು ಎಷ್ಟೋ ಕಪಿಗಳು ಬುಡದಲ್ಲಿ ಸಿಕ್ಕು ಸತ್ತರು. ಅದೇ ಕಾಲದಲ್ಲಿ ನಾರದರು ಬಂದು ಪ್ರಭುವಿಗೆ— "ಬೇಗನೆ ರಾಕ್ಷಸರನ್ನು ಕೊಂದುಬಿಡೆಂ"ದು ಹೇಳಿ ಹೊರಟು ಹೋದರು. ದಿನದಿನಕ್ಕೆ ರಾಮಕೃಪೆಯಿಂದ ಕಪಿ ಸೈನ್ಯದಬಲವು ಹೆಚ್ಚುತ್ತ "ತನ್ನ ಬಾಯಿಂದ ತನ್ನ ಪುಣ್ಯವನ್ನು ಹೇಳಿಕೊಳ್ಳುವದರಿಂದ ಪುಣ್ಯವು ಕ್ಷೀಣವಾಗುವಂತೆ" ರಾಕ್ಷಸರ ಬಲವು ಕ್ಷೀಣವಾಗತೊಡಗಿತು.

ಕುಂಭಕರ್ಣನ ಮರಣದಿಂದ ರಾವಣನು ಅತ್ಯಂತ ದುಃಖಿತನಾಗಿರಲು, ಇಂದ್ರಜಿತುವು ತಂದೆಯ ಬಳಿಗೆ ಬಂದು— ಅಪ್ಪಾ, ಇಂದು ನನ್ನ ಬಾಯಿಂದ ನನ್ನ ಪೌರುಷವನ್ನು ಹೇಳಿಕೊಳ್ಳುವದೇಕೆ? ನನ್ನ ಇಷ್ಟದೇವತೆಯಿಂದ ನನಗೆ ಪ್ರಾಪ್ತವಾಗಿದ್ದ ಬಲ, ಹಾಗು ರಥಅಶ್ವಗಳ ಯೋಗದಿಂದ ನಾಳೆ ನಾನು ತೋರಿಸುವ ಪರಾಕ್ರಮವನ್ನು ನೋಡು. ಎಂದು ಹೇಳುತ್ತಿರಲು, ಬೆಳಗಾಯಿತು. ಪುನಃ ನಾಲ್ಕು ಅಗಸೆಗಳಲ್ಲಿ ವಾನರರು ಮುತ್ತಿರಲು, ಉಭಯಪಕ್ಷದವರಿಗೂ ಭಯಂಕರವಾದ ಯುದ್ಧವು ಉಂಟಾಯಿತು. ಇತ್ತ ಮೇಘನಾದನು ಮಾಯಾರಥವನ್ನು ನಿರ್ಮಾಣಮಾಡಿ ಅದರಲ್ಲಿ ಕುಳಿತು ಆಕಾಶದಲ್ಲಿ ಉಡ್ಡಾಣ ಮಾಡಿದನು. ಆತನು ಅಟ್ಟಹಾಸದಿಂದ ಗರ್ಜನ ಮಾಡಲು, ಕಪಿಸೈನ್ಯವು ತ್ರಸ್ತವಾಯಿತು. ಆತನು ವಿವಿಧ ಶಸ್ತ್ರಾಸ್ತ್ರಗಳ ಮಳೆಸುರಿಸಹತ್ತಿದನು. ವಾನರರು ವೃಕ್ಷ-ಪರ್ವತಗಳನ್ನು ತಕೊಂಡು ಆಕಾಶದಲ್ಲಿ ಉಡ್ಡಾಣಮಾಡತೊಡಗಿದರು; ಆದರೆ ಅವರಿಗೆ ಮೇಘನಾಧನು ಎಲ್ಲಿಯೂ ಕಾಣಲೊಲ್ಲನು, ಆದ್ದರಿಂದ ಅವರು ದುಃಖಿತರಾಗಿ ಹಿಂದಿರುಗಹತ್ತಿದರು. ಮಾರುತಿ–ನಲ–ನೀಲ–ಅಂಗದ ಮೊದಲಾದ ಬಲಾಢ್ಯವೀರರನ್ನು ಮೇಘನಾದನು ಮೂರ್ಛೆಗೊಳಿಸಿ, ಯಾವತ್ತು ವಾನರರನ್ನು ನೆಲಕ್ಕೊರಿಸಿ, ಸುಗ್ರೀವ–ಲಕ್ಷ್ಮಣರ ಮೈಯಲ್ಲಿ ಅಸಂಖ್ಯ ಬಾಣಗಳನ್ನು ನಾಟಿಸಿ, ಶ್ರೀರಾಮನೊಡನೆ ಕಾದತೊಡಗಿದನು. ಆಗ ಸ್ವತಂತ್ರನೂ, ಅನಂತನೂ, ಅದ್ವಿತೀಯನೂ, ನಿರ್ವಿಕಾರನೂ ಆದ ಖರ

ಶ್ರುವು ರಣಶೋಭೆಗಾಗಿ ಸ್ವತಃ ನಾಗಪಾಶದಿಂದ ಬಂಧನಮಾಡಿಸಿಕೊಂಡನು. ಭಗವಂತನ ಆ ದೆಸೆಯನ್ನು ನೋಡಿ ದೇವತೆಗಳು ಬೆದರಿದರು. ಎಲೈ ಪಾರ್ವತೀ, ಯಾವನ ನಾಮಜಪದಿಂದ ನರರು ಭವಪಾಶದಿಂದ ಮುಕ್ತರಾಗುವರೋ, ಅಂಥ ವ್ಯಾಪಕನೂ, ವಿಶ್ವನಿವಾಸನೂ ಆದ ಪ್ರಭುವು ನಿಜವಾಗಿಯೇ ಬದ್ಧನಾಗುವದು ಶಕ್ಯವಿರುವದೋ? ರಾಮಚಂದ್ರನ ಸಗುಣ ಚರಿತ್ರವು ಬುದ್ಧಿ-ಬಲ-ವಾಣಿಗಳಿಗೆ ಅತರ್ಕ್ಯವಾಗಿರುವದೆಂದು ತಿಳಿದು, ವಿರಕ್ತರೂ, ತಜ್ಞರೂ ಆದವರು ಕೃತಕಗಳನ್ನು ಬಿಟ್ಟು ರಾಮನಲ್ಲಿಯೇ ಭಕ್ತಿಯನ್ನಿಡುವರು. ಹೀಗೆ ಮೇಘನಾದನು ವಾನರರೆಲ್ಲರನ್ನೂ ಮೂರ್ಛೆಗೊಳಿಸಿ, ಲಕ್ಷ್ಮಣ-ಸುಗ್ರೀವರನ್ನು ಜರ್ಜರಮಾಡಿ, ಶ್ರೀರಾಮನನ್ನು ನಾಗಪಾಶದಿಂದ ಬಂಧಿಸಿ ಪೃಥ್ವಿಯಲ್ಲಿ ಪ್ರಕಟನಾದನು. ಆಗ ಜಾಂಬುವಂತನು ಮೇಘನಾದನನ್ನು ಕುರಿತು—"ಎಲೇ ದುಷ್ಟಾ, ನಿಲ್ಲು" ಎಂದು ಗದ್ದರಿಸಲು, ಮೇಘನಾದನು—ಎಲೈ ಶಠನೇ, ನೀನು ವೃದ್ಧನೆಂದು ಬಿಟ್ಟಿರಲು, ನೀನಯುದ್ಧಕ್ಕೆ ಕರೆಯುವೆಯಾ? ಎಂದು ಒಂದು ತೀಕ್ಷ್ಣವಾದ ತ್ರಿಶೂಲವನ್ನು ಬಿಟ್ಟನು. ಆಗ ಜಾಂಬುವಂತನು ಆ ತ್ರಿಶೂಲವನ್ನು ಹಾರಿ ಹಿಡಿದು ಅದನ್ನೇ ತಿರುಗಿ ಮೇಘನಾದನ ಎದೆಗೆ ಅವಸರದಿಂದ ಹೊಡೆಯಲು, ಆತನು ಮೂರ್ಛಿತನಾದನು. ಆಗ ಜಾಂಬುವಂತನು ಅವನ ಕಾಲುಗಳನ್ನು ಹಿಡಿದು ಗರಗರ ತಿರುಗಿಸಿ ನೆಲಕ್ಕೆ ಅಪ್ಪಳಿಸಿ ತನ್ನ ಬಲವನ್ನು ಅವನಿಗೆ ತೋರಿಸಿದನು; ಆದರೆ ವರಪ್ರಸಾದದಿಂದ ಮೇಘನಾದನು ಸಾಯದಿರಲು, ಜಾಂಬುವಂತನು ಅವನನ್ನು ಬೀಸಿ ಲಂಕೆಯಲ್ಲಿ ಒಗೆದನು.

ಇತ್ತ, ನಾರದರು ಗರುಡನನ್ನು ಕರೆದುಕೊಂಡು ರಾಮಚಂದ್ರನ ಬಳಿಗೆ ಬಂದರು. ಗರುಡನು ಮಾಯಾನಿರ್ಮಿತವಾದ ಸರ್ಪಗಳನ್ನೆಲ್ಲ ಹಿಡಿಹಿಡಿದು ತಿಂದುಬಿಟ್ಟನು. ಆಗ ವಾನರರೆಲ್ಲರೂ ಮಾಯೆಯಿಂದ ಮುಕ್ತರಾಗಿ ಹರ್ಷಿತರಾದರು. ಅವರು ಕ್ರೋಧಾವೇಶದಿಂದ ರಾಕ್ಷಸರನ್ನು ಸಂಹರಿಸತೊಡಗಲು, ರಾಕ್ಷಸರು ಲಂಕೆಯ ಕೋಟೆಯನ್ನು ಸೇರಿದರು. ಮೇಘನಾದನು ಮೂರ್ಛೆ ತಿಳಿದು ಎದ್ದನು. ಆದರೆ ತಂದೆಯನ್ನು ನೋಡಿ ಆತನು ಬಹಳ ನಾಚಿದನು. ಬಳಿಕ ಆತನು ವಿಜಯ ಯಜ್ಞವನ್ನು ಮಾಡಬೇಕೆಂದು ಯೋಚಿಸಿ ಗಿರಿಕಂದರಗಳ ಹಾದಿಯನ್ನು ಹಿಡಿದನು. ಈ ಸುದ್ದಿಯನ್ನು ವಿಭೀಷಣನು ಶ್ರೀರಾಮನಿಗೆ ತಿಳಿಸಿ, ಈ ಅಪವಿತ್ರ ಯಜ್ಞವು ಸಾಂಗವಾದರೆ ಆ ದುಷ್ಟ ಮಾಯಾವೀ ರಾಕ್ಷಸನು ಅಜೆಂಕ್ಯನಾಗಬಹುದೆಂದು ಹೇಳಿದನು. ಅದನ್ನು ಕೇಳಿ ಶ್ರೀರಾಮನು ಸಮಾಧಾನಪಟ್ಟು ಅಂಗದಾದಿ ಅಸಂಖ್ಯ ವಾನರರೊಡನೆ ಲಕ್ಷ್ಮಣನನ್ನು ಯಜ್ಞವ ನಾಶಗೊಳಿಸುವದಕ್ಕಾಗಿ ಕಳಿಸಿದನು. ಪ್ರಭುವು ಲಕ್ಷ್ಮಣನನ್ನು ಕುರಿತು—ನೀನು ರಣಾಂಗಣದಲ್ಲಿ ಮೇಘನಾದನನ್ನು ಸಂಹರಿಸು. ದೇವತೆಗಳು ಭಯಭೀತರಾದದ್ದನ್ನು ನೋಡಿ ನನಗೆ ಬಹಳ ದುಃಖವಾಗುತ್ತದೆ. ಎಲೈ ಬಂಧುವೇ, ರಾಕ್ಷಸರು ಕ್ಷೀಣಬಲರಾಗುವಂತೆ

ಬಲ, ಬುದ್ಧಿಗಳ ಯೋಜನೆಮಾಡಿ ಮೇಘನಾದನನ್ನು ಕೊಲ್ಲು, ಎಂದು ಹೇಳಿದನು. ಆಗ ರಣರಂಗ-ಧೀರನಾದ ಲಕ್ಷ್ಮಣನು ಧನುರ್ಬಾಣಗಳಿಂದ ಸಜ್ಜಾಗಿ ಪ್ರಭುಪದವನ್ನು ಹೃದಯದಲ್ಲಿ ಸ್ಮರಿಸಿ ಮೇಘ ಗಂಭೀರಧ್ವನಿಯಿಂದ—ನಾನು ಇಂದು ಇಂದ್ರಜಿತುವನ್ನು ಸಂಹರಿಸದಿದ್ದರೆ ಶ್ರೀರಾಮನ ಸೇವಕನೇ ಅಲ್ಲವು ; ನಾನು ಆ ರಘುಪತಿಯ ಪ್ರತಿಜ್ಞೆ ಯನ್ನೇ ಮಾಡಿ ಹೇಳುವೆನೇನೆಂದರೆ, ನೂರಾರು ಜನ ಶಂಕರರು ಮೇಘನಾದನ ಸಹಾಯಕ್ಕೆ ಬಂದರೂ ಮೇಘನಾದನನ್ನು ನಾನು ಇಂದು ಸಂಹರಿಸುವೆನು.

ಹೀಗೆ ನುಡಿದು ಶ್ರೀರಾಮಚಂದ್ರನ ಚರಣಗಳಮೇಲೆ ಮಸ್ತಕವಿಟ್ಟು ಶೇಷಾವತಾರನಾದ ಲಕ್ಷ್ಮಣನು ಕೂಡಲೆ ಕಪಿವೃಂದದೊಡನೆ ಹೊರಟು ವಿಭೀಷಣನನ್ನು ಮುಂದೆ ಮಾಡಿಕೊಂಡು ಮೇಘನಾದನು ಯಜ್ಞಮಾಡುತ್ತಿರುವಲ್ಲಿಗೆ ಹೋದನು. ಆಗ ಮೇಘನಾದನು ರಕ್ತಮಾಂಸದ ಆಹುತಿಗಳನ್ನು ಕೊಡುತ್ತ ಕುಳಿತುಕೊಂಡಿದ್ದನು. ಅದನ್ನು ನೋಡಿ ಯಾವತ್ತು ಕಪಿಗಳು ಯಜ್ಞವಿಧ್ವಂಸಮಾಡಿದರು. ಆದರೂ ಮೇಘನಾದನು ಏಳಲೊಲ್ಲನು. ಆಗ ಕಪಿಗಳು ಅವನ ಜಂಡಿಕೆ ಹಿಡಿದು ಲತ್ತಾಪ್ರಹಾರ ಮಾಡುತ್ತ ಓಡಿಹೋಗತೊಡಗಿದರು. ಆಗ ಮೇಘನಾದನು ತ್ರಿಶೂಲವನ್ನು ತಕ್ಕೊಂಡು ಕಪಿಗಳ ಮೇಲೆ ಧಾವಿಸಲು, ಅವರೆಲ್ಲರು ಲಕ್ಷ್ಮಣನ ಬಳಿಯಲ್ಲಿ ಒಟ್ಟುಗೂಡಿದರು. ಆಗ ಇಂದ್ರಜಿತುವು ಕ್ರುದ್ಧನಾಗಿ ತ್ರಿಶೂಲದಿಂದ ಅಂಗದಾದಿಗಳನ್ನು ಮೂರ್ಛೆಗೊಳಿಸಿ ಲಕ್ಷ್ಮಣನ ಮೇಲೆ ಪ್ರಚಂಡ ಶೂಲವನ್ನು ಪ್ರಯೋಗಿಸಿದನು ; ಆದರೆ ಲಕ್ಷ್ಮಣನು ಅದನ್ನು ಬಾಣಗಳಿಂದ ಎರಡು ತುಂಡಾಗಿ ಕಡಿದನು. ಅಷ್ಟರಲ್ಲಿ ಅಂಗದಾದಿ ಕಪಿಗಳು ಮೂರ್ಛೆತಿಳಿದೆದ್ದು, ಅವರು ಮೇಘನಾದನನ್ನು ತ್ವೇಷದಿಂದ ಹೊಡೆಯತೊಡಗಿದರು. ಆದರೆ ಇಂದ್ರಜಿತುವು ಎಷ್ಟು ಹೊಡೆದರೂ ಸಾಯದಿರುವದನ್ನು ನೋಡಿ ಅವರೆಲ್ಲರು ಹಿಂದಿರುಗಿದರು. ಆಗ ಮೇಘನಾದನು ಗರ್ಜಿಸಿ ಅವರ ಮೇಲೆ ಸಾಗಿಬಂದನು. ಆಗ ಲಕ್ಷ್ಮಣನು ವಜ್ರಕ್ಕೆ ಸಮಾನವಾದ ಅಸಂಖ್ಯ ಬಾಣಗಳನ್ನು ಬಿಡಲು, ಮೇಘನಾದನು ಅದೃಶ್ಯನಾದನು. ಆತನು ಯಾವಾಗ ಕಣ್ಣಿಗೆ ಕಾಣುವನು, ಯಾವಾಗ ಕಣ್ಣಿಗೆ ಕಾಣದಾಗುವನು, ಯಾವಾಗ ಅನೇಕ ರೂಪಗಳನ್ನು ಧರಿಸಿ ಯುದ್ಧಮಾಡತೊಡಗುವನು, ಹೀಗೆ ಶತ್ರುವು ಅಜಿಂಕ್ಯನಾಗಿರುವನೆಂದು ತಿಳಿದು ವಾನರರು ಬೆದರಿದರು. ಲಕ್ಷ್ಮಣನು ಕ್ರೋಧಾವಿಷ್ಟನಾದನು. ತಾನು ಈವರೆಗೆ ಪಾಪಿಯಾದ ಶತ್ರುವನ್ನು ಉಳಿತಾಗಿ ಬಿಡಗೊಟ್ಟೆನೆಂದು ತಿಳಿದು ಇನ್ನು ಈತನನ್ನು ಸಂಹರಿಸಬೇಕೆಂದು ನಿಶ್ಚಯಿಸಿ ಶ್ರೀರಾಮನ ಪ್ರತಾಪವನ್ನು ಹೃದಯದಲ್ಲಿ ಸ್ಮರಿಸಿ ಬಾಣವನ್ನು ಹೂಡಿಬಿಡಲು, ಅದು ಮೇಘನಾದನ ಹೃದಯದಲ್ಲಿ ನಟ್ಟಿತು. ಆಗ ಮಾತ್ರ ಮೇಘನಾದನು ಯಾವತ್ತು ಮಾಯೆಯನ್ನು ತ್ಯಜಿಸಿ—“ರಾಮನೆಲ್ಲಿರುವನು ! ಲಕ್ಷ್ಮಣನು ಎತ್ತ ಹೋದನು,” ಎಂದು ಅನ್ನುತ್ತಾ ಪ್ರಾಣಬಿಟ್ಟನು.

ಆಗ "ಇಂದ್ರಜಿತುವೇ, ನಿನ್ನ ತಾಯಿಯು ಧನ್ಯಳು" ಎಂದು ಅಂಗದ ಹನುಮಂತಾದಿಗಳು ನುಡಿದರು. ಹನುಮಂತನು ಮೇಘನಾದನನ್ನು ಸಹಜವಾಗಿ ಲೀಲೆಯಿಂದ ಎತ್ತಿ ಲಂಕೆಯ ದ್ವಾರದಲ್ಲಿ ಇಟ್ಟು ಹಿಂದಿರುಗಿ ಬಂದನು. ಇಂದ್ರಜಿತುವಿನ ಮರಣವಾರ್ತೆಯನ್ನು ಕೇಳಿ ದೇವಗಂಧರ್ವಾದಿಕರೆಲ್ಲರೂ ವಿಮಾನದಲ್ಲಿ ಕುಳಿತು ಆಕಾಶದಲ್ಲಿ ಒಟ್ಟುಗೂಡಿದರು. ಅವರು ದುಂದುಭಿಗಳನ್ನು ಬಾರಿಸುತ್ತ ಹೂಸುಳಿಗರೆದು ರಘುವರನ ಯಶಸ್ಸಿನ ಗಾಯನ ಮಾಡತೊಡಗಿದರು.

ಮಗನ ಮರಣದ ವರ್ತಮಾನವನ್ನು ಕೇಳಿದಕೂಡಲೆ ರಾವಣನು ಮೂರ್ಛಿತನಾಗಿ ಭೂಮಿಯಮೇಲೆ ಬಿದ್ದನು. ಮಂಡೋದರಿಯು ಹಲವು ಬಗೆಗಳಿಂದ ಮಗನ ಗುಣಗಳನ್ನು ನೆನಿಸಿಕೊಂಡು ಎದೆ ಎದೆ ಬಡಕೊಂಡು ಅಳತೊಡಗಿದಳು. ಲಂಕೆಯೊಳಗಿನ ಯಾವತ್ತು ಪ್ರಜೆಗಳು ದುಃಖಿತರಾಗಿ ರಾವಣನನ್ನು "ಮೂರ್ಖ" ನೆಂದು ತಿರಸ್ಕರಿಸತೊಡಗಿದರು. ಆಗ ರಾವಣನು ಯಾವತ್ತು ಸ್ತ್ರೀಯರನ್ನು ಸಮಾಧಾನಗೊಳಿಸಿ ಅವರನ್ನು ಕುರಿತು—"ಮನಸ್ಸಿನಲ್ಲಿ ವಿಚಾರಮಾಡಿ ನೋಡಿದರೆ ಈ ಯಾವತ್ತು ಜಗತ್ತು ನಶ್ವರರೂಪವಾಗಿರುವದು" ಎಂದು ಜ್ಞಾನೋಪದೇಶವನ್ನು ಮಾಡತೊಡಗಿದನು. ಆದರೆ ತನ್ನ ಮಟ್ಟಿಗೆ ಮಾತ್ರ ಆತನು ಮೂರ್ಖನಾಗಿದ್ದನು. ಬಹಳ ಮಂದಿ ಜನರು ಪರೋಪದೇಶಮಾಡುವದರಲ್ಲಿಯೇ ಪಂಡಿತರಾಗಿರುವರು; ಆದರೆ ತಮ್ಮ ಉಪದೇಶದಂತೆ ತಾವೇ ನಡೆದು ತೋರಿಸುವವರು ಬಹಳ ಅಪರೂಪವು. ಬೆಳಗಾಗಲು ಮತ್ತೆ ಕರಡಿ—ಕಪಿಗಳು ಲಂಕೆಯ ನಾಲ್ಕೂ ಅಗಸಿಗಳಲ್ಲಿ ಮುತ್ತಿದರು. ಆಗ ರಾವಣನು ತನ್ನಲ್ಲಿಯ ಶ್ರೇಷ್ಠವೀರರನ್ನು ಕರೆದು—ಶತ್ರುಗಳ ಮುಂದೆ ನಿಲ್ಲಲು ಅಂಜುವವರೆಲ್ಲ ಈಗಲೇ ಸಂತೋಷದಿಂದ ತಮ್ಮ ಹಾದಿಯನ್ನು ನೋಡಿಕೊಳ್ಳಬೇಕು. ರಣಾಂಗಣದಲ್ಲಿ ನಿಂತು ಹಿಂದಿರುಗುವದರಲ್ಲೇನು ಶೋಭೆಯಿಲ್ಲವು. ನನ್ನ ಸ್ವಂತ ಬಾಹುಬಲದಿಂದಲೇ ನಾನು ಶತ್ರುವಿನೊಡನೆ ದ್ವೇಷವನ್ನು ಹೆಚ್ಚಿಸಿರುವದರಿಂದ, ಈಗ ಶತ್ರುವು ಸಾಗಿ ಬಾದಿರಲು, ನಾನೇ ಎದುರಾಗುವದು ಅವಶ್ಯವಾಗಿರುವದು, ಎಂದು ಹೇಳಿ ವಾಯುವಿನಂತೆ ವೇಗವುಳ್ಳ ತನ್ನ ರಥವನ್ನು ಸಿದ್ಧ ಮಾಡಿದನು. ಎಲ್ಲ ಕಡೆಯಲ್ಲಿ ರಣವಾದ್ಯಗಳು ಬಾರಿಸತೊಡಗಿದವು. ಕಾಡಿಗೆಯ ಪರ್ವತಗಳಂತೆ ರಾಕ್ಷಸರ ಹಿಂಡು ರಾವಣನ ಬೆನ್ನು ಹತ್ತಿತು. ಆಗ ರಾವಣನಿಗೆ ಅಪರಿಮಿತ ಅಪಶಕುನಗಳಾಗತೊಡಗಿದವು; ಆದರೆ ಆತನು ತನ್ನ ಬಾಹುಬಲದ ಪ್ರಚಂಡವಾದ ಅಹಂಕಾರದಲ್ಲಿ ಅವನ್ನು ಲೆಕ್ಕಿಸಲಿಲ್ಲವು. ಹಿಂಸಾಪರಾಯಣರೂ, ಕಾಮಲಂಪಟರೂ, ಮೋಹಗ್ರಸ್ತರೂ, ರಾಮವಿಮುಖರೂ ಆದವರ ಪಾಲಿಗೆ ಶುಭಶಕುನಗಳ ವೈಭವವು ಬರಬಹುದೇ! ಅವರ ಚಿತ್ತಕ್ಕೆ ಶಾಂತಿಯಾದರೂ ಉಂಟಾಗಬಹುದೇ? ರಾವಣನ ಸೈನ್ಯವು ಚತುರಂಗಗಳಿಂದ ಒಪ್ಪುತ್ತಿದ್ದು, ವಿವಿಧ ಬಣ್ಣದ ನಿಶಾನೆಗಳಿಂದ ಅಲಂಕೃತವಾಗಿತ್ತು. ರಾವಣನ ಸೈನ್ಯ

ಪ್ರಚಂಡಸೇನೆಯು ಸಾಗಿರುವಾಗ ಅದರ ಭಾರಕ್ಕೆ ದಿಗ್ಗಜಗಳು ತೂಗಾಡಹತ್ತಿದವು; ಸಾಗರವು ಕ್ಷುಬ್ಧವಾಯಿತು; ಪರ್ವತಗಳು ಅಲ್ಲಾಡಹತ್ತಿದವು; ಧೂಳಿಯು ಸೂರ್ಯನನ್ನು ಮುಸುಕಿತು; ವಾಯುವು ಸ್ತಂಭಿತವಾಗಿ ಪೃಥ್ವಿಯು ವ್ಯಾಕುಲಿತವಾಯಿತು; ಪ್ರಳಯಕಾಲದ ಮೇಘಗರ್ಜನೆಯಂತೆ ವಿವಿಧವಾದ್ಯಗಳು ಭೋರ್ಗರೆಯತೊಡಗಿದವು; ಆಯಾವತ್ತು ವೀರರು ಸಿಂಹನಾದಮಾಡಿ ತಮ್ಮತಮ್ಮ ಬಲಪೌರುಷಗಳನ್ನು ಗರ್ಜಿಸತೊಡಗಿದರು. ಆಗ ರಾವಣನು—ಎಲೈ ವೀರರೇ, ನೀವು ಋಕ್ಷ-ವಾನರರಸಮುದಾಯಗಳನ್ನು ಸಂಹರಿಸಿರಿ; ನಾನು ಉಭಯ ರಾಜಕುಮಾರರನ್ನು ಕೊಲ್ಲುವೆನು, ಎಂದು ಹೇಳಿ ಆ ರಾಕ್ಷಸಾಧಿಪತಿಯು ಶ್ರೀ ರಾಮನಿಗೆ ಅಭಿಮುಖವಾಗಿ ರಥವನ್ನು ಸಾಗಿಸಿದನು.

ಈ ಸುದ್ದಿಯು ಕಪಿಗಳಿಗೆ ಗೊತ್ತಾದಕೂಡಲೆ ಅವರು ರಘುವೀರನ ಆಣೆ ಮಾಡಿ ಧಾವಿಸತೊಡಗಿದರು. ಆ ಪರ್ವತಪ್ರಾಯರಾದ ವಾನರರಿಗೆ ಉಗುರುಗಳು, ಹಲ್ಲುಗಳು, ಪರ್ವತಗಳು, ವಿಶಾಲವೃಕ್ಷಗಳು ಇವೇ ಆಯುಧಗಳಾಗಿದ್ದವು. ಅವರು ಬಲಿಷ್ಠರಿದ್ದು ನಿಶ್ಶಂಕರಾಗಿದ್ದರು. ಅವರು ರಾಮನ ಪುಣ್ಯಪಾವನ ಯಶಸ್ಸನ್ನು ವರ್ಣಿಸುತ್ತ ಆತನ ನಾಮದ ಜಯಘೋಷಮಾಡುತ್ತಿದ್ದರು. ಉಭಯ ಪಂಗಡದವೀರರು ತಮ್ಮ ಸರಿಜೋಡಿಯ ಉದ್ಧರಿಗಳನ್ನು ನೋಡಿಕೊಂಡು ತಮ್ಮತಮ್ಮ ಒಡೆಯರ ಕೀರ್ತಿಯನ್ನು ಹೊಗಳುತ್ತ ಪರಸ್ಪರ ಕಾದತೊಡಗಿದರು. ರಾವಣನು ರಥಾರೂಢನಾಗಿದ್ದು, ಶ್ರೀ ರಾಮನು ಪಾದಚಾರಿಯಾಗಿರುವದನ್ನು ನೋಡಿ ವಿಭೀಷಣನು ಚಿಂತಿಸತೊಡಗಿದನು. ಶ್ರೀ ರಾಮನಮೇಲಿನ ಪ್ರೇಮಾಧಿಕ್ಯದಿಂದ ಆತನ ಹೃದಯದಲ್ಲಿ ಸಂದೇಹವು ಉತ್ಪನ್ನವಾಗಲು, ಆತನು ಪ್ರೇಮದಿಂದ ಪ್ರಭುವಿನ ಚರಣಗಳಿಗೆರಗಿ—ಎಲೈ ನಾಥನೇ, ನಿನಗೆ ಕುಳಿತುಕೊಳ್ಳಲಿಕ್ಕೆ ರಥವಿಲ್ಲ, ಕಾಲುಗಳಲ್ಲಿ ಪಾದರಕ್ಷೆಗಳಿಲ್ಲ. ಅಂದಬಳಿಕ ಈ ಬಲಾಢ್ಯವೀರರನ್ನು ಹೇಗೆ ಜಯಿಸುವೆ, ಅನ್ನಲು, ಅದನ್ನು ಕೇಳಿ ಕೃಪಾಸಾಗರ ರಘುವೀರನು—ಮಿತ್ರಾ, ಕೇಳು. ಜಯಪ್ರಾಪ್ತಿಯಾಗುವ ರಥವು ಬೇರೆಯೇ ಇರುವದು. ಶೌರ್ಯ-ಧೈರ್ಯಗಳು ಆ ರಥದ ಚಕ್ರಗಳಾಗಿದ್ದು, ಸತ್ಯ-ಶೀಲಗಳು ಅದರಮೇಲಿನ ಅಭೇದ್ಯ ಧ್ವಜಪತಾಕೆಗಳಾಗಿರುವವು. ಬಲ-ವಿವೇಕ-ದಮ-ಪರೋಪಕಾರ ಎಂಬ ನಾಲ್ಕು ಅಶ್ವಗಳು ಕ್ಷಮಾ-ದಯಾ-ಸಮತೆಗಳೆಂಬ ಹಗ್ಗಗಳಿಂದ ಆ ರಥಕ್ಕೆ ಹೂಡಿರುವವು. ಪರಮೇಶ್ವರ ಭಕ್ತಿಯು ಆ ರಥದಮೇಲಿನ ಕುಶಲಸಾರಥಿಯಾಗಿದ್ದು, ವೈರಾಗ್ಯವು ಢಾಲು ಆಗಿರುವದು. ಆ ರಥದಲ್ಲಿ ಸಂತೋಷವೇ ಖಡ್ಗವು, ದಾನವೇ ಕೊಡಲಿಯು, ಬುದ್ಧಿಯೇ ಪ್ರಚಂಡ ಶಕ್ತಿಯು, ಶ್ರೇಷ್ಠವಿಜ್ಞಾನವೇ ಕಠಿಣ ಧನುಷ್ಯವು, ನಿಶ್ಚಲವೂ-ನಿರ್ಮಲವೂ ಆದ ಮನಸ್ಸೇಬತ್ತಳಿಕೆಯು, ಸಂಯಮ-ನಿಯಮಗಳೇ ನಾನಾಪ್ರಕಾರದ ಬಾಣಗಳಾಗಿರುವವು. ವಿಪ್ರ-ಗುರುಪೂಜೆಯೇ ಅಭೇದ್ಯ ಕವಚವಾಗಿದ್ದು, ಜಯಪ್ರಾಪ್ತವಾಗಲಿಕ್ಕೆ ಇದರಂಥ ಅನ್ಯೋಪಾಯವಿಲ್ಲವು. ಎಲೈ ಮಿತ್ರನೇ, ಇಂಥ

ಧರ್ಮರೂಪ ರಥವುಳ್ಳವನನ್ನು ಜಯಿಸುವ ಶತ್ರುವು ಎಲ್ಲಿಯೂ ಇಲ್ಲವು. ಇಂಥ ಸು ದೃಢವಾದ ರಥವುಳ್ಳವನೇ ನಿಜವಾದ ವೀರನು. ಅವನು ಮಹಾದುರ್ಧರ್ಷವಾದ ಈ ಸಂಸಾರರೂಪ ಶತ್ರುವನ್ನು ಗೆಲ್ಲಲು ಸಮರ್ಥನಾಗುವನು; ಆದದ್ದರಿಂದ ಮಿತ್ರಾ, ಇದನ್ನು ರಿತು ಸ್ವಸ್ಥಚಿತ್ತನಾಗಿರು.

ಪ್ರಭುವಿನ ಈ ಭಾಷಣವನ್ನು ಕೇಳಿ ವಿಭೀಷಣನು ಹರ್ಷಿತನಾಗಿ ಆತನ ಚರಣ ಗಳಿಗೆ ಸಾಷ್ಟಾಂಗವಾಗಿ ಎರಗಿ, ಸುಖ ನಿಧಾನನಾದ ರಾಮಚಂದ್ರನು ಈ ನೆವದಿಂದ ನನಗೆ ಜ್ಞಾನೋಪದೇಶವನ್ನೇ ಮಾಡಿದನೆಂದು ತಿಳಿದನು. ಅತ್ತ ರಾವಣನೂ, ಇತ್ತ ಹನುಮಂತನೂ ತವ ತಮ್ಮ ಸೈನಿಕರನ್ನು ಪ್ರೋತ್ಸಾಹಿಸಲು, ಉಭಯ ಪಕ್ಷದ ವೀರರೂ ತಮ್ಮ ತಮ್ಮ ಪ್ರಭುವಿನ ಆಣೆಯನ್ನಿಟ್ಟುಕೊಂಡು ಕಾದತೊಡಗಿದರು. ಬ್ರಹ್ಮಾದಿ ದೇವತೆಗಳೂ, ಸಿದ್ಧ-ಮುನಿ ಮೊದಲಾದವರೂ ವಿಮಾನಗಳಲ್ಲಿ ಕುಳಿತು ಆಕಾಶದಲ್ಲಿ ಆ ಯುದ್ಧಪ್ರಸಂಗವನ್ನು ನೋಡತೊಡಗಿದರು. ಎಲೈ ಪಾರ್ವತಿಯೇ, ಆ ಮಂಡಲಿಯಲ್ಲಿ ನಾನೂ ರಣರಂಗರೂಪವಾದ ರಾಮಲೀಲೆಯನ್ನು ನೋಡುತ್ತಿದ್ದೆನು. ಎರಡೂ ಕಡೆಯ ವೀರರೂ ವೀರಶ್ರೀಯಿಂದ ಮೈಮರೆತು ಕಾದುತ್ತಿದ್ದರು; ಆದರೆ ವಾನರರಿಗೆ ಶ್ರೀ ರಾಮನ ಆಶ್ರಯವಿದ್ದದ್ದರಿಂದ ಅವರು ಯಶಸ್ವಿಗಳಾಗುತ್ತಲಿದ್ದರು. ವಾನರರ ಉಪಟಳ ದಿಂದ ರಾಕ್ಷಸಸೈನ್ಯವು ಕ್ಷೀಣವಾಗತೊಡಗಿತು. ತನ್ನ ಸೈನ್ಯದ ಈ ಅವನತಿಯನ್ನು ನೋಡಿ ರಾವಣನು ತನ್ನ ಇಪ್ಪತ್ತು ಕೈಗಳಲ್ಲಿ ಹತ್ತು ಧನುಸ್ಸುಗಳನ್ನು ತಕ್ಕೊಂಡು ರಥದಲ್ಲಿ ಕುಳಿತು ಒಳ್ಳೇ ಆಧ್ಯತೆಯಿಂದ—“ಹಿಂದಿರುಗಿರಿ, ಹಿಂದಿರುಗಿರಿ” ಎಂದು ತನ್ನ ಸೈನಿಕರಿಗೆ ಅಪ್ಪಣೆ ಮಾಡತೊಡಗಿದನು. ಆತನು ಅತ್ಯಂತ ಕ್ರುದ್ಧನಾಗಿ ಧಾವಿಸಿ ಬರಲು, ವಾನರ ವೀರರು “ಹಾ ಹಾ” ಅನ್ನುತ್ತ ಆತನ ಹತ್ತರ ಬಂದು ವೃಕ್ಷ, ಶಿಲೆ, ಪರ್ವತಗಳನ್ನು ಅವನ ಮೇಲೆ ಒಮ್ಮೆಲೆ ಸುರಿಸಲು, ಆ ಪರ್ವತ-ಶಿಲೆಗಳು ರಾವಣನ ವಜ್ರ ದೇಹಕ್ಕೆ ತಗಲಿ ಪುಡಿಪುಡಿಯಾಗುತ್ತಿದ್ದವು. ಆ ರಾಕ್ಷಸವೀರನು ತನ್ನ ಮಹಾರಥವನ್ನು ಸ್ಥಿರಗೊ ಳಿಸಿ, ಸ್ವತಃ ನಿಶ್ಚಲನಾಗಿ ಸಿಟ್ಟಿನಿಂದ ಕಪಿವೀರರನ್ನು ಹಿಚಿಕಿ ಒಗೆಯಹತ್ತಿದನು. ಆತನ ಕ್ರೋಧವು ಅನಾವರವಾದದ್ದರಿಂದ ಆತನು ಭಯಂಕರರಣವ್ಯಾಪಾರವನ್ನು ನಡಿಸಿದನು. ಆಗ ಅಸಂಖ್ಯ ಋಕ್ಷ-ವಾನರರು ಓಡುತ್ತ—ಎಲೈ ಅಂಗದ-ಹನುಮಂತರೇ, ನಮ್ಮ ಪ್ರಾಣಗಳನ್ನು ಬದುಕಿಸಿರಿ, ಎಲೈ ರಘುವೀರ ಸ್ವಾಮಿನ್, ಈ ದುರಾತ್ಮನು ನಮ್ಮನ್ನು ಯಮನಂತೆ ತಿನ್ನುವನು, ಇದರೊಳಗಿಂದ ನಮ್ಮನ್ನು ಉಳಿಸಿಕೊಳ್ಳು. ಎಂದು ಕೂಗುತ್ತಿ ದ್ದರು. ರಾವಣನ ಬಾಣಗಳು ಭೂವ್ಯೋಮಾಕಾಶಗಳನ್ನು ತುಂಬಿಬಿಟ್ಟದ್ದರಿಂದ ವಾನರರಿಗೆ ಓಡಿಹೋಗಲಿಕ್ಕೆ ಸ್ಥಳವೇ ಉಳಿಯಲಿಲ್ಲ. ಆಗ ಭಯಂಕರವಾದ ಹಾ ಹಾ ಕಾರವುಂಟಾ ಯಿತು. ವಾನರರು ಕೂಗಿ ಕೂಗಿ ಮೊರೆಯಿಡತೊಡಗಿದರು. ಆಗ ಲಕ್ಷ್ಮಣನು ರಾವಣನಿಗೆ ಎದುರಾಗಲು, ರಾವಣನು—ಎಲೈ ನನ್ನ ಮಗನನ್ನು ಕೊಂದ ದುಷ್ಟನೇ,

ತನ್ನನ್ನೇ ನಾನು ಹುಡುಕುತ್ತಿದ್ದೆನು, ಎಂದು ಹೇಳಿ ಲಕ್ಷ್ಮಣನಮೇಲೆ ಅಸಂಖ್ಯ ಬಾಣಗಳನ್ನು ಬಿಟ್ಟನು. ಅವನ್ನೆಲ್ಲ ಲಕ್ಷ್ಮಣನು ಖಂಡಿಸಿ ರಾವಣನನ್ನು ಬಾಣಗಳ ಪೆಟ್ಟಿನಿಂದ ಜರ್ಜರ ಮಾಡಿದನು. ಆಗ ರಾವಣನು ಕ್ರೋಧಾವಿಷ್ಟನಾಗಿ ಬ್ರಹ್ಮನು ಕೊಟ್ಟಿರುವ ಶಕ್ತಿಯನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸಲು, ಲಕ್ಷ್ಮಣನು ಮೂರ್ಛಿತನಾದನು. ಆತನನ್ನು ಎತ್ತಿಕೊಂಡು ಹೋಗುವದಕ್ಕಾಗಿ ರಾವಣನು ಎಷ್ಟು ಪ್ರಯತ್ನ ಮಾಡಿದರೂ ಆತನು ಎತ್ತಲಿಲ್ಲ. ಆಗ ಹನುಮಂತನು ರಾವಣನಿಗೆ ಕಠೋರ ಶಬ್ದಗಳನ್ನಾಡುತ್ತಬರಲು, ರಾವಣನು ಆತನನ್ನು ಕಸುವಿನಿಂದ ಗುದ್ದಿದನು. ಆಗ ಹನುಮಂತನು ಭೂಮಿಗೆ ಬೀಳದೆ ಜೋಲಿಯನ್ನು ಹಿಡಿದು ನಿಂತು, ತಿರುಗಿ ರಾವಣನನ್ನು ಗುದ್ದಲು, ಆತನು ಮೂರ್ಛಿತನಾದನು. ರಾವಣನು ಮೂರ್ಛೆ ತಿಳಿದೆದ್ದು, ಹನುಮಂತನ ಶಕ್ತಿಪ್ರಭಾವವನ್ನು ವರ್ಣಿಸಲು, ಹನುಮಂತನು—ಎಲೈ ಸುರದ್ವೇಷಿಯೇ, ನೀನು ಬದುಕಿ ಎದ್ದಬಳಿಕ ನನ್ನ ಪೌರುಷಕ್ಕೆ ಧಿಕ್ಕಾರವೇ ಸರಿ. ಎಂದು ಹೇಳಿ ಲಕ್ಷ್ಮಣನನ್ನು ಎತ್ತಿಕೊಂಡು ರಾಮನ ಬಳಿಗೆ ಹೋದನು. ಆಗ ಶ್ರೀ ರಾಮನು ಮೂರ್ಛಿತನಾದ ಲಕ್ಷ್ಮಣನನ್ನು ಕುರಿತು—ಎಲೈ ಬಂಧುವೇ, ನೀನು ಕಾಲಭಕ್ಷಕನೂ, ಸುರರಕ್ಷಕನೂ ಆಗಿರುವೆಯೆಂಬದನ್ನು ಲಕ್ಷದಲ್ಲಿಡು, ಎಂದು ಅನ್ನಲು ದಯಾಘನನ ಆ ಮಾತುಗಳನ್ನು ಕೇಳಿದಕೂಡಲೆ ಲಕ್ಷ್ಮಣನು ಎದ್ದು ಕುಳಿತನು. ಆ ರಾವಣಶಕ್ತಿಯು ಬ್ರಹ್ಮಲೋಕವನ್ನು ಕುರಿತು ತೆರಳಿತು. ಲಕ್ಷ್ಮಣನು ಪುನಃ ಧನುಸ್ಸನ್ನು ಧರಿಸಿ ರಾವಣನೊಡನೆ ಭಯಂಕರವಾಗಿ ಕಾದಿದನು. ಆ ರಾಕ್ಷಸರಾಜನ ರಥವು ಪುಡಿಪುಡಿಯಾಯಿತು. ಸಾರಥಿಯು ಮಡಿದನು. ಲಕ್ಷ್ಮಣನು ನೂರುಸ್ವಿಬಾಣಗಳಿಂದ ರಾವಣನ ಎದೆಗೆ ಹೊಡೆಯಲು, ಅವನು ಮೂರ್ಛಿತನಾದನು. ಆಗ ಮಹಾಪರಾಕ್ರಮಿಯಾದ ರಘುವೀರಬಂಧುವು ಹಿಂದಿರುಗಿ ರಾಮಚರಣಗಳಿಗೆರಗಿದನು.

ಅತ್ತ ರಾವಣನು ಮೂರ್ಛೆ ತಿಳಿದೆದ್ದಬಳಿಕ ವಿಜಯೇಚ್ಛೆಯಿಂದ ಒಂದು ಯಜ್ಞವನ್ನು ಆರಂಭಿಸಲು, ಇತ್ತ ವಿಭೀಷಣನು ಆ ಸುದ್ದಿಯನ್ನು ಶ್ರೀರಾಮನಿಗೆ ಹೇಳಿ, ಆತನ ಅನುಮತಿಯಿಂದ ಅಂಗದಾದಿಪ್ರಮುಖವಾನರರನ್ನು ಯಜ್ಞನಾಶಕ್ಕಾಗಿ ಕಳಿಸಿದನು. ಅವರು ಲಂಕೆಗೆ ಹೋಗಿ ಯಜ್ಞಶಾಲೆಯಲ್ಲಿರುವ ರಾವಣನನ್ನು ಹಣಿದು ಯಜ್ಞಧ್ವಂಸಮಾಡಲು, ರಾವಣನು ಬೇವದಲಿಕೆಯನ್ನು ಬಿಟ್ಟು ಯುದ್ಧಕ್ಕೆ ಹೊರಟನು. ಆಗ ಹದ್ದು ಹಾರಿ ಅವನ ತಲೆಯ ಮೇಲೆ ಕುಳಿತುಕೊಂಡಿತು; ಆದರೆ ಕಾಲವಶನಾದ ಆತನು ಯಾವದನ್ನೂ ಲೆಕ್ಕಿಸದೆ ರಣವಾದ್ಯಗಳ ರಭಸದೊಡನೆ ರಣಭೂಮಿಗೆ ಬಂದನು. ಆಗ ದೇವತೆಗಳು ಶ್ರೀ ರಾಮನನ್ನು ಕುರಿತು—ಈ ರಾವಣನು ನಮ್ಮನ್ನು ಬಹಳವಾಗಿ ಪೀಡಿಸಿರುವನು; ಆದ್ದರಿಂದ ಪ್ರಭೋ, ಈತನೊಡನೆ ಆಸುತ್ತ ಕುಳಿತುಕೊಳ್ಳದೆ ಬೇಗನೆ ಸಂಹರಿಸು. ಜಾನಕಿಯು ಅತ್ಯಂತ ದುಃಖಿತಳಾಗಿರುವಳು, ಎಂದು ಪ್ರಾರ್ಥಿಸಲು, ಪ್ರಭುವು

ನಕ್ಕು ಧನುರ್ಬಾಣಗಳನ್ನು ಧರಿಸಲು, ಬ್ರಹ್ಮಾಂಡವು, ದಿಗ್ಗಜಗಳು, ಕೂರ್ಮನು, ಶೇಷನು, ಪೃಥ್ವಿಯು, ಸಾಗರವು, ಪರ್ವತಗಳು ತತ್ತರಿಸತೊಡಗಿದವು. ದೇವತೆಗಳು ಆನಂದದಿಂದ ಹೂವಿನಮಳೆಗರೆಯುತೊಡಗಿದರು. ಆಗ ರಣಾಂಗಣದಲ್ಲಾದ ಘೋರಹಿಂಸೆಯನ್ನು ವರ್ಣಿಸುವದು ಶಕ್ಯವಲ್ಲ. ರಕ್ತದ ಪ್ರವಾಹಗಳು ಹರಿದವು. ರುಂಡ-ಮುಂಡಗಳು ಹಾರಾಡಿದವು, ಭೂತ-ಪ್ರೇತ-ಶಾಕಿನೀ-ಡಾಕಿನಿಗಳು ಕುಣಿದಾಡಿದವು. ಹದ್ದು ಕಾಗೆಗಳು ಹಾರಾಡಿದವು, ನರಿ-ನಾಯಿಗಳು ಕೂಗಾಡಿದವು; ಹೀಗೆ ನೋಡಿದತ್ತೆಲ್ಲ ರಣಭೂಮಿಯು ಅತ್ಯಂತ ಭಯಪ್ರದವೂ, ದುರ್ಗಮವೂ ಆಗಿ ರಾಕ್ಷಸಸಂಹಾರವು ಅಪರಿಮಿತವಾಗಿ ಆಯಿತು. ವಾನರರೂ ಮಡಿದರು. ಆಗ ರಾವಣನು ಮನಸ್ಸಿನಲ್ಲಿ—ಎಲ್ಲ ರಾಕ್ಷಸರು ಮಡಿದಂತಾಗಿ ನಾನು ಒಬ್ಬನೇ ಉಳಿದೆನು ಕಪಿಗಳು, ಕರಡಿಗಳು, ಬಹಳ ಇರುವವು; ಆದ್ದರಿಂದ ಇನ್ನು ಅಪಾರವಾದ ಮಾಯೆಯಿಂದಲೇ ಯುದ್ಧ ಮಾಡತಕ್ಕದ್ದು, ಎಂದು ಯೋಚಿಸಿ ತನ್ನ ಮಾಯಾ ಜಾಲವ ಒಡ್ಡುವದನ್ನು ನಿಶ್ಚಯಿಸಿದನು. ಇತ್ತ ಪ್ರಭುವು ರಥವಿಲ್ಲದೆ ಕಾಲನಡಿಗೆಯಿಂದಲೇ ಕಾದುವದನ್ನು ನೋಡಿ ಇಂದ್ರನು ತನ್ನ ಸಾರಥಿಯಾದ ಮಾತಲಿಯೊಡನೆ ತನ್ನ ರಥವನ್ನು ಕಳಿಸಿದನು. ಆ ಅಪ್ರತಿಮವಾದ ತೇಜಃಪುಂಜ ರಥವನ್ನು ಶ್ರೀ ರಾಮನು ಆನಂದದಿಂದ ಹತ್ತಿದನು. ರಘುವೀರನು ರಥಾರೂಢನಾದದ್ದನ್ನು ನೋಡಿ ವಾನರರ ಬಲವು ಹೆಚ್ಚಿತು. ಅವರ ಹೊಡತವನ್ನು ತಡೆಯಲಾರದೆ ರಾವಣನು ತನ್ನ ರಾಕ್ಷಸೀ ಮಾಯೆಯನ್ನು ವಿಸ್ತರಿಸತೊಡಗಿದನು. ಆ ಮಾಯೆಯು ಶ್ರೀರಾಮನ ಹೊರತು ಎಲ್ಲರಿಗೂ ನಿಜವಾಗಿ ತೋರಿತು. ಕಪಿಗಳಿಗೆ ರಾಕ್ಷಸಸೈನ್ಯದಲ್ಲಿ ಹಲವುಜನ ಲಕ್ಷ್ಮಣರೊಡನೆ ಹಲವುಜನ ರಾಮರು ತೋರತೊಡಗಿದರು. ಇದನ್ನುನೋಡಿ ಲಕ್ಷ್ಮಣನಿಂದ ಸಹಿತರಾಗಿ ಯಾವತ್ತು ವಾನರರು ಮುಂದು ಗಾಣದೆ ಚಿತ್ರದ ಗೊಂಬೆಗಳಂತೆ ನಿಂತುಬಿಟ್ಟರು. ಹೀಗೆ ತನ್ನವರು ವಿಸ್ಮಯಗೊಂಡದ್ದನ್ನು ನೋಡಿ ಶ್ರೀ ರಾಮನು ನಕ್ಕು ಧನುಸ್ಸಿಗೆ ಬಾಣವನ್ನು ಹೂಡಿ, ಕ್ಷಣಮಾತ್ರದಲ್ಲಿ ಮಾಯೆಯನ್ನು ನಷ್ಟಪಡಿಸಲು, ಎಲ್ಲವಾನರ ಸೈನ್ಯಕ್ಕೆ ಆನಂದವಾಯಿತು.

ಶ್ರೀರಾಮನು ತನ್ನವರೆಲ್ಲರ ಕಡೆಗೆ ನೋಡಿ ಗಂಭೀರವಾಣಿಯಿಂದ—ವೀರರೇ ನೀವು ಬಹಳ ದಣಿದಿರುವಿರಿ. ಇನ್ನು ಎಲ್ಲರೂ ನಮ್ಮ ದ್ವಂದ್ವಯುದ್ಧವನ್ನು ನೋಡುತ್ತ ನಿಂತುಕೊಳ್ಳಿರಿ, ಎಂದು ಹೇಳಿ ರಥವನ್ನು ಮುಂದಕ್ಕೆ ನೂಕಿದನು. ಆಗ ರಾವಣನು ಕ್ರೋಧದಿಂದ ಗರ್ಜಿಸುತ್ತ, ಉಡ್ಡಾಣಮಾಡುತ್ತ ಎದುರಿಗೆ ಬಂದು—ಎಲೈ ತಾಪಸಿಯೆ, ಈವರೆಗೆ ನೀನು ಕೊಂದವೀರರಂತೆ ನನ್ನನ್ನು ತಿಳಿಯಬೇಡ. ಈಗ ಪರಾಕ್ರಮಿಯಾದ ರಾವಣನದವಡೆಯಲ್ಲಿ ನೀನು ಸಿಕ್ಕಿರುತ್ತೀ. ನೀನು ಸಮರಭೂಮಿಯಿಂದ ಓಡಿಹೋಗದಿದ್ದರೆ, ಈವರೆಗೆ ನೀನು ಸಂಹರಿಸಿರುವ ರಾಕ್ಷಸವೀರರ ಸೇಡನ್ನೆಲ್ಲ ನಾನು ತೀರಿಸಿಕೊಳ್ಳುವೆನು, ಅನ್ನಲು, ಶ್ರೀರಾಮನು—ಸತ್ಯವು, ನೀನು ಅಂಥ ಪರಾಕ್ರಮಿಯೇಸರಿ; ಆದರೆ ವ್ಯರ್ಥವಾ

ತುಬಳಿಸದೆ ನಿನ್ನ ಪುರುಷಾರ್ಥವನ್ನು ಒಮ್ಮೆ ತೋರಿಸಿಬಿಡು. ವ್ಯರ್ಥ ಮಾತುಗಳನ್ನಾಡಿ ನಿನ್ನ ಸದ್ಯಶವನ್ನು ಕಳೆದುಕೊಳ್ಳಬೇಡ, ಸಹನಶೀಲನಾಗು. ಈ ಜಗತ್ತಿನಲ್ಲಿ ಮೂರು ಪ್ರಕಾರದ ಜನರಿರುವರು. ಮೊದಲನೆಯ ಪ್ರಕಾರದವರು ಗುಲಾಬಿಯ ಗಿಡದಂತೆ, ಎರಡನೆಯ ಪ್ರಕಾರದವರು, ಮಾವಿನಗಿಡದಂತೆ, ಮೂರನೆಯ ಪ್ರಕಾರದವರು ಹಲಸಿನಗಿಡದಂತೆ ಇರುವರು; ಯಾಕಂದರೆ ಗುಲಾಬಿಯ ಗಿಡಗಳಿಗೆ ಬರಿಯ ಹೂವು ಬಿಡುವಂತೆ ಮೊದಲನೆಯ ಪ್ರಕಾರದ ಜನರು ಬರಿಯ ಮಾತುಗಳನ್ನೇ ಆಡುವರು, ಕೆಲಸಮಾಡುವದಿಲ್ಲ. ಎರಡನೆಯ ಪ್ರಕಾರದವರು ಮಾವಿನಗಿಡವು ಹೂಕಾಯಿಗಳನ್ನು ಬಿಡುವಂತೆ ಮಾತಾಡಿ ಕೆಲಸವನ್ನೂ ಮಾಡುವರು; ಮೂರನೆಯ ಪ್ರಕಾರದವರು ಬಾಯಿಂದ ಒಂದು ಅಕ್ಷರವನ್ನೂ ನುಡಿಯದೆ, ಹಲಸು ಬರಿಯ ಕಾಯಿಗಳನ್ನೇ ಬಿಡುವಂತೆ ಕೆಲಸವನ್ನು ಮಾತ್ರ ಮಾಡಿ ತೋರಿಸುವರು, ಎಂದು ಹೇಳಲು, ರಾವಣನು ನಕ್ಕು—ಈಗ ನನಗೆ ಜ್ಞಾನೋಪದೇಶಮಾಡಬಂದೆಯಾ? ಮೊದಲು ನನ್ನೊಡನೆ ದ್ವೇಷಬಳಿಸಲಿಕ್ಕೆ ಮಾತ್ರ ನಿನಗೆ ಅಂಜಿಕೆ ಬರಲಿಲ್ಲ, ಈಗ ಮಾತ್ರ ನಿನಗೆ ನಿನ್ನ ಪ್ರಾಣಗಳು ಪ್ರಿಯವಾಗಿ ತೋರುತ್ತಿವೆಯೋ? ಎಂದು ಕಠೋರನುಡಿಗಳನ್ನು ನುಡಿದು, ವಜ್ರಕ್ಕೆ ಸಮಾನವಾದ ಬಾಣಗಳಿಂದ ದಶದಿಕ್ಕುಗಳನ್ನು ತುಂಬಿಬಿಟ್ಟನು; ಆದರೆ ಆ ಬಾಣಗಳನ್ನೆಲ್ಲ ಪ್ರಭುವು ಒಂದೇ ಬಾಣದಿಂದ ನಿವಾರಿಸಿದನು. ರಾವಣನು ಸಿಟ್ಟಿಗೆದ್ದು ತೀವ್ರಶಕ್ತಿಯನ್ನು ರಾಮನಮೇಲೆ ಪ್ರಯೋಗಿಸಲು, ಪ್ರಭುವು ತನ್ನ ಬಾಣಗಳೊಡನೆ ಅದನ್ನು ತಿರುಗಿ ರಾವಣನ ಕಡೆಗೆ ಕಳಿಸಿದನು. ಬಳಿಕ ರಾವಣನು ಕ್ರುದ್ಧನಾಗಿ ನೂರುಬಾಣಗಳನ್ನು ಮಾತಲಿಯಮೇಲೆ ಬಿಡಲು, ಆತನು "ಜಯರಾಮ" ಎಂದು ನುಡಿದು ಪೃಥ್ವಿಯಮೇಲೆ ಬಿದ್ದನು. ರಾಮನು ಕೃಪೆಮಾಡಿ ಆತನನ್ನು ಎಬ್ಬಿಸಿದನು. ಈಗ ಮಾತ್ರ ಪ್ರಭುವು ಅತ್ಯಂತ ಕ್ರುದ್ಧನಾದನು. ಕಠಿಣಬಾಣಪ್ರಯೋಗದಿಂದ ರಾವಣನ ರಥವನ್ನೂ, ಕುದುರೆಗಳನ್ನೂ, ಸಾರಥಿಯನ್ನೂ ನಾಶಗೊಳಿಸಿದನು. ಆಗ ರಾವಣನು ಹೊರಗೆ ಗರ್ಜಿಸುತ್ತಿದ್ದರೂ, ಅಂತರಂಗದಲ್ಲಿ ಆತನ ಧೈರ್ಯವು ನಷ್ಟವಾಗಿತ್ತು. ರಾವಣನು ಹೊಸರಥವನ್ನು ಸಿದ್ಧಪಡಿಸಿಕೊಂಡು ಬಂದು ಹತ್ತು ಶೂಲಗಳನ್ನು ಬಿಟ್ಟನು; ಅದರಿಂದ ರಾಮನ ನಾಲ್ಕು ಕುದುರೆಗಳು ಸತ್ತವು. ಅವನ್ನು ರಾಮನು ಬದುಕಿಸಿ ಅತ್ಯಂತ ಕ್ರೋಧಸಂತಪ್ತನಾಗಿ ರಾವಣನ ಹತ್ತು ತಲೆಗಳನ್ನೂ, ಇಪ್ಪತ್ತು ಭುಜಗಳನ್ನೂ ಕತ್ತರಿಸಲು, ಕೂಡಲೆ ಅವು ಚಿಗಿತವು. ಹೀಗೆ ಪ್ರಭುವು ಭುಜ ಶಿರಗಳನ್ನು ಎಷ್ಟುಸಾರೆ ಕತ್ತರಿಸಿದರೂ ಅವು ಚಿಗಿಯುತ್ತಲೇ ಇದ್ದವು.

ಈಮೇರೆಗೆ ಭಯಂಕರ ಯುದ್ಧವು ನಡೆದಿರಲು, ರಾವಣನು ಕ್ರುದ್ಧನಾಗಿ ಒಂದು ಪ್ರಚಂಡ ಶಕ್ತಿಯನ್ನು ವಿಭೀಷಣನಮೇಲೆ ಬಿಟ್ಟನು; ಆದರೆ ದೀನವತ್ಸಲಪ್ರಭುವು ವಿಭೀಷಣನನ್ನು ಬೆನ್ನಿಗೆ ಹಾಕಿಕೊಂಡು ಆ ಶಕ್ತಿಗೆ ತಾನು ಈಡಾದನು. ಅದರಿಂದ ಆತನಿಗೆ ಕಿಂಚಿತ್ ಮೂರ್ಛೆಯುಂಟಾಯಿತು. ಪ್ರಭುವಿಗೆ ಅದು ಆಟವಾದರೂ ದೇವತೆಗಳಿಗೆ

ಅತ್ಯಂತ ದುಃಖವಾಯಿತು. ಪ್ರಭುವು ಕಷ್ಟಕ್ಕೆ ಗುರಿಯಾದದ್ದನ್ನು ನೋಡಿ ವಿಭೀಷಣನು ಕೈಯಲ್ಲಿ ಗದೆಯನ್ನು ತಕ್ಕೊಂಡು ರಾವಣನಮೇಲೆ ಏರಿಹೋಗಿ—ಎಲೈ ಹತಭಾಗ್ಯಾ, ಶಠಾ, ಮಂದಾ, ದುರ್ಬುದ್ಧೇ, ನೀನು ಸುರ-ಮುನಿ-ನಾಗಾದಿಗಳೆಲ್ಲರ ದ್ವೇಷವನ್ನು ಕಟ್ಟಿಕೊಂಡಿರುತ್ತೀ. ನೀನು ಶಂಕರನಿಗೆ ಆದರಪೂರ್ವಕವಾಗಿ ನಿನ್ನ ಮಸ್ತಕಗಳನ್ನು ಅರ್ಪಿಸಿದೆ; ಅದರಿಂದ ಒಂದೊಂದು ಮಸ್ತಕಕ್ಕೆ ಕೋಟಿಕೋಟಿ ಮಸ್ತಕಗಳಂತೆ ಚಿಗಿಯುತ್ತಿರುವದರಿಂದ ಅದರಬಲದಿಂದ ನೀನು ಇಲ್ಲಿಯವರೆಗೆ ಬದುಕಿರುತ್ತೀ. ಈಗ ನಿನ್ನ ಮೃತ್ಯುವು ನಿನ್ನ ಮಸ್ತಕದಲ್ಲಿ ಕುಣಿಯುತ್ತಿರುವದು. ಶಠನೇ, ರಾಮನೊಡನೆ ದ್ರೋಹವನ್ನು ಬಳಸಿ ಐಶ್ವರ್ಯವನ್ನು ಇಚ್ಛಿಸುತ್ತೀಯಾ? ಎಂದು ನುಡಿದು ಗದೆಯಿಂದ ರಾವಣನ ಎದೆಗೆ ಹೊಡೆದನು. ಅದರಿಂದ ಅವನ ಹತ್ತೂ ಮುಖಗಳಲ್ಲಿ ರಕ್ತವು ಹರಿಯಹತ್ತಿತು. ರಾವಣನು ಮತ್ತೆ ಸಾವರಿಸಿಕೊಂಡು ಏಳಲು, ಅವರಿಬ್ಬರು ವೀರರಲ್ಲಿ ಮಲ್ಲಯುದ್ಧವು ಉತ್ಪನ್ನವಾಯಿತು. ಒಬ್ಬರನ್ನೊಬ್ಬರು ಹೊಡೆಯಹತ್ತಿದರು. ರಘುವರನ ಬೆಂಬಲದಿಂದ ಗರ್ವಿತನಾಗಿದ್ದ ವಿಭೀಷಣನು ರಾವಣನ ಹೊಡತಕ್ಕೆ ಸೊಪ್ಪುಹಾಕಲಿಲ್ಲವು. ಪಾರ್ವತೀ, ರಾವಣನಮುಂದೆ ನಿಂತು ಆತನಕಡೆಗೆ ನೋಡುವಧೈರ್ಯವಾದರೂ ವಿಭೀಷಣನಿಗೆ ಇತ್ತೇ? ಆದರೆ ಅದೇ ವಿಭೀಷಣನು ಈಗ ರಘುರಾಜನ ಪ್ರತಾಪದಿಂದ ಯಮನಂತೆ ರಾವಣನ ಸಂಗಡ ಕಾದಹತ್ತಿದನು. ವಿಭೀಷಣನು ಬಹಳವಾಗಿ ದಣಿದದ್ದನ್ನು ನೋಡಿ ಹನುಮಂತನು ಒಂದು ಪರ್ವತವನ್ನು ಎತ್ತಿಕೊಂಡುಬಂದು ರಾವಣನಮೇಲೆ ಅಪ್ಪಳಿಸಿ ಅವನ ರಥಾಶ್ವಸಾರಥಿಗಳನ್ನು ಕೊಂದು ರಾವಣನ ಎದೆಗೆ ಒದ್ದನು. ಅದರಿಂದ ರಾವಣನು ಗದಗದನಡುಗಿ ಅಲ್ಲಿಯೇ ನಿಂತುಕೊಂಡನು. ಬಳಿಕ ರಾವಣ ಮಾರುತಿಯರ ಭಯಂಕರ ಯುದ್ಧವಾಯಿತು. ರಾಮಾಜ್ಞೆಯಿಂದ ಯಾವತ್ತು ಕಪಿಗಳು ರಾವಣನಮೇಲೆ ಮುಗಿಬೀಳಲು, ಆತನು ತನ್ನ ಮಾಯೆಯಿಂದ ಅಸಂಖ್ಯರಾವಣರನ್ನು ಮಾಡಿದನು. ಅದನ್ನು ನೋಡಿ ದೇವತೆಗಳು, ಒಬ್ಬರಾವಣನೇ ನಮ್ಮನ್ನು ಪಾದಾಕ್ರಾಂತವಾಗಿ ಮಾಡಿರುವಾಗ, ಇಷ್ಟುಜನ ರಾವಣರನ್ನು ಗೆಲ್ಲುವದು ಅಶಕ್ಯವಾದದ್ದರಿಂದ ನಾವು ಇನ್ನು ಗಿರಿಕಂದರಗಳನ್ನು ಸೇರತಕ್ಕದ್ದೇಸರಿ, ಎಂದು ಭಯಪಡತೊಡಗಿದರು. ಪ್ರಭುವಿನ ಮಹಿಮೆಯನ್ನು ಅಲ್ಪಸ್ವಲ್ಪ ತಿಳಿದಿರುವ ಬ್ರಹ್ಮದೇವ, ಶಂಕರ, ಮುನಿವರ್ಯ ಮೊದಲಾದ ಜ್ಞಾನಿಗಳು ಮಾತ್ರ ಹೆದರದೆ ನಿಂತುಕೊಂಡರು. ರಾವಣನ ಈ ಮಾಯೆಯನ್ನು ಪ್ರಭುವು ಒಂದೇಬಾಣದಿಂದ ನಿವಾರಿಸಿದನು.

ಹೀಗೆ ಭಯಂಕರ ಯುದ್ಧನಡೆದಿರುವಾಗ ತ್ರಿಜಟೆಯು ಜಾನಕಿಯಬಳಿಗೆ ಹೋಗಿ ಯಾವತ್ತು ಯುದ್ಧದ ವರ್ತಮಾನವನ್ನು ಹೇಳಿ, ರಾವಣನ ಹತ್ತು ಮಸ್ತಕಗಳು ಪುನಃ ಪುನಃ ಚಿಗಿಯುವದನ್ನು ಹೇಳಿದಳು. ಅದನ್ನು ಕೇಳಿ ಸೀತೆಯು ಅಸಮಾಧಾನಪಟ್ಟು, ನನ್ನ ದುರ್ದೈವವು ಇನ್ನೂ ಮುಗಿಯಲೊಲ್ಲದೇ ಎಂದು ಬಗೆಬಗೆಯಾಗಿ ಶೋಕಿಸುತ್ತ

ಲು, ತ್ರಿಜಟೆಯು—ರಾಜಕುಮಾರೀ, ಶ್ರೀರಾಮನು ರಾವಣನ ಹೃದಯಕ್ಕೆ ಬಾಣಹೊಡೆದರೆ ಆತನು ಸಾಯಬಹುದು; ಆದರೆ ಪ್ರಭುವು ಹಾಗೆ ಮಾಡಲೊಲ್ಲನು; ಯಾಕಂದರೆ ರಾವಣನ ಹೃದಯದಲ್ಲಿ ನೀನು ವಾಸಿಸುತ್ತಿದ್ದು, ನಿನ್ನ ಹೃದಯದಲ್ಲಿ ರಾಮನೂ, ರಾಮನ ಹೃದಯದಲ್ಲಿ ಚತುರ್ದಶಭುವನಗಳೂ ಇರುವವು; ಅಂದಬಳಿಕ ರಾವಣನ ಎದೆಗೆ ಬಾಣಹೊಡೆಯುವದರಿಂದ ಇಷ್ಟೆಲ್ಲ ಜನರ ನಾಶವಾಗುವದೆಂದು ತಿಳಿದು ಪ್ರಭುವು ಹಾಗೆ ಮಾಡಲೊಲ್ಲನು; ಆದರೆ ಜಾನಕೀ, ಚಿಂತೆ ಮಾಡಬೇಡ. ರಾವಣನು ರಾಮಬಾಣಗಳಿಂದ ಅತ್ಯಂತ ಪೀಡಿತನಾಗಿರುವಾಗ ಆತನಿಗೆ ನಿನ್ನ ವಿಸ್ಮೃತಿಯಾಗಲು, ಅದೇ ಸಂಧಿಯನ್ನು ಸಾಧಿಸಿ ಪ್ರಭುವು ರಾವಣನ ಹೃದಯಕ್ಕೆ ಬಾಣ ಪ್ರಯೋಗಮಾಡಿ ಆತನನ್ನು ಕೊಲ್ಲುವನು, ಎಂದು ಸಮಾಧಾನಹೇಳಿ ತನ್ನ ಮನೆಗೆ ಹೋದಳು. ಇತ್ತ ರಾವಣನು ತನ್ನ ಮಾಯಾವ್ಯವಹಾರದಿಂದ ಭಯಂಕರವಾಗಿ ಕಾದುತ್ತಲೇ ಇದ್ದನು. ಒಮ್ಮೆ ಆತನು ತನ್ನ ಮಾಯಾಜಾಲವನ್ನು ಒಡ್ಡಿ ಅಸಂಖ್ಯ ಜನ ಮಾರುತಿಯರನ್ನು ನಿರ್ಮಿಸಿದನು. ಅವರೆಲ್ಲ ಗುಡ್ಡ ಗಿಡಗಳನ್ನು ತಕ್ಕೊಂಡು ರಾಮನಮೇಲೆ ಸಾಗಿ ಹೋಗುತ್ತಿದ್ದರು; ರಾವಣನು ತನ್ನ ಮಾಯೆಯಿಂದ ವೇತಾಳ, ಭೂತ, ಪಿಶಾಚಗಳನ್ನು ನಿರ್ಮಿಸಿ ಕಪಿಗಳನ್ನು ಗಾಸಿಮಾಡಿದನು. ರಾವಣನ ಈ ಪ್ರಚಂಡ ಮಾಯೆಯಿಂದ ಯಾವತ್ತು ಕಪಿಗಳು ಮುಂದುಗಾಣದೆ ಶ್ರೀರಾಮನಿಗೆ "ನಮ್ಮನ್ನು ರಕ್ಷಿಸು ರಕ್ಷಿಸು" ಎಂದು ಮೊರೆಯಿಟ್ಟರು. ಆಗ ರಘುವೀರನು ಕ್ರುದ್ಧನಾಗಿ ಒಂದೇ ಬಾಣದಿಂದ ಕ್ಷಣಮಾತ್ರದಲ್ಲಿ ಮಾಯೆಯ ನಿವಾರಣಮಾಡಿದನು. ಅದರಿಂದ ಕಪಿಗಳು ಹರ್ಷಿತರಾಗಿ ವೃಕ್ಷಪಾಷಾಣಗಳನ್ನು ತಕ್ಕೊಂಡು ಮತ್ತೆ ರಾವಣನಮೇಲೆ ತಿರುಗಿದರು. ಶ್ರೀರಾಮನು ಶರವೃಷ್ಟಿಯನ್ನು ಮತ್ತೆ ಆರಂಭಿಸಿದನು; ಮತ್ತೆ ರಾವಣನ ಹಸ್ತ ಮಸ್ತಕಗಳು ಕತ್ತರಿಸಹತ್ತಿ ಮತ್ತೆ ಚಿಗಿಯಹತ್ತಿದವು. ಈ ರಾಮ ರಾವಣರ ಮಹಾಯುದ್ಧವನ್ನು ವರ್ಣಿಸುವದು ಯಾರಿಗೆ ಶಕ್ಯವು! ಹೀಗೆ ಹಲವು ಸಾರೆ ಹಸ್ತ ಮಸ್ತಕಗಳನ್ನು ತುಂಡರಿಸಿದರೂ ರಾವಣನು ಸಾಯಲೊಲ್ಲನು. ಪ್ರಭುವು ಲೀಲೆಯನ್ನು ಮಾಡುತ್ತಿದ್ದನು; ಆದರೆ ಆತನ ಕ್ಲೇಶವನ್ನು ನೋಡಿ ದೇವ–ಮುನಿ–ಸಿದ್ಧರು ವ್ಯಾಕುಲರಾಗುತ್ತಿದ್ದರು. ಪ್ರತಿಒಂದು ಲಾಭದಸಂಗಡ ಲೋಭವು ಹೆಚ್ಚುತ್ತಿರುವಂತೆ, ಹಸ್ತಮಸ್ತಕಗಳು ಕಡಿಕಡಿದಂತೆ ಚಿಗಿಯಹತ್ತಿದವು, ರಾವಣನು ಸಾಯಲೊಲ್ಲನು. ಆಗ ಶ್ರೀರಾಮನು ಬಹಳ ಕಷ್ಟಪಟ್ಟು ವಿಭೀಷಣನಕಡೆಗೆ ನೋಡಿದನು.

ಎಲೈ ಪಾರ್ವತೀ, ಯಾವಪ್ರಭುವಿನ ಇಚ್ಛಾಮಾತ್ರದಿಂದ ಯಮನೂ ಮೃತ್ಯುವಶನಾಗುವನೋ, ಆ ಭಗವಂತನು ಭಕ್ತನನ್ನು ಪರೀಕ್ಷಿಸತೊಡಗಿದನು. ಪ್ರಭುವು ದೃಷ್ಟಿಯಾಗಿ ತನ್ನ ಕಡೆಗೆ ನೋಡುವದನ್ನು ನೋಡಿ ವಿಭೀಷಣನು ಆತನನ್ನು ಕುರಿತು—ಎಲೈ ಸರ್ವಜ್ಞನೇ, ಚರಾಚರ ನಾಯಕನೇ, ಭಕ್ತಪಾಲಕನೇ, ಸುರಮುನಿಸುಖದಾಯಕ ಪ್ರಭುವೇ,

ಈ ರಾವಣನ ನಾಭಿಸ್ಥಾನದಲ್ಲಿ ಅಮೃತವಿರುವದರಿಂದ ಅದರ ಬಲದಿಂದ ರಾವಣನು ಬದುಕುತ್ತಿರುವನು, ಅನ್ನಲು, ಪ್ರಭುವು ಸಂತುಷ್ಟನಾಗಿ ಬಾಣಗಳನ್ನು ಹೂಡಿದನು. ಆಗ ಹಲವು ದುಶ್ಚಿಹ್ನಗಳಾದವು. ಮಂಡೋದರಿಯ ಹೃದಯವು ಬಹಳವಾಗಿ ಕಂಪಿಸತೊಡಗಿತು. ಪ್ರಭುವು ಕಿವಿಯವರೆಗೆ ಹೆದೆಯನ್ನು ಜಗ್ಗಿ ಮೂವತ್ತೊಂದು ಬಾಣಗಳನ್ನು ರಾವಣನಮೇಲೆ ಬಿಟ್ಟನು. ಆ ಬಾಣಗಳು ಸರ್ಪಗಳಂತೆ ರಾವಣನಮೇಲೆ ಸಾಗಿದವು. ಅವುಗಳಲ್ಲಿ ಒಂದುಬಾಣವು ನಾಭಿಯಲ್ಲಿಯ ಅಮೃತಕುಂಡವನ್ನು ಶೋಷಿಸಿತು. ಉಳಿದ ಬಾಣಗಳು ಹಸ್ತಮಸ್ತಕಗಳನ್ನು ತುಂಡರಿಸಿ ಪಾರಾಗಿ ಹೋದವು. ಶಿರಸ್ಸುಗಳೂ, ಭುಜಗಳೂ ಇಲ್ಲದ ಆ ದಿಂಡವೇ ರಣದಲ್ಲಿ ಅನರ್ಥವನ್ನುಂಟುಮಾಡತೊಡಗಿತು ಆಗ ಪ್ರಭುವು ಬಾಣತೊಡೆದು ಅದನ್ನು ಎರಡುತುಂಡುಮಾಡಿದನು. ಸಾಯುವಾಗ ರಾವಣನು—"ರಾಮನೆಲ್ಲಿರುವನು? ಆತನನ್ನು ನಾನು ಎದುರಾಗಿ ಕೊಲ್ಲುವೆನು" ಎಂದು ಗರ್ಜಿಸಿದನು. ದಶಾನನನು ನೆಲಕ್ಕೆ ಬಿದ್ದಾಗ ಭೂಕಂಪವಾಯಿತು. ಸಮುದ್ರ-ನದಿ-ದಿಗ್ಗಜಗಳು ಕ್ಷುಬ್ಧವಾದವು. ಆತನ ದಿಂಡವು ಎರಡುತುಂಡಾಗಿ ಬೀಳುವಾಗ ಎಷ್ಟೋ ಕಪಿಗಳನ್ನೂ, ಕರಡಿಗಳನ್ನೂ ಜಜ್ಜಿಮಾಡಿಬಿಟ್ಟಿತು. ರಾವಣನ ಹಸ್ತ-ಮಸ್ತಕಗಳನ್ನು ಮಂಡೋದರಿಯ ಮುಂದಿಟ್ಟು ಬಾಣಗಳು ಜಗದೀಶನಾದ ಶ್ರೀರಾಮಚಂದ್ರನ ಬಳಿಗೆ ಬಂದು ಆತನ ಬತ್ತಳಿಕೆಯನ್ನು ಸೇರಿದವು. ಅದನ್ನು ನೋಡಿ ದೇವತೆಗಳು ದುಂದುಭಿಯನ್ನು ಬಾರಿಸಿದರು. ರಾವಣನ ತೇಜಸ್ಸು ಪ್ರಭುವಿನ ಮುಖದಲ್ಲಿ ಪ್ರವೇಶಿಸಿತು. ಅದನ್ನು ನೋಡಿ ಶಿವ-ಬ್ರಹ್ಮಾದಿಕರಿಗೆ ಹರ್ಷವಾಯಿತು. "ಹೇ ಪ್ರಬಲ ಭುಜದಂಡ ರಘುವೀರಾ! ನಿನ್ನ ಜಯಜಯಕಾರವು! ಹೇ ದಯಾಘನ ಮುಕುಂದಾ, ನಿನ್ನ ಜಯಜಯಕಾರವು!" ಎಂಬ ಜಯಧ್ವನಿಯು ಬ್ರಹ್ಮಾಂಡವನ್ನು ತುಂಬಿ ಹೊರಸೂಸಿತು. ದೇವಗಣವು ಹೂಮಳೆಗರೆಯಿತು.

ಪತಿಯ ಶಿರಸ್ಸುಗಳನ್ನು ನೋಡಿ ಮಂಡೋದರಿಯು ದುಃಖದಿಂದ ವಿಹ್ವಲಳಾಗಿ ಮೂರ್ಛೆಹೊಂದಿ ಭೂಮಿಯಮೇಲೆ ದಡಲ್ಲನೆ ಬಿದ್ದಳು. ಆಗ ಬೇರೆಸ್ತ್ರೀಯರು ರೋದನಮಾಡುತ್ತ ಮಂಡೋದರಿಯಬಳಿಗೆ ಓಡುತ್ತ ಹೋಗಿ ಆಕೆಯನ್ನು ಎತ್ತಿಕೊಂಡು ರಾವಣನ ಪ್ರೇತದ ಬಳಿಗೆ ಬಂದರು. ಪತಿಯ ಆ ಅವಸ್ಥೆಯನ್ನು ನೋಡಿ ಮಂಡೋದರಿಯು ಬನಿದೆಗೆದು ಅಳತೊಡಗಿದಳು. ಆಕೆಯ ಹೆರಳುಬಿಚ್ಚಿಹೋಗಿ ಆಕೆಯ ಮೈಮೇಲಿನ ಎಚ್ಚರವು ತಪ್ಪಿತು. ಆಕೆಯು ಹಲವುಪ್ರಕಾರದಿಂದ ಎದೆಎದೆಬಡಕೊಳ್ಳುತ್ತಿದಳು. ಆಕೆಯು ರಾವಣನ ಪರಾಕ್ರಮವನ್ನು ಹಾಡಿಹಾಡಿಕೊಂಡು ಅಳುತ್ತ— ಎಲೈ ನಾಥನೇ, ನಿನ್ನ ಭಯದಿಂದ ಪೃಥ್ವಿಯು ನಿತ್ಯದಲ್ಲಿ ನಡಗುತ್ತಿತ್ತು. ಅಗ್ನಿ-ಚಂದ್ರ-ಸೂರ್ಯರು ಕೂಡ ನಿಸ್ತೇಜರಾಗುತ್ತಿದ್ದರು. ಆದರೆ ಶೇಷ ಕೂರ್ಮರು ಕೂಡ ಭಾರ ಸಹಿಸದಿರುವ ಈ ನಿನ್ನ ಶರೀರವು ಈಗ ಧೂಳಿಯಲ್ಲಿ ಹೊರಳಾಡುತ್ತಿರುವದಲ್ಲ! ವರುಣ,

ಕುಬೇರ, ಇಂದ್ರ, ವಾಯುಗಳಲ್ಲಿ ಒಬ್ಬನೂ ರಣಾಂಗಣದಲ್ಲಿ ನಿನ್ನ ಎದುರಿಗೆ ತಡೆಯಲಿಲ್ಲವು. ಎಲೈ ಸ್ವಾಮಿಯೇ, ನೀನು ನಿನ್ನ ಬಾಹುಬಲದಿಂದ ಕಾಲನನ್ನೂ, ಯಮನನ್ನೂ ಕೂಡ ಗೆದ್ದುಬಿಟ್ಟೆ! ಅದೇ ನೀನು ಈಗ ಅನಾಥನಹಾಗೆ ಬಿದ್ದಿರುವೆಯಲ್ಲ! ನಿನ್ನ ಪ್ರಭಾವವು ಯಾವತ್ತು ಜಗತ್ತಿಗೆ ವಿದಿತವಾಗಿತ್ತು. ನಿನ್ನ ಮಗನ ಹಾಗು ಪರಿವಾರದ ಬಲವಾದರೂ ಅವರ್ಣನೀಯವಾಗಿ ಇತ್ತು; ಆದರೆ ನೀನು ರಾಮನಿಗೆ ವಿಮುಖನಾದದ್ದರಿಂದ ನಿನ್ನ ಸಲುವಾಗಿ ಶೋಕಮಾಡಲಿಕ್ಕೆ ನಿನ್ನ ಕುಲದಲ್ಲಿ ಒಬ್ಬನೂ ಉಳಿದಿರುವದಿಲ್ಲ. ಎಲೈ ನಾಥನೇ, ಈ ಎಲ್ಲ ಬ್ರಹ್ಮಸೃಷ್ಟಿಯು ನಿನ್ನ ಅಧೀನದಲ್ಲಿತ್ತು. ಎಲ್ಲ ದಿಕ್ಪಾಲಕರು ಭಯಭೀತರಾಗಿ ನಿನ್ನಮುಂದೆ ದಿನಾಲು ತಲೆಬಾಗಿಸುತ್ತಿದ್ದರು; ಆದರೆ ಇಂದು ನೋಡು, ಅದೇ ನಿನ್ನ ಈ ಹಸ್ತ ಮಸ್ತಕಗಳನ್ನು ನರಿಗಳು ಹರಿದು ತಿನ್ನುತ್ತಿರುವವು. ರಾಮನೊಡನೆ ವಿರೋಧಬೆಳಿಸುವವನಿಗೆ ಈ ಪ್ರಾಯಶ್ಚಿತ್ತವು ಅಯೋಗ್ಯವಾದದ್ದಲ್ಲ. ನೀನು ಕಾಲನ ಅಧೀನನಾದದ್ದರಿಂದಲೇ ಎಲೈ ನಾಥನೇ, ನನ್ನ ವಿನಂತಿಯನ್ನು ಮನ್ನಿಸಲಿಲ್ಲ; ಮತ್ತು ಚರಾಚರಸ್ವಾಮಿಯನ್ನು ಮನುಷ್ಯನೆಂದು ತಿಳಿದೆ. ಪ್ರಾಣನಾಥಾ, ಹುಟ್ಟಿದಂದಿನಿಂದ ನೀನು ಪರದ್ರೋಹಮಾಡುವದರಲ್ಲಿಯೇ ಮಗ್ನನಾಗಿದ್ದೆ. ಈ ನಿನ್ನ ದೇಹವೂಕೂಡ ಪಾಪೌಘಮಯವಾಗಿರುತ್ತದೆ. ಹೀಗಿದ್ದು, ನಿನಗೆ ಸ್ವಪದವನ್ನಿತ್ತ ಆ ಅಕ್ಷರ ಬ್ರಹ್ಮ ಪ್ರಭುವಿಗೆ ನಾನು ವಂದಿಸುವೆನು. ಆಹಹಾ! ಎಲೈ ನಾಥನೇ, ಮುನಿಗಳಿಗೂ ದುರ್ಲಭವಾದ ಪರಮಗತಿಯನ್ನು ನಿನಗೆ ಕೊಟ್ಟ ಆ ರಘುನಾಥನಂಥ ದಯಾಸಾಗರರು ಅನ್ಯರು ಯಾರಿರುವರು?

ಮಂಡೋದರಿಯ ಮಾತುಗಳನ್ನು ಕೇಳಿ ಸುರ-ಮುನಿ-ಸಿದ್ಧರಿಗೆಲ್ಲರಿಗೂ ಸಂತೋಷವಾಯಿತು. ರಾವಣನ ಹೆಂಡಿರೆಲ್ಲರೂ ದುಃಖಿಸುತ್ತಿರುವವನ್ನು ನೋಡಿ ಮನಸ್ಸಿನಲ್ಲಿ ಅತ್ಯಂತ ದುಃಖಿತನಾಗಿ ವಿಭೀಷಣನು ಅವರ ಬಳಿಗೆ ಹೋದನು. ಬಂಧುವಿನ ಅವಸ್ಥೆಯನ್ನು ನೋಡಿ ಅವನಿಗೂ ಬಹಳ ದುಃಖವಾಯಿತು. ಆಗ ಶ್ರೀರಾಮನು ಲಕ್ಷ್ಮಣನನ್ನು ಆಜ್ಞಾಪಿಸಲು ಆತನು ವಿಭೀಷಣನ ಬಳಿಗೆ ಹೋಗಿ ಆತನನ್ನು ಸಮಾಧಾನ ಪಡಿಸಿದನು. ಆಗ ವಿಭೀಷಣನು ತಿರುಗಿ ಶ್ರೀರಾಮನ ಬಳಿಗೆ ಬಂದನು. ಪ್ರಭುವು ಕೃಪಾದೃಷ್ಟಿಯಿಂದ ಆತನ ಕಡೆಗೆ ನೋಡಿ, "ಯಾವತ್ತು ಶೋಕವನ್ನು ತ್ಯಜಿಸಿ, ರಾವಣನ ಕ್ರಿಯಾಕರ್ಮವನ್ನು ಮಾಡೆಂ"ದು ಹೇಳಿದನು. ಆಗ ಪ್ರಭುವಿನ ಅಪ್ಪಣೆಯಂತೆ, ದೇಶ ಕಾಲ ವರ್ತಮಾನವನ್ನರಿತು ವಿಭೀಷಣನು ಯಥಾವಿಧಿಕರ್ಮವನ್ನು ಮಾಡಿದನು. ಮಂಡೋದರಿಯೇ ಮೊದಲಾದ ಯಾವತ್ತು ರಾವಣನ ಹೆಂಡಿರು ರಾವಣನಿಗೆ ತಿಲಾಂಜಲಿಯನ್ನು ಅರ್ಪಿಸಿದರು. ಬಳಿಕ ಅವರೆಲ್ಲರು ರಘುವೀರನ ಗುಣಗಣಗಳನ್ನು ವರ್ಣಿಸುತ್ತ ಮನೆಗೆ ಹೋದರು. ತಿರುಗಿ ವಿಭೀಷಣನು ಬಂದು ಪ್ರಭುವನ್ನು ವಂದಿಸಿದನು. ಆಗ ಕೃಪಾಸಿಂಧುವಾದ ರಘುನಾಥನು ಲಕ್ಷ್ಮಣನನ್ನು ಕರೆದು— ನೀನು, ಸುಗ್ರೀವನು, ಅಂಗದನು

ನಳನು, ನೀಲನು, ಜಾಂಬುವಂತನು ನೀತಿಕುಶಲರಿರುವಿರಿ. ನೀವೆಲ್ಲರೂ ಕೂಡಿ ವಿಭೀಷಣ ನನ್ನು ಕರಕೊಂಡುಹೋಗಿ ಆತನಿಗೆ ರಾಜ್ಯಾಭಿಷೇಕವನ್ನು ಮಾಡಿರಿ, ಎಂದು ಹೇಳಿ ವಿಭೀಷಣನನ್ನು ಕುರಿತು—ತಂದೆಯ ಅಪ್ಪಣೆಯ ಮೂಲಕ ನಾನು ನಗರದಲ್ಲಿ ಹೋಗುವಹಾಗಿಲ್ಲದ್ದರಿಂದ ನನ್ನಂತೆಯೇ ಇರುವ ಕಪಿಗಳನ್ನೂ, ತಮ್ಮನನ್ನೂ ನಿನಗೆ ಪಟ್ಟಾಭಿಷೇಕ ಮಾಡುವದಕ್ಕಾಗಿ ಕಳಿಸುವೆನು, ಎಂದು ಹೇಳಿದನು. ಪ್ರಭುವಿನ ಅಪ್ಪಣೆಯಂತೆ ಅವರೆಲ್ಲರೂ ಹೋಗಿ ರಾಜ್ಯಾಭಿಷೇಕದ ಸಿದ್ಧತೆಯನ್ನು ಮಾಡಿ ವಿಭೀಷಣನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಅಭಿಷೇಕ ಮಾಡಿದರು. ತರುವಾಯ ಅವರವರು ತಮತಮಗೆ ತೋಚಿದಂತೆ ಆತನ ಸ್ತೋತ್ರ ಮಾಡಿ, ಆತನ ಮುಂದೆ ತಲೆಬಾಗಿಸಿ ಆತನೊಡನೆ ಪ್ರಭುವಿನ ಬಳಿಗೆ ಬಂದರು. ಆಗ ಪ್ರಭುವು ವಾನರ ವೀರರನ್ನು ಕರೆದು ಅವರೊಡನೆ ಪ್ರೇಮಯುಕ್ತಭಾಷಣ ಮಾಡಿ ಅವರನ್ನು ಕುರಿತು—ಕೇವಲ ನಿಮ್ಮ ಬಲದಿಂದಲೇ ನಾನು ಶತ್ರುಗಳನ್ನು ಸಂಹರಿಸಿದೆನು; ವಿಭೀಷಣನಿಗೆ ರಾಜ್ಯಪದವು ಪ್ರಾಪ್ತವಾಯಿತು. ಈ ನಿಮ್ಮ ಕೀರ್ತಿಯು ತ್ರೈಲೋಕ್ಯದಲ್ಲಿ ನಿತ್ಯ ಹೊಸಹೊಸದಾಗಿ ಹೊಗಳುತ್ತಿರುವದು. ನನ್ನೊಡನೆ ನಿಮ್ಮ ಪವಿತ್ರವಾದ ಯಶಸ್ಸನ್ನು ಪ್ರೀತಿಯಿಂದ ಗಾಯನ ಮಾಡುವವರು ಆಯಾಸವಿಲ್ಲದೆ ಅಪಾರವಾದ ಭವಸಾಗರವನ್ನು ದಾಟಿ ಹೋಗುವರು, ಎಂದು ಅಮೃತಕ್ಕೆ ಸಮಾನವಾದ ಮಾತುಗಳನ್ನು ಆಡಿ ಪ್ರಭುವು ಎಲ್ಲರನ್ನು ಸುಖಿಗಳಾಗ ಮಾಡಿದ್ದನು. ಪ್ರಭುವಿನ ಮಾತುಗಳನ್ನು ಕೇಳಿ ವಾನರರು ತೃಪ್ತರಾಗದೆ ಪುನಃ ಪುನಃ ಆತನ ಚರಣಗಳಿಗೆ ಎರಗ ತೊಡಗಿದರು.

ಬಳಿಕ ಮಾರುತಿಯು ಪಟ್ಟಣವನ್ನು ಪ್ರವೇಶಿಸಲು, ರಾಕ್ಷಸರೂ ರಾಕ್ಷಸಿಯರೂ ಆತನನ್ನು ಸತ್ಕರಿಸಿ ಆತನಿಗೆ ಜಾನಕಿಯನ್ನು ತೋರಿಸಿದರು. ಹನುಮಂತನು ದೂರದಿಂದಲೇ ಜಾನಕಿಯನ್ನು ನಮಸ್ಕರಿಸಿದನು. ಆಗ ಆಕೆಯು ರಘುಪತಿಯ ದೂತನೆಂದು ಗುರುತಿಸಿ ಆತನನ್ನು ಕುರಿತು— ವತ್ಸಾ, ಹೇಳು, ತಮ್ಮನೊಡನೆಯೂ, ಕಪಿಸೈನ್ಯದೊಡನೆಯೂ ಕೃಪಾನಿಧಿಗಳು ಕುಶಲವೆ? ಎಂದು ಕೇಳಲು, ಹನುಮಂತನು—ಎಲ್ಲೈ ತಾಯಿಯೇ, ಕೋಸಲಾಧಿಪತಿಯು ಎಲ್ಲ ಬಗೆಯಿಂದಲೂ ಕುಶಲನಾಗಿರುವನು. ರಣಾಂಗಣದಲ್ಲಿ ಆತನು ರಾವಣನನ್ನು ಪಾದಾಕ್ರಾಂತನಾಗಿಮಾಡಿ, ವಿಭೀಷಣನಿಗೆ ಲಂಕಾಧಿಪತ್ಯವನ್ನು ಕೊಟ್ಟನು, ಎಂದು ಹೇಳಿದನು. ಮಾರುತಿಯ ಮಾತುಗಳನ್ನು ಕೇಳಿ ಸೀತೆಯ ಹೃದಯವು ಹರ್ಷದಿಂದ ವ್ಯಾಪ್ತವಾಯಿತು. ಚಿತ್ತಕ್ಕೆ ಪರಮಾವಧಿ ಆನಂದವಾದದ್ದರಿಂದ ಆಕೆಯ ಶರೀರವು ರೋಮಾಂಚಿತವಾಗಿ ನೇತ್ರಗಳು ಅಶ್ರುಬಿಂದುಗಳಿಂದ ವ್ಯಾಪ್ತವಾದವು. ಆಕೆಯು ಪುನಃ ಪುನಃ ಹನುಮಂತನನ್ನು ಕುರಿತು— ಎಲೈ ಮಾರುತೇ, ಈಗ ನಾನು ನಿನಗೇನು ಕೊಡಲಿ? ನೀನು ಹೇಳಿದ ಸುದ್ದಿಗಾಗಿ ಕೊಡಲಿಕ್ಕೆ ಯೋಗ್ಯವಾದಂತಹದ್ದೇನೂ ಜಗತ್ತಿನಲ್ಲಿ ಕಾಣಲೊಲ್ಲದು, ಅನ್ನಲು ಮಾರುತಿಯು— ಹೇ ಮಾತೇ, ಶತ್ರು

ವನ್ನು ರಣಾಂಗಣದಲ್ಲಿ ಗೆದ್ದು, ಸೈನ್ಯದೊಡನೆಯೂ, ಬಂಧುವಿನೊಡನೆಯೂ ಸುರಕ್ಷಿತವಾಗಿರುವ ನನ್ನ ಪ್ರಭುವನ್ನು ನೋಡುವದರಿಂದ ನಾನು ಇಂದು ತ್ರೈಲೋಕ್ಯದ ರಾಜ್ಯವನ್ನು ಪಡೆದಿರುವೆನು. ಅನ್ನಲು, ಸೀತೆಯು—ವತ್ಸಾ, ಸರ್ವಸದ್ಗುಣಗಳು ನಿನ್ನ ಹೃದಯದಲ್ಲಿ ವಾಸಿಸಲಿ. ಮತ್ತು ಲಕ್ಷ್ಮಣನೊಡನೆ ಕೋಸಲಾಧೀಶ್ವರನು ನಿನ್ನಮೇಲೆ ಪ್ರಸನ್ನನಾಗಿರಲಿ. ಎಲೈ ತಾತನೇ, ಇನ್ನು ನನ್ನ ಕಣ್ಣುಗಳಿಗೆ ಆ ಮೃದುಗಾತ್ರ ಶ್ಯಾಮಲ ಮೂರ್ತಿಯ ದರ್ಶನವಾಗುವಂತೆ ಯತ್ನಮಾಡು, ಎಂದು ಹೇಳಿದಳು. ಆಗ ಹನುಮಂತನು ಪ್ರಭುವಿನ ಕಡೆಗೆ ಬಂದು, ಜಾನಕಿಯ ಕುಶಲವನ್ನರುಹಿದನು. ಅದನ್ನು ಕೇಳಿ ರವಿಕುಲಭೂಷಣನು ವಿಭೀಷಣನನ್ನೂ, ಅಂಗದನನ್ನೂ ಕರೆಸಿ ಅವರನ್ನು ಕುರಿತು—ನೀವು ಮಾರುತಿಯನ್ನು ಸಂಗಡ ಕರೆದುಕೊಂಡು ಬೇಗನೆ ಹೋಗಿ ಜಾನಕಿಯನ್ನು ಸನ್ಮಾನಪೂರ್ವಕವಾಗಿ ಕರೆದುಕೊಂಡು ಬರುವವರಾಗಿರಿ, ಎಂದು ಹೇಳಲು, ಕೂಡಲೆ ಅವರೆಲ್ಲರು ಸೀತೆಯ ಬಳಿಗೆ ಹೋದರು. ಅಲ್ಲಿ ಯಾವತ್ತು ರಾಕ್ಷಸಿಯರು ಸೀತೆಯನ್ನು ನಮ್ರರಾಗಿ ಸೇವಿಸುತ್ತಿದ್ದರು. ಅವರು ವಿಭೀಷಣನ ಹೇಳಿಕೆಯಂತೆ ಸೀತೆಗೆ ಎರೆದು, ಅನೇಕ ಪ್ರಕಾರದ ವಸ್ತ್ರಾಲಂಕಾರಗಳಿಂದ ಆಕೆಯನ್ನು ಶೃಂಗರಿಸಿದರು. ಬಳಿಕ ಒಂದು ಸುಂದರವಾದ ಪಲ್ಲಕ್ಕಿಯನ್ನು ತರಲು, ಜಾನಕಿಯು ಶ್ರೀರಾಮನನ್ನು ಸ್ಮರಿಸಿ ಆನಂದದಿಂದ ಅದರಲ್ಲಿ ಹತ್ತಿದಳು. ಆಕೆಯ ಸುತ್ತುಮುತ್ತು ವೇತ್ರಧಾರಿಗಳಾದ ರಕ್ಷಕರಿದ್ದು, ಎಲ್ಲರೂ ಉಲ್ಲಸಿತವಾದ ಅಂತಃಕರಣದಿಂದ ಸಾಗಿದರು. ವಾನರರು ಸೀತೆಯನ್ನು ನೋಡುವದಕ್ಕಾಗಿ ಓಡಿಬರಲು, ಅಂಗರಕ್ಷಕಗಣವು ಕ್ರುದ್ಧವಾಗಿ ಅವರನ್ನು ಹಿಂದಕ್ಕೆ ದೂಡಹತ್ತಿತು. ಆಗ ಪ್ರಭುವು ನಕ್ಕು—ಎಲೈ ಮಿತ್ರರೇ, ಸೀತೆಯನ್ನು ನಡಿಸುತ್ತಲೇ ಬರುವವರಾಗಿರಿ. ಈ ವಾನರರು ನನಗೆ ತಾಯಿಯಂತೆ ತೋರುತ್ತಿರುವರು, ಅನ್ನಲು, ಪ್ರಭುವಿನ ಮಾತುಗಳಿಂದ ಋಕ್ಷ-ವಾನರರು ಪ್ರಸನ್ನರಾದರು. ದೇವತೆಗಳು ಆಕಾಶದಿಂದ ವಿಪುಲ ಪುಷ್ಪವೃಷ್ಟಿಮಾಡತೊಡಗಿದರು.

ಅಂತಃಸಾಕ್ಷಿಯಾದ ಶ್ರೀರಾಮನು ಮೊದಲೇ ಅಗ್ನಿಯಲ್ಲಿ ಗುಪ್ತವಾಗಿ ಇಟ್ಟಿದ್ದ ಸೀತೆಯನ್ನು ಹೊರಗೆ ಕರತರಲಿಚ್ಛಿಸಿ, ಕೆಲವು ಔಪರೋಧಿಕ ಮಾತುಗಳನ್ನಾಡಿದನು. ಅದನ್ನು ಕೇಳಿ ರಾಕ್ಷಸಿಯರು ದುಃಖಮಾಡತೊಡಗಿದರು. ಪ್ರಭುವಿನ ಅಪ್ಪಣೆಯನ್ನು ಶಿರಸಾವಹಿಸಿ ಶರೀರದಿಂದಲೂ, ವಾಣಿಯಿಂದಲೂ, ಮನಸ್ಸಿನಿಂದಲೂ ಪವಿತ್ರಳಾಗಿದ್ದ ಸೀತೆಯು ಲಕ್ಷ್ಮಣನನ್ನು ಕುರಿತು— ಲಕ್ಷ್ಮಣಾ, ನೀನು ನನ್ನ ಧರ್ಮಕ್ಕೆ ಪಾಲುಗಾರನಾಗುವದಕ್ಕಾಗಿ ಬೇಗನೆ ಪ್ರದೀಪ್ತವಾದ ಅಗ್ನಿಯನ್ನು ಸಿದ್ಧಮಾಡು, ಎಂದು ಹೇಳಿದಳು. ವಿರಹ-ವಿವೇಕ-ಧರ್ಮ-ನೀತಿಗಳು ತುಂಬಿತುಳುಕುತ್ತಿರುವ ಸೀತೆಯ ಮಾತುಗಳನ್ನು ಕೇಳಿ ಲಕ್ಷ್ಮಣನ ಕಣ್ಣುಗಳಿಂದ ಅಶ್ರುಗಳು ಸುರಿಯಹತ್ತಿದವು; ಆತನು ಏನೋ ಮಾತಾಡಬೇಕೆಂದು ಕೈಜೋಡಿಸಿದನು; ಆದರೆ ಪ್ರಭುವಿನೊಡನೆ ಮಾತಾಡುವದು ಆತನಿಂದ ಆಗಲೊಲ್ಲದು. ರಾಮನ ಇಚ್ಛೆಯನ್ನರಿತು ಆತನು ಧಾವಿಸಿಹೋಗಿ ಕಾಷ್ಠಭಾರಗಳನ್ನು ತಂದು ಅಗ್ನಿಯನ್ನು ಪ್ರದೀಪ್ತಗೊಳಿಸಿದನು. ಅದನ್ನು ನೋಡಿ ಜಾನಕಿಯು ಹರ್ಷಿತಳಾದಳು. ಆಕೆಗೆ ಸ್ವಲ್ಪವೂ ಭಯ ಉಂಟಾಗಲಿಲ್ಲ. ಆಕೆಯು—ಎಲೈ ಕೃಶಾನುವೇ,

ಶ್ರೀಕರಣಪೂರ್ವಕವಾಗಿ ನನ್ನ ಮನಸ್ಸಿನಪ್ರವೃತ್ತಿಯು ರಘುನಾಥನ ಹೊರತು ಎರಡನೆ ಯಾಕಡೆಗೆ ಇರದಿದ್ದರೆಎಲ್ಲರರಹಸ್ಯವನ್ನರಿಯುವನೀನು ನನಗೆ ಚಂದನದಂತೆ ಶೀತಲವಾಗು. ಶ್ರೀಶಂಕರನಿಂದ ಪೂಜಿಸಲ್ಪಡುವ ಚರಣಗಳುಳ್ಳ ಕೋಸಲೇಶ್ವರನಿಗೆ ಜಯವಿರಲಿ. ಎಂದು ನುಡಿದು ದೈದೀಪ್ಯಮಾನವಾದ ಅಗ್ನಿಯಲ್ಲಿ ಪ್ರವೇಶಮಾಡಲು, ಅದು ಚಂದನದಂತೆ ಶೀತಲವಾಯಿತು. ಆಕೆಯ ಪ್ರತಿಬಿಂಬವು ಲೋಕಾಪವಾದಕ್ಕಾಗಿ ಪ್ರಚಂಡವಾದ ಅಗ್ನಿಯಲ್ಲಿ ಭಸ್ಮವಾಯಿತು. ಪ್ರಭುವಿನ ಈ ಚರಿತ್ರವು ಯಾರ ಲಕ್ಷ್ಯದಲ್ಲಿಯೂ ಬರಲಿಲ್ಲ. ದೇವ-ಸಿದ್ಧ-ಮುನಿಗಳು ಇದನ್ನು ನೋಡಿ ಅಂತರಿಕ್ಷದಲ್ಲಿ ಸುಮ್ಮನೆ ನಿಂತರು. ವೇದಸ್ತುತಳೂ, ಜಗದ್ವಿಖ್ಯಾತಳೂ ಆದ ಶ್ರೀಮನ್ಮಹಾಲಕ್ಷ್ಮೀ ಸೀತಾದೇವಿಯನ್ನು ಅಗ್ನಿನಾರಾಯಣನು ಕೈಹಿಡಿದು ಕರಕೊಂಡು ಪ್ರತ್ಯಕ್ಷಪ್ರಕಟನಾಗಿ, ಕ್ಷೀರಸಾಗರನುವಿಷ್ಣುವಿಗೆ ಇಂದಿರೆಯನ್ನು ಅರ್ಪಿಸಿದಂತೆ, ಸೀತೆಯನ್ನು ಶ್ರೀರಾಮನಿಗೆ ಅರ್ಪಿಸಿದನು. ಆ ಅತ್ಯಂತ ಲಾವಣ್ಯವತಿಯು ಶ್ರೀರಾಮನ ಎಡಭಾಗದಲ್ಲಿ ವಿರಾಜಮಾನಳಾಗುತ್ತಿರುವಾಗ, ಹೊಸದಾಗಿ ಅರಳಿದ ನೀಲಕಮಲದ ಸನ್ನಿಧಿಯಲ್ಲಿ ಸುವರ್ಣ ಕಮಲದ ಕೋಮಲ ಮೊಗ್ಗೆಯನ್ನು ಇಟ್ಟಿರುವಂತೆ ತೋರಿತು ಆಗ ದೇವತೆಗಳು ಆನಂದದಿಂದ ವಿಮಾನದಲ್ಲಿ ಕುಳಿತು ಆಕಾಶದಿಂದ ಪುಷ್ಪವೃಷ್ಟಿಮಾಡತೊಡಗಿದರು; ಕಿನ್ನರರು ಗಾಯನಮಾಡತೊಡಗಿದರು; ಅಪ್ಸರೆಯರು ನರ್ತನಮಾಡತೊಡಗಿದರು. ಜಾನಕಿಯಿಂದೊಡಗೂಡಿದ ಪ್ರಭುವಿನ ರಮಣೀಯ ಶೋಭೆಯನ್ನು ನೋಡಿ ಋಕ್ಷ-ವಾನರರು ಆನಂದದಿಂದ ರಘುಪತಿಯ ಜಯಘೋಷಮಾಡತೊಡಗಿದರು. ಬಳಿಕ ಮಾತಲಿಯು ರಾಮನ ಅಪ್ಪಣೆಯಿಂದ ರಥದೊಡನೆ ಇಂದ್ರಲೋಕಕ್ಕೆ ತೆರಳಿದನು.

ಈ ಕಾಲದಲ್ಲಿ ದೇವತೆಗಳೂ, ಬ್ರಹ್ಮನೂ, ಇಂದ್ರನೂ, ಶಂಕರನೂ ಶ್ರೀರಾಮನನ್ನು ಸ್ತುತಿಸತೊಡಗಿದರು- ದೇವತೆಗಳು-ಹೇ ದೀನಬಂಧೋದಯಾಲೋ ದೇವಾ ರಘುವೀರಾ, ನೀನು ನಮ್ಮ ಮೇಲೆ ದಯಮಾಡಿದೆ. ವಿಶ್ವದ್ರೋಹ ತತ್ಪರನೂ, ಖಲನೂ, ಕಾಮಿಯೂ, ಕುಮಾರ್ಗಗಾಮಿಯೂ ಆದ ರಾವಣನು ತನ್ನ ಪಾಪದಿಂಲೇ ಸತ್ತನು. ನೀನು ಸಮದರ್ಶಿಯಾಗಿದ್ದು ಸಾಕ್ಷಾತ ಅವಿನಾಶಿಯಾದ ಬ್ರಹ್ಮದ ಸ್ವರೂಪವೇ ಆಗಿರುವೆ. ನಮಗೆ ದುಃಖವಾದಾಗೆಲ್ಲ ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ವಾಮನ, ಪರಶುರಾಮ ಇತ್ಯಾದಿ ದೇಹಗಳನ್ನುಧರಿಸಿ ನಮ್ಮ ದುಃಖವನ್ನು ದೂರಮಾಡಿದೆ; ಆದರೂ ರಾವಣನಂಥ ಕಾಮಲೋಭಮದನಿರತನೂ, ಅತಿಕ್ರೋಧಿಯೂ, ಸುರದ್ರೋಹಿಯೂ ಆದ ಪಾತಕಿಯನ್ನು ನಿನ್ನ ಪದಕ್ಕೆ ಒಯ್ದುದ್ದು ಮಾತ್ರ ನಮಗೆಆಶ್ಚರ್ಯವಾಗಿ ತೋರುತ್ತದೆ. ನಾವು ದೇವತೆಗಳು ದೊಡ್ಡ ದೊಡ್ಡ ಅಧಿಕಾರಗಳ ಮೇಲೆ ಇದ್ದರೂ ಸ್ವಾರ್ಥೈಕಪರಾಯಣತೆಯಮೂಲಕ ನಿನ್ನ ಭಕ್ತಿಯನ್ನು ಮಾಡದ್ದರಿಂದ ಭವನದಿಯಲ್ಲಿ ಒಂದೇಸವನೆ ಮುಣುಗಿರುವೆವು. ಈಗ ನೀನು ನಮ್ಮನ್ನು ಉದ್ಧರಿಸು, ಎಂದು ಬೇಡಿಕೊಂಡು,

ಸಿದ್ಧಾದಿದೇವತೆಗಳೆಲ್ಲರು ಅಲ್ಲಲ್ಲಿ ಕೈಜೋಡಿಸಿ ನಿಂತುಕೊಂಡಿದ್ದರು. ಬಳಿಕ ಬ್ರಹ್ಮದೇವನು ಅತ್ಯಂತ ಪ್ರೇಮಾನ್ವಿತನಾಗಿ—ಎಲೈ ಧನುರ್ಬಾಣಧರಾ, ರಘುನಾಯಕಾ. ಸೀತೆಯಿಂದ ಸಹಿತನಾಗಿರುವ ನಿನ್ನ ಸೌಂದರ್ಯನಿಧಿಯನ್ನು ನಾನು ವಂದಿಸುವೆನು. ನೀನು ಸಂಸಾರದಿಂದ ಮುಕ್ತಮಾಡುವಂಥವನಿದ್ದು, ಕಾರ್ಯಕಾರಣಗಳಿಗಿಂತಲೂ ಶ್ರೇಷ್ಠನಾದವನೂ, ಮನಃಕಲ್ಪಿತ ದಾರುಣದೋಷಗಳನ್ನು ನಿವಾರಣಮಾಡುವವನೂ ಆಗಿರುತ್ತೀ. ಸೂರ್ಯನು ಪ್ರಕಾಶಕ್ಕೆ ಏಕರೂಪನಾಗಿದ್ದು, ಪುನಃ ಭಿನ್ನನಾಗಿರುವಂತೆ, ನೀನು ಇರುತ್ತೀ. ನಿನ್ನ ಈ ಮುಖವನ್ನು ಆದರಪೂರ್ವಕ ಅವಲೋಕಿಸುತ್ತಿರುವ ಈ ವಾನರರು ಧನ್ಯರಾಗಿರುವರು. ಎಲೈ ಹರಿಯೇ, ನಾನು ಭಕ್ತಿಯಿಲ್ಲದವನಾಗಿ ಸಂಸಾರದಲ್ಲಿ ಆಸಕ್ತನಾಗಿರುವದರಿಂದ ನನ್ನ ಈ ಜೀವತ್ವಕ್ಕೂ, ದೇವತ್ವಕ್ಕೂ, ದೇವಶರೀರಕ್ಕೂ ಧಿಕ್ಕಾರವಿರಲಿ. ದೀನದಯಾಳುವೇ, ಇನ್ನು ನನ್ನಮೇಲೆ ದಯಮಾಡು. ಎಲೈ ಕೃಪಾಳುವೇ, ವಿಪರೀತಪ್ರಕಾರಗಳಿಗೆ ಕಾರಣವಾದ ನನ್ನ ದ್ವಂದ್ವದೃಷ್ಟಿಯ ಬುದ್ಧಿಯನ್ನು ನಾಶಗೊಳಿಸು; ಮತ್ತು ದುಃಖವನ್ನು ಸುಖವಾಗಿ ಎಣಿಸಿ ನಾನು ಸುಖವಾಗಿ ಸಂಚರಿಸುವಂತೆ ಮಾಡು. ಶಿವಪಾರ್ವತಿಯರೂ ಕೂಡ ನಿನ್ನ ಚರಣಕಮಲಗಳನ್ನೇ ಸೇವಿಸುತ್ತಿರುವರು. ಎಲೈ ನೃಪನಾಯಕನೇ, ನಿನ್ನ ಪದಕಮಲದಲ್ಲಿ ನನ್ನ ನಿರಂತರವಾದ ಶುಭದಾಯಕ ಪ್ರೇಮವಿರುವಂತೆ ನನಗೆ ವರಪ್ರದಾನಮಾಡು; ಎಂದು ಪ್ರಾರ್ಥಿಸಿದನು. ಅದೇ ಸಮಯದಲ್ಲಿ ದಶರಥರಾಜನು ಅಲ್ಲಿಗೆ ಬಂದನು. ಮಗನನ್ನು ನೋಡಿ ಆತನ ನೇತ್ರಗಳು ಆನಂದಾಶ್ರುಪೂರ್ಣವಾದವು. ಲಕ್ಷ್ಮಣನಿಂದ ಸಹಿತವಾಗಿ ಪ್ರಭುವು ಅತನನ್ನು ನಮಸ್ಕರಿಸಲು, ಆ ದಶರಥನು ಆಶೀರ್ವದಿಸಿದನು. ಆಗ ಶ್ರೀರಾಮನು—“ಎಲೈ ತಾತನೇ, ಅಜಿಂಕ್ಯನಾದ ರಾಕ್ಷಸಾಧಿಪತಿಯು ಗೆಲ್ಲಲ್ಪಟ್ಟದ್ದು ನಿನ್ನ ಪುಣ್ಯಪ್ರಭಾವದಿಂದಲೇ,” ಎಂದು ಹೇಳಲು, ಮಗನಮಾತುಗಳನ್ನು ಕೇಳಿ ದಶರಥನ ಪ್ರೇಮವು ವೃದ್ಧಿಂಗತವಾಯಿತು. ಅದನ್ನರಿತು ಶ್ರೀರಾಮನು ಆತನ ಹೃದಯದಲ್ಲಿ ಅವಿಚಲಜ್ಞಾನವನ್ನುಂಟುಮಾಡಿದನು. ಎಲೈ ಪಾರ್ವತೀ, ದಶರಥನು ರಾಮಚಂದ್ರನಲ್ಲಿ ತನ್ನಮನಸ್ಸನ್ನು ಭೇದಭಕ್ತಿಪೂರ್ವಕಸಲ್ಲಗ್ನಮಾಡಿದ್ದರಿಂದ ಆತನಿಗೆ ಮೋಕ್ಷವು ದೊರೆತಿದ್ದಿಲ್ಲ. ಸಗುಣೋಪಾಸಕರು ಮೋಕ್ಷವನ್ನು ಅಂಗೀಕರಿಸುವದಿಲ್ಲ. ಆಗ ಶ್ರೀರಾಮಚಂದ್ರನು ಅವರಿಗೆ ತನ್ನ ಭಕ್ತಿಯನ್ನು ಅರ್ಪಿಸುವನು. ದಶರಥನು ಪುನಃ ಪುನಃ ಪ್ರಭುವನ್ನು ವಂದಿಸಿ ಹರ್ಷಿತನಾಗಿ ದೇವಲೋಕಕ್ಕೆ ಹೋದನು. ಇತ್ತ ದೇವೇಂದ್ರನು ಪ್ರಭುವನ್ನು ಕುರಿತು—ಎಲೈ ದೀನದಯಾಳೋ, ರಾಜೀವವಿಶಾಲಾಕ್ಷಾ, ನನಗೆ ಸರಿಯಾದವರು ಯಾರೂ ಇಲ್ಲವೆಂಬ ಅಭಿಮಾನವು ನನಗೆ ವಿಶೇಷವಾಗಿತ್ತು; ಆದರೆ ನಿನ್ನ ಚರಣಕಮಲವನ್ನು ನೋಡಿದ ಕೂಡಲೆ ದುಃಖಸಮೂಹವನ್ನುಂಟುಮಾಡುವ ನನ್ನ ಆ ಅಹಂಕಾರವು ನಷ್ಟವಾಗಿರುವದು. ವೇದಗಳು ಅವ್ಯಕ್ತವೆಂದು ವರ್ಣಿಸಿರುವ ನಿರ್ಗುಣಬ್ರಹ್ಮನನ್ನು ಕೆಲಕೆಲವರು ಧ್ಯಾನಿಸು

ವರು; ಆದರೆ ನನಗೆ ಕೋಸಲೇಶ್ವರ ಶ್ರೀರಾಮ ಪ್ರಭುವಿನ ಸಗುಣಸ್ವರೂಪವೇ ಸೇರುತ್ತಿರುವದು. ಜಾನಕೀ–ಲಕ್ಷ್ಮಣರಿಂದಸಹಿತವಾದ ಪ್ರಭುವಿನ ಆ ದೇಹವೇ ನನ್ನ ಹೃದಯದಲ್ಲಿ ವಾಸಿಸಲಿ. ಎಲ್ಲೆ ರಮಾನಿವಾಸನಾದ ಭಗವಂತನೇ, ನೀನು ನನ್ನನ್ನು ನಿನ್ನ ದಾಸನೆಂದು ತಿಳಿದು ನಿನ್ನ ಭಕ್ತಿಯನ್ನು ಕೊಡು. ಎಲೈ ಕೃಪಾಳುವೇ, ನನ್ನನ್ನು ಕೃಪಾದೃಷ್ಟಿಯಿಂದ ನೋಡಿ ನನಗೆ ಈಗ ನಿನ್ನ ಪಾದಸೇವೆಯೆಂಬ ಭಕ್ತಿಯನ್ನು ಅನುಗ್ರಹಿಸು.

ಇಂದ್ರನ ಈ ಸ್ತೋತ್ರವಚನಗಳನ್ನು ಕೇಳಿ ಪ್ರಭುವು ನುಡಿದನು. ಪ್ರಭುವು—ಎಲೈ, ಸರ್ವಜ್ಞನಾದ ದೇವೇಂದ್ರನೇ, ನನ್ನ ಈ ಭಕ್ತ-ವಾನರರು ನನ್ನ ಹಿತಕ್ಕಾಗಿ ರಾಕ್ಷಸರಿಂದ ಮಡಿದು ಬಿದ್ದಿರುವದರಿಂದ, ನೀನು ಇವರನ್ನು ಬದುಕಿಸು; ಎಂದು ಹೇಳಿದನು. ಪ್ರಭುವಿನ ಈ ಗಂಭೀರ ವಚನಗಳನ್ನು ಜ್ಞಾನಿಗಳಲ್ಲದೆ ಅನ್ಯರು ತಿಳಿಯರು. ಪ್ರಭುವು ತ್ರಿಭುವನಗಳನ್ನು ಕೊಲ್ಲಲು ಶಕ್ತನು, ಬದುಕಿಸಲು ಶಕ್ತನು; ಆದರೆ ಈ ಪ್ರಸಂಗದಲ್ಲಿ ಆತನು ಕೇವಲ ಇಂದ್ರನಿಗೆ ದೊಡ್ಡಸ್ತನವನ್ನು ಕೊಟ್ಟನು. ಇಂದ್ರನು ಅಮೃತವೃಷ್ಟಿಯನ್ನು ಮಾಡಿ ಯಾವತ್ತು ಕರಡಿ—ವಾನರರನ್ನು ಬದುಕಿಸಿದನು. ಅವರೆಲ್ಲರೂ ಎದ್ದು ಆನಂದದಿಂದ ಪ್ರಭುವಿನಬಳಿಗೆ ಬಂದರು. ಅಮೃತವೃಷ್ಟಿಯು ಎರಡು ಸೈನ್ಯಗಳಮೇಲೆ ಆಗಿದ್ದರೂ ಕರಡಿ—ಕಪಿಗಳನ್ನು ಬದುಕಿಸಿತು, ರಾಕ್ಷಸರು ಬದುಕಲಿಲ್ಲ; ಯಾಕೆಂದರೆ ರಾಕ್ಷಸರ ಚಿತ್ತವು ರಾಮನಲ್ಲಿ ಆಸಕ್ತವಾದದ್ದರಿಂದ ಅವರು ಭವಬಂಧನವನ್ನು ಹರಿದು ಮುಕ್ತರಾದರು. ಕರಡಿ—ಕಪಿಗಳು ದೇವಾಂಶರಾದದ್ದರಿಂದ ಬದುಕಿದರು. ಇವೆಲ್ಲವೂ ರಘುಪತಿಯ ಇಚ್ಛೆಯು. ಯಾವತ್ತು ರಾಕ್ಷಸರನ್ನು ಮುಕ್ತರಾಗಮಾಡಿದ ರಘುವೀರನಂಥ ದಯಾಲುಗಳು ಯಾರಿರುವರು ! ಪುಷ್ಪವೃಷ್ಟಿಮಾಡಿ ವಿಮಾನಗಳಲ್ಲಿ ಕುಳಿತು ಯಾವತ್ತು ದೇವತೆಗಳು ತಮ್ಮ ತಮ್ಮ ಸ್ಥಳಗಳಿಗೆ ಹೋದರು. ಯೋಗ್ಯಪ್ರಸಂಗವನ್ನರಿತು ಸುಜ್ಞನಾದ ಶಂಕರನು ರಾಮಚಂದ್ರನಬಳಿಗೆ ಬಂದನು. ಆತನ ಕಮಲನೇತ್ರಗಳು ಅಶ್ರುಪೂರ್ಣವಾಗಿ, ಆತನ ಶರೀರವು ಪುಳಕಿತವಾಯಿತು. ತ್ರಿಪುರಾರಿಯು ಅತ್ಯಂತ ಪ್ರೀತಿಯಿಂದ ಕರದ್ವಯುಗಳನ್ನು ಮುಗಿದು ಸದ್ಗದಿತ ವಾಣಿಯಿಂದ—ಎಲೈ ರಘುಕುಲ ನಾಯಕನೇ, ನೀನು ನನ್ನನ್ನು ರಕ್ಷಿಸಬೇಕು. ನೀನು ನಿರ್ಗುಣನೂ, ಸಗುಣನೂ, ಗುಣಭಾಂಡಾರನೂ, ಸುಂದರನೂ ಆಗಿದ್ದು, ಭ್ರಮರೂಪ ಕತ್ತಲೆಯನ್ನು ನಾಶಗೊಳಿಸುವ ಪ್ರಬಲ ಪ್ರತಾಪವಂತ ಸೂರ್ಯನಾಗಿರುವೆ. ನೀನು ದುಸ್ತರ ಭವಸಾಗರವನ್ನು ನಿವಾರಣ ಮಾಡಿ ನನ್ನನ್ನು ಉದ್ಧರಿಸು. ಎಲೈ ದಾಸ ದುಃಖನಿವಾರಕ—ಪ್ರಭುವೇ, ರಾಮಚಂದ್ರಾ, ನೀನು ನನ್ನ ಹೃದಯದಲ್ಲಿ ಜಾನಕೀ–ಲಕ್ಷ್ಮಣರೊಡನೆ ನಿರಂತರವಾಗಿ ವಾಸಿಸು. ಎಲೈ ನಾಥನೇ, ಅಯೋಧ್ಯೆಯಲ್ಲಿ ನಿನ್ನ ಅಭಿಷೇಕವಾಗುವಾಗ ನಿನ್ನ ಆ ಉದಾರ ಚರಿತ್ರವನ್ನು ನೋಡುವದಕ್ಕಾಗಿ ಬರುವೆನು, ಎಂದು ಬೇಡಿಕೊಂಡು ಶಂಕರನು ಹೋಗಲು, ವಿಭೀಷಣನು ಬಂದು ಪ್ರಭುವಿನ ಚರಣಗಳಮೇಲೆ ಮಸ್ತಕ

ವಿಟ್ಟು ಮೃದುವಾಣಿಯಿಂದ—ಎಲೈ ಶಾರಂಗಪಾಣಿಯೇ, ನನ್ನ ವಿನಂತಿಯನ್ನು ಲಾಲಿಸಬೇಕು. ಪ್ರಭುವು ನೀನು ಕುಲ-ಸೈನ್ಯಗಳೊಡನೆ ರಾವಣನನ್ನು ಸಂಹರಿಸಿ ನಿನ್ನ ಪವಿತ್ರ ಯಶಸ್ಸನ್ನು ತ್ರೈಲೋಕ್ಯದಲ್ಲಿ ವಿಸ್ತರಿಸಿದೆ. ನಾನು ದೀನನೂ, ಪಾತಕಿಯೂ, ಮತಿಹೀನನೂ, ಜಾತಿಹೀನನೂ ಇದ್ದು, ನನ್ನ ಮೇಲೆ ಅತ್ಯಂತ ಕೃಪೆ ಮಾಡಿದೆ. ಇನ್ನು ಪ್ರಭುವು ದಾಸನ ಗೃಹವನ್ನು ಪವಿತ್ರವಾಗಿ ಮಾಡುವದಕ್ಕಾಗಿ ದಯಮಾಡಿಸಿ, ಸ್ನಾನಮಾಡಿ ಯುದ್ಧಶ್ರಮವನ್ನು ಪರಿಹರಿಸಿಕೊಳ್ಳಬೇಕು; ಮತ್ತು ಭಾಂಡಾರವನ್ನೂ, ಮಂದಿರವನ್ನೂ, ಸಂಪತ್ತನ್ನೂ ಅವಲೋಕಿಸಿ ದಯಾನಿಧಿಯು ಅದನ್ನೆಲ್ಲ ವಾನರರಿಗೆ ಹಂಚಿ ವಿಡಬೇಕು. ಎಲೈ ನಾಥನೇ, ಎಲ್ಲ ಬಗೆಯಿಂದಲೂ ನನ್ನನ್ನು ತಮ್ಮವನನ್ನಾಗಿ ಮಾಡಿಕೊಂಡು ನನ್ನನ್ನು ಅಯೋಧ್ಯೆಗೆ ಕರಕೊಂಡು ಹೋಗಬೇಕು; ಅನ್ನಲು, ದೀನದಯಾಲು ಪ್ರಭುವಿನ ಎರಡೂ ಕಣ್ಣುಗಳು ಅಶ್ರುಪೂರ್ಣವಾದವು. ಆಗ ಪ್ರಭುವು—ವಿಭೀಷಣಾ, ನಿನ್ನ ಕೋಶ ಮಂದಿರಗಳೆಲ್ಲ ನನ್ನವೇ ಇರುವವೆಂಬದನ್ನು ಸತ್ಯವಾಗಿ ತಿಳಿದುಕೋ. ಎಲೈ ಬಂಧುವೇ, ಭರತನ ಸ್ಥಿತಿಯು ನೆನಪಾಗಿ ನನಗೆ ಪ್ರತಿಒಂದು ಕ್ಷಣವು ಕಲ್ಪದಂತೆ ಹೋಗುತ್ತಿರುವದು. ಆತನು ತಾಪಸವೇಷದಿಂದ ಕೃಶಾಂಗನಾಗಿ ನಿರಂತರ ನನ್ನ ಧ್ಯಾನವನ್ನೇ ಮಾಡುತ್ತಿರುವನು. ಎಲೈ ಮಿತ್ರನೇ, ಅವನು ಬೇಗನೆ ನನ್ನ ಕಣ್ಣಿಗೆ ಬೀಳುವಂತೆ ಮಾಡಿದರೆ, ನಿನ್ನ ಉಪಕಾರವನ್ನು ಸ್ಮರಿಸುವೆನು. ಹದಿನಾಲ್ಕುವರ್ಷಗಳಾದಬಳಿಕ ನಾನು ಹೋದರೆ ಆ ವೀರನು ಜೀವದಿಂದ ನನ್ನ ಕಣ್ಣಿಗೆ ಬೀಳಲಾರನು. ವಿಭೀಷಣಾ, ನೀನು ಕಲ್ಪದ ವರೆಗೆ ರಾಜ್ಯಭಾರಮಾಡು. ಮನಸ್ಸಿನಲ್ಲಿ ನನ್ನ ಸ್ಮರಣವಿರಲಿ. ಕಡೆಗೆ ಯಾವತ್ತೂ ಸಂತರು ಹೋಗುವ ನನ್ನ ಸ್ಥಾನಕ್ಕೆ ನೀನು ಪ್ರಾಪ್ತನಾಗುವೆ.

ರಾಮಚಂದ್ರನ ಈ ಮಾತುಗಳನ್ನು ಕೇಳಿ ವಿಭೀಷಣನಿಗೆ ಆನಂದವಾಯಿತು. ಆತನು ಮನೆಗೆ ಹೋಗಿ ವಸ್ತ್ರಾಭರಣಗಳಿಂದ ಪುಷ್ಪಕವಿಮಾನವನ್ನು ತುಂಬಿ ಅದನ್ನು ಪ್ರಭುವಿಗೆ ಕಾಣಿಕೆಯಾಗಿ ಕೊಟ್ಟನು. ಆಗ ಕೃಪಾಸಾಗರನು ನಕ್ಕು ವಿಭೀಷಣನನ್ನು ಕುರಿತು—ಮಿತ್ರಾ, ವಿಭೀಷಣಾ, ನೀನು ವಿಮಾನದಲ್ಲಿ ಕುಳಿತು ಆಕಾಶದಲ್ಲಿ ಹೋಗಿ ಅಲ್ಲಿಂದ ಈ ವಸ್ತ್ರಾಲಂಕಾರಗಳ ಮಳೆಸುರಿಸು, ಅನ್ನಲು, ವಿಭೀಷಣನು ಹಾಗೆಯೇ ಮಾಡಿದನು. ಆಗ ಕರಡಿ-ಕಪಿಗಳು ತಮ್ಮ ಮನಸ್ಸಿಗೆ ಬಂದ ವಸ್ತ್ರಾಲಂಕಾರಗಳನ್ನು ತಕ್ಕೊಳ್ಳ ಹತ್ತಿದವು. ವಾನರರು ರತ್ನಗಳನ್ನು ಬಾಯಲ್ಲಿ ಹಾಕಿಕೊಂಡು ಚಲ್ಲಿಕೊಡುತ್ತಿದ್ದರು. ಅದನ್ನು ನೋಡಿ ರಾಮ-ಲಕ್ಷ್ಮಣರು ನಗುತ್ತಿದ್ದರು. ಕೃಪಾನಿಧಿಯಾದ ರಾಮನು ಭಕ್ತರ ಕೃತಿಗಳನ್ನು ನೋಡಿ ಬಹಳ ಕೌತುಕಪಡುವನು. ಎಲೈ ಪಾರ್ವತಿಯೇ, ಶ್ರೀರಾಮನು ನಿರುಪಾಧಿಕ ಪ್ರೇಮದಿಂದ ವಶನಾಗಿ ಕೃಪೆ ಮಾಡುವಂತೆ, ಯೋಗ, ಜಪ, ತಪ, ದಾನ, ವ್ರತ, ಯಜ್ಞ, ನಿಯಮ ಮೊದಲಾದವುಗಳಿಂದ ವಶನಾಗಿ ಕೃಪೆಮಾಡುವದಿಲ್ಲ. ಯಾವತ್ತು ಕರಡಿಕಪಿಗಳು ವಸ್ತ್ರಾಲಂಕಾರಗಳಿಂದ ಅಲಂಕೃತ

ರಾಗಿ, ಪ್ರಭುವಿನಬಳಿಗೆ ಬಂದರು. ಕೋಸಲಾಧೀಶ ಪ್ರಭುವು ಆ ನಾನಾವರ್ಣದ ವಾನ ರರನ್ನು ನೋಡಿ ನಗುತ್ತ ಕೃಪಾದೃಷ್ಟಿಯಿಂದ ನೋಡುತ್ತ, ಅವರನ್ನು ಕುರಿತು—ನಿಮ್ಮ ಬಲದಿಂದಲೇ ನಾನು ರಾವಣನನ್ನು ಕೊಂದು ವಿಭೀಷಣನಿಗೆ ಪಟ್ಟಗಟ್ಟಿದೆನು. ಇನ್ನು ನೀವೆಲ್ಲರೂ ನಿಮ್ಮ ನಿಮ್ಮ ಮನೆಗಳಿಗೆ ಹೋಗಿರಿ, ಎಂದು ಹೇಳಿದನು. ಅದನ್ನು ಕೇಳಿ ಲಜ್ಜಿತರಾದ ವಾನರರಿಗೆ ಪ್ರಭುವಿನ ವಿಯೋಗವು ದುಃಸಹವಾದರೂ, ಆತನ ಅಪ್ಪಣೆ ಯನ್ನು ಮೀರಲಾರದೆ ರಾಮರೂಪವನ್ನು ಹೃದಯದಲ್ಲಿ ಧರಿಸಿ, ಹರ್ಷವಿಷಾದಯು ಕ್ತರಾಗಿ ಪ್ರಭುವನ್ನು ಬಗೆಬಗೆಯಾಗಿ ಸ್ತುತಿಸುತ್ತ ಹೊರಟು ಹೋದರು; ಆದರೆ ಸುಗ್ರೀವ, ನೀಲ, ಜಾಂಬುವಂತ, ಅಂಗದ, ನಲ, ಹನುಮಂತನೇ ಮೊದಲಾದ ಬಲಾ ಢ್ಯ ಸೇನಾಪತಿಗಳು ವಿಭೀಷಣನೊಡನೆ ಪ್ರೇಮವಿಹ್ವಲವಾಗಲು, ರಾಮನು ಅವರ ಪ್ರೇಮಾತಿಶಯವನ್ನು ನೋಡಿ ಅವರೆಲ್ಲರನ್ನು ಪುಷ್ಪಕವಿಮಾನದಲ್ಲಿ ಕುಳ್ಳಿರಿಸಿಕೊಂಡನು. ಬಳಿಕ ಶ್ರೀರಾಮನು ಮನಸ್ಸಿನಲ್ಲಿ ವಿಪ್ರಚರಣಗಳಿಗೆ ವಂದಿಸಿ ವಿಮಾನವನ್ನು ಉತ್ತರದ ಕಡೆಗೆ ಸಾಗಿಸಿದನು. ಆ ವಿಮಾನವು ಸಾಗುತ್ತಿರುವಾಗ ಎಲ್ಲರೂ "ಜಯರಘುವೀರ" ಎಂದು ಗರ್ಜಿಸಿದರು. ಆ ವಿಮಾನದಲ್ಲಿ ಬಹುರಮಣೀಯವಾದದ್ದೊಂದು 'ಬೆಲೆ ಯುಳ್ಳ ಸಿಂಹಾಸನವಿದ್ದಿತು. ಪ್ರಭುವು ಜಾನಕಿಯೊಡನೆ ಅದರ ಮೇಲೆ ಕುಳಿತು ಕೊಂಡನು. ಮೇರುವಿನ ಶಿಖರದ ಮೇಲೆ ಮೇಘ-ವಿದ್ಯುಲ್ಲತೆಗಳು ಶೋಭಿಸುವಂತೆ ಸೀತಾರಾಮಚಂದ್ರರು ಶೋಭಿಸತೊಡಗಿದರು. ಆ ಸುಂದರ ವಿಮಾನವು ಅತ್ಯಂತವೇಗ ದಿಂದ ಸಾಗಿರುವಾಗ ದೇವತೆಗಳು ಆನಂದದಿಂದ ಹೂಮಳೆಗರೆದರು. ಅತ್ಯಂತ ಸುಖ ಕಾರವಾದ ಸುಗಂಧ-ಶೀತಯುಕ್ತ ಮಂದವಾಯುವು ಬೀಸತೊಡಗಿತು. ಸಮುದ್ರ, ನದಿ, ಸರೋವರಗಳ ನೀರುಗಳು ನಿರ್ಮಲವಾದವು. ನಾಲ್ಕುಕಡೆಯಲ್ಲಿ ಶುಭಶಕುನಗಳಾ ಗತೊಡಗಿದವು. ಎಲ್ಲರ ಮನಸ್ಸುಗಳು ಪ್ರಸನ್ನವಾಗಿ ದಿಕ್ಕುಗಳು ಸ್ವಚ್ಛವಾದವು. ಆಗ ರಘುವೀರನು ಜಾನಕಿಯನ್ನು ಕುರಿತು—ಎಲೈ ಜಾನಕೀ, ಈ ಸಮರಾಂಗಣವನ್ನು ನೋಡು, ಇಲ್ಲಿ ಲಕ್ಷ್ಮಣನು ಇಂದ್ರಜಿತುವನ್ನು ಕೊಂದನು. ಹನುಮಂತನೂ, ಅಂಗ ದನೂ ಹೊಡೆದ ದೊಡ್ಡದೊಡ್ಡ ರಾಕ್ಷಸರಿವರನ್ನು ನೋಡು, ಇವರು ರಣಭೂಮಿಯಲ್ಲಿ ಶಯ ನಮಾಡಿರುವರು. ಸುರ-ಮುನಿ ಜನರನ್ನು ಪೀಡಿಸುತ್ತಿದ್ದ ರಾವಣ-ಕುಂಭಕರ್ಣರೂ ಇದೇ ಸ್ಥಳದಲ್ಲಿ ಕೊಲ್ಲಲ್ಪಟ್ಟರು. ಇತ್ತ ನೋಡು, ಇಲ್ಲಿ ಸೇತುವೆಯನ್ನು ಕಟ್ಟಿ ಸುಖ ಧಾನನಾದ ಶಂಕರನನ್ನು ಸ್ಥಾಪಿಸಿರುತ್ತದೆ, ಎಂದು ಹೇಳಿ, ದಯಾಘನನು ಸೀತೆಯೊಡನೆ ಶಂಕರನಿಗೆ ನಮಸ್ಕಾರಮಾಡಿದನು. ಕೃಪಾಸಿಂಧುವು ತಾನು ವಾಸಮಾಡಿದ ಸ್ಥಳಗ ಳನ್ನೆಲ್ಲ ಸೀತೆಗೆ ತೋರಿಸಿ ಅವುಗಳ ಹೆಸರುಗಳನ್ನು ಹೇಳಿದನು. ಕೂಡಲೆ ವಿಮಾನವು ಅತ್ಯಂತ ರಮಣೀಯವಾದ ದಂಡಕಾರಣ್ಯಕ್ಕೆ ಬಂದಿತು. ಅಗಸ್ತಿ ಪ್ರಭೃತಿ ಅನೇಕ ಮುನಿಶ್ರೇಷ್ಠರು ಅಲ್ಲಿ ಇದ್ದರು. ಅವರೆಲ್ಲರ ಆಶ್ರಮಗಳಿಗೆ ಪ್ರಭುವು ಹೋಗಿ ಅವರ

ಲ್ಲರ ಆಶೀರ್ವಾದವನ್ನು ಪಡೆದು, ಜಗದೀಶನು ಚಿತ್ರಕೂಟಕ್ಕೆ ಬಂದನು. ಅತ್ರಿ ಮುನಿಗಳನ್ನು ಸಂತೋಷ ಪಡಿಸಿದ ಬಳಿಕ ವಿಮಾನವು ಅಲ್ಲಿಂದ ಮುಂದಕ್ಕೆ ಸಾಗತೊಡಗಿತು. ಆ ಮೇಲೆ ರಾಮನು ಸೀತೆಗೆ ಕಲಿಮಲವನ್ನು ಕಳೆಯುವ ಯಮುನಾನದಿಯನ್ನು ತೋರಿಸಿದನು. ಆ ಮೇಲೆ ಪವಿತ್ರಗಂಗಾನದಿಯು ಕಾಣಿಸಿತು. ಆಗ ರಾಮನು— ಸೀತೆ, ಈ ಭಾಗೀರಥಿಗೆ ನಮಸ್ಕಾರಮಾಡು. ದರ್ಶನಮಾತ್ರದಿಂದಲೇ ಕೋಟ್ಯವಧಿ ಜನ್ಮಗಳ ಪಾಪಗಳನ್ನು ದೂರಮಾಡುವ ಈ ತೀರ್ಥರಾಜ— ಪ್ರಯಾಗವನ್ನು ನೋಡು. ಇದು ನೋಡು, ಪರಮ ಪುಣ್ಯಕಾರಕವೂ, ಶೋಕ ನಾಶಕವೂ, ಸ್ವರ್ಗಮಂದಿರಪ್ರಾಪ್ತಿಗೆ ನಿಚ್ಚಣಿಕೆಯಂತೆ ಇರುವದೂ ಆದ ತ್ರಿವೇಣೀಸಂಗಮವಿದು. ಆಗೋ ಅದೇ ನೋಡು, ತ್ರಿವಿಧತಾಪಗಳನ್ನೂ, ಭವರೋಗವನ್ನೂ ನಾಶಮಾಡುವ ಅತ್ಯಂತ ಪಾವನವಾದ ಅಯೋಧ್ಯಾನಗರಿಯು.

ದಯಾಘನ ಪ್ರಭುವು ಸೀತೆಯೊಡನೆ ಅಯೋಧ್ಯೆಯನ್ನು ನಮಸ್ಕರಿಸಿದನು. ಆತನ ಕಣ್ಣುಗಳು ಅಶ್ರುಪೂರ್ಣವಾಗಿ ತನುವು ರೋಮಾಂಚಿತವಾಯಿತು. ರಾಮಚಂದ್ರನಿಗೆ ಪುನಃ ಪುನಃ ಹರ್ಷವಾಯಿತು. ಆ ಮೇಲೆ ಪ್ರಭುವು ತ್ರಿವೇಣೀಸಂಗಮಕ್ಕೆ ಬಂದು ಆನಂದದಿಂದ ಸ್ನಾನಮಾಡಿದನು. ತಾನೂ, ಕಪಿಗಳೂ ಬ್ರಾಹ್ಮಣರಿಗೆ ಅನೇಕದಾನಗಳನ್ನು ಕೊಟ್ಟರು. ಆ ಮೇಲೆ ಪ್ರಭುವು ಹನುಮಂತನಿಗೆ— ನೀನು ವಟುವೇಷವನ್ನು ಧರಿಸಿ ಭರತನ ಬಳಿಗೆ ಹೋಗಿ ಆತನಿಗೆ ನನ್ನ ಕುಶಲವನ್ನು ಹೇಳಿ ಆತನ ಸಮಾಚಾರವನ್ನು ತಿಳಿದುಕೊಂಡು ಬಾ, ಎಂದು ಹೇಳಿದನು. ಕೂಡಲೆ ಹನುಮಂತನು ಹೊರಟನು. ಬಳಿಕ ಪ್ರಭುವು ಭರದ್ವಾಜ ಮುನಿಗಳಬಳಿಗೆ ಹೋಗಿ ಬಗೆಬಗೆಯಿಂದ ಅವರನ್ನು ಪೂಜಿಸಿ ಸ್ತುತಿಸಿದನು. ಮುನಿಗಳು ಪ್ರಭುವನ್ನು ಆಶೀರ್ವದಿಸಿದರು. ಪ್ರಭುವು ಹಸ್ತದ್ವಯಗಳನ್ನು ಜೋಡಿಸಿ ಮುನಿಯಪಾದಗಳಿಗೆ ನಮಸ್ಕರಿಸಿ ವಿಮಾನದಲ್ಲಿ ಕುಳಿತು ಸಾಗಹತ್ತಿದನು. ಇತ್ತ ಗುಹನು ಪ್ರಭುವು ಬಂದ ವರ್ತಮಾನವನ್ನು ಕೇಳಿದ ಕೂಡಲೆ "ನೌಕೆಗಳು ಬರಲಿ, ನೌಕೆಗಳು ಬರಲಿ" ಎಂದು ನುಡಿದು ತನ್ನವರೆಲ್ಲರನ್ನು ಕರೆದನು. ವಿಮಾನವು ಭಾಗೀರಥಿಯನ್ನು ದಾಟಿ ಪ್ರಭುವಿನ ಅಪ್ಪಣೆಯಿಂದ ಭಾಗೀರಥಿಯ ಉತ್ತರದಂಡೆಯಲ್ಲಿ ಇಳಿಯಿತು. ಆಗ ಸೀತೆಯು ಹಲವು ಬಗೆಗಳಿಂದ ಗಂಗೆಯನ್ನು ಪೂಜಿಸಿ ಪುನಃ ಪುನಃ ನಮಸ್ಕರಿಸಿದಳು. ಆಗ ಗಂಗೆಯು ಪ್ರಸನ್ನಳಾಗಿ ಸೀತೆಯನ್ನು ಕುರಿತು— ಎಲೈ ಸುಂದರೀ, ನೀನು ಅಖಂಡಸೌಭಾಗ್ಯವತಿಯಾಗು ಎಂದು ಆಶೀರ್ವದಿಸಿದಳು. ರಾಮನು ಬಂದವರ್ತಮಾನವನ್ನು ಕೇಳಿ ಗುಹನು ಪ್ರೇಮವಿಹ್ವಲನಾಗಿ ಓಡುತ್ತ ಪ್ರಭುವಿನ ಸಮೀಪಕ್ಕೆ ಬಂದನು. ಆತನು ಜಾನಕಿಯಿಂದೊಡಗೂಡಿ ರಾಮಲಕ್ಷ್ಮಣರನ್ನು ನೋಡಿ ಮೈಮರೆತು ಭೂಮಿಯ ಮೇಲೆ ಬಿದ್ದನು. ಆತನ ಉತ್ಕಟಪ್ರೇಮವನ್ನು ನೋಡಿ ರಘುನಾಥನು ಆತನನ್ನು ಆನಂದದಿಂದ ಎತ್ತಿ ಎದೆಗವಚಿ

॥ ಶ್ರೀ ಗಣೇಶಾಯನಮಃ ॥

ಶ್ರೀ ಜಾನಕೀವಲ್ಲಭೋ ವಿಜಯತೇ.

## ರಾಮಚರಿತ-ಮಾನಸ

### ಶ್ರೀ ತುಲಸೀ-

# ರಾಮಾಯಣಾಮೃತ



## ಸಪ್ತಮಸೋಪಾನ

### ಉತ್ತರ-ಕಾಂಡ-

ಕುಂದಕುಟ್ಮಲದಂತೆಯೂ, ಚಂದ್ರನಂತೆಯೂ, ಶಂಖದಂತೆಯೂ, ಗೌರವೂ ರಮಣೀಯವೂ ಆದ ಶರೀರವುಳ್ಳ, ಹಾಗು ಅಭೀಷ್ಟವನ್ನು ಪೂರ್ಣಮಾಡುವವನೂ, ಅತ್ಯಂತ ದಯಾಘನನೂ ಆಗಿರುವ, ಕಮಲಗಳಂತೆ ಸುಂದರವೂ, ಕಾಮನನ್ನು ನಾಶಗೊಳಿಸುವಂತಹವೂ ಆದ ನೇತ್ರಗಳುಳ್ಳ ಆ ಜಗನ್ಮಾತೆಯಾದ ಪಾರ್ವತೀರಮಣ—ಶ್ರೀಶಂಕರಪ್ರಭುವನ್ನು ನಾನು ವಂದಿಸುವೆನು.

ಹದಿನಾಲ್ಕುವರ್ಷಗಳ ಅವಧಿಗೆ ಒಂದೇದಿವಸ ಉಳಿಯಿತು. ಆಗಮಾತ್ರ ಅಯೋಧ್ಯಾವಾಸಿಗಳು ಅತ್ಯಂತ ಆತುರರಾದರು. ಶ್ರೀರಾಮಚಂದ್ರನ ವಿಯೋಗದಿಂದ ಕೃಶರಾದ ಯಾವತ್ತು ಸ್ತ್ರೀಪುರುಷರಿಗೆ ಅತ್ಯಂತ ದುಃಖವಾಯಿತು. ಕೌಸಲ್ಯಾದಿ ರಾಮನ ತಾಯಂದಿರ ಚಿತ್ತವೃತ್ತಿಗಳು ಅತ್ಯಂತ ತಲ್ಲೀನವಾಗಿ, ಈಗ ಯಾರೋ ಸೀತಾ ಲಕ್ಷ್ಮಣರೊಡನೆ ರಾಮನು ಬಂದ ಸುದ್ದಿಯನ್ನು ಹೇಳಲಿಚ್ಛಿಸುವರೆಂಬಹಾಗೆ ಅವರಿಗೆ ತೋರಹತ್ತಿತು. ಭರತನ ಬಲಗಣ್ಣು—ಬಲಭುಜಗಳು ಹಾರಹತ್ತಿದವು. ಈ ಶುಭಶಕುನಗಳನ್ನು ನೋಡಿ ಆತನ ಹೊಟ್ಟೆಯಲ್ಲಿ ಆನಂದವು ಹಿಡಿಸದಾಯಿತು. ಆತನು ಮನಸ್ಸಿನಲ್ಲಿ—

ಅವಧಿಯು ಒಂದೇದಿವಸ ಉಳಿದಿದ್ದು, ಪ್ರಭುವು ಏಕೆ ಬಂದಿರಲಿಕ್ಕಿಲ್ಲ? ಕುಟಿಲನೆಂದು ತಿಳಿದು ಆತನು ನನ್ನನ್ನು ಮರೆತಿರಲಿಕ್ಕಿಲ್ಲವಷ್ಟೇ? ಛೆ ಛೆ. ಸೇವಕರ ದೋಷಗಳನ್ನು ನನ್ನ ಪ್ರಭುವು ಎಂದೂ ಲಕ್ಷಿಸುವವನಲ್ಲ; ಯಾಕಂದರೆ ಆತನು ದೀನರ ರಕ್ಷಕನಾದ್ದು ಅತ್ಯಂತ ದಯಾರ್ದ್ರನಾಗಿರುವನು; ಆದ್ದರಿಂದ ಪ್ರಭುವು ಅವಧಿಯು ಮುಗಿಯುವದರೊಳಗಾಗಿ ನನ್ನನ್ನು ಕಂಡೇಕಾಣುವನು. ಇದರಮೇಲೆ ಆತನು ಬರುವ ಅವ

ಧಿಯು ಮೀರಿ ನನ್ನ ಪ್ರಾಣಗಳು ಉಳಿದರೆ ನನ್ನಂಥ ಅಧಮನು ಯಾವನೂ ಇರಲಾರನು. ಎಂದು ರಾಮಚಂದ್ರನ ವಿರಹರೂಪ ಸಮುದ್ರದಲ್ಲಿ ಭರತನು ಗುಟುಕರಿಸುತ್ತಿರಲು, ವಟುರೂಪಧಾರಣಮಾಡಿದ ಮಾರುತಿಯು ನೌಕೆಯಂತೆ ಅಲ್ಲಿಗೆ ಬಂದನು. ಆತನು ತಾಪಸವೇಷದ ಭರತನು ರಾಮವಿರಹವ್ಯಥೆಯಿಂದ ಕಣ್ಣೀರು ಸುರಿಸುತ್ತಿರುವದನ್ನು ನೋಡಿ ಆನಂದದಿಂದ ಆತನನ್ನು ಕುರಿತು—ಭರತಾ, ನೀನು ಯಾರವಿರಹವ್ಯಥೆಯಿಂದ ಹಗಲು ರಾತ್ರಿ ಶೋಕಿಸುತ್ತಿರುವೆಯೋ, ಯಾವನ ಗುಣಪಂಕ್ತಿಗಳ ಪಠಣವನ್ನು ಅವಿರಾಮವಾಗಿ ನಡೆಸಿರುವೆಯೋ ಆ ಸಜ್ಜನ ಸುಖದಾತೃವಾದ ದೇವಮುನಿಪಾಲಕ ರಘುಕುಲತಿಲಕನು ಕ್ಷೇಮದಿಂದ ತಿರುಗಿ ಬಂದಿರುವನು, ಎಂದು ಹೇಳಿದನು.

ನೀರಡಿಕೆಯಿಂದ ಗಂಟಲು ಹರಿಯುವವನಿಗೆ ಅಮೃತಲಾಭವಾಗುವಂತೆ ಮಾರುತಿಯು ಮಾತುಗಳನ್ನು ಕೇಳಿದಕೂಡಲೆ ಭರತನಿಗ ಯಾವತ್ತು ದುಃಖದ ಮರವಾಗಿ ಹೋಯಿತು. ಆತನು ಆ ವಟುವನ್ನು ಕುರಿತು—ಮಹಾರಾಜ, ತಾವು ಯಾರು? ಎಲ್ಲಿಂದ ಬಂದಿರಿ? ತಾವು ನನಗೆ ಅತ್ಯಂತ ಪ್ರಿಯವಾದ ಸುದ್ದಿಯನ್ನು ಹೇಳಿದಿರಿ, ಅನ್ನಲು, ಮಾರುತಿಯು—ಎಲೈ ದಯಾಘನನೇ, ಕೇಳು. ನಾನು ವಾಯುಪುತ್ರ ಹನೂಮಾನ್ ಎಂಬ ಹೆಸರಿನ ವಾನರನಿದ್ದು, ದೀನವತ್ಸಲ ರಘುವೀರನ ದಾಸನಿರುವೆನು; ಎಂದು ಹೇಳಿದಕೂಡಲೆ ಭರತನು ಎದ್ದು, ಆತನನ್ನು ಆದರದಿಂದ ಕಾಣಿಸಿಕೊಂಡು—ಎಲೈ ಕಪಿಯೇ, ನಿನ್ನ ದರ್ಶನದಿಂದಲೇ ನನ್ನ ದುಃಖಗಳೆಲ್ಲ ಲಯಹೊಂದಿದವು. ಇಂದು ನನಗೆ ನನ್ನ ಪ್ರಿಯಕರ ರಾಮನೇ ಕಾಣಿಸಿಕೊಂಡನು. ಎಲೈ ಬಂಧುವೇ, ನಾನು ನಿನಗೆ ಏನು ಕೊಡಲಿ? ನೀನು ಹೇಳುವ ಸುದ್ದಿಗೆ ಕೊಡತಕ್ಕಂಥ ವಸ್ತುವೇ ನನಗೆ ಕಾಣಲೊಲ್ಲದು; ಆದ್ದರಿಂದ ನಾನು ನಿನ್ನ ಈ ಉಪಕಾರದ ಭಾರವನ್ನು ಇಳಿಸಲಾರೆನು. ಇನ್ನು ನೀನು ನನಗೆ ಪ್ರಭುವಿನ ಚರಿತ್ರವನ್ನು ಹೇಳತಕ್ಕದ್ದು, ಎಂದು ಕೇಳಿಕೊಳ್ಳಲು, ಮಾರುತಿಯು ಭರತನ ಚರಣಕ್ಕೆರಗಿ ಶ್ರೀ ರಾಮನ ಲೀಲಾಚರಿತ್ರವನ್ನು ಹೇಳಿದನು. ಆಗ ಭರತನು—ಎಲೈ ಕಪಿಯೇ, ಆ ದಯಾಘನ ಪ್ರಭುವಿಗೆ ನಾನು ಆತನ ದಾಸನೆಂಬ ಸ್ಮರಣವು ಎಂದಾದರೂ ಆಗುತ್ತಿರುವದೇ? ಎಂದು ಕೇಳಲು, ಭರತನ ಈ ನಮ್ರ ಭಾಷಣವನ್ನು ಕೇಳಿ ಮಾರುತಿಯ ಮೈಕೂದಲುಗಳು ನೆಟ್ಟಗಾದವು. ಆತನು ಭರತನ ಚರಣಗಳಿಗೆ ಸಾಷ್ಟಾಂಗವೆರಗಿ—ಸ್ಥಾವರ ಜಂಗಮಗಳ ನಾಯಕನಾದ ರಘುವರನು ತನ್ನ ಮುಖದಿಂದ ನಿನ್ನ ಗುಣಗಳನ್ನು ವರ್ಣಿಸುತ್ತಿರಲು, ಅಂಥ ನೀನು ವಿನಯಶಾಲಿಯು ಹೇಗೆ ಇರಲಿಕ್ಕಿಲ್ಲ? ಎಲೈ ನಾಥನೇ, ನೀನು ರಾಮನ ಪ್ರಾಣಪ್ರಿಯನಲ್ಲ, ಪ್ರಾಣನಾಥನಿರುವೆಯೆಂಬದನ್ನು ಸತ್ಯವಾಗಿ ಹೇಳುವೆನು; ಎಂದು ಹೇಳಿ, ಮಾರುತಿಯು ಭರತನ ಚರಣಗಳಿಗೆರಗಿ ಆತನ ಅಪ್ಪಣೆ ಪಡೆದು ತೀವ್ರವಾಗಿ ರಾಮಚಂದ್ರನ ಬಳಿಗೆ ಹೋಗುವದಕ್ಕಾಗಿ ಹೊರಟನು. ಆತನು ಪ್ರಭುವಿನ ಬಳಿಗೆ ಹೋಗಿ ಭರತನ ಕ್ಷೇಮಸಮಾಚಾರವನ್ನು ತಿಳಿಸಲು, ಪ್ರಭುವು ಆನಂದಪಟ್ಟು ವಿಮಾನದಲ್ಲಿ ಕುಳಿತು ಹೊರಟನು.

ಇತ್ತ ಭರತನು ಅತ್ಯಂತ ಉತ್ಸುಕನಾದ ಹನುಮಂತನು ಅಯೋಧ್ಯೆಗೆ ಬಂದು ಎಲ್ಲ ವೃತ್ತಾಂತವನ್ನು ಭರತನಿಗೆ ನಿವೇದಿಸಿದನು. ಬಳಿಕ ಭರತನು ಅಂತಃಪುರಕ್ಕೆ ಸುದ್ದಿಯನ್ನು ಕಳಿಸಿದನು. ರಘುರಾಮನು ಸುಖರೂಪವಾಗಿ ಬರುತ್ತಿರುವನೆಂಬ ಸುದ್ದಿಯನ್ನು ಕೇಳಿ ರಾಣಿವಾಸದ ಎಲ್ಲ ತಾಯಂದಿರು ಅರಮನೆಯಿಂದ ಭರತನಬಳಿಗೆ ಬಂದು ಪ್ರಭುವಿನ ಯೋಗಕ್ಷೇಮವನ್ನು ವಿಚಾರಿಸಿ ಸಂತೋಷಿಸಹತ್ತಿದರು. ಈ ಸುದ್ದಿಯು ಅಯೋಧ್ಯಾಪಟ್ಟಣದಲ್ಲಿ ಪ್ರಸಿದ್ಧವಾಗಲು, ಎಲ್ಲ ಪುರಜನರು ಆನಂದಭರಿತರಾಗಿ ಪಟ್ಟಣವನ್ನು ಶೃಂಗರಿಸುವದಕ್ಕಾಗಿ ಆತುರಪಟ್ಟು ಅತ್ಯಂತ ಸಡಗರಪಡಹತ್ತಿದರು. ಪಟ್ಟಣವು ಅತ್ಯಂತ ರಮಣೀಯವಾಗಿ ತೋರಹತ್ತಿತು. ಶರಯೂ ನದಿಯ ನೀರು ನಿರ್ಮಲವಾದವು. ಸುಖಕರ ವಾಯುಗಳು ಬೀಸಹತ್ತಿದವು. ಭರತನು ಸುಪ್ರಸನ್ನರಾದ ಗುರುಗಳನ್ನೂ, ಪರಿಜನರನ್ನೂ, ತಮ್ಮನನ್ನೂ, ಬ್ರಾಹ್ಮಣ-ವೃಂದವನ್ನೂ, ಕೂಡಿಕೊಂಡು ಪ್ರೇಮಮಗ್ನನಾಗಿ ಶ್ರೀ ರಾಮಚಂದ್ರನನ್ನು ಎದುರುಗೊಳ್ಳುವದಕ್ಕಾಗಿ ಹೊರಟನು. ಯಾವತ್ತು ಪುರಜನರು ತನ್ನನ್ನು ಎದುರುಗೊಳ್ಳುವದಕ್ಕಾಗಿ ಬಂದಿರುವದನ್ನು ತಿಳಿದು ಶ್ರೀ ರಾಮನು ಆಜ್ಞೆ ಮಾಡಲು ವಿಮಾನವು ಪಟ್ಟಣದ ಸಮೀಪದಲ್ಲಿ ಇಳಿಯಿತು. ಬಳಿಕ ಪ್ರಭುವು ಪರಿವಾರದೊಡನೆ ಇಳಿದು ವಿಮಾನಕ್ಕೆ—"ನೀನು ಕುಬೇರನ ಬಳಿಗೆ ಹೋಗು" ಎಂದು ಆಜ್ಞಾಪಿಸಿದ್ದರಿಂದ ಅದು ಹೋಗುವದಕ್ಕೆ ಹೊರಟಿತು. ಅದಕ್ಕೆ ತನ್ನ ಒಡೆಯನಬಳಿಗೆ ಹೋಗುವಾಗ ಆನಂದವಾದರೂ, ರಾಮವಿಯೋಗದಿಂದ ಅದಕ್ಕೆ ದುಃಖವಾಯಿತು. ಅಷ್ಟರಲ್ಲಿ ಭರತನೂ ಯಾವತ್ತು ಪರಿವಾರದೊಡನೆ ಪ್ರಭುವಿನ ಬಳಿಗೆ ಬಂದನು. ಪ್ರಭುವಿನ ವಿಯೋಗದಿಂದ ಎಲ್ಲರೂ ಕೃಶರಾಗಿದ್ದರು. ವಸಿಷ್ಠ-ವಾಮದೇವಾದಿ ಮುನೀಶ್ವರರನ್ನು ಎದುರಿಗೆ ನೋಡಿ, ಧನುರ್ಬಾಣಗಳನ್ನು ಕೆಳಗಿಟ್ಟು ಪುಲಕಿತಗಾತ್ರನಾಗಿ ಲಕ್ಷ್ಮಣನೊಡನೆ ಶ್ರೀರಾಮನು ಅವರ ಚರಣಗಳಿಗೆ ಎರಗಿದನು. ಗುರುಗಳು ಕುಶಲ ಪ್ರಶ್ನೆ ಮಾಡಲು, ಪ್ರಭುವು—"ತಮ್ಮ ಕೃಪೆಯಿರುವದರಿಂದ ನಾವು ಕ್ಷೇಮದಿಂದಲೇ ಇರುವೆವು" ಎಂದು ಹೇಳಿ, ಆ ಧರ್ಮಧುರಂಧರ ರಘು ಶ್ರೇಷ್ಠನು ಯಾವತ್ತು ಬ್ರಾಹ್ಮಕುಲಕ್ಕೆ ವಂದಿಸಿದನು. ಬಳಿಕ ಭರತನು ಬ್ರಹ್ಮಾದಿದೇವತೆಗಳಿಂದ ಪೂಜ್ಯವಾದ ಪ್ರಭುವಿನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಭೂಮಿಯಮೇಲೆ ಉದ್ದಕ್ಕೆ ಬಿದ್ದನು. ರಾಮನು 'ಏಳು' ಎಂದು ಹೇಳಿದರೂ ಆತನು ಏಳದಾದನು. ಕಡೆಗೆ ದಯಾಸಾಗರನು ಒತ್ತಾಯದಿಂದ ಆತನನ್ನು ಎತ್ತಿ ಎದೆಗವಚಿಕೊಂಡನು. ಹೀಗೆ ಭರತನನ್ನು ಕಾಣುವಾಗ ಪ್ರಭುವಿನ ಶ್ಯಾಮಲ ಶರೀರವು ರೋಮಾಂಚಿತವಾಯಿತು. ಆತನ ನೇತ್ರಗಳಲ್ಲಿ ಅಶ್ರುಪ್ರವಾಹವು ಸುರಿಯಹತ್ತಿತು. ಪ್ರಭುವಿನ ಈ ಭರತಸಂದರ್ಶನವು ಮೂರ್ತಿಮಂತಗಳಾದ ಪ್ರೇಮ-ಶೃಂಗಾರಗಳ ಸಂದರ್ಶನದಂತೆ ಅಲೌಕಿಕ ಶೋಭೆಯನ್ನು ಪ್ರಕಟಿಸಿತು. ಪ್ರಭುವಿನ ಕುಶಲ ಪ್ರಶ್ನೆಗಳಿಗೆ ಭರತನಿಂದ ಬೇಗನೆ ಉತ್ತರವು ದೊರೆಯದಾ

[illegible] ರಿತು—ನಾನು ದುಃಖಿತನಾಗಿ [illegible] ವಿರಹಸಾಗರದಲ್ಲಿ [illegible] ಎಳೆದುಕೊಂಡನು. [illegible] ಎಲ್ಲರೂ ತಾರ ತಮ್ಮಂತೆ [illegible] ಪ್ರೇಮಪಾತ್ರರಾ [illegible] ಧರಿಸಿ ಎಲ್ಲರನ್ನು ಕೃಪಾದೃಷ್ಟಿಯಿಂದ [illegible] ಅವರ ಈ [illegible] [illegible] ಆತನನ್ನು ಕಂಡು, ಆತನ ಪ್ರೇಮ [illegible] ವಿವಾಹವಾಗಿ ಅವರಿಗೆ ಹರ್ಷವಾಯಿತು [illegible] ಹೇಗೆ [illegible] ಪಡುತ್ತಿದ್ದಳು. ವಿಭೀಷಣ, ಸುಗ್ರೀವ, ನಳ, ನೀಲ, ಜಾಂಬವಂತ, ಅಂಗದ, ಹನುಮಂತ ಮೊದಲಾದ ಸುಶೀಲ ವಾನರವೀರರು ಆಗ ಮನೋಹರವಾದ ಮನುಷ್ಯವೇಷಗಳನ್ನು ಧರಿಸಿದ್ದರು. ಅವರೆಲ್ಲರಿಗೂ ಶ್ರೀರಾಮನು ವಸಿಷ್ಠರ ಚರಣಗಳಿಗೆ ನಮಿಸಲು ಹೇಳಿ, ಇವರೇ ನನ್ನ ಕುಲಗುರುಗಳೆಂದು ಅವರಿಗೆ ವಸಿಷ್ಠರ ಪರಿಚಯವನ್ನು ಮಾಡಿಕೊಟ್ಟನು; ಮತ್ತು ಇವರ ಕೃಪೆಯಿಂದಲೇ ಯುದ್ಧದಲ್ಲಿ ರಾಕ್ಷಸರ ನಿಃಪಾತವು ಶಕ್ಯವಾಯಿತೆಂದು ಹೇಳಿ, ವಸಿಷ್ಠರಿಗೂ ಅವರೆಲ್ಲರ ಪರಿಚಯ ಮಾಡಿಕೊಟ್ಟನು.

ಶ್ರೀರಾಮನು ಅರಮನೆಯ ಕಡೆಗೆ ಹೊರಡಲು, ಆಕಾಶದಿಂದ ಪುಷ್ಪವೃಷ್ಟಿಯಾಗತೊಡಗಿತು. ಪುರಜನರು ತಮ್ಮತಮ್ಮ ಮನೆಗಳನ್ನು ಶೃಂಗರಿಸಿ, ಆರತಿ—ಅಕ್ಷತೆಗಳಿಂದ ಶ್ರೀರಾಮನನ್ನು ಪೂಜಿಸುವರು. ಆಗ ಪಟ್ಟಣದಲ್ಲಿ ಮಹೋತ್ಸವವಾರಂಭವಾಯಿತು. ವಸಿಷ್ಠರು ಎಲ್ಲ ಬ್ರಹ್ಮವೃಂದದ ಅನುಜ್ಞೆಪಡೆದು ಸುಮಂತನನ್ನು ಆಜ್ಞಾಪಿಸಿ ಶ್ರೀರಾಮನ ಪಟ್ಟಾಭಿಷೇಕದ ಯೋಗ್ಯವಸ್ತು ಸಾಮಗ್ರಿಗಳನ್ನು ಸಿದ್ಧಗೊಳಿಸಿದರು. ಕರುಣಾನಿಧಿಯು ಭರತನನ್ನು ಕರೆದು ಆತನ ಜಟಾಭಾರವನ್ನು ಕೈಮುಟ್ಟಿ ಇಳಿಸಿದನು ಭಕ್ತವತ್ಸಲ ಪ್ರಭುವು ಮೂವರು ತಮ್ಮಂದಿರಿಗೂ ಎರೆದನು. ಬಳಿಕ ಗುರುಗಳ ಅಪ್ಪಣೆಯಿಂದ ತನ್ನ ಜಟಾಭಾರವನ್ನು ಇಳಿಸಿ ಸ್ನಾನಮಾಡಿ ಅಲಂಕಾರಗಳನ್ನಿಟ್ಟುಕೊಂಡನು. ಆಗ ಆತನ ಅಂಗಕಾಂತಿಯು ಮುಂದೆ ಕೋಟ್ಯವಧಿ ಮದನರು ನಾಚುತ್ತಿದ್ದರು. ಇತ್ತ ಜಾನಕಿಗೂ ಎರೆದು ವಸ್ತ್ರಾಲಂಕಾರಗಳಿಂದ ಆಕೆಯನ್ನು ಅಲಂಕರಿಸುವರು. ಇಂಥ ಶೋಭಾಯಮಾನ ಸೀತೆಯು ಶ್ರೀರಾಮಚಂದ್ರನ ವಾಮಭಾಗದಲ್ಲಿ ವಿರಾಜಮಾನಳಾದದ್ದನ್ನು ನೋಡಿ ರಾಮನ ತಾಯಂದಿರು ಹರ್ಷಿತರಾಗಿ, ತಮ್ಮ ಜೀವಿತವು ಸಫಲವಾಯಿತೆಂದು ತಿಳಿಯತೊಡಗಿದರು. ಆ ಕಾಲದಲ್ಲಿ ಬ್ರಹ್ಮದೇವ, ಶಿವ, ಮುನಿವೃಂದ, ಯಾವತ್ತು

ದೇವತೆಗಳು ವಿಮಾನದಲ್ಲಿ ಕುಳಿತು ಆ ಪ್ರಭುವಿನ ದರ್ಶನಕ್ಕಾಗಿ ನೆರೆದರು. ಪ್ರಭುವಿನ ದರ್ಶನವಾದಕೂಡಲೆ ಮುನಿಗಳ ಮನಸ್ಸುಗಳು ಪ್ರೇಮಪೂರ್ಣವಾದವು. ಕೂಡಲೆ ಅವರು ದಿವ್ಯ ಸಿಂಹಾಸನವನ್ನು ತರಿಸಿದರು. ಅದರ ತೇಜಸ್ಸು ಸೂರ್ಯನಂತೆ ದೈದೀಪ್ಯಮಾನವಾಗಿದ್ದು, ಅವರ್ಣನೀಯವಾಗಿತ್ತು. ಬ್ರಹ್ಮವೃಂದವನ್ನು ನಮಸ್ಕರಿಸಿ ಶ್ರೀ ಸೀತಾರಾಮನು ಅದನ್ನು ಆರೋಹಿಸಿದನು. ಅಮೇಲೆ ಬ್ರಾಹ್ಮಣರು ವೇದಮಂತ್ರೋಚ್ಚಾರಮಾಡತೊಡಗಿದರು. ಸ್ವರ್ಗಸ್ಥದೇವತೆಗಳೂ, ಮುನಿಜನರೂ ಜಯ ಜಯ ಧ್ವನಿ ಮಾಡತೊಡಗಿದರು. ವಸಿಷ್ಠರು ಅಭಿಷೇಕವನ್ನು ಆರಂಭಿಸಿದರು. ಮಗನನ್ನು ನೋಡಿ ವೃದ್ಧ ಕೌಸಲ್ಯೆಯು ಆನಂದವು ಉಕ್ಕೇರಿತು. ಆಗ ಬ್ರಾಹ್ಮಣರಿಗೆ ವಿವಿಧ ದಾನಗಳನ್ನು ಕೊಟ್ಟರು. ತ್ರೈಲೋಕ್ಯ ಸ್ವಾಮಿಯು ಸಿಂಹಾಸನಾರೂಢನಾದದ್ದನ್ನು ನೋಡಿ ದೇವತೆಗಳು ದುಂದುಭಿಗಳನ್ನು ಬಾರಿಸಿದರು. ಗಂಧರ್ವರೂ, ಕಿನ್ನರರೂ ಗಾಯನ ಮಾಡತೊಡಗಿದರು. ಅಪ್ಸರೆಯರು ಕುಣಿಯತೊಡಗಿದರು. ದೇವತೆಗಳೂ, ಮುನಿಗಳೂ ಪರಮಾನಂದ ನಿಮಗ್ನರಾದರು. ಭರತಾದಿ ಬಂಧುಗಳು, ವಿಭೀಷಣ—ಅಂಗದ—ಹನುಮಂತಾದಿಕರೊಡನೆ ಛತ್ರ, ಚಾಮರ, ಬೀಸಣಿಕೆ, ಧನುಷ್ಯ, ಖಡ್ಗ, ಢಾಲು, ಶಕ್ತಿ, ಇತ್ಯಾದಿ ರಾಜಚಿನ್ಹಗಳನ್ನು ಕೈಯಲ್ಲಿ ಹಿಡಿದುಕೊಂಡು ನಿಂತುಕೊಂಡರು. ತಮ ತಮಗೆ ತಿಳಿದಂತೆ ಪ್ರಭುವನ್ನು ಸ್ತುತಿಸಿ ದೇವತೆಗಳು ಹೊರಟು ಹೋದರು. ಅಮೇಲೆ ವೇದಗಳು ಸ್ತುತಿಪಾಠಕರ ರೂಪಗಳನ್ನು ಧರಿಸಿ ಶ್ರೀರಾಮನ ಬಳಿಗೆ ಬಂದವು. ಕೃಪಾನಿಧಿಯಾದ ಸರ್ವಜ್ಞ ಪ್ರಭುವು ಅವುಗಳನ್ನು ಬಹಳವಾಗಿ ಸತ್ಕರಿಸಿದನು; ಆದರೆ ಈ ಮರ್ಮವು ಯಾರಿಗೂ ತಿಳಿಯಲಿಲ್ಲ.

ವೇದಗಳು ಪ್ರಭುವಿನ ಗುಣಗಳ ಗಾಯನಮಾಡತೊಡಗಿ ಅತನನ್ನು ಕುರಿತು—ಎಲೈ ಸಗುಣಾ, ನಿರ್ಗುಣರೂಪಾ, ಅದ್ವಿತೀಯಸುಂದರಾ, ಸಾಮಂತಚಕ್ರಚೂಡಾಮಣೀ, ನಿನಗೆ ವಿಜಯುವಿರಲಿ. ರಾವಣ—ಮುಖ್ಯರಾದ ಪ್ರಚಂಡಪ್ರಬಲ ದುಷ್ಟರಾಕ್ಷಸರನ್ನು ನೀನು ನಿನ್ನ ಭುಜಬಲದಿಂದ ಸಂಹರಿಸಿದೆ. ನಿನ್ನ ಈ ಮನುಷ್ಯಾವತಾರದಿಂದ ಸಂಸಾರಪ್ರಚಾರವು ಭಗ್ನವಾಗಿ, ತಜ್ಜನ್ಯದಾರುಣ ದುಃಖಗಳ ನಾಶವಾಗಿರುತ್ತದೆ. ಎಲೈ ಪ್ರಣತವತ್ಸಲದಯಾಲುವೇ, ನಿನಗೆ ವಿಜಯವಿರಲಿ. ಶಕ್ತಿಸಹಿತನಾದ ಪ್ರಭು—ನಿನ್ನನ್ನು ನಾವು ವಂದಿಸುವೆವು. ಶ್ರೀಹರಿಯೇ, ನಿನ್ನ ದುರ್ಧರ ಮಾಯೆಯು ಬದ್ಧರಾಗಮಾಡಿದ್ದರಿಂದ ಸುರ, ಅಸುರ, ದೇವ, ನಾಗ, ನರ ಮೊದಲಾದ ಸ್ಥಾವರ ಜಂಗಮಾತ್ಮಕ ವಿಶ್ವದ ಅಪರಂಪಾರ ಭ್ರಮಣವು ಸಂಸಾರಯಾತ್ರೆಯಲ್ಲಿ ನಡೆಯುರುವದು. ಆ ವಿಶ್ವವು ಕಾಲ, ಕರ್ಮ, ಗುಣ ಇವುಗಳಲ್ಲಿಯೇ ಸಿಕ್ಕು ಒದ್ದಾಡುತ್ತಿರುವದು. ಆ ವಿಶ್ವದಕಡೆಗೆ ನೀನು ಕೃಪಾಪೂರ್ವಕವಾಗಿ ನೋಡಿದಾಗ ಅದರ ತ್ರಿವಿಧತಾಪಗಳು ನಾಶಹೊಂದುವವು. ಎಲೈ ಭವಭಯವಿಭಂಜನದಕ್ಷ ರಾಮಾ, ನಮ್ಮನ್ನು ರಕ್ಷಿಸಬೇಕು. ನಾವು ಶರಣಾಗತರಿರುವೆವು.

ಹೇ ಹರೇ, ಜ್ಞಾನದ ಅಹಂಕಾರದಿಂದ ಉನ್ಮತ್ತರಾಗಿ, ಸಂಸಾರದ ನಾಶಮಾಡುವ ನಿನ್ನ ಭಕ್ತಿಯನ್ನು ಆದರಿಸದವರು, ದೇವತೆಗಳಿಗೂ ದುರ್ಲಭವಾದ ಗತಿಯನ್ನು ಹೊಂದಿದಾಗೂ ಅಲ್ಲಿಂದಲಾದರೂ ಭ್ರಷ್ಟರಾಗುತ್ತಿರುವದನ್ನು ನಾವೇ ನೋಡುತ್ತಿರುವೆವು; ಮತ್ತು ಕೇವಲ ನಿನ್ನನ್ನೇನಂಬಿ, ಯಾವತ್ತು ಆಶೆಗಳನ್ನು ಬಿಟ್ಟು ನಿನ್ನ ದಾಸರಾಗಿ ನಿನ್ನ ನಾಮವನ್ನು ಜಪಿಸುವವರು, ಎಲೈ ನಾಥನೇ, ಕಷ್ಟವಿಲ್ಲದೆ ಸಂಸಾರದಿಂದ ಮುಕ್ತರಾಗುತ್ತಿರುವದನ್ನೂ ನಾವೇ ನೋಡುತ್ತಲೇ ಇರುವೆವು; ಆದ್ದರಿಂದ ಎಲೈ ಪ್ರಭೋ, ಅಹಲ್ಯೆಯನ್ನು ಉದ್ಧರಿಸಿದ, ಹಾಗು ಗಂಗೆಯ ಉಗಮಸ್ಥಾನವಾದ, ಧ್ವಜ–ವಜ್ರ–ಅಂಕುಶ–ಕಮಲಗಳಿಂದ ಚಿಹ್ನಿತವಾದ, ವನವಾಸದ ಮುಳ್ಳುಗಳ ಗಾಯಗಳುಳ್ಳ ನಿನ್ನ ಚರಣಕಮಲಗಳಭಜನೆಯು ನಿತ್ಯದಲ್ಲಿಯೂ ನಮಗೆ ಒದಗಲಿ.

ಎಲೈ ಪ್ರಭುವೇ, ಮನೋಹರವಾದ ಸಂಸಾರವೃಕ್ಷರೂಪವಾದ ನಿನ್ನನ್ನು ನಾವು ವಂದಿಸುವೆವು. ಆ ವಿಶ್ವವೃಕ್ಷದಮೂಲವು ಅವ್ಯಕ್ತವು. (ಅದಕ್ಕೇ ಸಾಂಖ್ಯಶಾಸ್ತ್ರದಲ್ಲಿಪುರುಷ ಎಂಬ ಸಂಜ್ಞೆಯಿರುವದು) ಈವೃಕ್ಷದ ತಲು, ಅಂದರೆ ದೇಹವು ಅನಾದಿಯಾಗಿರುವದು. (ಇದಕ್ಕೇ ಪ್ರಧಾನ ಅಥವಾ ಪ್ರಕೃತಿಅನ್ನುವರು) ಆ ವೃಕ್ಷದತೊಗಟೆಗಳು(ಮಹತ್ತತ್ವ ಸಾತ್ವಿಕಾಹಂಕಾರ, ರಾಜಸಾಹಂಕಾರ, ತಾಮಸಾಹಂಕಾರ, ಎಂಬ) ನಾಲ್ಕು ಇರುವವು. ಅದಕ್ಕೆ (ಸತ್ವ–ರಜಸ್ತಮಗಳೆಂಬ ಮೂರು ಗುಣಗಳು, ಕಾಲ, ಜೀವ, ಕರ್ಮ ಕೂಡಿ) ಆರು ಮುಖ್ಯ ಹರಿಗಳಿರುವವು. ಅದಕ್ಕೆ (ಮನ, ಬುದ್ಧಿ, ಚಿತ್ತ, ಅಹಂಕಾರ ಎಂಬ ಅಂತಃಕರಣ ಚತುಷ್ಟಯಗಳು, ಪೃಥ್ವೀ–ಅಪ್–ತೇಜ–ವಾಯು–ಆಕಾಶಎಂಬ ಪಂಚಮಹಾಭೂತಗಳು, ಶಬ್ದ, ರೂಪ, ರಸ, ಗಂಧ, ಸ್ಪರ್ಶ ಎಂಬ ಐದು ವಿಷಯಗಳು, ಕರ್ಣ, ಚರ್ಮ, ನೇತ್ರ, ಜಿಹ್ವಾ, ಘ್ರಾಣ ಎಂಬ ಪಂಚ ಜ್ಞಾನೇಂದ್ರಿಯಗಳು, ಕೈ, ಕಾಲು, ಶಿಶ್ನ, ಗುದ, ವಾಣಿ ಎಂಬ ಐದು ಕರ್ಮೇಂದ್ರಿಯಗಳು, ಒಂದು ಪುರುಷತತ್ವ ಕೂಡಿ ಹೀಗೆ) ಇಪ್ಪತ್ತೈದು ಉಪಶಾಖೆಗಳು ಇರುವವು. ಆ ವೃಕ್ಷಕ್ಕೆ (ಸ್ವೇದಜ, ಅಂಡಜ, ಜಾರಜ, ಉದ್ಭಿಜಗಳೆಂಬ ಅನೇಕ ಜೀವರೂಪ) ಹಲವು ಎಲೆಗಳಿದ್ದು, (ವಾಸನಾರೂಪದ) ಹಲವು ಪುಷ್ಪಗಳೂ ಇರುವವು. ಆ ವೃಕ್ಷಕ್ಕೆ (ಪಾಪಪುಣ್ಯಾನುಸಾರವಾಗಿ) ಕಟುತರ, ಮಧುರತರ ಎಂಬ ಎರಡುಬಗೆಯ ಫಲಗಳಾಗಿರುವವು. ಆ ವೃಕ್ಷದ ಆಶ್ರಯದಿಂದ(ಅಹಂ ಮಮತ್ವಾತ್ಮಕ ಅವಿದ್ಯಾರೂಪ) ಒಂದೇ ಬಳ್ಳಿಯು ಇರುತ್ತಿದ್ದು, ಅದಕ್ಕೆ ನಿತ್ಯದಲ್ಲಿ ಹೊಸ ಎಲೆಗಳೂ, ಹೂಗಳೂ(ಜೀವನ ಪುನರುಜ್ಜೀವನ ಹಾಗು ವಾಸನಾಪರಂಪರೆಗಳ ಉತ್ಪತ್ತಿ–ಲಯರೂಪದವು) ಆಗುತ್ತಲೇ ಇರುವವು. ಎಲೈ ನಾಥನೇ, ಅಜವೂ, ಅದ್ವೈತವೂ, ಅನುಭವಗಮ್ಯವೂ, ಮನಸ್ಸಿಗೆ ಹೊರಗಾದದ್ದೂ ಆದ ಬ್ರಹ್ಮವನ್ನು ಧ್ಯಾನಿಸುತ್ತಿರುವವರು, ಆ ಬ್ರಹ್ಮವನ್ನು ತಿಳಿಯಲಿ, ಅದರ ಗಾಯನಮಾಡುತ್ತಲೂ ಇರಲಿ; ಆದರೆ ನಾವಂತು ಯಾವಾಗಲೂ ನಿನ್ನ ಸಗುಣರೂಪದ ಕೀರ್ತಿಯ ಗಾಯನವನ್ನೇ ಮಾಡುತ್ತಿ

[illegible] ಸಮ್ಯಕ್ [illegible]. ಪ್ರವೃತ್ತಿಕ [illegible] ನಿರಹಂಕಾರರಹಿತರಾಗಿ ನಿನ್ನ [illegible] ಮನಸ್ಸನ್ನು ನಿನ್ನ [illegible] ಜೋಡಿಸುತ್ತಿರುವರೋ [illegible]

[illegible] ಸರ್ವೋತ್ಕೃಷ್ಟ [illegible] ಲೋಕೋಪಕಾರಕವಾದ [illegible] ಬಳಿಕ ಶ್ರೀ ಶಂಭುವು [illegible] ಅತ್ಯಂತ ಸಂತೋಷಿತನಾಗಿ ಆತನು [illegible] — [illegible], ಈ ಭವದುಃಖವ [illegible]. ಈ ಶರಣಾಗತನನ್ನು ರಕ್ಷಿಸಬೇಕೆಂಬುದೇ ಪ್ರಭುವಿನ [illegible] ನೀನು ರಾವಣನನ್ನು ಸಂಹರಿಸಿ ಪೃಥ್ವಿಯ [illegible]. ಎಲೈ [illegible] ಅದರಂತೆ ನಮ್ಮ [illegible] ರಕ್ಷಿಸು. ಎಲೈ ಹರಿಯೇ, ಈ [illegible] ವಿಪುಲ ಚಿಂತಾ [illegible] ಕೇವಲ ನಿನ್ನ ಪದಪಂಕಜಗಳ ಅನಾದರ ಮಾಡು[illegible] ಫಲವಾಗಿರುವನು. ನಿನ್ನ [illegible]ಪಂಕಜದಲ್ಲಿ ಅನುರಕ್ತರಾಗದವರಂತು ಈ ಅಗಾಧವಾದ ಸಂಸಾರಸಾಗರದಲ್ಲಿ ಮುಳುಗುತ್ತಿರುವರು. ನಿನ್ನ ಪದಾಂಬುಜವನ್ನು ಪ್ರೀತಿಸುವವರು ಮಹಾಪುರುಷರು. ಅವರು ಯಾವಾಗಲೂ ಅತ್ಯಂತ ದರಿದ್ರರೂ, ದುಃಖಿಗಳೂ ಆಗುವರು. ನಿನ್ನ ಲೀಲಾಚರಿತ್ರವನ್ನು ಅವಲಂಬಿಸಿದವರಿಗೆ ಅನಂತನಾದ ನೀನೂ, ಸಂತರೂ ಯಾವಾಗಲೂ ಪ್ರಿಯರಾಗಿ ತೋರುವಿರಿ. ರಾಗ, ಲೋಭ, ಮಾನ, ಮದಗಳ ಸಂಪರ್ಕವಿಲ್ಲದವರಿಗೆ ವೈಭವ-ವಿಪತ್ತುಗಳು ಸಮಾನವಾಗಿ ತೋರುವವು; ಆದ್ದರಿಂದಲೇ ಮುನಿವರರು ಯೋಗಯಾಗಾದಿಗಳ ಸಂಬಂಧವಿಡದೆ ಯಾವಾಗಲೂ ಆನಂದದಿಂದ ನಿನ್ನ ಸೇವಕರಾಗಿಯೇ ಇದ್ದು, ಶುದ್ಧಾಂತಃಕರಣದಿಂದ ನಿನ್ನನ್ನು ಸೇವಿಸುತ್ತಿರುವರು. ಅಂಥ ಸಂತರು ಮಾನಾಪಮಾನಗಳನ್ನು ಶೀರಸಮನಾಗಿ ಎಣಿಸಿ ಯಾವತ್ತು ಪೃಥ್ವಿಯಲ್ಲಿ ಆನಂದದಿಂದ ಸಂಚರಿಸುತ್ತಿರುವರು. ಅಂಥ ಮುನಿಗಳ ಮನಸ್ಸೆಂಬ ಕಮಲದಲ್ಲಿ ಭೃಂಗದಂತೆ ನಿನ್ನ ವಾಸವಿರುವದರಿಂದ ನನಗೂ ನಿನ್ನ ಭಜನೆಯೇ ಘಟಿಸಲಿ. ಎಲೈ ಜಗತ್ಪಾಲಕಾ, ರಘುನಂದನಾ, ದೀನನಾದ ನನನ್ನು ಅವಲೋಕಿಸಿ ನನ್ನ ಮಹತ್ ದ್ವೈತವನ್ನು ನಿಶ್ಶೇಷವಾಗಿ ಮಾಡು; ಮತ್ತು ನಿನ್ನ ಚರಣದಲ್ಲಿ ಅನನ್ಯ ಭಕ್ತಿಯೂ, ನಿರಂತರ ಸತ್ಸಂಗವೂ ಒದಗುವಂತೆ ನನಗೆ ವರಪ್ರದಾನಮಾಡು. ಎಂದು ಉಮಾಪತಿಯು ರಾಮಚಂದ್ರನ ಗುಣಗಳನ್ನು ವರ್ಣಿಸಿ ಸಂತುಷ್ಟನಾಗಿ ಕೈಲಾಸಪರ್ವತಕ್ಕೆ ಗಮನಮಾಡಿದನು. ಬಳಿಕ ಪ್ರಭುವು ಕಪಿಗಳಿಗೆ ಯಾವತ್ತು ಸುಖೋಪಭೋಗಗಳಿಂದ ಸಮೃದ್ಧವಾದ ನಿವಾಸಸ್ಥಾನಗಳನ್ನು ಕೊಡಿಸಿದನು.

ಅಯೋಧ್ಯೆಯಲ್ಲಿ ದಿನದಿನಕ್ಕೆ [illegible]
ಗಿದವು. [illegible] ಶ್ರೀರಾಮನ
ಚರಣಗಳ [illegible]
[illegible]
[illegible]
ತಿಂಗಳು [illegible] "[illegible]
ಮ್ಮೆಲ್ಲರಿಗೆ [illegible]
ಲಿಲ್ಲವು. [illegible] ಎಲ್ಲರನ್ನು [illegible]
ಅವರನ್ನು [illegible] — [illegible]
ಎವರಿಗೆ [illegible] ಕೇಳಿರಿ! [illegible]
ವನ್ನು [illegible] ನನಗೆ ಅತ್ಯಂತ [illegible] , [illegible]
ಐಶ್ವರ್ಯ [illegible]
[illegible] ನನಗೆ [illegible]. ಇದು ಕೇವಲ ನನ್ನ [illegible]ವಲ್ಲ.
ತಮ್ಮ ಸೇವಕರು ಪ್ರಿಯರಾಗಿ ತೋರುವದು ಸರ್ವಸಾಧಾರಣ ನಿಯಮವಾಗಿರುವದು;
ಆದರೂ ಎಲ್ಲರಿಗಿಂತ ಹೆಚ್ಚು ಪ್ರೇಮವನ್ನು ನನ್ನ ಸೇವಕರ ಮೇಲೆ ಮಾಡುವದು ನನ್ನ ಬಿರುದಾಗಿರುವದು. ಮಿತ್ರರೆ, ಇನ್ನು ನೀವು ಎಲ್ಲರೂ ನಿಮ್ಮ ನಿಮ್ಮ ಮನೆಗಳಿಗೆ ಹೋಗಿ, ಯಾವಾಗಲೂ ನನ್ನ ಭಜನ ಮಾಡುವವರಾಗಿರಿ. ನಾನು ಅವಿನಾಶಿಯೂ, ಸರ್ವವ್ಯಾಪಕನೂ, ಸರ್ವಜನ ಹಿತಕರ್ತೃವೂ ಆಗಿರುವೆನೆಂಬ ವಿಶ್ವಾಸದಿಂದ ನನ್ನಮೇಲೆ ಅತ್ಯಂತ ಪ್ರೇಮ ಮಾಡುತ್ತ ಹೋಗಿರಿ, ಎಂದು ಹೇಳಿ ಜ್ಞಾನೋಪದೇಶ ಮಾಡಿ ಎಲ್ಲರಿಗೂ ಬಗೆ ಬಗೆಯ ವಸ್ತ್ರಾಲಂಕಾರಗಳನ್ನು ಉಡುಗರೆಯಾಗಿ ಕೊಡಿಸಿ ಅವರವರ ಸ್ಥಳಗಳಿಗೆ ಎಲ್ಲರನ್ನು ಕಳಿಸಿದನು. ಅಂಗದಾದಿ ವಾನರರು ಪ್ರಭುವನ್ನು ಅಗಲಲಾರದೆ, ಆತನನ್ನು ಎಷ್ಟು ಪ್ರಾರ್ಥಿಸಿದರೂ, ಪ್ರಭುವಿನ ಒಲವಿಗೆ ವಿರುದ್ಧವಾಗಿ ನಡೆಯಲಾರದೆ ಆತನ ಚರಣಗಳನ್ನು ಹೃದಯದಲ್ಲಿ ಸ್ಮರಿಸಿ ಅವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗಬೇಕಾಯಿತು. ಹನುಮಂತನು ಸುಗ್ರೀವನ ಚರಣಗಳಿಗೆ ವಂದಿಸಿ ಬಹು ವಿನಯದಿಂದ— ಮಹಾರಾಜ, ನಾಲ್ಕು ದಿನ ಪ್ರಭು-ಚರಣಸೇವೆಮಾಡಿ ತಿರುಗಿ ತಮ್ಮ ಚರಣದರ್ಶನಕ್ಕೆ ಬರುವೆನು." ಎಂದು ಪ್ರಾರ್ಥಿಸಲು, ಸುಗ್ರೀವನು —ಎಲೈ ವಾಯುಕುಮಾರಾ, ನೀನು ಪುಣ್ಯರಾಶಿಯಿರುವೆ. ಹೋಗು, ದಯಾಘನನನ್ನು ಸೇವಿಸುತ್ತಲಿರು, ಎಂದು ಹೇಳಿ ಕಪಿಪತಿಯು ಕೂಡಲೆ ಹೊರಟನು. ಗರುಡಾ, ಪ್ರಭುವಿನ ಮನಸ್ಸು ಕಠೋರವಾದಾಗ ವಜ್ರಕ್ಕಿಂತ ಕಠೋರವಾಗುವದು. ಮೃದುವಾದಾಗ ಹೂವಿಗಿಂತಲೂ ಕೋಮಲವಾಗುವದು. ಅದರ ಅಂತವು ಕ್ವಚಿತ್ತಾಗಿ ಯಾರಿಗೆ ಹತ್ತಿರುವದೋ ತಿಳಿ.

ಹುಡು ಇರಲಿ. ಬಳಿಕ ದಯಾಘನನು ಗುಹನನ್ನು ಕರೆದು ಆತನನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿ ಕಳುಹಿದನು.

ಶ್ರೀರಾಮನು ರಾಜ್ಯಾರೂಢನಾದಕೂಡಲೆ ತ್ರೈಲೋಕ್ಯವು ಹರ್ಷಿತವಾಗಿ ಯಾವತ್ತು ದುಃಖಗಳು ಇಲ್ಲದಾದವು. ಜನರ ದ್ವೇಷಭಾವ-ವೈಷಮ್ಯಗಳು ಅಳಿದವು. ಪ್ರಜೆಗಳು ತಮ್ಮತಮ್ಮ ವರ್ಣಾಶ್ರಮದ ವೇದವಿಹಿತ ಧರ್ಮಗಳನ್ನು ಆಸ್ಥೆಯಿಂದ ಆಚರಿಸತೊಡಗಿದರು. ಇದರಿಂದ ಅವರು ಯಾವಾಗಲೂ ಸುಖಿಗಳಾಗಿ ಭಯ-ಶೋಕ-ರೋಗವಿಮುಕ್ತರಾದರು. ತಾಪತ್ರಯಗಳ ಬಾಧೆಯು ರಾಮರಾಜ್ಯದಲ್ಲಿ ಯಾರಿಗೂ ಇದ್ದಿಲ್ಲ. ಧರ್ಮವು ನಾಲ್ಕೂ ಕಾಲುಗಳಿಂದ ಜಗತ್ತಿನಲ್ಲಿ ವ್ಯವಹರಿಸುತ್ತಲಿತ್ತು. ಪಾಪವೆಂಬುದು ಸ್ವಪ್ನದಲ್ಲಿಯೂ ಘಟಿಸುತ್ತಿದ್ದಿಲ್ಲ. ಯಾವತ್ತು ಸ್ತ್ರೀ ಪುರುಷರು ರಾಮಭಜನೆಯಲ್ಲಿ ನಿಮಗ್ನರಾಗಿದ್ದು, ಎಲ್ಲಜನರು ರಾಮಪದಕ್ಕೆ ಅಧಿಕಾರಿಗಳಾಗಿದ್ದರು. ಅಪಮೃತ್ಯುಗಳಾಗಲಿ, ಬೇರೆ ಪೀಡೆಗಳಾಗಲಿ ಉಳಿಯಲಿಲ್ಲ. ಎಲ್ಲರ ದೇಹಗಳೂ ಸುಂದರವಾಗಿಯೂ ನಿರೋಗಿಯಾಗಿಯೂ ಇದ್ದವು. ಯಾರೂ ದರಿದ್ರರೂ, ದುಃಖಿಗಳೂ, ದೀನರೂ ಆಗಿದ್ದಿಲ್ಲ. ಜ್ಞಾನಹೀನರೂ, ಲಕ್ಷಣಹೀನರೂಯಾರೂ ಇದ್ದಿಲ್ಲ. ಯಾವತ್ತು ಸ್ತ್ರೀ ಪುರುಷರು ನಿರಭಿಮಾನಿಗಳೂ, ಧರ್ಮನಿರತರೂ, ಪುಣ್ಯಾತ್ಮರೂ, ಚತುರರೂ, ಸರ್ವಗುಣಸಂಪನ್ನರೂ, ಆಗಿದ್ದರು. ಎಲ್ಲರೂ ಗುಣಜ್ಞರೂ, ಪಂಡಿತರೂ, ಜ್ಞಾನಿಗಳೂ, ಕೃತಜ್ಞರೂ ಆಗಿದ್ದು, ಕಪಟವಿದ್ಯೆಯು ಯಾರಿಗೂಗೊತ್ತಿದ್ದಿಲ್ಲ. ಎಲೈ ಗರುಡನೇ ಕೇಳು. ರಾಮರಾಜ್ಯದೊಳಗೆ ಚರಾಚರವಿಶ್ವದಲ್ಲಿ ಕಾಲ-ಕರ್ಮ-ಸ್ವಭಾವ-ಗುಣ ಇವುಗಳಿಂದ ಆಗುವ ಕ್ಲೇಶಗಳು ಯಾರಿಗೂ ಆಗುತ್ತಿದ್ದಿಲ್ಲ. ಏಳು ಸಮುದ್ರಗಳಿಂದ ಸುತ್ತುಗಟ್ಟಿದ ಪೃಥ್ವಿಯ ಚಕ್ರವರ್ತಿತ್ವವುಒಬ್ಬಕೋಸಲೇಶ್ವರ ರಘುಪತಿಯ ಕಡೆಗೇ ಇತ್ತು. ಪ್ರತಿಒಂದು ರೋಮದಲ್ಲಿ ಅನೇಕ ಬ್ರಹ್ಮಾಂಡವು ವಾಸಿಸುತ್ತಿರುವ ಪ್ರಭುವಿಗೆ ಇದೇನು ಮಹತ್ವದ ಸಂಗತಿಯಲ್ಲ; ಹಾಗೆ ಹೇಳುವದು ಪ್ರಭುವಿನ ಮಹಿಮೆಗೆ ಒಂದು ಬಗೆಯಿಂದ ಗೌಣವೇ ಆಗಿರುವದು. ಪ್ರಭುವಿನ ಲೀಲೆಯಲ್ಲಿ ಪ್ರೇಮವುಂಟಾಗುವದೇ ಆತನನ್ನು ತಿಳಿದದ್ದರ ಫಲವಾಗಿರುವದೆಂದು ಯೋಗಸಿದ್ಧಮುನಿಗಳ ಮತವಿರುವದು. ರಾಮರಾಜ್ಯದಲ್ಲಿ ಯಾವತ್ತು ಸ್ತ್ರೀ ಪುರುಷರು ಉದಾರರೂ, ಪರೋಪಕಾರಿಗಳೂ, ವಿಪ್ರಚರಣಸೇವಕರೂ ಆಗಿದ್ದರು. ಯಾವತ್ತು ಪುರುಷರು ಏಕಪತ್ನೀ ವ್ರತಸ್ಥರೂ, ಸ್ತ್ರೀಯರು ಪತಿವ್ರತೆಯರೂ ಆಗಿದ್ದರು. ರಾಮರಾಜ್ಯದಲ್ಲಿ ಮನಸ್ಸಿನಿಂದಲ್ಲದೆ ಜಯಿಸತಕ್ಕದ್ದು ಬೇರೆ ಯಾವದೂ ಇದ್ದಿಲ್ಲ. ಆಗ ಗಿಡಬಳ್ಳಿಗಳು ಯಾವಾಗಲೂ ಫಲ-ಪುಷ್ಪಗಳಿಂದ ಜಗ್ಗುತ್ತಿದ್ದವು. ಪಶು-ಮೃಗ-ಪಕ್ಷಿಗಳು ಪರಸ್ಪರ ವೈರಭಾವವನ್ನು ಬಿಟ್ಟು ಆಚರಿಸುತ್ತಲಿದ್ದವು. ಲತಾ-ವೃಕ್ಷಗಳು ಬೇಕಾದಾಗ ಮಧುವನ್ನು ಸ್ರವಿಸುತ್ತಿದ್ದವು. ಆಕಳು ಸಮೃದ್ಧವಾಗಿ ಹಾಲು ಕರೆಯುತ್ತಿದ್ದವು. ಪೃಥ್ವಿಯು ಯಾವಾಗಲೂ ವಿಪುಲಧಾನ್ಯ

ಸಂಪನ್ನವಾಗಿರುತ್ತಿತ್ತು. ಹೀಗೆ ಈ ಕೃತಯುಗದ ಸಂಗತಿಗಳು ತ್ರೇತಾಯುಗದಲ್ಲಿ ಒದಗತೊಡಗಿದವು. ಜಲಾಶಯಗಳು ಶೀತಲ-ಸ್ವಚ್ಛ-ಸ್ವಾದಿಷ್ಟ ಜಲ ಸಮೃದ್ಧವಾದವು. ಸಮುದ್ರವು ತನ್ನ ಮೇರೆಯನ್ನು ದಾಟದೆ ರತ್ನಗಳನ್ನು ದಂಡೆಯ ಮೇಲೆ ಚಲ್ಲಿಕೊಡುತ ಲಿತ್ತು. ಮೇಘಗಳು ಬೇಕಾದಾಗ ಮಳೆಗರೆಯುತ್ತಿದ್ದವು. ಚಂದ್ರಸೂರ್ಯರು ತಮ್ಮ ಕಿರ ಣಗಳ ದ್ವಾರದಿಂದ ಪೃಥ್ವಿಗೆ ಬೇಕಾಗಿರುವಷ್ಟೇ ಅಮೃತವನ್ನೂ, ಉಷ್ಣತೆಯನ್ನೂ ಒದಗಿಸಿ ಕೊಡುತ್ತಿದ್ದವು. ಪ್ರಭುವು ಕೋಟ್ಯವಧಿ ಅಶ್ವಮೇಧಗಳನ್ನು ಮಾಡಿ ಬ್ರಾಹ್ಮಣರಿಗೆ ಅನೇಕ ದಾನಗಳನ್ನು ಕೊಟ್ಟನು. ವೇದಮಾರ್ಗಪ್ರತಿಪಾಲಕ-ಧರ್ಮಧುರಂಧರ ಶ್ರೀರಾಮನು ತ್ರಿಗುಣಾತೀತನಾಗಿಯೂ ಇಂದ್ರನಂಥ ವೈಭವವನ್ನು ಭೋಗಿಸುತ್ತಿದ್ದನು.

ಶೋಭೆಯ ಖನಿಯೂ, ಸುಶೀಲಳೂ, ವಿನೀತಳೂ ಆದ ಜಾನಕಿಯು ಇರವು ಯಾವಾಗಲೂ ಪತಿಗೆ ಅನುಕೂಲವಾಗಿಯೇ ಇರುತ್ತಿತ್ತು. ಆಕೆಯು ಕೃಪಾಸಿಂಧು ವಿನ ಪ್ರಭುತ್ವವನ್ನು ಅರಿತವಳಾದದ್ದರಿಂದ ಅತನ ಚರಣಕಮಲಗಳನ್ನು ಮನೋಭಾವ ದಿಂದ ಸೇವಿಸುತ್ತಿದ್ದಳು. ಮನೆಯಲ್ಲಿ ಸೇವಾತತ್ಪರರಾದ ಹಲವು ದಾಸ-ದಾಸಿಯರು ಇರುತ್ತಿದ್ದರೂ ಆಕೆಯು ಮನೆಗೆಲಸಗಳನ್ನು ಸ್ವತಃ ನೋಡಿಕೊಳ್ಳುತ್ತ ರಾಮಚಂದ್ರನ ಅಪ್ಪಣೆಯಂತೆ ನಡೆದುಕೊಳ್ಳುತ್ತಿದ್ದಳು. ಕೃಪಾಸಾಗರನ ಪ್ರಸನ್ನತೆಗೆ ಕಾರಣವಾಗು ವಂತೆ ನಡೆಯುವದೇ ತನ್ನ ಕರ್ತವ್ಯವೆಂಬ ಸೇವಾತತ್ವವು ಒಬ್ಬ ಸೀತೆಗೆ ಮಾತ್ರ ಗೊತ್ತಿತ್ತು. ಕೌಸಲ್ಯೆ ಮೊದಲಾದ ಯಾವತ್ತು ಅತ್ತೆಯಂದಿರ ಮನೆಗೆಲಸಗಳನ್ನೂ ಆಕೆಯು ಮಾಡುತ್ತಿದ್ದಳು. ಆದರೂ ಆಕೆಯಲ್ಲಿ ಮಾನಮದಗಳ ಗಂಧವಿದ್ದಿಲ್ಲ. ಉಮಾ-ರಮಾ-ಬ್ರಹ್ಮಾದಿಕರಿಂದ ಪೂಜ್ಯಳಾದ ಆ ಜಗನ್ಮಾತೆಯು ಯಾವಾಗಲೂ ಅನಿಂದಿತವಾದ ಆಚರಣೆಯಿಂದಿರುವದು ಸ್ವಾಭಾವಿಕವು. ದೇವವಂದಿತಳಾದ ಆಕೆಯು ತನ್ನ ಸ್ವಭಾವವನ್ನು (ಆದಿಶಕ್ತಿತ್ವವನ್ನು) ಮರೆತು ಪ್ರಭುವನ್ನು ಸೇವಿಸುತ್ತಿದ್ದಳು.

ಯಾವತ್ತು ಬಂಧುಗಳು ಮನಸ್ಸಿನ ಒಲವಿನಂತೆಯೇ ಪ್ರಭುವನ್ನು ಸೇವಿಸುತ್ತಿ ದ್ದರು. ರಾಮ-ಚರಣಗಳಲ್ಲಿ ಅವರ ಪ್ರೇಮವು ಉತ್ತರೋತ್ತರ ಅಭಿವೃದ್ಧವಾಗುತ್ತಲಿತ್ತು. ತಮ್ಮ ದಯಾವಂತ ಪ್ರಭುವು ಏನಾದರೂ ಅಪ್ಪಣೆ ಮಾಡಿಯಾನೆಂಬ ಹೇತುವಿನಿಂದ ಪ್ರಭುವಿನ ಮುಖಕಮಲವನ್ನು ಅವರು ಒಂದೇ ಸಮನೆ ನೋಡುತ್ತಿದ್ದರು. ರಾಮ ಚಂದ್ರನೂ ಬಂಧುಗಳನ್ನು ಪ್ರೀತಿಸುತ್ತ, ಅವರಿಗೆ ಹಲವು ಬಗೆಯ ನೀತಿಗಳನ್ನು ಕಲಿಸು ತ್ತಿದ್ದನು. ವೇದ ಪುರಾಣ ಪ್ರಸಿದ್ಧರಾದ ಲವ-ಕುಶರೆಂಬ ಇಬ್ಬರು ಮಕ್ಕಳು ಜಾನಕಿ ಯ ಹೊಟ್ಟೆಯಲ್ಲಿ ಹುಟ್ಟಿದರು. ಅವರಿಬ್ಬರೂ ವಿಜಯಿಗಳೂ, ವಿನಯಶೀಲರೂ, ಸದ್ಗುಣ-ಖನಿಗಳೂ ಆಗಿದ್ದು, ಸೌಂದರ್ಯದಲ್ಲಿ ಪ್ರಭುವಿನ ಪ್ರತಿಮೆಗಳಾಗಿದ್ದರು. ಉಳಿದ ಬಂಧುಗಳಿಗೂ ಅತ್ಯಂತ ರೂಪ ಶೀಲ ಗುಣಾನ್ವಿತರಾದ ಇಬ್ಬರು ಇಬ್ಬರು ಮಕ್ಕ ಳಾದರು. ಶ್ರೀರಾಮನು ಪ್ರಾತಃಕಾಲದಲ್ಲಿ ಶರಯೂ ಸ್ನಾನಮಾಡಿ ಬಂಧು-

ಸ್ವಜಲೋಗಲ ಸಭೆಗಳಲ್ಲಿ ಶೋಭಾಯಮಾನ [illegible] ವಾ ಮೀ [illegible] ಮಾತ್ರ [illegible] ಉಡುಗೆ [illegible] ದ್ಯಾವೃತ್ತಿ [illegible] ಅನ್ನು ಶ್ರವಣಮಾಡು [illegible] ಐಶ್ವರ್ಯ—ಸುಖ [illegible] ಆಗಾಗ್ಗೆ ಶ್ರೀರಾಮನ ದರ್ಶನ [illegible] ವಿಷ ಧಿಗೂ [illegible] ತ್ತಿತ್ತು ಅಂಥ ಆ [illegible] ವು ಗಳ [illegible] ಪಕ್ಷಿ ಗಳಲ್ಲಿಯೂ ಜನರು [illegible] ಲಸುತ್ತಿ ದ್ದರು ಎಲೈ ಗರುಡಾ, ಹೀಗೆ [illegible] ಎಲ್ಲವೂ ಸುಖಿಗಳಾದಂತೆ, ಕಲವು [illegible] ಆಗುತ್ತಿದ್ದುವು ಅವು ಯಾವುವೆಂದರೆ—ಅವಿದ್ಯಾ ರೂಪರಾತ್ರಿಯು ನಾಶವಾಯಿತು [illegible] ಗೂಗೆಗಳು ಅಲ್ಲಲ್ಲಿ ಅಡಗಿಕೊಳ್ಳ ತೊಡಗಿದವು. ಕಾಮ ಕ್ರೋಧರೂಪ [illegible] ಬಾಡಿಹೋದವು. ಅನೇಕ ಕರ್ಮಗಳು, ಕಾಲ, ಗುಣ, ಸ್ವಭಾವಗಳೆಂಬ ಚಕೋರಪಕ್ಷಿಗಳಿಗೆ ಎಲ್ಲಿಯೂ ಸುಖವು ದೊರೆಯ ದಾಯಿತು. ಆದರೆ ಗರುಡಾ, ಆ ರಾಮರಾಜ್ಯದಲ್ಲಿ ಧರ್ಮರೂಪವಾದ ತಡಾಗಗಳಲ್ಲಿ ಜ್ಞಾನ—ವಿಜ್ಞಾನರೂಪವಾದ ಅನೇಕ ಕಮಲಗಳು ಅರಳಿದವು. ಸುಖ, ಸಂತೋಷ, ವೈರಾಗ್ಯ ಜ್ಞಾನರೂಪ ಅನೇಕ ಕೋಕಪಕ್ಷಿಗಳು ಶೋಕಮುಕ್ತವಾದವು. ಹೀಗೆ ರಾಮರೂಪ ಸೂರ್ಯನು ಹೃದಯದಲ್ಲಿ ಮೂಡಿದವರ ಜ್ಞಾನವಿಜ್ಞಾನರೂಪವಾದ ಗುಣಗಳ ಅಭಿವೃದ್ಧಿಯಾಗಿ, ಅವಿದ್ಯಾ—ಪಾಪಾದಿ ದುರ್ಗುಣಗಳು ನಷ್ಟವಾದವು.

ಒಮ್ಮೆ ಪ್ರಭುವು ಬಂಧುಗಳೊಡನೆ ಪರಮಪ್ರಿಯನಾದ ಹನುಮಂತನನ್ನು ಸಂಗಡ ಕರ ಕೊಂಡು ಒಂದು ಸುಂದರವಾದ ತೋಟವನ್ನು ನೋಡಲಿಕ್ಕೆ ಹೋಗಿದ್ದನು. ಆ ಸಂಧಿ ಯನ್ನು ಸಾಧಿಸಿ ಗುಣಶೀಲಸಂಪನ್ನರಾದ ತೇಜೋನಿಧಿ ಸನಕ—ಸನಂದನ—ಸನಾತನ—ಸನ ತ್ಕುಮಾರರೆಂಬ ಮುನೀಶ್ವರರು ಅಲ್ಲಿಗೆ ಬಂದರು. ಅವರು ಯಾವಾಗಲೂ ಬ್ರಹ್ಮಾನಂ ದದಲ್ಲಿ ನಿಮಗ್ನರಾಗಿರತಕ್ಕವರು. ಅವರು ವಸ್ತುತಃ ವಯೋವೃದ್ಧರಾಗಿದ್ದರೂ ನೋಡ ಲಿಕ್ಕೆ ಹುಡುಗರಂತಿದ್ದು, ಅವರು ನಾಲ್ಕು ವೇದಗಳೇ ದೇಹಧಾರಣಮಾಡಿರುವಂತೆ ತೋರುತ್ತಿದ್ದರು. ಅವರು ಸಮದರ್ಶಿಗಳಾಗಿದ್ದು ದ್ವಂದ್ವಾತೀತರಾಗಿದ್ದರು. ದಿಕ್ಕುಗ ಳೇ ಅವರ ವಸ್ತ್ರಗಳಾಗಿದ್ದು ರಘುಪತಿಯ ಚರಿತ್ರದ ಗಾಯನವಾಗುತ್ತಿರುವಲ್ಲಿಗೆ ಹೋದ

ಅದನ್ನು ಕೇಳುವುದು ಅವರ ಸ್ವಭಾವವಾಗಿತ್ತು. ಅವರು ಅಗಸ್ತ್ಯಾಶ್ರಮದಲ್ಲಿ ಪ್ರಭುವಿನ ಚರಿತ್ರಶ್ರವಣಮಾಡಿ ಬಂದಿದ್ದರು. ಅವರು ಬರುವುದನ್ನು ನೋಡಿ ಶ್ರೀರಾಮನು ಬಂಧುಗಳೊಡನೆ ಎದ್ದುನಿಂತು ಅವರನ್ನು ನಮಸ್ಕರಿಸಿ ಸತ್ಕರಿಸಿ ಆಸನದಲ್ಲಿ ಕುಳ್ಳಿರಿಸಿ—ಎಲೈ ಮುನೀಶ್ವರರೇ, ನಾನು ಇಂದು ಧನ್ಯನಾದೆನು. ನಿಮ್ಮ ದರ್ಶನದಿಂದ ನನ್ನ ಪಾಪಗಳು ನಿಶ್ಚಯವಾಗಿ ನಾಶಹೊಂದುವವು. ಸತ್ಸಂಗವು ಒದಗಲಿಕ್ಕೆ ಮಹದ್ಭಾಗ್ಯವು ಬೇಕಾಗುತ್ತಿದ್ದು, ಅದು ಒದಗಿದರೆ ಅನಾಯಾಸವಾಗಿ ಭವದ ಭಂಗವಾಗುವದು. ಸಂತರು, ಕವಿಗಳು, ಪಂಡಿತರು, ಶ್ರುತಿಗಳು, ಪುರಾಣಗಳು, ಸದ್ಗ್ರಂಥಗಳು—“ಸತ್ಸಂಗವು ಮೋಕ್ಷಪ್ರದವೆಂತಲೂ, ಕಾಮುಕರ ಸಂಸರ್ಗವು ಸಂಸಾರಾಸಕ್ತಿಗೆ ಕಾರಣವೆಂತಲೂ” ಹೇಳುತ್ತಿರುವವು. ಅಸ್ತು. ಪ್ರಭುವಿನ ಈ ಮಾತುಗಳನ್ನು ಕೇಳಿ ಸನಕಾದಿಕರು ಹರ್ಷದಿಂದ ಪುಲಕಿತಗಾತ್ರರಾಗಿ ಆತನನ್ನು ಕುರಿತು—ಎಲೈ ಭಗವಂತಾ, ನಿನಗೆ ವಿಜಯುವಿರಲಿ. ನೀನು ಅನಂತನು, ಅನಾಮಯನು, ಅನಘನು, ಅನೇಕನು, ಏಕಮೇವಾದ್ವಿತೀಯನು, ಕರುಣಾಮಯನು, ನಿರ್ಗುಣನು, ಗುಣಸಾಗರನು, ಸುಖಮಂದಿರನು, ಅತ್ಯಂತ ಸೌಂದರ್ಯನಿಧಾನನು, ಇಂದಿರಾರಮಣನು, ಭೂಪಾಲಕನು, ಅನುಪಮನು, ಅಜನ್ಮನು, ಆನಂದಿಯು, ಶೋಭಾಕರನು, ಜ್ಞಾನನಿಧಾನನು, ನಿರಹಂಕಾರನು, ಮಾನಪ್ರದನು, ಪಾವನನು, ಸುದರ್ಶನ, ವೇದಪುರಾಣವೇದ್ಯನು, ತಜ್ಞನು, ಕೃತಜ್ಞನು, ಅಜ್ಞಾನಭಂಜಕನು, ಅನೇಕನಾಮನು, ಅನಾಮನು, ನಿರಂಜನನು, ಸರ್ವನು, ಸರ್ವವ್ಯಾಪಕನು, ಸರ್ವಹೃದಯಾಂತರ್ಯಾಮಿಯು ಆಗಿದ್ದು, ನೀನೇ ನಮ್ಮನ್ನು ನಿರಂತರವಾಗಿ ಪಾಲಿಸಿ, ದ್ವಂದ್ವ-ವಿಪತ್ತು-ಭವಪಾಶ ಇವುಗಳನ್ನು ನಾಶಗೊಳಿಸು. ಶ್ರೀರಾಮನೇ, ನೀನು ನಮ್ಮ ಹೃದಯದಲ್ಲಿ ವಾಸಿಸಿ ಕಾಮ-ಮದಗಳನ್ನು ದೂರಮಾಡು ಎಲೈ ಪರಿಪೂರ್ಣಮನೋರಥನೇ, ಶ್ರೀರಾಮಾ, ನಮಗೆ ನಿನ್ನ ಅನಪಾಯಿನೀ ಭಕ್ತಿಯನ್ನೂ, ಪ್ರೇಮವನ್ನೂ ಅರ್ಪಿಸಿ ಸಂತ-ಬುದ್ಧಿಯನ್ನು ಕೊಡು, ಎಂದು ಬಗೆಬಗೆಯಾಗಿ ಪ್ರೇಮಪೂರ್ವಕವಾಗಿ ಸ್ತುತಿಸಿ, ಅಭೀಷ್ಟವಾದ ವರವನ್ನು ಸಂಪಾದಿಸಿ, ಶ್ರೀರಾಮನನ್ನು ವಂದಿಸಿ ಬ್ರಹ್ಮಲೋಕವನ್ನು ಕುರಿತು ತೆರಳಿದರು.

ಹೀಗೆ ಸನಕಾದಿಕರು ತೆರಳಲು, ಭರತನು ಪ್ರಭುವಿನ ಚರಣಗಳಿಗೆರಗಿ, ಸಂತರು, ಹಾಗೂ ಸಂತರಲ್ಲದವರ ಲಕ್ಷಣವೇನೆಂದು ಪ್ರಶ್ನೆಮಾಡಿದನು. ಅದಕ್ಕೆ ಪ್ರಭುವು—ಎಲೈ ಬಂಧುವೇ, ಸಂತರ ಲಕ್ಷಣಗಳು ಅಗಣಿತವಾಗಿದ್ದು, ಶ್ರುತಿ-ಪುರಾಣಾದಿಕಗಳು ಅವುಗಳ ವ್ಯಾಖ್ಯಾನಮಾಡಿರುವವು. ಕೊಡಲಿ—ಚಂದನಗಿಡಗಳ ಕೃತಿಯಂತೆ ಸಂತರ ಹಾಗು ದುರ್ಜನರ ಆಚರಣವಿರುವದು. ಕೊಡಲಿಯು ಚಂದನವನ್ನು ಕಡಿದರೂ ಚಂದನವು ತನ್ನ ಸ್ವಭಾವಗುಣವನ್ನನುಸರಿಸಿ ಸುಗಂಧವನ್ನೇ ಪಸರಿಸುತ್ತಿರುವದು. ಇದೇ ಕಾರಣದಿಂದ ಚಂದನವು ಜಗತ್ತಿಗೆ ಪ್ರಿಯಕರವಾಗಿದ್ದು, ದೇವರ ತಲೆಯಮೇ

ಲೆಯೂ ಹೋಗಿ ಕಾಳಿತುಕೊಳ್ಳುತ್ತದೆ. ಕೊಡಲಿಯು ತುಂಬಿನಪಾಲಿಗೆ ಬೆಂಕಿಯಲ್ಲಿ ಕಾಸುವದೂ, ಮೇಲೆ ಸುತ್ತಿಗೆಯ ಪೆಟ್ಟು ತಿನ್ನುವದೂ ಬಂದಿರುತ್ತವೆ. ಎಲೈ ಭರತನೇ, ಸಂತರು ವಿಷಯಗಳಿಂದ ಅಲಿಪ್ತರೂ, ಶೀಲ-ಸದ್ಗುಣಗಳ ಭಾಂಡಾರವೂ, ಎರಡನೆಯವರ ದುಃಖದಿಂದ ದುಃಖಿತರು—ಸುಖದಿಂದ ಸುಖಿಗಳು ಆಗುವವರೂ, ಸಮದರ್ಶಿಗಳೂ, ಅಜಾತಶತ್ರುಗಳೂ, ಉನ್ಮಾನರಹಿತರೂ, ವಿರಕ್ತರೂ, ಲೋಭ-ಕ್ರೋಧ-ಹರ್ಷ-ಭಯಗಳನ್ನು ತ್ಯಜಿಸುವವರೂ, ಕೋಮಲ ಚಿತ್ತರೂ, ದೀನವತ್ಸಲರೂ, ತ್ರಿಕರಣಪೂರ್ವಕ ನನ್ನ ಭಕ್ತಿಯುಳ್ಳವರೂ, ಅಹಂಕಾರರಹಿತರೂ, ಎಲ್ಲರ ಆದರ ಸನ್ಮಾನಗಳನ್ನು ಮಾಡುವವರೂ, ಸ್ವತಃ ಲೇಶವಾದರೂ ಮಾನಾಪೇಕ್ಷೆಯಿಲ್ಲದವರೂ ಆಗಿರುವರು; ಇದಲ್ಲದೆ ಅವರು ಸಮಸ್ತ ಕಾಮನಾರಹಿತರೂ, ಮನ್ಮಾನುಪರಾಯಣರೂ, ಶಾಂತಿ-ವೈರಾಗ್ಯ-ವಿನಯ-ಪ್ರಸನ್ನತೆಗಳ ವಸತಿಸ್ಥಾನವೂ, ಕ್ಷಮಾ-ಸರಲತಾ-ಮೈತ್ರಿ-ದ್ವಿಜಪದಪ್ರೇಮ-ಧರ್ಮಗುಣಗಳ ಜನನಿಯೂ, ಎಂದೂ ಚಂಚಲವಾಗದ ಶಮ-ದಮ-ನಿಯಮ-ನೀತಿಗಳುಳ್ಳವರೂ, ಬಿರುಸುಮಾತು ಆಡದವರೂ ಆಗಿರುವರು. ಇಂಥವರನ್ನೇ ನಿಜವಾದ ಸಂತರೆಂದು ತಿಳಿದುಕೋ. ನಿಂದಾ ಸ್ತುತಿಗಳನ್ನು ಸಮವಾಗಿ ಭಾವಿಸುವವರಾಗಿ, ನನ್ನ ಚರಣಗಳಲ್ಲಿಯೇ ಪ್ರೇಮವುಳ್ಳ ಗುಣಗಂಭೀರರೂ, ಸುಖನಿಧಾನರೂ ಆದ ಸಂತರು ನನಗೆ ಪ್ರಾಣಪ್ರಿಯರಾಗಿರುವರು. ಭರತಾ, ಇನ್ನು ದುಷ್ಟರ ಲಕ್ಷಣಗಳನ್ನು ಹೇಳುವೆನು ಕೇಳು. ಯಾರೂ ಅಪ್ಪಿತಪ್ಪಿಯೂ ಅವರ ನೆರಳಿಗೆ ಕೂಡ ಹೋಗಬಾರದು. ತುಡುಗ ಆಕಳು ಸಭ್ಯ ಆಕಳನ್ನು ಇರಿಯುವಂತೆ, ಅವರ ಸಹವಾಸವು ಯಾವಾಗಲೂ ದುಃಖಪರ್ಯವಸಾಯಿಯೇ ಆಗಿರುವದು. ದುಷ್ಟರು ಯಾವಾಗಲೂ ಮನಸ್ಸಿನಲ್ಲಿ ತಳಮಳಿಸುತ್ತಿರುವರು. ಪರೋತ್ಕರ್ಷವನ್ನು ನೋಡಿದಕೂಡಲೆ ಅವರ ಸರ್ವಾಂಗವು ತಪ್ತವಾಗುತ್ತದೆ. ಪರನಿಂದೆಯು ಎಲ್ಲಿಯಾದರೂ ಕಿಂಚಿತ್ ಕಿವಿಗೆ ಬಿದ್ದರೆ, ದ್ರವ್ಯನಿಧಿಯು ಕೈಸೇರಿದಂತೆ ಅವರಿಗೆ ಹರ್ಷವಾಗುವದು. ಅವರು ಯಾವಾಗಲೂ ಕಾಮ, ಕ್ರೋಧ, ಮದ, ಲೋಭ ಇವುಗಳಲ್ಲಿಯೇ ಮಗ್ನರಾಗಿರುವದರಿಂದ, ಅವರು ನಿರ್ದಯರೂ, ಕಪಟಿಗಳೂ, ಕುಟಿಲರೂ, ಪಾಪಗಳ ಸ್ಥಾನವೂ ಆಗಿರುವರು. ಅವರು ಎಲ್ಲರೊಡನೆ ನಿಷ್ಕಾರಣ ದ್ವೇಷಬಳಿಸುವವರಾಗಿದ್ದು, ತಮ್ಮ ಹಿತಮಾಡುವವರ ಹಾನಿಗೆ ಅವರು ಕಾರಣವಾಗಿರುವರು. ಅವರ ಕೊಡಕೊಳ್ಳುವ ವ್ಯವಹಾರವು ತಗಲತನಪ ಪೇಟೆಯಾಗಿದ್ದು, ಅವರ ಊಟಉಡಿಗೆಗಳಲ್ಲಿಯೂ ಸುಳ್ಳು ತುಂಬಿರುವದು. ಅವರು ನವಿಲುಗಳಂತೆ ಸವಿಮಾತಿನವರಾಗಿದ್ದು, ಮಹಾಸರ್ಪವನ್ನು ಅರಗಿಸುವಷ್ಟು ಕಠಿಣಹೃದಯದವರಾಗಿರುವರು. ಪರದ್ರೋಹಿಗಳೂ, ಜಾರರೂ, ಚೋರರೂ ಆದ ಇವರು ಮಹಾ ನೀಚರಾಗಿದ್ದು, ಮೂರ್ತಿಮಂತ ಪಾಪಾತ್ಮ-ರಾಕ್ಷಸರಾಗಿರುವರು. ಲೋಭದ ಹಾಸಿಗೆ ಲೋಭದ ಹೊದಿಕೆಯುಳ್ಳ ಇವರು ಕೇವಲ ಶಿಶ್ನೋದರಪರಾಯಣ

ಹಾಗಿರುವರು, ನರಕಗಳೂ ಅವರನ್ನು ಕಂಡರೆ ಬೇಸರಿಯುವವು. ಅವರು ಯಾರೊ ಬ್ಬರ ಸ್ತುತಿಯನ್ನು ಕೇಳಿದಕೂಡಲೆ ಶೀತಜ್ವರ ಬಂದವರಂತೆ ನಿಟ್ಟುಸಿರು ಬಿಡುವರು. ಅವರ್ಗ್ಗ ಸ್ವರಾದವರನ್ನು ನೋಡಿದರೆ ಸಾರ್ವಭೌಮಪದವಿಯು ದೊರೆತಂತೆ ಅವರಿಗೆ ಸುಖವಾಗುತ್ತದೆ. ಅವರು ಸ್ವಾರ್ಥಪರಾಯಣರಾಗಿದ್ದು, ಪರಿವಾರದ ಶತ್ರುಗಳಾಗಿರು ವರು. ತಾಯಿತಂದೆಗಳು, ಗುರುಗಳು ಬ್ರಾಹ್ಮಣರು ಇವರ ಪ್ರತಿಷ್ಠೆಯನ್ನು ಕಾಯದೆ ತಾವು ಮುಣುಗುವ ಗತಿಯೊಡನೆ ಎರಡನೆಯವರನ್ನೂ ಮುಣುಗಿಸುವರು. ಸತ್ಸಂಗ, ಹರಿಕೀರ್ತನಗಳೆಂಬ ಶಬ್ದಗಳನ್ನು ಕೇಳುವದೂ ಇವರಿಗೆ ತಡೆಯುವದಿಲ್ಲ. ಇವರು ದುರ್ಗುಣಗಳ ಸಮುದ್ರವಾಗಿದ್ದು, ಮಂದಮತಿಗಳೂ, ಕಾಮಲಂಪಟರೂ, ವೇದ ನಿಂದಕರೂ, ಪರಧನ ಪುಷ್ಟರೂ, ವಿಶೇಷವಾಗಿ ಬ್ರಹ್ಮದ್ವೇಷಿಗಳೂ ಆಗಿರುವರು. ಇವರ ಮನಸ್ಸಿನಲ್ಲಿ ಕಪಟ-ಡಾಂಭಿಕತನಗಳಿದ್ದು, ಹೊರಗೆ ಮಾತ್ರ ಇವರು ಸಾಧುವೇಷವನ್ನು ಧರಿಸಿರುವರು. ಇಂಥ ಅಧಮರೂ, ದುಷ್ಟರೂ ಆದ ಜನರು ಕೃತ-ತ್ರೇತಾಯುಗಗ ಳಲ್ಲಿ ಇರುವದೇ ಇಲ್ಲ; ದ್ವಾಪರದಲ್ಲಿ ಸ್ವಲ್ಪ ಸ್ವಲ್ಪ ಇದ್ದು, ಕಲಿಯುಗದಲ್ಲಿ ಮಾತ್ರ ಇವರ ಸುಳಿದಾಟವೇ ಹೆಚ್ಚಾಗಿರುವದು.

ಈವರೆಗೆ ಶ್ರೀರಾಮನು ಸಂತರ ಹಾಗು ದುಷ್ಟರ ಲಕ್ಷಣಗಳನ್ನು ಹೇಳಿ ಪುನಃ ಭರತನನ್ನು ಕುರಿತು—ಎಲೈ ಬಂಧುವೆ, ಪರೋಪಕಾರದ ತಹ ಪುಣ್ಯವಿಲ್ಲೆಂತಲೂ ಪರಪೀಡೆಯಂತ ಹಸಾಪವಿಲ್ಲೆಂತಲೂ ಯಾವತ್ತು ವೇದಗಳೂ, ಪುರಾಣಗಳೂ ಹೇಳು ತ್ತಿದ್ದು, ನನ್ನ ಮತವಾದರೂ ಹಾಗೆಯೇ ಇರುವದಲ್ಲದೆ, ಪಂಡಿತರೂ ಹಾಗೆಯೇ ಹೇಳುವರು ಮನುಷ್ಯರಾಗಿ ಹುಟ್ಟಿ ಪರಪೀಡೆಮಾಡುವವರು ಘೋರಸಂಸಾರದ ಯಾತ ನೆಯನ್ನು ಭೋಗಿಸಬೇಕಾಗುವದು. ಅವರು ಮೋಹವಶರಾಗಿ ಸ್ವಾರ್ಥದಲ್ಲಿಯೇ ಮುಳುಗಿ ಅನೇಕ ಪಾಪಗಳನ್ನು ಮಾಡುವವರಿಂದ ಅವರ ಪರಲೋಕವು ನಷ್ಟವಾ ಗುವದು. ಎಲೈ ಬಂಧುವೆ, ನಾನು ಕಾಲರೂಪವಾಗಿ ಇಂಥವರಿಗೆ ಶುಭಾಶುಭ ಕರ್ಮ ಗಳ ಫಲಗಳನ್ನು ಭೋಗಿಸ ಹಚ್ಚುತ್ತಿರುವೆನು. ಪರಮ ಸುಜ್ಞರಾದವರು ಇದೇಸಂಗತಿ ಯನ್ನು ವಿಚಾರಿಸಿ ಸಂಸಾರದುಃಖವನ್ನರಿತುಕೊಂಡು ನನ್ನನ್ನು ಭಜಿಸುವರು- ಅವರು ಶುಭಾಶುಭ ಫಲಗಳನ್ನು ಕೊಡುವ ಕರ್ಮಗಳನ್ನು ಪರಿತ್ಯಜಿಸಿ, ಸುರ ನರ ಮುನಿನಾಯ ಕನಾದ ನನ್ನಲ್ಲಿಯೇ ಪ್ರೇಮವಿಡುವರು. ಅಪ್ಪಾ ಭರತಾ, ಮಾಯೆಯ ಗುಣಗಳೂ ದೋಷಗಳೂ ಅನೇಕವಾಗಿರುವವು. ಅವೆರಡನ್ನೂ ಲಕ್ಷಿಸದಿರುವದೇ ಬುದ್ಧಿಯುಳ್ಳವ ರಾದ ಲಕ್ಷಣವಾಗಿರುವದು; ಯಾಕಂದರೆ ಹಾಗೆ ದೃಷ್ಟಿಯನ್ನಿಡುವದು ಅವಿಚಾರವಾ ಗಿರುವದು. ತಮ್ಮಾ, ನಾನು ಹೇಳಿದ ಸಂತರ ಹಾಗು ದುಷ್ಟರ ಲಕ್ಷಣಗಳನ್ನು ಲಕ್ಷ್ಯ ದಲ್ಲಿಡುವವರು ಸಂಸಾರದಲ್ಲಿ ಪತನ ಹೊಂದಲಾರರು.

ಒಂದುದಿನ ಶ್ರೀರಾಮನು ಕರೆಕಳುಹಿದ್ದರಿಂದ ಗುರುಗಳಾದ ವಸಿಷ್ಠರು, ಬ್ರಾಹ್ಮಣರು, ಪುರಜನರು, ಲಕ್ಷ್ಮಣಾದಿ ಬಂಧುಗಳು, ಮುನಿಗಳು, ಸಂತರು ಮೊದ

ಲಾದವರು ಸಭೆಯಲ್ಲಿ ಕುಳಿತುಕೊಂಡಿದ್ದರು. ಆಗ ಶ್ರೀರಾಮನು ಅವರನ್ನು ಕುರಿತು—“ಎಲೈ ಪ್ರಜೆಗಳೇ, ನನ್ನ ಮಾತುಗಳನ್ನು ಲಕ್ಷಪೂರ್ವಕವಾಗಿ ಕೇಳಿರಿ. ಆ ಮಾತುಗಳಲ್ಲಿ ಸ್ವಾರ್ಥವಾಗಲಿ, ಅನೀತಿಯಾಗಲಿ, ಆತ್ಮಶ್ಲಾಘನವಾಗಲಿ ಇರುವದಿಲ್ಲ. ನಿಮಗೆ ನನ್ನ ಮಾತುಗಳು ಸೇರಿದರೆ ಅವುಗಳಂತೆ ನಡೆದುಕೊಳ್ಳಿರಿ. ನನ್ನ ಅಪ್ಪಣೆಯನ್ನು ಪಾಲಿಸುವ ಸೇವಕನು ನನಗೆ ಅತ್ಯಂತ ಪ್ರಿಯನಾಗಿರುವನು. ನಾನು ನಿಮಗೆ ಅನ್ಯಾಯಯುದ್ದೇನಾದರೂ ಹೇಳಿದರೆ, ನಿಃಶಂಕರಾಗಿ ನೀವು ನನಗೆ ಬಹಿಷ್ಕಾರ ಹಾಕಿರಿ. ದೇವತೆಗಳಿಗೂ ದುರ್ಲಭವಾದ ಮನುಷ್ಯಜನ್ಮವು ಮಹದ್ಭಾಗ್ಯದಿಂದ ಪ್ರಾಪ್ತವಾಗುವದೆಂದು ಯಾವತ್ತು ಗ್ರಂಥಗಳಲ್ಲಿ ವರ್ಣಿಸಿರುವರು. ಸರ್ವಸಾಧನಗಳ ಕೇಂದ್ರಸ್ಥಾನವೂ, ಮೋಕ್ಷದ್ವಾರವೂ ಆದ ಈ ನರದೇಹವು ಪ್ರಾಪ್ತವಾಗಿಯೂ ಪರಲೋಕವನ್ನು ಸಾಧಿಸದವನು ಬಗೆಬಗೆಯ ವಿಡಂಬನೆಗಳಿಗೆ ಗುರಿಯಾಗಿ ಪಶ್ಚಾತ್ತಾಪಪಡುತ್ತ ನಿಷ್ಕಾರಣವಾಗಿ ಕಾಲಗತಿಗೂ, ಕರ್ಮಗತಿಗೂ, ಈಶ್ವರನಿಗೂ ಹೆಸರಿಡುತ್ತ ಕುಳಿತುಕೊಳ್ಳಬೇಕಾಗುವದು. ಬಂಧುಗಳೇ, ಈ ನರದೇಹದ ಸಾಧ್ಯವು ವಿಷಯೋಪಭೋಗವಲ್ಲ; ಈ ನರದೇಹಕ್ಕೆ ಸ್ವರ್ಗಸುಖಗಳು ಪ್ರಾಪ್ತವಾದರೂ, ಅವು ಕ್ಷುದ್ರಗಳಾಗಿದ್ದು, ದುಃಖದಾಯಕವಾಗಿರುವವು. ನರದೇಹವು ಪ್ರಾಪ್ತವಾಗಿ ವಿಷಯಗಳಲ್ಲಿ ಮನಸ್ಸನ್ನು ತೊಡಗಿಸುವದೆಂದರೆ, ಅಮೃತವನ್ನು ಕೊಟ್ಟು ಮೂರ್ಖತನದಿಂದ ವಿಷಪ್ರಾಶನ ಮಾಡಿದಹಾಗೆಯೇಸರಿ. ನಾಲ್ಕು ಕೋಶಗಳುಳ್ಳ ಎಂಬತ್ತುನಾಲ್ಕು ಲಕ್ಷ ಯೋನಿಗಳಲ್ಲಿ ಈ ಅವಿನಾಶಿ ಜೀವನು ಭ್ರಮಿಸುತ್ತಿದ್ದು, ಆತನ ಆ ನಿತ್ಯ ಭ್ರಮಣದಲ್ಲಿ ಮಾಯೆಯ ಪ್ರೇರಣೆಯಿಂದ ಕಾಲ—ಕರ್ಮ—ಸ್ವಭಾವ—ಗುಣಗಳು ಆತನನ್ನು ಬಾಧಿಸುತ್ತಲೇ ಇರುವವು. ಆದರೂ ಆ ನಿರಪೇಕ್ಷ ದಯಾಘನ ಭಗವಂತನು ಯಾವಾಗಾದರೂ ಕೃಪೆಮಾಡಿ ಒಮ್ಮೆ ಮಾನವ ದೇಹವನ್ನು ಕೊಟ್ಟೇಕೊಡುವನು. ಈ ನರತನುವು ಭವಸಾಗರವನ್ನು ದಾಟಿಹೋಗುವ ನೌಕೆಯಾಗಿದ್ದು, ನನ್ನ ಅನುಗ್ರಹವು ಅದಕ್ಕೆ ಅನುಕೂಲವಾದವಾಯುವೂ, ಸದ್ಗುರುವು ಕುಶಲ ಕರ್ಣಧಾರನೂ ಆಗಿರುವರು. ಇವೆಲ್ಲ ಸಾಮಗ್ರಿಗಳು ಅನುಕೂಲವಾಗಿಯೂ ಭವಸಾಗರವನ್ನು ದಾಟಿ ಹೋಗದವನು, ಮಂದಮತಿಯೂ, ಕೃತಘ್ನನೂ ಎನಿಸಿ ಆತ್ಮಘಾತಕಿಗಳ ಗತಿಯನ್ನು ಹೊಂದುವನು. ಇಹ—ಪರಗಳಲ್ಲಿ ಸುಖವಾಗ ಬೇಕೆಂದು ಇಚ್ಛಿಸುವವನು ನನ್ನಲ್ಲಿ ಭಕ್ತಿಯನ್ನು ಇಡಬೇಕು. ಜ್ಞಾನಮಾರ್ಗವು ಕಠಿಣವಾಗಿದ್ದು, ಅದರಲ್ಲಿ ವಿಘ್ನಗಳು ಬಹಳ ಇರುವದರಿಂದ ಅದು ಸಾಧಿಸುವದು ಕಠಿಣವಾಗಿರುವದು. ಇದಲ್ಲದೆ ಅದರಲ್ಲಿ ಮನಸ್ಸು ಏಕಾಗ್ರವಾಗುವದಿಲ್ಲ. ಬಹಳ ಕಷ್ಟಪಟ್ಟರೂ ಒಬ್ಬಾನೊಬ್ಬನಿಗೆ ಅದು ಸಾಧ್ಯವಾಗುವದು; ಆದರೂ ಅದರಲ್ಲಿ ಭಕ್ತಿಯು ಇಲ್ಲದಿದ್ದರೆ ಅದು ನನಗೆ ಪ್ರಿಯವಾಗದು. ಭಕ್ತಿಯು ಸ್ವತಂತ್ರವಾಗಿದ್ದು, ಸರ್ವಸುಖಗಳ ಕೇವಲ ಖನಿಯಾಗಿರುವದು; ಆದರೆ ಸತ್ಸಂಗವಿಲ್ಲದೆ ಅದು

ಸಾಧಿಸುವದಿಲ್ಲ; ಪುಣ್ಯ ಸಂಚಯವಿಲ್ಲದೆ ಸತ್ಸಮಾಗಮವಾಗುವದಿಲ್ಲ. ಒಮ್ಮೆ ಸತ್ಸಂಗವಾದರೆ ಸಂಸಾರದ ಅಂತವಾಯಿತೆಂದು ತಿಳಿಯಬೇಕು. ತ್ರಿಕರಣಪೂರ್ವಕವಾಗಿ ಬ್ರಾಹ್ಮಣ ಸೇವೆಯನ್ನು ಮಾಡುವದೇ ಪುಣ್ಯವು. ನಿಷ್ಕಪಟದ್ವಿಜಸೇವೆ ಮಾಡುವವರಿಗೆ ಮುನಿಗಳೂ, ದೇವತೆಗಳೂ ಸಹಾಯಮಾಡುವರು. ಇನ್ನೊಂದು ರಹಸ್ಯವನ್ನು ನಾನು ನಿಮ್ಮೆಲ್ಲರಿಗೆ ಕೈಜೋಡಿಸಿ ಹೇಳುತ್ತೇನೆ. ಶ್ರೀ ಶಂಕರನ ಆರಾಧನೆಯ ಹೊರತು ನನ್ನ ಭಕ್ತಿಯು ಯಾರಿಗೂ ಪ್ರಾಪ್ತವಾಗುವದಿಲ್ಲ

ಪ್ರಿಯ ಪ್ರಜೆಗಳೇ, ಭಕ್ತಿಮಾರ್ಗದಲ್ಲಿ ಏನು ಕಷ್ಟವಿರುತ್ತದೆಂಬದನ್ನು ನೀವೇ ಹೇಳಿರಿ. ಅದಕ್ಕೆ ಯೋಗ ಯಜ್ಞ, ಜಪ, ತಪ, ಉಪವಾಸ ಇವಾವು ಬೇಡವೇ ಬೇಡ. ಸರಲಸ್ವಭಾವ, ನಿಷ್ಕಪಟಮನಸ್ಸು, ಯದೃಚ್ಛಾಲಾಭ ಸಂತುಷ್ಟತೆ ಇವು ನಿರಂತರವಾಗಿ ಇದ್ದರಾಯಿತು ನನ್ನ ದಾಸನೆನಿಸಿಕೊಳ್ಳುವದು, ಮೇಲೆ ಮನುಷ್ಯರ ಸಹಾಯದ ಆಶೆಮಾಡುತ್ತ ಕುಳಿತುಕೊಳ್ಳುವದು; ಅಂಥವರಿಗೆ ನನ್ನಲ್ಲಿ ನಿಜವಾದ ವಿಶ್ವಾಸವು ಹೇಗೆ ಇದ್ದಹಾಗಾಗುವದು? ಬಹಳ ಹೇಳುವದರಿಂದ ಪ್ರಯೋಜನವೇನು? ನಾನು ವಶನಾಗುವ ಆಚರಣಗಳನ್ನು ಹೇಳುತ್ತೇನೆ ಕೇಳಿರಿ. ವೈರ ಅಥವಾ ಭೇದಭಾವವನ್ನು ಎಣಿಸದೆ ಇರುವದು, ಆಶೆಯನ್ನು ಅಥವಾ ದುಃಖವನ್ನು ಎಣಿಸದೆ, ಅವರಲ್ಲಿಯೂ ಯಾವಾಗಲೂ ಸುಖದಿಂದಿರುವದು, ಸಂಕಲ್ಪ ರಹಿತರಾಗಿದ್ದು, ಮನೆಮಾರುಗಳಲ್ಲಿ ಅನಾಸಕ್ತರಾಗಿರುವದು, ಮಾನರಹಿತರೂ—ನಿಷ್ಪಾಪರರೂ—ಕ್ರೋಧವರ್ಜಿತರೂ—ಕರ್ತವ್ಯದಕ್ಷರೂ—ಅನುಭವಜ್ಞಾನಸಂಪನ್ನರೂ, —ಸಂತಸಮಾಗಮದ ವಿಷಯದಲ್ಲಿ ಸದಾಲೋಲುಪರೂ ಆಗಿರುವದು, ಅದರಂತೆ ವಿಷಯ, ಸ್ವರ್ಗ, ಮೋಕ್ಷ ಇವನ್ನು ಕ್ಷುದ್ರಪದಾರ್ಥವೆಂದು ತಿಳಿಯುವದು, ತರ್ಕವಿತರ್ಕಗಳನ್ನು ಬಿಟ್ಟುಕೊಟ್ಟು ಮೂರ್ಖತನದ ಗೊಡವೆಗೆ ಹೋಗದೆ, ಪೂರ್ಣನಿಗ್ರಹದಿಂದ ಭಕ್ತಿಯ ಬೆನ್ನನ್ನೇ ಹತ್ತುವದು, ಮಮತಾ, ಮೋಹ, ಮದ ಮೊದಲಾದವನ್ನು ಬಿಟ್ಟುಕೊಟ್ಟು ನನ್ನ ಗುಣಗಳಸಮೂಹದಲ್ಲಿಯೂ, ನಾಮಸ್ಮರಣದಲ್ಲಿಯೂ ಮಗ್ನರಾಗಿರುವದು; ಪ್ರಜೆಗಳೇ, ಇವುಗಳಲ್ಲಿರುವ ಸುಖವನ್ನು ನನ್ನ ಭಕ್ತರಲ್ಲದ ಬೇರೆಯವರು ಅರಿಯರು. ಎಂದು ಹೇಳಲು, ಎಲ್ಲರೂ ಪ್ರಭುವಿನ ಚರಣಗಳಿಗೆ ಎರಗಿ—ಪ್ರಭೋ, ನೀನಲ್ಲದೆ ಹೀಗೆ ಉಪದೇಶಮಾಡುವವರು ಅನ್ಯರು ಯಾರಿರುವರು! ತಾಯಿತಂದೆಗಳಂತು ಕೇವಲ ಸ್ವಾರ್ಥಪರಾಯಣರು. ಈ ಜಗತ್ತಿನಲ್ಲಿ ನಿಃಸ್ವಾರ್ಥ ಬುದ್ಧಿಯಿಂದ ಸಹಾಯಮಾಡುವವರೆಂದರೆ ನೀನೊಬ್ಬನು, ನಿನ್ನ ಭಕ್ತರೊಬ್ಬರು. ಪ್ರಭುವೇ, ಸಂಸಾರದಲ್ಲಂತು ಎಲ್ಲ ಜನರು ಸ್ವಾರ್ಥಕ್ಕಾಗಿಯೇ ಮಿತ್ರರಾಗಿದ್ದು, ಅವರಿಂದ ಸ್ವಪ್ನದಲ್ಲಿಯೂ ಪರಮಾರ್ಥವು ಘಟಿಸುವದು ಶಕ್ಯವಿರುವದಿಲ್ಲ, ಎಂದು ಹೇಳಿದರು. ಅವರ ಪ್ರೇಮ ಪೂರ್ಣವಾದಮಾತುಗಳನ್ನು ಕೇಳಿ ರಘುನಾಥನು ಮನಸ್ಸಿನಲ್ಲಿ ಹರ್ಷಿತನಾದನು. ಆಮೇಲೆ ಎಲ್ಲರೂ ಅಪ್ಪಣೆಪಡೆದು ಪ್ರಭುವಿನ ಉಕ್ತಿಯ ಪ್ರಶಂಸೆಮಾಡುತ್ತ ತಮ್ಮ ತಮ್ಮ ಮನೆಗಳಿಗೆ ಹೋದರು.

ಒಂದಾನೊಂದು ದಿನ ಶ್ರೀರಾಮನು ಮನೆಯಲ್ಲಿ ಆನಂದದಿಂದ ಕುಳಿತಿರಲು, ವಸಿಷ್ಠರು ಅಲ್ಲಿಗೆ ಬಂದರು. ಆಗ ರಾಮಚಂದ್ರನು ಅವರನ್ನು ಬಹಳವಾಗಿ ಸತ್ಕರಿಸಿ, ಅವರ ಪಾದಪ್ರಕ್ಷಾಲನ ಮಾಡಿ ಚರಣತೀರ್ಥವನ್ನು ತಕ್ಕೊಂಡನು. ಆಗ ಮುನಿವರ್ಯನು ಕೈ ಜೋಡಿಸಿ— ಎಲೈ ದಯಾಸಾಗರಾ, ನನ್ನದೊಂದು ಪ್ರಾರ್ಥನೆಯನ್ನು ಕೇಳಬೇಕು. ನಿನ್ನ ಆಚರಣೆಯನ್ನು ನೋಡಿ ನನ್ನ ಮನಸ್ಸಿಗೆ ಬಹಳ ಮೋಹವು ಉತ್ಪನ್ನವಾಗುತ್ತದೆ. ಭಗವನ್, ನಿನ್ನ ಮಹಿಮೆಗೆ ಮೇರೆಯೇ ಇಲ್ಲವು. ವೇದಕ್ಕೂ ಅಗೋಚರವಾಗಿರುವ ಅದನ್ನು ನಾನು ಹೇಗೆ ವರ್ಣಿಸಲಿ? ಪುರೋಹಿತವೃತ್ತಿಯು ಅತಿ ನೀಚವಾದದ್ದಿದ್ದು, ಶ್ರುತಿ-ಸ್ಮೃತಿ-ಪುರಾಣಗಳು ಅದನ್ನು ನಿಂದಿಸುತ್ತಿರುವವು. ಆದ್ದರಿಂದ ಅದನ್ನು ನಾನು ಸ್ವೀಕರಿಸುತ್ತಿದ್ದಿಲ್ಲ; ಆದರೆ ಬ್ರಹ್ಮದೇವನು ನನ್ನನ್ನು ಕುರಿತು— ವತ್ಸಾ, ಇದರಲ್ಲಿ ಮುಂದೆ ನಿನಗೆ ಲಾಭವಿರುವದು. ಪರಬ್ರಹ್ಮಪರಮಾತ್ಮನು ನರರೂಪದಿಂದ ರಘುಕುಲ ಭೂಷಣ-ಭೂಪತಿಯಾಗಿ ಅವತರಿಸತಕ್ಕವನಿರುವನು, ಎಂದು ಹೇಳಿದನು. ಆಗ ನಾನು ಮನಸ್ಸಿನಲ್ಲಿ—ಶ್ರುತಿಗಳೂ ಸಂತರೂ ಯೋಗ, ಯಜ್ಞ, ಯಾಗಾದಿ ಧರ್ಮಗಳನ್ನು ಯಾವನ ಪ್ರಾಪ್ತಿಗಾಗಿ ಆಚರಿಸಬೇಕೆಂದು ಹೇಳಿರುವರೋ, ಅವನೇ ನನಗೆ ಪ್ರಾಪ್ತನಾಗುವದರಿಂದ ಪುರೋಹಿತವೃತ್ತಿಯಂಥ ಬೇರೆ ಸದ್ಧರ್ಮವೇ ಇಲ್ಲೆಂದು ಅದನ್ನು ನಾನು ಅಂಗೀಕರಿಸಿದೆನು. ಪ್ರಭೋ, ಹೊಲಸು ನೀರಿನಿಂದ ಕೈ ತೊಳಕೊಂಡರೆ ಅವು ಸ್ವಚ್ಛವಾಗಬಹುದೋ? ನೀರು ಕಡೆಯುವದರಿಂದ ತುಪ್ಪವು ದೊರೆಯುಬಹುದೋ? ಎಲೈ ರಘುನಾಥನೇ, ಭಕ್ತಿ-ಪ್ರೇಮ ಜಲವಿಲ್ಲದೆ ಮಾನಸಿಕ ಮಲವು ಎಂದೂ ತೊಳೆದು ಹೋಗಲಾರದು; ಆದ್ದರಿಂದ ನಿನ್ನ ಪದಪಂಕಜದಲ್ಲಿ ಅನುರಕ್ತನಾದವನೇ ಸರ್ವಜ್ಞನು, ಅವನೇ ಪಂಡಿತನು, ಅವನೇ ಗುಣಸಾಗರನು; ಆದ್ದರಿಂದ ಜನ್ಮಜನ್ಮಾಂತರದಲ್ಲಿಯೂ ಪ್ರಭು ಪದಕಮಲದಲ್ಲಿ ನನ್ನ ಪ್ರೇಮವು ಕಡಿಮೆಯಾಗದಂತೆ ವರಪ್ರದಾನಮಾಡು, ಎಂದು ಪ್ರಾರ್ಥಿಸಿ ಮುನಿವರನು ತನ್ನ ಮನೆಗೆ ಹೋದನು.

ಶಂಕರನು ಪಾರ್ವತಿಯನ್ನು ಕುರಿತು—ಎಲೈ ಪಾರ್ವತೀ, ಈ ಎಲ್ಲ ರಾಮಕಥೆಯನ್ನು ನನಗೆ ತಿಳಿದಷ್ಟು ನಿನಗೆ ಹೇಳಿದೆನು. ರಾಮನ ಕಥೆಗಳು ಶತಕೋಟಿಯಿದ್ದು ಅಪಾರವಾಗಿರುವವು. ಶ್ರುತಿಗಳೂ, ಶಾರದೆಯೂ ಅವನ್ನು ಸಾದ್ಯಂತವಾಗಿ ವರ್ಣಿಸಲಾರರು. ರಾಮರು ಅನಂತ ಜನರಾಗಿದ್ದು, ಅವರ ಗುಣಗಳೂ, ಜನ್ಮಗಳೂ, ಕರ್ಮಗಳೂ, ನಾಮಗಳೂ ಅನಂತವಾಗಿಯೇ ಇರುವವು. ಜಲಬಿಂದುಗಳ ಹಾಗು ಪೃಥ್ವಿಯ ರಜಃಕಣಗಳ ಎಣಿಕೆಯಾಗಬಹುದು; ಆದರೆ ರಘುಪತಿಯ ಚರಿತ್ರಗಳು ಹೇಳಿತೀರಲಾರವು. ಪಾರ್ವತೀ, ಆ ಚರಿತ್ರಗಳಲ್ಲಿ ಕಾಕಭುಶುಂಡಿಯು ಗರುಡನಿಗೆ ಹೇಳಿದ ರಾಮಕಥೆಯನ್ನು ನಾನು ನಿನಗೆ ಹೇಳಿದೆನು. ಅದು ಹರಿಪದವನ್ನೂ, ದೃಢಭಕ್ತಿಯನ್ನೂ ಕೊಡುವದು. ನಾನು ನಿನಗೆ ಯಥೋಚಿತ ರಾಮಲೀಲೆಯನ್ನು ವರ್ಣಿಸಿದೆನು, ನಿನಗೆ ಇನ್ನೇನು ಹೇಳಬೇಕು.

ಹೇಳು, ಎಂದು ಕೇಳಲು, ಪಾರ್ವತಿಯು-- ಎಲೈ ಪುರಾರಿಯೇ, ಭವಭಯವನ್ನು ನಿವಾರಿಸುವ ರಾಮನ ಗುಣಗಳನ್ನು ಕೇಳಿ ನಾನು ಧನ್ಯಳಾದೆನು. ನಿನ್ನ ಅನುಗ್ರಹದಿಂದ ಶ್ರೀ ರಾಮಚಂದ್ರನ ಪ್ರಭಾವವು ಗೊತ್ತಾದದ್ದರಿಂದ ನಾನು ಕೃತಕೃತ್ಯಳಾದೆನು, ನನ್ನ ಮೋಹವು ನಷ್ಟವಾಯಿತು; ಆದರೆ ನಾಥನೇ, ಇಂಥ ಮಹತ್ವದ ಜ್ಞಾನವು ಕಾಗೆಗೆ ಪ್ರಾಪ್ತವಾದದ್ದು ನನಗೆ ಬಹಳ ಆಶ್ಚರ್ಯಕರವಾಗಿ ತೋರುತ್ತದೆ. ತ್ರಿಪುರಾರಿಯೇ, ಸಾವಿರಾರು ಜನರಲ್ಲಿ ಧರ್ಮಾತ್ಮನು ಯಾವನಾದರೊಬ್ಬನು ಇರುವನು; ಅಂಥ ಕೋಟ್ಯವಧಿ ಧರ್ಮಶೀಲರಲ್ಲಿ ವಿಷಯಪರಾಙ್ಮುಖರೂ, ವೈರಾಗ್ಯಸಂಪನ್ನರೂ ಆದವರು ಒಬ್ಬಾನೊಬ್ಬನೇ ಇರುವನು, ಅಂಥ ಕೋಟ್ಯವಧಿ ವಿರಕ್ತರಲ್ಲಿಯೂ ಉತ್ತಮ ಜ್ಞಾನಿಗಳು ಕ್ವಚಿತ್ತವಾಗಿ ಒಬ್ಬರು ಇರುವರು, ಎಂದು ವೇದಗಳು ಹೇಳುವವು. ಕೋಟ್ಯವಧಿ ಜ್ಞಾನಿಗಳಲ್ಲಿ ಯಾವನಾದರೂ ಜೀವನ್ಮುಕ್ತನು ಇದ್ದರೆ ಒಬ್ಬನು ಇರಬಹುದು. ಇಂಥ ಜೀವನ್ಮುಕ್ತರಲ್ಲಿ ಸರ್ವಸುಖಗಳ ಸ್ಥಾನವಾದ ಬ್ರಹ್ಮ ಪದದಲ್ಲಿ ತಾದಾತ್ಮ್ಯ ಹೊಂದಿದ ವಿಜ್ಞಾನಿಗಳು ದುರ್ಲಭರೇ ಇರುವರು. ಹೀಗೆ, ಧರ್ಮಶೀಲರು, ವಿರಕ್ತರು, ಜ್ಞಾನಿಗಳು, ಜೀವನ್ಮುಕ್ತರು, ಬ್ರಹ್ಮಪರಾಯಣರು ಈ ಎಲ್ಲ ವ್ಯಕ್ತಿಗಳಿಗಿಂತಲೂ ಎಲೈ ದೇವಾಧಿದೇವನೇ, ಮದ-ಮೋಹ ವಿಮುಕ್ತರಾದ ಶ್ರೀರಾಮ-ಭಕ್ತಿ-ರತರು ಕೇವಲ ದುರ್ಲಭರಾಗಿರುವರು ಎಲೈ ವಿಶ್ವನಾಥನೇ, ಇಂಥ ಹರಿಭಕ್ತಿಯು ಕಾಕಭುಶುಂಡಿಗೆ ಹೇಗೆ ಪ್ರಾಪ್ತವಾಯಿತೆಂಬದನ್ನೂ, ಮಹಾಜ್ಞಾನಿಯಾದ ಹರಿಸೇವಕ ಗರುಡನು ಮುನಿಗಳೆಡೆಗೆ ಹೋಗದೆ ಕಾಗೆಯ ಬಳಿಗೆ ಯಾಕೆ ಹೋದನೆಂಬದನ್ನೂ ನನಗೆ ವಿಸ್ತರಿಸಿ ಹೇಳಬೇಕು.

ಪಾರ್ವತಿಯು ಈ ಮಾತುಗಳನ್ನು ಕೇಳಿ ಶಂಭುವು—ಎಲೈ ಸುಮುಖಿಯೇ, ಆ ಭವವಿಮೋಚನೀ-ರಾಮ ಕಥೆಯು ನನಗೆ ಹೇಗೆ ಪ್ರಾಪ್ತವಾಯಿತೆಂಬದನ್ನು ಮೊದಲು ಹೇಳುವೆನು ಕೇಳು ಈ ಜನ್ಮದ ಪೂರ್ವದಲ್ಲಿ ನೀನು ದಕ್ಷನ ಮನೆಯಲ್ಲಿ ಅವತರಿಸಿದ್ದೆ. ಆಗಿನ ನಿನ್ನ ಹೆಸರು ಸತಿ ಎಂಬದಾಗಿತ್ತು. ದಕ್ಷಯಜ್ಞದಲ್ಲಿ ನಿನ್ನ ಅಪಮಾನವಾಗಲು ನೀನು ಅತ್ಯಂತ ಕ್ರುದ್ಧಳಾಗಿ ದೇಹವನ್ನು ತ್ಯಜಿಸಿದ್ದೂ, ಆ ಮೇಲೆ ನನ್ನ ಗಣದವರು ಯಜ್ಞಭಂಗಮಾಡಿದ್ದೂ ನಿನಗೆ ಗೊತ್ತೇ ಇರುವದು. ಆ ಪ್ರಸಂಗದಲ್ಲಿ ನನ್ನ ಮನಸ್ಸು ಉದ್ವಿಗ್ನವಾಗಿ ನಿನ್ನ ವಿಯೋಗದಿಂದ ನಾನು ದುಃಖಿತನಾಗಿದ್ದೆನು; ಆದ್ದರಿಂದ ನಾನು ಉದಾಸೀನನಾಗಿ ಸುಂದರವನಗಳು, ಪರ್ವತಗಳು, ನದಿಗಳು, ಸರೋವರಗಳು ಮೊದಲಾದ ಸೃಷ್ಟಿಚಮತ್ಕಾರಗಳನ್ನು ನೋಡುತ್ತ ತಿರುಗುತ್ತಿದ್ದೆನು. ಸುಮೇರು ಪರ್ವತದ ಉತ್ತರದಲ್ಲಿ ಬಹುದೂರ ನೀಲವೆಂಬ ರಮಣೀಯ ಪರ್ವತವಿರುವದು. ಅದೇ ಪರ್ವತದ ಮೇಲೆ ಆ ಕಾಗೆಯು ವಾಸಿಸುತ್ತಿರುವದು. ಕಲ್ಪಾಂತದಲ್ಲಿಯೂ ಆ ಪರ್ವತವು ನಾಶ ಹೊಂದುವದಿಲ್ಲ. ಯಾವತ್ತು ಜಗತ್ತನ್ನು ವ್ಯಾಪಿಸಿರುವ ಮೋಹ, ಕಾಮ ಇತ್ಯಾದಿ ವಿಕಾರಗಳೂ,ಅವಿವೇಕವೂ,ಮಾಯಾಜನ್ಯಗುಣದೋಷಗಳೂ ಆ ಪರ್ವತದ ಹತ್ತರ ಎಂದೂ

ಸುಳಿಯಲಾರವು. ವಟವೃಕ್ಷದ ಬುಡದಲ್ಲಿ ಅದು ಪುರಾಣವನ್ನು ಹೇಳುತ್ತಿದ್ದು, ಆ ಸರೋವರದಲ್ಲಿರುವ ಹಂಸಗಳೆಲ್ಲ ಶುದ್ಧಬುದ್ಧಿಪೂರ್ವಕವಾಗಿ ಆ ಪುರಾಣವನ್ನು ಕೇಳುತ್ತಿರುವವು. ಅದನ್ನೆಲ್ಲ ನೋಡಿ ನನ್ನ ಮನಸ್ಸಿಗೂ ಸಂತೋಷವಾಗಿ ನಾನೂ ಹಂಸರೂಪವನ್ನು ಧರಿಸಿ ಕೆಲಕಾಲದ ವರೆಗೆ ಅಲ್ಲಿ ವಾಸಿಸಿ, ಆದರಪೂರ್ವಕವಾಗಿ ರಘುಪತಿಯ ಗುಣಶ್ರವಣ ಮಾಡಿ ತಿರುಗಿ ಕೈಲಾಸಕ್ಕೆ ಬಂದೆನು. ಪಾರ್ವತಿಯೇ, ನಾನು ಕಾಕಸನ್ನಿಧಿಗೆ ಹೋದಾಗಿನಿಂದ ನಡೆದ ಯಾವತ್ತು ವೃತ್ತಾಂತವನ್ನೇ ಈ ವರೆಗೆ ನಾನು ನಿನಗೆ ಹೇಳಿರುವೆನು. ಇನ್ನು ಪಕ್ಷಿರಾಜನಾದ ಗರುಡನು ಆ ಕಾಗೆಯ ಬಳಿಗೆ ಯಾಕೆ ಹೋದನೆಂಬುದನ್ನು ಹೇಳುವೆನು ಕೇಳು.

ಶ್ರೀರಾಮನು ರಾವಣನೊಡನೆ ಯುದ್ಧಮಾಡುವಾಗ ಮಾಡಿದ ಲೀಲೆಯನ್ನು ನೆನಿಸಿದರೆ ನನಗೂ ನಾಚಿಕೆಬರುತ್ತದೆ. ಪಾರ್ವತೀ, ಪ್ರಭುವು ಇಂದ್ರಜಿತುವಿನ ನಾಗಪಾಶದಿಂದ ಕಟ್ಟಿಸಿಕೊಂಡದ್ದು ನಿನ್ನ ಸ್ಮರಣದಲ್ಲಿರುವದಷ್ಟೇ? ಆಗ ನಾರದನು ಗರುಡನನ್ನು ಕಳಿಸಿ ಆ ಪಾಶವಿಮೋಚನಮಾಡಿಸಿದ್ದನ್ನೂ, ನೀನು ಮರೆತಿರಲಿಕ್ಕಿಲ್ಲ; ಆದರೆ ಪ್ರಭುವು ಬಂಧನಕ್ಕೆ ಒಳಗಾದ ಗೂಢವು ಗರುಡನಿಗೆ ತಿಳಿಯದಾಗಿ ಆತನು ಚಡಪಡಿಸತೊಡಗಿದನು. ಆತನು ಮನಸ್ಸಿನಲ್ಲಿ—ವ್ಯಾಪಕನೂ, ಪರಬ್ರಹ್ಮನೂ, ವಿಜೋಹಿಸನೂ, ವಾಗೀಶನೂ, ಮಾಯಾಮೋಹಾತೀತನೂ ಆದ ಪರಮಾತ್ಮನೇ ಅವತರಿಸಿರುವನೆಂದು ಕೇಳಿದ್ದೆನು; ಆದರೆ ಅಲ್ಲಿ ನೋಡುವಾಗ ಸಾಮರ್ಥ್ಯವೇನೂ ಕಂಡುಬರಲಿಲ್ಲ. ನಾಮಸ್ಮರಣದಿಂದಲೇ ಮನುಷ್ಯನ ಭವಬಂಧನಗಳು ಹರಿದುಹೋಗುವ ರಾಮನನ್ನು ಯಾವತ್ತು ರಾಕ್ಷಸರು ನಾಗಪಾಶದಿಂದ ಬಂಧಿಸಿದ್ದು ಆಶ್ಚರ್ಯವಲ್ಲವೆ ಎಂಬಿವೇ ಮೊದಲಾದ ತರ್ಕವಿತರ್ಕಗಳಿಂದ ಆತನಿಗೆ ಏನೂ ತಿಳಿಯದಂತಾಗಿ, ಎಲೈ ಪಾರ್ವತೀ, ನಿನ್ನಂತೆಯೇ ಆತನು ಭ್ರಮಿಷ್ಟನಾಗಿ ಹೋದನು. ಆತನು ಅತ್ಯಂತ ವ್ಯಾಕುಲನಾಗಿ ನಾರದನಬಳಿಗೆ ಹೋಗಿ ತನ್ನ ಮನಸ್ಸಿನೊಳಗಿನ ಸಂಶಯಗಳನ್ನು ತಿಳಿಸಲು, ಆತನಿಗೆ ದಯೆಯು ಉತ್ಪನ್ನವಾಗಿ ಆತನು ಗರುಡನನ್ನು ಕುರಿತು—ಗರುಡಾ, ರಾಮಚಂದ್ರನ ಮಾಯೆಯು ದಾಟಲಿಕ್ಕೆ ಬಾರದ್ದಾಗಿರುವದು. ಅದು ಜ್ಞಾನಿಗಳ ಬುದ್ಧಿಯನ್ನು ಹರಣಮಾಡಿ ಬಲಾತ್ಕಾರದಿಂದ ಅವರ ಮನಸ್ಸನ್ನು ಮೋಹವಶವಾಗಮಾಡುವದು. ಆ ಮಾಯೆಯು ನನ್ನನ್ನೂ ಎಷ್ಟೋ ಸಾರೆ ಕುಣಿಸಿಬಿಟ್ಟಿರುವದು. ಈಗ ಅದೇ ಮಾಯೆಯು ನಿನ್ನನ್ನೂ ವ್ಯಾಪಿಸಿರುತ್ತದೆ. ಎಲೈ ಗರುಡನೇ, ನಿನ್ನ ಮನಸ್ಸಿನಲ್ಲಿ ಉತ್ಪನ್ನವಾಗಿರುವ ಮೋಹವು ಬಹು ಕಠಿಣವಾಗಿರುವದರಿಂದ ನನ್ನ ಉಪದೇಶದಿಂದ ತಟ್ಟನೆ ಅದರ ನಿವಾರಣವಾಗಲಾರದು; ಆದ್ದರಿಂದ ಖಗಪತಿಯೇ, ನೀನು ಬ್ರಹ್ಮದೇವನಬಳಿಗೆಹೋಗಿ ಆತನು ಹೇಳಿದಂತೆ ಮಾಡು, ಎಂದು ಹೇಳಿ ಪರಮಚತುರನಾದ ನಾರದಮುನಿಯು ಹರಿಗುಣಗಾಯನಮಾಡುತ್ತ ಹೊರಟುಹೋದನು. ಇತ್ತ ಗರುಡನು ಬ್ರಹ್ಮದೇವನಬಳಿಗೆ ಹೋಗಿ ತನ್ನ ಸಂಶಯವನ್ನು ತಿಳಿಸಲು, ಆತನು

ರಾಮನನ್ನು ನಮಸ್ಕರಿಸಿ ಮನಸ್ಸಿನಲ್ಲಿ —ಶ್ರೀಹರಿಯ ಮಾಯೆಯ ಮಹಿಮೆಯು ಅಪರಂಪಾರವಾದದ್ದು. ಈ ಚರಾಚರವಿಶ್ವವನ್ನು ನಾನು ಹುಟ್ಟಿಸಿದ್ದರೂ, ಅದೇ ಮಾಯೆಯು ನನ್ನನ್ನೂ ಎಷ್ಟೋಸಾರಿ ಕುಣಿಸಿಬಿಟ್ಟಿರುವದು; ಅಂತಿರುವಾಗ ಅದು ಗರುಡನನ್ನು ಮೂಢನನ್ನಾಗಿ ಮಾಡಿದ್ದರಲ್ಲಿ ಆಶ್ಚರ್ಯವೇನು! ಎಂದು ಯೋಚಿಸಿ ಗರುಡನನ್ನು ಕುರಿತು—ಎಲೈ ಗರುಡನೇ, ಶ್ರೀರಾಮನ ಪ್ರತಾಪವನ್ನು ಶಂಕರನೊಬ್ಬನು ತಿಳಿಯುತ್ತಿರುವದರಿಂದ, ನೀನು ಆತನಲ್ಲಿಗೇ ಹೋಗು; ಬೇರೆ ಯಾವಕಡೆಯಲ್ಲಿಯೂ ವಿಚಾರಿಸಬೇಡ ಶಂಕರನಲ್ಲಿಯೇ ನಿನ್ನ ಸಂಶಯನಿವೃತ್ತಿಯಾಗುವದು, ಅನ್ನಲು, ಗರುಡನು ಆತ್ಮಾತುರನಾಗಿ ನನ್ನಬಳಿಗೆ ಬಂದನು. ಆಗ ನಾನು ಕೈಲಾಸದಲ್ಲಿಯೇ ಇದ್ದು, ನಾನು ಕುಬೇರನ ಮಂದಿರಕ್ಕೆ ಹೋಗುತ್ತಿದ್ದೆನು. ಗರುಡನು ನನ್ನ ಚರಣಗಳಲ್ಲಿ ಮಸ್ತಕವನ್ನಿಟ್ಟು ತನ್ನ ಸಂಶಯವನ್ನು ನಿವೇದಿಸಿದನು. ಆತನ ನಮ್ರವಾದ ಪ್ರೇಮದ ಮಾತುಗಳನ್ನು ಕೇಳಿ, ನಾನಾದರೂ ಪ್ರೇಮದಿಂದ ಆತನನ್ನು ಕುರಿತು—ಗರುಡಾ, ನನಗೂ ನಿನಗೂ ದಾರಿಯಲ್ಲಿ ಗಂಟುಬಿದ್ದದ್ದರಿಂದ, ನಿನ್ನ ಸಮಾಧಾನವನ್ನು ನಾನು ಯಾವರೀತಿಯಿಂದ ಮಾಡಲಿ! ಬಹುದಿವಸ ಸತ್ಸಂಗವಾದಬಳಿಕ ನಿನ್ನ ಸಂಶಯವು ನಿವಾರಣವಾಗುವದು. ನೀನು ಸತ್ಸಂಗದಲ್ಲಿದ್ದಾಗಲೇ ಆಲೋಭದಾಯಕವಾದ ಹರಿಕಥೆಯನ್ನು ಕೇಳಬೇಕು ಸತ್ಸಂಗದ ಹೊರತು ಹರಿಕಥೆಯಿಲ್ಲ; ಹರಿಕಥೆಯಿಲ್ಲದೆ ಮೋಹವು ನಷ್ಟವಾಗುವದಿಲ್ಲ; ಮೋಹವು ನಾಶವಾದಹೊರತು ರಾಮಪದದಲ್ಲಿ ಭಕ್ತಿಯು ಉತ್ಪನ್ನವಾಗುವದಿಲ್ಲ. ಭಕ್ತಿಯಿಲ್ಲದೆ ಯೋಗ, ಜಪ, ಜ್ಞಾನ, ವೈರಾಗ್ಯಗಳನ್ನು ಸಾಧಿಸಿದರೂ ಆನಂದದ ರಾಮನು ಪ್ರಸನ್ನನಾಗುವದಿಲ್ಲ. ಆದ್ದರಿಂದ ನೀನು ಉತ್ತರದಿಕ್ಕಿನಲ್ಲಿರುವ ಸುಂದರನೀಲಪರ್ವತಕ್ಕೆ ಹೋಗು. ಅಲ್ಲಿ ಸುಶೀಲನಾದ ಕಾಕಭುಶುಂಡಿಯು ವಾಸಿಸುತ್ತಿರುವನು. ಆತನು ಜ್ಞಾನಿಯು, ಗುಣನಿಧಿಯು, ಅತ್ಯಂತ ವೃದ್ಧನೂ ಆಗಿದ್ದು, ರಾಮಭಕ್ತಿಮಾರ್ಗದಲ್ಲಿ ಅತ್ಯಂತ ನಿಷ್ಣಾತನಾಗಿರುವನು. ಆತನು ಯಾವಾಗಲೂ ರಾಮಕಥೆಯನ್ನು ಹೇಳುತ್ತಿರುವನು. ಎಲೈ ಪಕ್ಷಿಶ್ರೇಷ್ಠನೇ, ನೀನು ಆ ಕಥೆಯನ್ನು ಆದರಪೂರ್ವಕವಾಗಿ ಕೇಳು; ಅಂದರೆ ನಿನ್ನ ಸಂಶಯದ ನಿವೃತ್ತಿಯಾಗುವದು.

ಎಲೈ ಪಾರ್ವತೀ, ಈ ಮೇರೆಗೆ ನಾನು ಹೇಳಲು, ಆ ಗರುಡನು ನನ್ನ ಚರಣಗಳ ಮೇಲೆ ಮಸ್ತಕವಿಟ್ಟು ಆನಂದದಿಂದ ಹೊರಟುಹೋದನು. ಗರುಡನಿಗೆ ಇಂದಿನವರೆಗೂ ಗರ್ವಬಂದಿದ್ದು ಆತನ ಆ ಗರ್ವವನ್ನು ಪರಿಹರಿಸಲು, ಆ ರಘುನಾಥನು ಇಚ್ಛಿಸಿರುವನೆಂದು ರಘುಪತಿಯ ಕೃಪೆಯಿಂದ ನಾನು ತಿಳಿದು, ಆಗ ಆತನನ್ನು ಸಮಾಧಾನಪಡಿಸುವ ಗೊಡವೆಗೆ ನಾನು ಹೋಗಲಿಲ್ಲ. ಮೇಲಾಗಿ ಪಕ್ಷಿಗಳು ಪಕ್ಷಿಗಳ ಭಾಷೆಯನ್ನು ಚನ್ನಾಗಿ ತಿಳಿಯುವವೆಂದು ತಿಳಿದು ಆತನನ್ನು ಕಾಕಭುಶುಂಡಿಯ ಬಳಿಗೆ ಕಳಿಸಿದನು. ಪಾರ್ವತೀ, ಪ್ರಭುವಿನ ಮಾಯೆಯು ಬಲವತ್ತರವಾದದ್ದು. ಜ್ಞಾನಿಗಳನ್ನೂ ಯಾವರೂ

ತೇಶರಹಿತರಾದವರು ಯಾರಿರುವರು? ಜ್ಞಾನಿಗಳಲ್ಲಿಯೂ, ಭಕ್ತರಲ್ಲಿಯೂ ಅಗ್ರಗಣ್ಯನಾದ, ಹಾಗು ತ್ರಿಭುವನಪತಿಯ ವಾಹನವಾಗಿರುವ ಗರುಡನಿಗೂ ಮಾಯೆಯು ಆವರಿಸಿತಲ್ಲ. ಪಾಪ! ಜನರು ಅಭಿಮಾನಪಡುತ್ತಲೇ ಇರುವರು. ಬ್ರಹ್ಮದೇವ-ಶಂಕರರನ್ನೂ ಮಾಯೆಯು ಮೋಹಿಸಿರಲು, ಉಳಿದವರ ಪಾಡೇನು? ಅಂತೇ ಮುನಿಜನರು ಮಾಯಾಪತಿಯಾದ ಭಗವಂತನನ್ನು ಧ್ಯಾನಿಸುತ್ತಲೇ ಇರುವರು. ಗರುಡನು ಭುಶುಂಡಿಯಿದ್ದಲ್ಲಿಗೆ ಹೋದನು. ಆ ನೀಲಪರ್ವತದ ದರ್ಶನದಿಂದಲೇ ಗರುಡನ ಮಾಯಾ-ಮೋಹ-ಶೋಕಗಳೆಲ್ಲ ನಷ್ಟವಾಗಿ, ಆತನ ಮನಸ್ಸು ಪ್ರಸನ್ನವಾಯಿತು ಆತನು ಅಲ್ಲಿಯ ಸರೋವರದಲ್ಲಿ ಸ್ನಾನಮಾಡಿ ನೀರುಕುಡಿದು ಪ್ರಸನ್ನಾಂತಃಕರಣದಿಂದ ವಟವೃಕ್ಷದ ಬುಡದಲ್ಲಿ ಹೋದನು. ಅಲ್ಲಿ ಪಾವನ ರಾಮಚರಿತ್ರವನ್ನು ಕೇಳುವದಕ್ಕಾಗಿ ವೃದ್ಧ ವೃದ್ಧ ಪಕ್ಷಿಗಳು ಬಂದಿದ್ದವು. ಭುಶುಂಡಿಯು ಇನ್ನು ರಾಮಕಥೆಯನ್ನು ಹೇಳಲು ಆರಂಭಿಸತಕ್ಕವನಿದ್ದನು, ಅಷ್ಟರಲ್ಲಿ ಖಗರಾಜನು ಬಂದದ್ದನ್ನು ನೋಡಿ ಎಲ್ಲ ಪಕ್ಷಿಗಳೊಡನೆ ಭುಶುಂಡಿಗೆ ಆನಂದವಾಯಿತು. ಆತನು ಖಗಪತಿಯನ್ನು ಬಹಳವಾಗಿ ಸತ್ಕರಿಸಿ ಕುಶಲಪ್ರಶ್ನಮಾಡಿ ಕುಳಿತುಕೊಳ್ಳಲಿಕ್ಕೆ ಆಸನವನ್ನು ಕೊಟ್ಟನು. ಬಳಿಕ ಪ್ರೇಮದಿಂದ ಆತನನ್ನು ಪೂಜಿಸಿ ಮೃದುವಾಣಿಗಳಿಂದ ಭುಶುಂಡಿಯು ಆತನನ್ನು ಕುರಿತು-ಪ್ರಭೋ. ಖಗನಾಥನೇ, ನಿನ್ನ ದರ್ಶನದಿಂದ ನಾನು ಕೃತಾರ್ಥನಾದೆನು. ನನಗೆ ಅಪ್ಪಣೆಯಾದರೆ ಅದನ್ನು ಈಗಲೇ ಪಾಲಿಸುವೆನು. ಎಲೈ ಸ್ವಾಮಿಯೇ, ಯಾವ ಉದ್ದೇಶದಿಂದ ಇಲ್ಲಿಗೆ ತಮ್ಮ ಬರೋಣವಾಯಿತು? ಎಂದು ಕೇಳಿದನು. ಅದಕ್ಕೆ ಗರುಡನು ಮೃದುನುಡಿಗಳಿಂದ—ಎಲೈ ಭುಶುಂಡಿಯೇ ಸಾಕ್ಷಾತ್ ಮಹೇಶ್ವರನೇ ಸ್ವಮುಖದಿಂದ ನಿನನ್ನು ಸ್ತುತಿಸಿರುವದರಿಂದ ನೀನು ಕೃತಕೃತ್ಯನೇ ಆಗಿರುವೆ. ನಿನ್ನ ದರ್ಶನಮಾತ್ರದಿಂದ ನನ್ನ ಹೇತುಗಳೆಲ್ಲ ಪೂರ್ಣವಾದವು. ನಿನ್ನ ಪರಮಪಾವನವಾದ ಆಶ್ರಮವನ್ನು ನೋಡಿದ ಕೂಡಲೆ ನನ್ನ ಮೋಹ-ಸಂಶಯ-ಭ್ರಮಗಳೆಲ್ಲ ನಷ್ಟವಾದವು. ಎಲೈ ತಾತನೇ, ಇನ್ನು ನನಗೆ ಅತ್ಯಂತ ಪಾವನವೂ, ಸದಾ ಸುಖದಾಯಕವೂ, ದುಃಖನಾಶಕವೂ ಆದ ಶ್ರೀರಾಮಕಥೆಯನ್ನು ಆದರಪೂರ್ವಕವಾಗಿ ಶ್ರವಣಮಾಡಿಸೆಂದು ಪ್ರಭುವಾದ ನಿನ್ನನ್ನು ಪುನಃ ಪುನಃ ಪ್ರಾರ್ಥಿಸುವೆನು. ಎಂದು ಹೇಳಲು, ಪಾರ್ವತೀ, ನಿನಗೆ ನಾನು ಈ ಮೊದಲೇ ಹೇಳಿದಂತ ಭುಶುಂಡಿಯು ಮೊದಲಿನಿಂದ ಕಡೆತನಕ ಎಲ್ಲ ರಾಮಕಥೆಯನ್ನು ಆನಂದದಿಂದ ಗರುಡನಿಗೆ ಹೇಳಿದನು.

ಈ ಎಲ್ಲ ಕಥೆಯನ್ನು ಕೇಳಿ ಗರುಡನು ಹರ್ಷಭರಿತನಾಗಿ—ಎಲೈ ವಾಯುಸಶ್ರೇಷ್ಠನೇ, ನಿನ್ನ ಕೃಪೆಯಿಂದ ನನ್ನ ಸಂದೇಹವು ದೂರವಾಯಿತು; ಯಾವತ್ತು ರಘುಪತಿಯ ಚರಿತ್ರವನ್ನು ಕೇಳಿದೆನು; ರಾಮಚರಣದಲ್ಲಿ ಪ್ರೇಮವು ಉತ್ಪನ್ನವಾಯಿತು. ನಾಗಪಾಶಬಂಧನದ ದ್ವಾರದಿಂದ ರಘುಪತಿಯು ನನ್ನಲ್ಲಿ ಮೋಹವ ಉತ್ಪನ್ನ ಮಾಡಿ-

ದೊಂದು ಉಪಕಾರವೇ ಆಯಿತು; ಯಾಕಂದರೆ ಹಾಗಾಗದಿದ್ದರೆ ನಿನ್ನ ದರ್ಶನವಾಗುತ್ತಿದ್ದಿಲ್ಲ; ಮತ್ತು ಪರಮಕುತೂಹಲಜನಕವಾದ ರಾಮಚರಿತ್ರವನ್ನು ನಾನು ಕೇಳುತ್ತಿದ್ದಿಲ್ಲ. ರಾಮ ಕೃಪೆಯಿಲ್ಲದೆ ಸತ್ಸಮಾಗಮವಾಗುವದಿಲ್ಲವೆಂದು ವೇದಾದಿಗಳು ಹೇಳುತ್ತಿರುವದರಿಂದ, ರಾಮಕೃಪೆಯಿಂದಲೇ ನನಗೆ ನಿನ್ನ ದರ್ಶನವಾಗಿ, ನಿನ್ನ ಪ್ರಸಾದದಿಂದ ನನ್ನ ಸಂಶಯವು ನಷ್ಟವಾಯಿತು, ಅನ್ನಲು, ಗರುಡನ ಈ ಪ್ರೇಮಲವಾಣಿಯನ್ನು ಕೇಳಿ ಕಾಕಭುಶುಂಡಿಯು ಪುಲಕಿತಗಾತ್ರನೂ, ಸಜಲನೇತ್ರನೂ ಆಗಿ ಅತ್ಯಂತ ಪ್ರಸನ್ನಚಿತ್ತನಾದನು. ಎಲೈ ಪಾರ್ವತೀ, ಬುದ್ಧಿವಂತನೂ, ಸುಶೀಲನೂ, ಪವಿತ್ರನೂ, ಕಥೆಯ ರಸಿಕನೂ, ಹರಿಭಕ್ತನೂ ಆದ ಶ್ರೋತಾರನು ಪ್ರಾಪ್ತನಾದರೆ, ಸಂತರು ತಮ್ಮ ಅತ್ಯಂತ ರಹಸ್ಯವನ್ನು ಕೂಡ ಹೇಳುವರು. ಆದರಂತೆ ಕಾಕಭುಶುಂಡಿಯು ಗರುಡನನ್ನು ಅತ್ಯಂತವಾಗಿ ಪ್ರೀತಿಸಿ ಆತನನ್ನು ಕುರಿತು—ಎಲೈ ಖಗರಾಜನೇ, ನೀನು ಎಲ್ಲ ಬಗೆಯಿಂದಲೂ ನನಗೆ ಪೂಜ್ಯನಾಗಿದ್ದು, ರಘುಪತಿಯ ಕೃಪೆಗೆ ಪಾತ್ರನಾಗಿರುವೆ. ನಿನಗೆ ಸಂಶಯವೂ ಇಲ್ಲ, ಮೋಹವೂ ಇಲ್ಲ, ಮಾಯೆಯೂ ಇಲ್ಲ. ಎಲೈ ಗರುಡನೇ ಮೋಹದ ನೆವದಿಂದ ನಿನ್ನನ್ನು ನನ್ನ ಬಳಿಗೆ ಕಳಿಸಿ ಪ್ರಭುವು ನನಗೆ ದೊಡ್ಡಸ್ತನವನ್ನು ಕೊಟ್ಟನು. ಅಥವಾ ಎಲೈ ಖಗೇಶ್ವರನೇ, ನಿನಗೆ ಮೋಹವುಂಟಾದದ್ದರಲ್ಲಿ ಆಶ್ಚರ್ಯವಿಲ್ಲ-ನಾರದ, ಶಿವ, ಬ್ರಹ್ಮದೇವ, ಸನಕಾದಿಕ-ಮುನಿಶ್ರೇಷ್ಠರು ಇವರು ಆತ್ಮವಾದಿಗಳು ಆದರೆ ಅವರಲ್ಲಿ ಮದದಿಂದ ಕುಣಿಯದೆಯಿದ್ದವರು, ತೃಷ್ಣೆಯಿಂದ ಕಂಗಾಲಾಗದೆಯಿದ್ದವರು, ಕ್ರೋಧದಿಂದ ಮನಸ್ಸು ದಗ್ಧವಾಗದೆಯಿದ್ದವರು ಯಾರಿರುವರು? ಈ ಜಗತ್ತಿನಲ್ಲಿ ಜ್ಞಾನಿಗಳು, ತಪಸ್ವಿಗಳು, ಶೂರರು, ಕವಿಗಳು, ಪಂಡಿತರು, ಸದ್ಗುಣಸಂಪನ್ನರು ಆದವರಲ್ಲಿ ಲೋಭವು ಯಾರ ವಿಡಂಬನೆಯನ್ನು ಮಾಡಿರುವದಿಲ್ಲ? ಲಕ್ಷ್ಮಿಯ ಮದವು ಯಾರನ್ನು ವಕ್ರರಾಗಮಾಡಿರುವದಿಲ್ಲ? ಪ್ರಭುತ್ವವು ಯಾರನ್ನು ಕಿವುಡರಾಗಿ ಮಾಡಿರುವದಿಲ್ಲ? ಮೃಗನಯನೆಯರ ಕಟಾಕ್ಷಗಳು ಯಾರನ್ನು ವಿದ್ಧರಾಗಮಾಡಿರುವದಿಲ್ಲ? ಅವಿದ್ಯಾಮೂಲಕವಾದ ಸನ್ನಿಪಾತವು ಯಾರಿಗೆ ಆಗದೆ ಬಿಟ್ಟಿರುವದು? ಮಾನ-ಮದಗಳನ್ನು ತ್ಯಜಿಸಿ ಪಾರಾದವರು ಯಾರಿರುವರು? ಯೌವನಜ್ವರದಿಂದ ಯಾರು ಪೀಡಿತರಾಗಿರುವದಿಲ್ಲ? ಮಮತ್ವಬುದ್ಧಿಯು ಯಾರ ಯಶಸ್ಸನ್ನು ಮಲಿನವಾಗಮಾಡಿರುವದಿಲ್ಲ? ಮತ್ಸರವು ಯಾರನ್ನು ಕಲಂಕಿತರಾಗಮಾಡಿರುವದಿಲ್ಲ? ವಾಸನಾರೂಪ ಗದ್ದಲಿಯು ಶರೀರರೂಪ ಕಟ್ಟಿಗೆಗೆ ಹತ್ತದೆಯಿರುವ ಧೈರ್ಯಶಾಲಿಯು ಯಾವನಿರುವನು? ಪುತ್ರ, ವಿತ್ತ, ಕಳತ್ರಗಳೆಂಬ ಈ ಮೂರು ಈಷಣೆಗಳು ಯಾವನಬುದ್ಧಿಯನ್ನು ಮಲಿನಮಾಡಿಟ್ಟಿರುವದಿಲ್ಲ? ಗರುಡಾ, ಇವೆಲ್ಲ ಮಾಯೆಯ ಪರಿವಾರಗಳು ಅತ್ಯಂತ ಪ್ರಬಲವಾಗಿರುವವು. ಶಿವಬ್ರಹ್ಮರೂ ಆ ಮಾಯೆಯನ್ನು ನೋಡಿ ನಡಗುತ್ತಿರುವಾಗ, ಬೇರೆ ಜೀವರ ಕಥೆಯೇನು? ಮಾಯೆಯು ಪ್ರಚಂಡ ಸೈನ್ಯವು ಈ ಸೃಷ್ಟಿಯನ್ನು ಮುತ್ತಿಬಿಟ್ಟಿರುವದು. ಕಾಮಾದಿಕಗಳು

ಆ ಸೈನ್ಯದಲ್ಲಿಯು ಸೇನಾಪತಿಗಳಾಗಿದ್ದು, ದಂಭ, ಕಪಟ, ಪಾಖಂಡಗಳು ಅಪರೋಳಗಿನ ಯೋಧರಾಗಿರುವವು. ಅಂಥ ಆ ಮಾಯೆಯು ರಘುಪತಿಯ ದಾಸಿಯಾಗಿರುವಳು. ಆ ಮಾಯೆಯು ಸುಳ್ಳು ಇರುತ್ತವೆಂದು ತಿಳಿದರೂ, ರಾಮನ ಕೃಪೆಯಿಲ್ಲದೆ ಅದು ನಷ್ಟವಾಗುವದಿಲ್ಲವೆಂದು ನಾನು ಪ್ರತಿಜ್ಞೆಯಿಂದ ಹೇಳುವೆನು. ಅವೇ ಶ್ರೀರಾಮನೇ ಸಚ್ಚಿದಾನಂದಘನನೂ, ಅಜನೂ, ವಿಜ್ಞಾನರೂಪನೂ, ಬಲನಿಧಾನನೂ, ವ್ಯಾಪಕನೂ, ವ್ಯಾಪ್ಯನೂ, ಅಖಂಡನೂ, ಅನಂತನೂ, ಅಖಿಲನೂ, ಅಮೋಘಶಕ್ತಿಯೂ, ಭಗವಂತನೂ, ನಿರ್ಗುಣನೂ, ಸಂಪೂರ್ಣನೂ, ಇಂದ್ರಿಯಾತೀತನೂ, ಸರ್ವದರ್ಶಿಯೂ, ಅನಿಂದ್ಯನೂ, ಅಜಿಂಕ್ಯನೂ, ನಿರ್ಮಲನೂ, ನಿರಾಕಾರನೂ, ನಿರ್ಮೋಹನೂ, ನಿತ್ಯನೂ, ನಿರಂಜನನೂ, ಸುಖಸಂದೋಹನೂ, ಪ್ರಕೃತಿಪರನೂ, ಪ್ರಭುವೂ, ಸರ್ವಾಂತರ್ಯಾಮಿಯೂ, ನಿರೀಹನೂ, ಅಜ್ಞಾನರಹಿತನೂ, ಅವಿನಾಶಿಯೂ, ಪರಬ್ರಹ್ಮನೂ ಆಗಿರುವನು. ಇದರಲ್ಲಿ ಸಂಶಯಕ್ಕೆ ಕಾರಣವೇ ಇರುವದಿಲ್ಲ.

ಗರುಡನೇ, ಭಕ್ತರ ಹಿತಕ್ಕಾಗಿ ಭಗವಾನ್ ಪ್ರಭುರಾಮಚಂದ್ರನು ಭೂಪದೇಹವನ್ನು ಧರಿಸಿ, ಪ್ರಾಕೃತ ನರರಂತೆ ಪರಮ ಪವಿತ್ರ ಲೀಲೆಯನ್ನು ಮಾಡಿದನು. ವೇಷಧಾರಿಯು ಅನೇಕ ವೇಷಗಳನ್ನು ಹಾಕಿಕೊಂಡು ಅವುಗಳಂತೆ ನಟಿಸಿ ತಾನು ಮಾತ್ರ ಅವುಗಳಿಂದ ಅಲಿಪ್ತನಾಗಿರುವನು. ಅದರಂತೆ ರಘುಪತಿಯ ನಾಗಪಾಶಬಂಧವೆಂಬದೊಂದು ರಕ್ಷಸವಿಮೋಹಿನಿಯೂ, ಜನಸುಖಕಾರಿಣಿಯೂ ಆದ ಲೀಲೆಯಿರುವದು. ವಿಷಯರತರೂ, ಕಾಮುಕರೂ ಆದವರು ಮೂಢರಾಗಿಯೇ ಇರುವದರಿಂದ, ಅವರೇ ಪ್ರಭುವಿನ ಮೇಲೆ ಇಂಥ ಅಜ್ಞಾನದ ಹೊದಿಕೆಯನ್ನು ಹೊತ್ತುವರು. ಪರಮೇಶ್ವರನ ನಿರ್ಗುಣರೂಪವು ಅತ್ಯಂತ ಸುಲಭವಾಗಿದ್ದು, ಆತನ ಸಗುಣರೂಪವನ್ನು ತಿಳಿಯುವದು ಮಾತ್ರ ಯಾರಿಗೂ ಶಕ್ಯವಾಗಿರುವದಿಲ್ಲ; ಯಾಕಂದರೆ ಆತನ ಅನೇಕ ಸಗುಣ ಚರಿತ್ರಗಳನ್ನು ಕೇಳಿದಕೂಡಲೆ ಮುನಿಗಳ ಮನಸ್ಸಿಗೂ ಭ್ರಾಂತಿಯು ಉತ್ಪನ್ನವಾಗುವದು. ಎಲೈ ಗರುಡನೇ, ನಾನು ರಘುಪತಿಯ ಪ್ರಭುತ್ವದ ಸಂಬಂಧದಿಂದ ನನಗೆ ಬಂದ ಸುಂದರ ಕಥೆಯನ್ನು ಯಥಾಮತಿ ಹೇಳುವೆನು ಕೇಳು. ನೀನು ರಾಮಕೃಪೆಗೆ ಪಾತ್ರನಿರುವದರಿಂದ ನಿನ್ನ ಹರಿಗುಣಗಳಲ್ಲಿಯ ಪ್ರೀತಿಯನ್ನು ನೋಡಿ ನಿನ್ನಲ್ಲಿ ಯಾವ ಮಾತನ್ನೂ ಬಚ್ಚಿ ಇಡದೆ, ನನಗೆ ಮೋಹವು ಉತ್ಪನ್ನವಾದ ಬಗೆಯನ್ನು ಹೇಳುವೆನು ಕೇಳು. ಸೇವಕರಲ್ಲಿ ಶ್ರೀರಾಮನ ಮಮತೆಯು ವಿಶೇಷವಾಗಿರುವದರಿಂದ ತನ್ನ ಸೇವಕರ ಅಹಂಕಾರವನ್ನು ಸರ್ವಥಾ ಇರಗೊಡದಿರುವದು ಆತನ ಸಹಜ ಸ್ವಭಾವವಾಗಿರುವದು. ಈ ಅಹಂಕಾರವೇ ಸಂಸಾರಮೂಲವೂ, ದುಃಖಪ್ರದವೂ, ಯಾವತ್ತು ಶೋಕಗಳ ಕಾರಣವೂ ಆಗಿರುವದು. ಅಂತೇ ಕೃಪಾನಿಧಿಯು ಅದನ್ನು ನಿರ್ಮೂಲಮಾಡುವನು. ತಾಯಿಯು ತನ್ನ ಮಗನ ಹಿತಕ್ಕಾಗಿ ಆತನಿಗಾಗಿರುವ ಹುಣ್ಣನ್ನು ಕೊಯ್ಸುವಾಗ ಮಗ

ನಿಗಾಗುವ ವ್ಯಥೆಯನ್ನು ನೋಡದಿರುವಂತೆ, ರಘುಪತಿಯು ತನ್ನ ದಾಸರ ಅಭಿಮಾನ ವನ್ನು ಕೇವಲ ಅವರ ಹಿತಕ್ಕಾಗಿಯೇ ಅವರ ದುಃಖದ ಕಡೆಗೆ ಲಕ್ಷಗೊಡದೆ ದೂರ ಮಾಡುವನು. ಎಲೈ ಗರುಡಾ, ರಾಮಚಂದ್ರನ ದಯಾಲುತ್ವವನ್ನೂ, ನನ್ನ ಮೂರ್ಖ ತ್ವವನ್ನೂ ವರ್ಣಿಸುವೆನು, ಲಕ್ಷಪೂರ್ವಕವಾಗಿ ಕೇಳು. ಶ್ರೀ ರಾಮನು ಮನುಷ್ಯಾವ ತಾರ ಮಾಡಿ ಭಕ್ತರ ಅಭಿರುಚಿಗಾಗಿ ಅನೇಕ ಲೀಲೆಗಳನ್ನು ಮಾಡುವ ಆಯಾ ಕಾಲಗಳ ಲ್ಲೆಲ್ಲ ನಾನು ಅಯೋಧ್ಯೆಗೆ ಹೋಗುತ್ತಿರುವೆನು. ಆತನ ಜನ್ಮಮಹೋತ್ಸವವನ್ನು ನೋಡಹೋದವನು ಒಬ್ಬನಾಗಿ ಐದುವರ್ಷಗಳವರೆಗೆ ಅಲ್ಲಿಯೇ [illegible] ತ್ತಿರುವೆನು. ಶ್ರೀ ರಾಮನ ಬಾಲಮೂರ್ತಿಯು ನನ್ನ ಇಷ್ಟದೈವತವಾಗಿರುವುದು. ಶತಕೋಟಿ ಮದನರಂತೆ ಅಭಂಗಕಾಂತಿಯುಳ್ಳ ನನ್ನ ಆ ಪ್ರಭುವಿನ ಮುಖವನ್ನು ಪುನಃ ಪುನಃ ದಿಟ್ಟಿಸಿ ನೋಡಿಯೇ ನಾನು ನನ್ನ ನೇತ್ರಗಳ ಸಾಫಲ್ಯವನ್ನು ಮಾಡಿಕೊಳ್ಳುತ್ತಿರು ವೆನು. ಸಣ್ಣ ಕಾಗೆಯ ರೂಪವನ್ನು ಧರಿಸಿ ಶ್ರೀ [illegible] ಸಮೀಪದಲ್ಲಿದ್ದು [illegible] ನಾನಾಪ್ರಕಾರದ ಲೀಲೆಗಳನ್ನು ನೋಡುತ್ತಿರುವೆನು ಬಾಲ್ಯದಲ್ಲಿ ಶ್ರೀ ರಾಮನು ಅತ್ತಿತ್ತ ಓಡಾಡುತ್ತಿರುವಾಗೆಲ್ಲ ನಾನೂ ಹಾರುತ್ತ ಆತನ ಬೆನ್ನುಹತ್ತಿ ತಿರುಗುತ್ತಿರುವೆನು; [illegible] ದಲ್ಲಿ ಬಿದ್ದ ಆತನ ಉಚ್ಛಿಷ್ಟವನ್ನು ಆರಿಸಿ ತಿನ್ನುತ್ತಿರುವೆನು

ಎಲೈ ಗರುಡಾ, ಹೀಗಿರುವಾಗ ಪ್ರಭುವು ಒಮ್ಮೆ ಒಳ್ಳೆಯ ಚಮತ್ಕಾರವನ್ನು ಮಾಡಿ ದನು. ಶ್ರೀರಾಮನ ಚರಿತ್ರಗಳು ಸೇವಕರಿಗೆ ಸುಖಕೊಡುವಂತವವೇ ಇರುವವು. ಸುಂದರವಾದ ರಾಜಮಂದಿರದ ಅಂಗಳದಲ್ಲಿ ನಾಲ್ವರೂ ಬಂಧುಗಳು ದಿನಾಲು ಆನಂದ ದಿಂದ ಆಡುತ್ತಿದ್ದರು. ಆಗಿನ ಆ ಪ್ರಭುವಿನ ಆ ಸೌಂದರ್ಯಾವಯವಗಳು, ಆ ಮಿದು ಗೆಂಪ ಸುಂದರ ಉಂಗುರಗೂದಲುಗಳು, ನಗಲು ಪ್ರಕಾಶಿಸುವ ಶುಭ್ರವಾದ ಆ ಕೋಮ ಲವಾದ ಎರಡು ಮೊಳಕೆ ಹಲ್ಲುಗಳು, ಆ ಮೈಯೊಳಗಿನ ಹಳದಿಯ ಬಣ್ಣದ ಅಂಗಿ, ಆ ವಿವಿಧ ಬಾಲಕ್ರೀಡೆಗಳು, ಆನಂದವುಕ್ಕಿ ಹೊಡೆಯುವ ಆ ಕೇಕೆ ಇವು ನನ್ನ ಮನಸ್ಸನ್ನು ಆಕರ್ಷಿಸುತ್ತಿದ್ದವು. ಇಂಥ ಆ ಪ್ರಭುವು ಆಡುತ್ತಿರುವಾಗ ತನ್ನ ನೆರ ಳನ್ನು ನೋಡಿ ತಾನು ಕುಣಿಯುವನು, ನನ್ನೊಡನೆ ಹಲವು ಲೀಲೆಗಳನ್ನು ಮಾಡು ವನು. ಗರುಡಾ, ಆ ಲೀಲೆಗಳನ್ನು ಹೇಳಲಿಕ್ಕೂ ನನಗೆ ನಾಚಿಕೆ ಬರುತ್ತದೆ ಆ ಪ್ರಭುವು ಕೇಕೆ ಹೊಡೆಯುತ್ತ ನನ್ನನ್ನು ಹಿಡಿಯುವದಕ್ಕಾಗಿ ಬಂದಾಗ ನಾನು ಓಡಿ ಹೋಗಲು, ಆತನು ನನಗೆ ಬಕ್ಕರಿಸ ತೋರಿಸುವನು. ನಾನು ಹತ್ತರ ಬಂದ ಕೂಡಲೆ ಪ್ರಭುವು ನಗುವನು. ನಾನು ದೂರ ಹೋದಕೂಡಲೆ ಅಳುತ್ತ ಕುಳಿತುಕೊಳ್ಳುವನು. ನಾನು ಆತನ ಚರಣಕಮಲಗಳನ್ನು ಹಿಡಿಯುವದಕ್ಕಾಗಿ ಪುನಃ ಪುನಃ ಹತ್ತರ ಹೋಗಲು, ಆತನು ತಿರುತಿರುಗಿ ನೋಡಿ ಓಡತೊಡಗುವನು. ತೀರ ಪ್ರಾಕೃತ ಬಾಲ ಕಸಂತಹ ಆ ಲೀಲೆಯನ್ನು ನೋಡಿ ನನಗೂ ಭ್ರಾಂತಿಯು ಉತ್ಪನ್ನವಾಯಿತು. ಪ್ರಭುವು

ಚಿದಾನಂದಸಂದೋಹನಿದ್ದು, ಇದೆಂಥ ಹುಚೇಷ್ಟೆಯನ್ನು ಆರಂಭಿಸಿರುವನೆಂದು ನಾನು ಶಂಕಿಸಿದೆನು. ಹೀಗೆ ನಾನು ಶಂಕಿಸುವದೊಂದೇ ತಡ. ರಘುಪತಿಯ ಪ್ರೇರಣೆಯಿಂದ ಆತನ ಮಾಯೆಯು ನನ್ನನ್ನು ಆವರಿಸಿತು; ಆದರೆ ಆ ಮಾಯೆಯು ನನಗೆ ದುಃಖವನ್ನು ಮಾತ್ರ ಎಷ್ಟುಕೊಡಲಿಲ್ಲ. ಬೇರೆ ಜೀವರಂತೆ ನಾನು ಸಂಸಾರಲಂಪಟನಾಗಲಿಲ್ಲ. ಅದರ ಕಾರಣವು ಬೇರೆಯೇ ಇರುವದು. ಎಲೈ ವಿಹಂಗವಾಹನನೇ, ಅಖಂಡಜ್ಞಾನವು ಒಬ್ಬ ಜಾನಕೀರಮಣನಿಗೆ ಮಾತ್ರ ಇರುತ್ತದೆ. ಉಳಿದ ಯಾವತ್ತು ಚರಾಚರಜೀವ ಮಾತ್ರಗಳು ಮಾಯಾವಶವಾಗಿರುವವು. ಹೀಗಿರದೆ ಅಖಂಡಜ್ಞಾನವು ಎಲ್ಲರಿಗೂ ಇರುತ್ತಿದ್ದರೆ ಜೀವನಿಗೂ ಈಶ್ವರನಿಗೂ ಭೇದವು ಎಲ್ಲಿ ಉಳಿಯುತ್ತಿತ್ತು? ಅಭಿಮಾನಿಯಾದ ಜೀವನು ಮಾಯಾವಶನು. ಗುಣಗಳ ಖನಿಯಾದ ಮಾಯೆಯು ಈಶ್ವರಾಧೀನವಾಗಿರುವದು. ಅಂತೇ ಜೀವನು ಪರತಂತ್ರನಿದ್ದು, ಈಶ್ವರನೊಬ್ಬನೇ ಸ್ವತಂತ್ರನಾಗಿರುವನು. ಜೀವನಿಗೆ ಅನೇಕತ್ವವಿದ್ದು, ಪರಮೇಶ್ವರನು ಮಾತ್ರ ಏಕಮೇವಾದ್ವಿತೀಯನಾಗಿರುವನು. ಜೀವರ ಅನೇಕತ್ವವು ಅಥವಾ ಭೇದವು ಮಾಯಾಕೃತವು, ಅತಏವ ಅಜ್ಞಾನ ಮೂಲಕವು ಆಗಿದ್ದರೂ, ಒಬ್ಬ ಪರಮೇಶ್ವರನ ಹೊರತು ಕೋಟ್ಯವಧಿ ಉಪಾಯಗಳಿಂದಾದರೂ ಆ ಮಾಯೆಯು ಲಯವಾಗುತ್ತಿರುವದಿಲ್ಲ. ರಾಮಭಜನೆಯಿಲ್ಲದೆ ಮೋಕ್ಷವನ್ನಿಚ್ಛಿಸುವವನು ಜ್ಞಾನಿಯಾಗಿದ್ದರೂ ಆತನು ಪುಚ್ಛವಿಷಾಣಹೀನಪಶುವಾಗಿರುವನೆಂದು ತಿಳಿಯಬೇಕು. ಚಂದ್ರನೂ, ನಕ್ಷತ್ರಸಮುದಾಯಗಳೂ ಷೋಡಶಕಲೆಗಳಿಂದ ಪ್ರಕಾಶಿಸಿದರೂ, ಯಾವತ್ತು ಗುಡ್ಡಗಳಿಗೂ ಬೇಗೆ ಹಚ್ಚಿಬೇಕಾದಷ್ಟು ಬೆಳಕು ಮಾಡಿದರೂ ಸೂರ್ಯನ ಹೊರತು ರಾತ್ರಿಯು ನಾಶವಾಗದಿರುವಂತೆ, ಎಲೈ ಖಗೇಶ್ವರನೇ, ಹರಿಭಕ್ತಿಯ ಹೊರತು ಜೀವನಕ್ಲೇಶವು ನಷ್ಟವಾಗಲಾರದು. ಹರಿಭಕ್ತರನ್ನು ಅವಿದ್ಯೆಯು ಮೋಹಿಸಲಾರದು ಅವರನ್ನು ಬಾಧಿಸಲು ವಿದ್ಯೆಯು ಒಂದೇ ಸಮರ್ಥವಾಗುವದು. ಅದೂ ಪ್ರಭುವಿನ ಆಜ್ಞೆಯನ್ನು ಅನುಸರಿಸಿ! ಅದರಿಂದಲೇ ಗರುಡನೇ, ಹರಿದಾಸರ ನಾಶವು ಆಗುವದಿಲ್ಲವು. ಅವರ ಭೇದಭಕ್ತಿಯು ಮತ್ತೂ ಬೆಳೆಯತೊಡಗುವದು.

ಗರುಡಾ, ನಾನು ಸಂಶಯಗ್ರಸ್ತನಾದದ್ದನ್ನು ನೋಡಿ ರಾಮಚಂದ್ರನು ನಕ್ಕನು. ಆಗ ಆತನು ಮಾಡಿದ ಆಶ್ಚರ್ಯಕಾರಕ ಕೃತಿಯ ಮರ್ಮವು ಆತನ ಬಂಧುಗಳಿಗೆ, ಅಥವಾ ಆತನ ತಾಯಿತಂದೆಗಳಿಗೆ ಕೂಡ ಗೊತ್ತಾಗಲಿಲ್ಲ. ಶ್ಯಾಮಲಗಾತ್ರನೂ, ಆರಕ್ತಚರಣನೂ ಆದ ಶ್ರೀರಾಮನು ಮೊಣಕಾಲಮೇಲೆ ಕೈಯೂರಿ ನನ್ನನ್ನು ಹಿಡಿಯುವದಕ್ಕಾಗಿ ಓಡಿಬಂದನು; ಆಗ ನಾನೂ ಓಡತೊಡಗಿದೆನು; ರಾಮನು ನನ್ನನ್ನು ಹಿಡಿಯುವದಕ್ಕಾಗಿ ಕೈ ಮುಂದಕ್ಕೆ ಚಾಚಿದನು. ಹೇಗೆ ಹೇಗೆ ನಾನು ಆಕಾಶದಲ್ಲಿ ಹಾರುತ್ತ ಹಿಂದಿರುಗಿ ನೋಡುತ್ತ ಹೋಗುವೆನೋ, ಹಾಗೆ ಹಾಗೆ ಪ್ರಭುವಿನ ಕೈಯು ನನ್ನ ಹಿಂದೆ ಇರುವಂತೆ ನನಗೆ ತೋರಹತ್ತಿತು. ನಾನು ಹಿಂದಿರುಗಿ ನೋಡುತ್ತ, ನೋಡುತ್ತ

ಬ್ರಹ್ಮಲೋಕದ ವರೆಗೆ ಹಾರಿ ಹೋದೆನು; ಆದರೂ ಗರುಡಾ, ನನಗೂ ರಾಮನ ಭುಜ ಗಳಿಗೂ ಎರಡೇ ಬೆರಳಿನ ಅಂತರವದೆ! ಹೀಗೆಯೇ ಸಪ್ತಾವರಣಗಳನ್ನು ಭೇದಿಸಿ ನನ್ನ ಗತಿಯು ಇರುವಲ್ಲಿಯ ವರೆಗೆ ನಾನು ಹಾರಿ ಹೋಗಿ ನೋಡಿದೆನು. ಅಲ್ಲಿಯೂ ಪ್ರಭು ವಿನ ಬಾಹುವು ಇನ್ನೇ ಇತ್ತು! ಆಗ ಮಾತ್ರ ನಾನು ಬಹಳ ಬೆದರಿದೆನು. ಆಗ ನಾನು ಬಹಳ ತ್ರಸ್ತನಾಗಿ ಕಣ್ಣುಗಳನ್ನು ಮುಚ್ಚಿಕೊಂಡೆನು. ತಿರುಗಿ ಕಣ್ಣು ತೆರೆದು ನೋಡಲು, ನಾನು ಅಯೋಧ್ಯೆಯ ರಾಜಾಂಗಣದಲ್ಲಿದ್ದು, ಪ್ರಭುವು ನನ್ನನ್ನು ನೋಡಿ ನಗುತ್ತಿರುವಂತೆ ತೋರಿತು. ಆತನು ನಗುತ್ತಿರುವಾಗ ನಾನು ಪಕ್ಕನೆ ಆತನ ಮುಖ ದಲ್ಲಿ ಹೋಗಿಬಿದ್ದೆನು. ಎಲೈ ಪಕ್ಷಿರಾಜನೇ, ಕೇಳು. ಆತನ ಮುಖದಲ್ಲಿ ನಾನು ಅನೇಕ ಬ್ರಹ್ಮಾಂಡಗಳನ್ನು ನೋಡಿದೆನು. ಅವು ಅತ್ಯಂತ ವಿಚಿತ್ರಗಳಾಗಿದ್ದು, ಅವುಗ ಳಲ್ಲಿ ಸ್ವರ್ಗಾದಿ ಲೋಕಗಳು ಅನೇಕವಾಗಿದ್ದವು. ಅವುಗಳ ರಚನೆಯು ಒಂದ ಕ್ಕಿಂತ ಒಂದು ಮೇಲುತರದ್ದಾಗಿದ್ದಿತು. ಅಲ್ಲಿಬ್ರಹ್ಮ-ಶಂಕರರು ಕೋಟ್ಯವಧಿಜನರಿದ್ದರು. ಸೂರ್ಯ-ಚಂದ್ರರ ಲೆಕ್ಕವೇ ಇದ್ದಿಲ್ಲ. ಇಂದ್ರಾದಿಲೋಕಪಾಲಕರು, ಯಮ, ಕಾಲರು ಅಗಣಿತವಾಗಿದ್ದು, ಪರ್ವತಗಳೂ, ಭೂಮಿಗಳೂ-ಅವಾಂತರಗಳೂ ಅಸಂಖ್ಯಗಳೂ ಆಗಿ ದ್ದವು. ಸಮುದ್ರಗಳು, ನದಿಗಳು, ಸರೋವರಗಳು, ಅರಣ್ಯಗಳು, ಅ ಪಾರ ವಾಗಿದ್ದು, ನಾನಾ ಪ್ರಕಾರದ ಸೃಷ್ಟಿರಚನೆಯು ಅಲ್ಲಿ ತೋರುತ್ತಿತ್ತು. ಅದರಂತೆಯೇ ಸುರರು, ಮುನಿಗಳು, ಸಿದ್ಧರು, ನಾಗರು, ನರರು, ಕಿನ್ನರರು ಮೊದಲಾದ ಚರಾಚರಾ ತ್ಮಕನಾಲ್ಕುಪ್ರಕಾರದ ಜೀವರೂಅಲ್ಲಿ ಇದ್ದರು. ಎಂದೂ ನೋಡದ, ಎಂದೂ ಕೇಳದ, ಕಲ್ಪನೆಗೆ ನಿಲುಕದ ಅದ್ಭುತವನ್ನೇ ಅಲ್ಲಿ ನಾನು ನೋಡಿದೆನು. ಗರುಡಾ, ಅದರವರ್ಣನ ವನ್ನಾದರೂ ನಾನು ಹೇಗೆಮಾಡೇನು! ಆ ಪ್ರತಿಒಂದು ಬ್ರಹ್ಮಾಂಡದಲ್ಲಿ ನಾನು ನೂರು ನೂರು ವರ್ಷಗಳನ್ನು ಕಳೆದೆನು. ಹೀಗೆ ಹಲವು ಬ್ರಹ್ಮಾಂಡಗಳನ್ನು ನೋಡುತ್ತ ತಿರುಗುತ್ತಿದ್ದೆನು. ಪ್ರತಿಒಂದು ಲೋಕದಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವ ರರು, ಮನುವು, ದಿಕ್ಪಾಲಕರು ಎಲ್ಲರೂ ಬೇರೆಬೇರೆ ಇದ್ದರು. ನರರು, ಗಂಧರ್ವರು, ಭೂತಗಳು, ವೇತಾಳಗಳು, ಕಿನ್ನರರು, ರಾಕ್ಷಸರು, ಪಶುಗಳು, ಪಕ್ಷಿಗಳು, ಸರ್ಪ ಗಳು, ದೇವದೈತ್ಯರ ಸಮುದಾಯವು ಇವೆಲ್ಲ ಬೇರೆ ಬೇರೆ ಜಾತಿಯವಿದ್ದು, ಅಲ್ಲಿಯ ಜೀವರೆಲ್ಲರೂ ಬೇರೆ ಬೇರೆ ಪ್ರಕಾರದವರೇ ಆಗಿದ್ದರು. ಅದರಂತೆಯೇ, ಪೃಥ್ವಿಗಳು, ನದಿಗಳು, ಸಾಗರಗಳು, ಸರೋವರಗಳು, ಪರ್ವತ ಗಳುಇತ್ಯಾದಿ ಸರ್ವ ಸೃಷ್ಟಿಯು ಅಲ್ಲಿ ತೀರಭಿನ್ನವಾಗಿದ್ದು, ಪ್ರತಿಯೊಂದು ಬ್ರಹ್ಮಾಂಡ ದೊಳಗಿನ ಪ್ರತಿಯೊಂದು ಅದರ ಜಾತಿಯ ವಸ್ತುಗಳು ಅಪಾರವೂ ಅಪ್ರತಿಮವೂ ಆಗಿರುವದು ನನ್ನ ಕಣ್ಣಿಗೆ ಬಿದ್ದಿತು. ಪ್ರತಿಯೊಂದುಭುವನದಲ್ಲಿ ಅಯೋಧ್ಯಾ ಪಟ್ಟಣವೂ, ಶರಯೂನದಿಯೂ,ಸ್ತ್ರೀಪುರುಷರೂಬೇರೆಬೇರೆಯಾಗಿಕಾಣುತ್ತಿದ್ದರು.ಎಲೈ ತಾತನೇ, ಕೇಳು.

ದಶರಥನು, ಕೌಸಲ್ಯಾದಿ ತಾಯಂದಿರು, ಭರತಾದಿ ಬಂಧುಗಳು ಇವರಾದರೂ ಬೇರೆ ಬೇರೆ ರೂಪದವರಾಗಿದ್ದು, ಪ್ರತಿಒಂದು ಬ್ರಹ್ಮಾಂಡದೊಳಗಿನ ರಾಮಾವತಾರದ ಉದಾರಬಾಲ ಚರಿತ್ರಗಳನ್ನು ನಾನು ನೋಡಿದೆನು. ಎಲೈ ವಿಷ್ಣುವಾಹನನೇ, ನನಗೆ ಭಿನ್ನಭಿನ್ನವಾಗಿದ್ದರೂ, ಅತ್ಯಂತ ವಿಚಿತ್ರವಾಗಿದ್ದರೂ ಎಲ್ಲಕಡೆಯಲ್ಲಿಯ ರಚನೆಗಳು ತೋರಿದರೂ, ನಾನು ಅಸಂಖ್ಯ ಭುವನಗಳನ್ನು ತಿರುಗಿ ನೋಡಿದರೂ ರಾಮಪ್ರಭುವು ಮಾತ್ರ ನನಗೆ ಬೇರೆ ಕಾಣಲಿಲ್ಲವು. ನಾನು ಅದೇ ಆ ಮೋಹಕ ಮೂರ್ತಿಯನ್ನು ಎಲ್ಲ ಭುವನಗಳಲ್ಲಿ ನೋಡಿದೆನು. ಹೀಗೆ ಅನೇಕ ಬ್ರಹ್ಮಾಂಡಗಳನ್ನು ಪ್ರವೇಶಿಸುವಾಗ ನನಗೆ ಅನೇಕ ಕಲ್ಪಗಳು ಕ್ಷಣದಂತೆ ಭಾಸವಾಯಿತು. ನಾನು ತಿರುಗುತ್ತ ತಿರುಗುತ್ತ ಪುನಃ ನನ್ನ ಆಶ್ರಮಕ್ಕೆ ಬಂದು ಕೆಲವು ಕಾಲವನ್ನು ಕಳೆದೆನು. ಬಳಿಕ ಅಯೋಧ್ಯೆಯಲ್ಲಿ ಪ್ರಭುವಿನ ಜನ್ಮವಾದದ್ದನ್ನು ಕೇಳಿದಕೂಡಲೆ ನಾನು ಪ್ರೇಮಭರದಿಂದ ಅಯೋಧ್ಯೆಗೆ ಹೋಗಿ ಪೂರ್ವದಲ್ಲಿ ವರ್ಣಿಸಿದಂತೆ ಜನ್ಮೋತ್ಸವವನ್ನು ನೋಡಿದೆನು. ಗರುಡಾ, ರಾಮನ ಉದರದಲ್ಲಿ ನನ್ನ ದೃಷ್ಟಿಗೆ ಬಿದ್ದ ಅನೇಕ ಬ್ರಹ್ಮಾಂಗಳನ್ನು ನೋಡಲಿಕ್ಕೆ ಬರುತ್ತದೆ; ಆದರೆ ವರ್ಣಿಸಲಿಕ್ಕೆ ಬರುವದಲ್ಲ. ಪುನಃ ಅಲ್ಲಿ ನಾನು ಸರ್ವಜ್ಞನೂ, ಮಾಯಾಪತಿಯೂ ದಯಾಘನನೂ ಆದ ಭಗವಾನ್ ರಾಮಚಂದ್ರನನ್ನು ನೋಡಿ ಪುನಃ ಪುನಃ ವಿಚಾರಮಾಡಹತ್ತಿದೆನು; ಆದರೆ ಮೋಹದ ಕಸರಿನಿಂದ ನನ್ನ ಮತಿಯು ವ್ಯಾಪ್ತವಾಗಿತ್ತು. ನಾನು ಎಲ್ಲವನ್ನು ಎರಡುಗಳಿಗೆಯಲ್ಲಿ ನೋಡಿದೆನು; ಆದರೆ ಅತ್ಯಂತ ಮೋಹದಿಂದ ನನ್ನ ಮನಸ್ಸಿಗೆ ಬಹಳ ಬೇಸರಬಂದಿತು. ಹೀಗೆ ನಾನು ತ್ರಸ್ತನಾದದ್ದನ್ನು ನೋಡಿ ದಯಾಳುರಾಮಚಂದ್ರನು ಹಾಸ್ಯಮಾಡಲು, ಪ್ರಭುವಿನ ಮುಖದಿಂದ ನಾನು ಹೊರಬಿದ್ದೆನು; ಆಗ ಅಲ್ಲಿ ಪ್ರಭುವು ನನ್ನೊಡನೆ ಹುಡುಗಾಟಿಕೆಯನ್ನು ಮಂದಸ್ಮಿತವಾಗಿ ಮಾಡತೊಡಗಿದನು.

ಗರುಡಾ, ನನ್ನ ಮನಸ್ಸಿನ ಸಮಾಧಾನವನ್ನು ನಾನು ಮಾಡಬಾರದ ರೀತಿಯಿಂದ ಮಾಡಿದೆನು; ಆದರೆ ಮನಸ್ಸು ಸ್ವಸ್ಥವಾಗಲೊಲ್ಲದು. ಪ್ರಭುವಿನ ಈ ಲೀಲೆಯನ್ನು ನೋಡಿ, ಆತನ ಪ್ರಭಾವವನ್ನು ಮನಸ್ಸಿನಲ್ಲಿ ತರುತ್ತಿರಲು, ನಾನು ಮೈಮರೆತು ಭೂಮಿಯಮೇಲೆ ಬಿದ್ದೆನು. ನನ್ನ ಮುಖದಿಂದ ಶಬ್ದಗಳು ಹೊರಡಲೊಲ್ಲವು. ಕಡೆಗೆ ನಾನು — "ಎಲೈ, ಶರಣಾಗತಪಾಲಕಾ ತ್ರಾಹಿತ್ರಾಹಿ" ಎಂದು ಬೇಡಿಕೊಳ್ಳಹತ್ತಿದೆನು. ಆಗ ಪ್ರಭುವು ತನ್ನ ಮಾಯೆಯ ಪ್ರಭುತ್ವವನ್ನು ತಗ್ಗಿಸಿ, ತನ್ನ ಕಮಲಹಸ್ತವನ್ನು ನನ್ನ ತಲೆಯಮೇಲಿಟ್ಟು ನನ್ನ ದುಃಖವನ್ನೆಲ್ಲ ಪರಿಹರಿಸಿದನು. ಆತನು ಮೃದುವಾದ ಸುಖಕಾರಕವಾಣಿಯಿಂದ ನನ್ನನ್ನು ಕುರಿತು—ಎಲೈ, ಕಾಕಭುಶುಂಡಿಯೆ, ನಾನು ಅತಿಪ್ರಸನ್ನನಾಗಿರುವೆನೆಂಬುದನ್ನರಿತು ನಿನಗೆ ಬೇಕಾದ ವರವನ್ನು ಬೇಡಿಕೋ. ಅಣಿಮಾದಿಕ ಸಿದ್ಧಿಗಳು, ಬೇರೆ ಅವಾಂತರ ಸಿದ್ಧಿಗಳು, ಯಾವತ್ತು ಸುಖಗಳ ತವರಮನೆಯಾದ ಮೋಕ್ಷವು,

ಜ್ಞಾನ, ವಿವೇಕ, ವೈರಾಗ್ಯ, ವಿಜ್ಞಾನ, ಬೇರೆ ಸುರ-ದುರ್ಲಭವಾದ ಜಗತ್ತಿನೊಳಗಿನ ಪ್ರಸಿದ್ಧ ಗುಣಗಳು ಇವುಗಳಲ್ಲಿ ನಿನಗೆ ಯಾವದು ಪ್ರಶಸ್ತವಾಗುವದೋ ಅದನ್ನು ಬೇಡಿಕೋ. ಇಂದು ನಿನಗೆ ನಿಶ್ಚಯವಾಗಿ ಅವನ್ನು ಕೊಡಬೇಕೆಂದಿರುವೆನು, ಅನ್ನಲು, ಪ್ರಭುವಿನ ಆ ವಚನಗಳನ್ನು ಕೇಳಿ ನನ್ನ ಪ್ರೇಮವು ಒತ್ತರಿಸಿ ಉಕ್ಕಿಬಂದಿತು. ನಾನು ಮನಸ್ಸಿನಲ್ಲಿ—ಪ್ರಭುವು ಸರ್ವ ಸುಖಗಳನ್ನು ನಂಬಿಗೆಯಿಂದ ಕೊಡುತ್ತೇನೆಂದು ಹೇಳಿದನು; ಆದರೆ ಭಕ್ತಿಯನ್ನು ಕೊಡುತ್ತೇನೆಂದು ಮಾತ್ರ ಹೇಳಲಿಲ್ಲವಲ್ಲ. ಭಕ್ತಿಯಿಲ್ಲದ ಯಾವತ್ತು ಸದ್ಗುಣಗಳೂ, ಸುಖಗಳೂ ಉಪ್ಪು ಹಾಕದ ಕಾಯಿಪಲ್ಯಗಳಂತೆ ಇರುತ್ತವೆ. ಅಂದಬಳಿಕ ಭಕ್ತಿಯಿಲ್ಲದ ಸುಖಗಳನ್ನು ತಕ್ಕೊಂಡು ಮಾಡುವದೇನು ? ಎಂದು ವಿಚಾರಿಸಿ ಗರುಡಾ, ನಾನು ಪ್ರಭುವನ್ನು ಕುರಿತು—ಪ್ರಭೋ, ನೀನು ಪ್ರಸನ್ನನಾಗಿ ವರ ಪ್ರದಾನಮಾಡುವದಿದ್ದರೆ, ಹಾಗೂ ನನ್ನಮೇಲೆ ನಿನ್ನ ಮಮತೆಯು—ಅನುಗ್ರಹವೂ ಇದ್ದದ್ದಾದರೆ ನನಗೆ ಬೇಕಾಗಿರುವದನ್ನು ಬೇಡಿಕೊಳ್ಳುವೆನು. ಪ್ರಭುವಿನ ಪ್ರಸಾದದಿಂದಲೇ ಕ್ವಚಿತ್ತಾಗಿ ಯಾರಿಗಾದರೊಬ್ಬರಿಗೆ ಪ್ರಾಪ್ತವಾಗುವ ನಿನ್ನ ಪರಮೋಜ್ವಲವಾದ ಅಖಂಡ ಭಕ್ತಿಯನ್ನು ನನಗೆ ಕೃಪೆಮಾಡಿಕೊಡು, ಎಂದು ಬೇಡಿಕೊಂಡೆನು. ಆಗ ಪ್ರಭುವು—"ಏವಮಸ್ತು" ಎಂದು ನುಡಿದು ನನ್ನನ್ನು ಕುರಿತು—ವಾಯಸಾ, ನೀನು ಜಾತಿಯಿಂದಲೇ ಸುಜ್ಞನು, ಅಂದಬಳಿಕ ಇಂಥ ವರವನ್ನು ನೀನು ಯಾಕೆ ಬೇಡಿಕೊಳ್ಳಲಿಕ್ಕಿಲ್ಲ? ಜಪ, ಯೋಗ, ಪಂಚಾಗ್ನಿಸಾಧನ ಇತ್ಯಾದಿ ಕೋಟಿಶಃ ಯತ್ನಗಳಿಂದ ದೇಹದ ಆಹುತಿಯನ್ನು ಕೊಡುವ ಮುನಿಗಳಿಗೂ ಅಪ್ರಾಪ್ಯವಾದ, ಹಾಗು ಸರ್ವ ಸುಖಗಳ ಸಾರವಾದ ನನ್ನ ಭಕ್ತಿಯನ್ನೇ ಕೇಳಿಕೊಂಡೆ ಅಂದಬಳಿಕ ನಿನ್ನಂಥ ಭಾಗ್ಯವಂತನು ಈ ಜಗತ್ತಿನಲ್ಲಿ ಬೇರೆ ಯಾವನೂ ಇಲ್ಲವು.

ಎಲೈ ಭುಶುಂಡೀ, ನಿನ್ನ ಚಾತುರ್ಯವನ್ನು ಕೇಳಿ ನಾನು ಪ್ರಸನ್ನನಾದೆನು. ನೀನು ಭಕ್ತಿಯನ್ನು ಬೇಡಿಕೊಂಡದ್ದು ನನ್ನ ಮನಸ್ಸಿಗೆ ಬಂದಿತು. ಇನ್ನು ನನ್ನ ಕೃಪೆಯಿಂದ ಯಾವತ್ತು ಶುಭಲಕ್ಷಣಗಳು ನಿನ್ನ ಹೃದಯದಲ್ಲಿ ವಾಸಿಸುವವು. ಭಕ್ತಿ, ಜ್ಞಾನ, ವಿಜ್ಞಾನ, ವೈರಾಗ್ಯ, ಯೋಗ, ಸಗುಣ ಲೀಲೆ ಇವೆಲ್ಲವುಗಳ ರಹಸ್ಯವೂ, ವಿಭಾಗಗಳೂ, ಭೇದಗಳೂ ನಿನಗೆ ತಿಳಿಯುವವು. ನನ್ನ ಅನುಗ್ರಹದಿಂದ ಇವುಗಳನ್ನು ಸಾಧಿಸುವದಕ್ಕಾಗಿ ನಿನಗೆ ಆಯಾಸವಾಗಲಾರದು. ಇಂದಿನಿಂದ ಮಾಯಾಜನಿತವಾದ ಯಾವ ಭ್ರಮೆಯೂ ನಿನ್ನನ್ನು ಬಾಧಿಸಲಾರದು. ಮತ್ತು ನಿನಗೆ ಅನಾದಿಯೂ, ಅಜನೂ, ಅಗುಣನೂ, ಗುಣಾಕರನೂ, ಪರಬ್ರಹ್ಮನೂ ಆದ ನನ್ನ ಜ್ಞಾನವಾಗುವದು. ಭುಶುಂಡೀ, ನಿನಗೆ ತತ್ವಸಿದ್ಧಾಂತವನ್ನು ಹೇಳುವೆನು ಕೇಳು. ವಿವಿಧ ಪ್ರಕಾರದ ಚರಾಚರ ಜೀವಗಳು ನನ್ನ ಮಾಯೆಯಿಂದಲೇ ಉತ್ಪನ್ನವಾದ ಪಸಾರವಾಗಿರುವದು. ಇವೆಲ್ಲವುಗಳ ಜನಕನು ನಾನಾಗಿರುವದರಿಂದ, ಎಲ್ಲರೂ ನನಗೆ ಪ್ರಿಯರಾಗಿರುವರು; ಆದರೆ ಅವರಲ್ಲಿ

ನನಗೆ ಮನುಷ್ಯನು ಹೆಚ್ಚು ಸೇರುವನು. ಮಾನವರಲ್ಲಿ ದ್ವಿಜರು, ದ್ವಿಜರಲ್ಲಿಯೂ ವೇದಪಾಠಕರು, ವೇದಪಾಠಕರಲ್ಲಿಯೂ ವೈದಿಕಧರ್ಮಾನುಸಾರಿಯು. ಅವರಲ್ಲಿಯೂ ವಿರಕ್ತನು ಪ್ರಿಯನಾಗಿದ್ದು, ವಿರಕ್ತರಲ್ಲಿಯೂ ಜ್ಞಾನಿಯು. ಜ್ಞಾನಿಗಳಲ್ಲಿಯೂ ವಿಜ್ಞಾನಿಯು ( ಜ್ಞಾನಾನುಭವಿಯು ) ಹೆಚ್ಚು ಪ್ರಿಯನಾಗಿರುವನು ಇವರೆಲ್ಲರಿಗಿಂತಲೂ ಅನನ್ಯಗತಿಕನೂ, ಇತರರತ್ತ ಆಶೆಇಲ್ಲದವನೂ ಆದ ನನ್ನ ಭಕ್ತನು ನನಗೆ ಅತ್ಯಂತ ಪ್ರಿಯನಾಗಿರುವನು. ನನಗೆ ನನ್ನ ಸೇವಕನಿಗಿಂತಲೂ ಹೆಚ್ಚು ಪ್ರಿಯನಾದವನು ಯಾವನೂ ಇಲ್ಲವೆಂಬದನ್ನು ನಿನಗೆ ಪುನಃ ಪುನಃ ಹೇಳುವೆನು. ಬ್ರಹ್ಮದೇವನಿದ್ದರೂ ಭಕ್ತಿ ಇಲ್ಲದವನಾಗಿದರೆ ಅವನು ನನಗೆ ಬೇರೆ ಯಾವತ್ತು ಜೀವರಂತೆಯೇ ಸಾಮಾನ್ಯತಃ ಪ್ರಿಯನಾಗಿರುವನು. ಆದರೆ ಅದೇ ಭಕ್ತಿವಂತನು ಅತ್ಯಂತ ನೀಚಪ್ರಾಣಿಯಾಗಿದ್ದರೂ ನನಗೆ ಪ್ರಾಣಕ್ಕಿಂತಲೂ ಪ್ರಿಯನಾಗಿರುವನೆಂಬದು ನನ್ನ ಬಿರುದಾಗಿರುತ್ತದೆ ಪವಿತ್ರನೂ, ಸುಶೀಲನೂ, ಬುದ್ಧಿವಂತನೂ ಆದ ಸೇವಕನು ಯಾರಿಗೆ ಪ್ರಿಯನಾಗಲಿಕ್ಕಿಲ್ಲ ಹೇಳು ನೋಡೋಣ ! ಒಬ್ಬ ತಂದೆಯ ಹೊಟ್ಟೆಯಲ್ಲಿ ಹಲವುಜನ ಮಕ್ಕಳಿದ್ದರೆ, ಅವರ ಗುಣ-ಶೀಲಗಳು ಭಿನ್ನಭಿನ್ನವಾಗಿರುವವು ಯಾವನು ತಪಸ್ವಿಯಾಗಿರುವನು, ಯಾವನು ಪಂಡಿತನಿರುವನು, ಯಾವನು ಜ್ಞಾನಿಯಾಗಿರುವನು, ಯಾವನು ಧನಾಢ್ಯನಿರುವನು, ಯಾವನು ಶೂರನಿರುವನು, ಯಾವನು ದಾತಾರನಿರುವನು, ಯಾವನು ಸರ್ವಜ್ಞನಿರುವನು, ಯಾವನು ಧರ್ಮನಿಷ್ಠನಿರುವನು, ಇವರೆಲ್ಲರಮೇಲೆಯೂ ತಂದೆಯ ಪ್ರೀತಿಯು ಸರ್ವಸಾಧಾರಣವಾಗಿ ಇರುವದು; ಆದರೆ ಯಾವನೊಬ್ಬನು ತ್ರಿಕರಣಪೂರ್ವಕವಾಗಿ ಪಿತೃಭಕ್ತನಾಗಿದ್ದರೆ, ಹಾಗೂ ಅವನು ಕನಸಿನಲ್ಲಿಯೂ ಬೇರೆ ಧರ್ಮವನ್ನು ತಿಳಿಯದಿದ್ದರೆ ಇಂಥ ಮಗನು ಉಳಿದ ಎಲ್ಲ ಸಂಗತಿಗಳಲ್ಲಿ ಕೇವಲ ಮೂಢನಾಗಿದ್ದರೂ ಆತನು ತಂದೆಗೆ ಪ್ರಾಣಕ್ಕಿಂತಲೂ ಪ್ರಿಯನಾಗಿರುವನು. ಅದರಂತೆಯೇ ತ್ರೈಲೋಕ್ಯದಲ್ಲಿ ದೇವ, ನರ, ಅಸುರ ಮೊದಲಾದ ಯಾವತ್ತು ಚರಾಚರ ಜೀವಗಳಮೇಲೆ ಯಾವತ್ತು ಜಗತ್ತಿನ ತಂದೆಯಾದ ನನ್ನ ಪ್ರೇಮವು ಸರ್ವಸಾಧಾರಣವಾಗಿ ಇರುತ್ತಿದ್ದರೂ, ಮದ-ಮಾಯೆಗಳನ್ನು ತ್ಯಜಿಸಿ ತ್ರಿಕರಣಪೂರ್ವಕವಾಗಿ ನನ್ನ ಭಕ್ತಿಯನ್ನೇ ಮಾಡುವವನು, ಅವನು ಗಂಡಾಗಲಿ ಹೆಂಗಸಿರಲಿ, ನಪುಂಸಕನಿರಲಿ ಯಾವ ಜೀವನೇ ಇರಲಿ, ನನಗೆ ಅತ್ಯಂತ ಪ್ರಿಯನಾಗಿರುವನು. ಭುಶುಂಡೇ, ನಾನು ನಿನಗೆ ಪ್ರತಿಜ್ಞೆಮಾಡಿ ಹೇಳುತ್ತೇನೆ, ಶುದ್ಧಭಾವದಿಂದ ಭಕ್ತಿಯನ್ನು ಮಾಡುವವನು ನನಗೆ ಪ್ರಾಣಕ್ಕಿಂತಲೂ ಅತ್ಯಂತ ಪ್ರಿಯನಾಗಿರುವನು. ಈ ಮಾತನ್ನು ಲಕ್ಷ್ಯದಲ್ಲಿಟ್ಟು ನೀನು ಯಾವತ್ತು ಆಶೆಗಳನ್ನೂ, ಬೇರೆ ಎಲ್ಲದರಮೇಲಿನ ವಿಶ್ವಾಸವನ್ನೂ ಬಿಟ್ಟುಕೊಟ್ಟು ನನ್ನನ್ನೇ ಭಜಿಸುತ್ತ ಹೋಗು. ನಿತ್ಯ ನನ್ನನ್ನು ಭಜಿಸಿದೆಯಾದರೆ ಕಾಲದ ಭೀತಿಯೂ ನಿನ್ನನ್ನು ಬಾಧಿಸಲಾರದು.

ಗರುಡಾ, ಈ ಮೇರೆಗೆ ಪ್ರಭುವಿನಿಂದ ವರವನ್ನು ಪಡೆದು ಕೆಲವುದಿನ ಅಯೋಧ್ಯೆಯಲ್ಲಿದ್ದು ಪ್ರಭುವಿನ ಬಾಲಲೀಲೆಯಿಂದ ಆನಂದಪಟ್ಟು ಪ್ರಭು ಚರಣಕ್ಕೆರಗಿ ನಾನು ತಿರುಗಿ

ನನ್ನ ಆಶ್ರಮಕ್ಕೆ ಬಂದೆನು. ಈ ಮೇರೆಗೆ ಶ್ರೀಹರಿಯ ಮಾಯೆಯು ನನ್ನನ್ನು ಕುಣಿಸಿ ಬಿಟ್ಟಿತು ಖಗಪತೇ, ಇನ್ನು ನನ್ನ ಸ್ವಂತದ ಅನುಭವವನ್ನು ಹೇಳುವೆನು ಕೇಳು. ಹರಿ ಭಕ್ತಿಯ ಹೊರತು ಕ್ಲೇಶವು ನಾಶವಾಗದು; ರಾಮ ಕೃಪೆಯಿಲ್ಲದೆ ಆತನ ಪ್ರಭಾವದ ಜ್ಞಾನವಾಗುವದಿಲ್ಲ; ಜ್ಞಾನವಾದಹೊರತು ಅನುಭವವಾಗುವದಿಲ್ಲ; ಅನುಭವವಾದ ಹೊರತು ದೃಢಭಕ್ತಿಯುಂಟಾಗುವದಿಲ್ಲ. ಅನುಭವವೆಂದರೆ ನೀರಿನಹನಿಯೆಂದು ಶೀ- ನೀರು ಅಟ್ಟಿಸಿದರೆ ಭೂಮಿಯು ಒಣಗಿ ಹೋಗುವಂತೆ ಅನುಭವವಿಲ್ಲವೆಲ್ಲ ತುಚ್ಛವೆಂದು
ಶ೪. ಗರುಡಾ, ಗುರುವಿಲ್ಲದೆ ಜ್ಞಾನವು ಹೇಗಾಗಬೇಕು? ವೈರಾಗ್ಯವಿಲ್ಲದೆಯಾದರೂ ಜ್ಞಾನವು ಹೇಗಾಗಬೇಕು? ಹರಿಭಕ್ತಿಯಿಲ್ಲದೆ ಸುಖಪ್ರಾಪ್ತಿಯು ಎಂದಾದರೂ ಆಗುವದೋ? ಸಹಜ ಸಂತೋಷವಿಲ್ಲದೆ ಸುಖವು ಯಾರಿಗಾದರೂ ದೊರೆತಿರುವದೆಯೆ! ಸಂತೋಷದ ಹೊರತು ಕಾಮವು ನಷ್ಟವಾಗುವದಿಲ್ಲ; ಕಾಮವಿರುವತನಕ ಕನಸಿನಲ್ಲಿಯೂ ಸುಖವು ದೊರೆಯಲಾರದು. ರಾಮಭಜನೆಯಿಲ್ಲದೆ ಕಾಮವು ಹೇಗೆ ನಷ್ಟವಾಗಬೇಕು? ವಿಜ್ಞಾನದ ಹೊರತು ಸಮತ್ವವು ಹೇಗೆ ಉಂಟಾಗಬೇಕು? ಆಕಾಶತತ್ವವಿಲ್ಲದ ಸ್ಥಳವು ಯಾರಿಗಾದರೂ ಸಿಗಬಹುದೇ? ಶ್ರದ್ಧೆ ಇಲ್ಲದೆ ಧರ್ಮವು ಸಿಗುವದಿಲ್ಲ ತಪಸ್ಸಿಲ್ಲದೆ ತೇಜೋಭಿವೃದ್ಧಿಯಾಗುವದಿಲ್ಲ ಸಂತಸೇವೆಯಿಲ್ಲದೆ ಶೀಲ ಪ್ರಾಪ್ತಿಯಾಗುವದಿಲ್ಲ. ಆತ್ಮಸುಖವಿಲ್ಲದೆ ಮನಸ್ಸು ಹೇಗೆ ಸ್ಥಿರವಾಗಬೇಕು? ವಿಶ್ವಾಸವಿಲ್ಲದೆ ಯಾವದಾದರೂ ಸಿದ್ಧಿಸಬಹುದೇ? ಹರಿಭಕ್ತಿಯಿಲ್ಲದೆ ಸಂಸಾರ ಭಯವು ನಷ್ಟವಾಗುವದಿಲ್ಲ. ಶ್ರದ್ಧೆ ಇಲ್ಲದೆ ಭಕ್ತಿಯಿಲ್ಲ, ಭಕ್ತಿಯಿಲ್ಲದೆ ರಾಮಚಂದ್ರನು ಕರಗುವದಿಲ್ಲ. ರಾಮಕೃಪೆಯಿಲ್ಲದೆ ಜೀವನಿಗೆ ವಿಶ್ರಾಂತಿಯು ದೊರೆಯಲಾರದು. ಗರುಡಾ, ಇದನ್ನೆಲ್ಲ ವಿಚಾರಮಾಡಿ ಸರ್ವ ವಿಪರೀತ ಭಾವನೆಯನ್ನೂ, ಸಂಶಯವನ್ನೂ ತ್ಯಜಿಸಿ ದೃಢನಿಶ್ಚಯದಿಂದ ಕರುಣಾ ನಿಧಾನನೂ, ಸುಂದರನೂ, ಸುಖವನೂ ಆದ ರಘುವೀರನನ್ನು ಭಜಿಸು. ಎಲೈ ನಾಥಾ, ಖಗರಾಜಾ, ನಾನು ಪ್ರಭುಪದದ ಮಹಿಮೆಯನ್ನು ಯುಕ್ತಿವಾದಗಳಿಂದವನ್ನು ಯೋಜಿಸದೆ, ಮನಗಂಡದ್ದನ್ನೇ ಯಥಾಮತಿಯಾಗಿ ವರ್ಣಿಸಿದೆನು. ರಘುನಾಥನು ಅನಂತಜನನಗಿದ್ದು, ಆವರ ಮಹಿಮೆಗಳೂ, ನಾಮ–ರೂಪ–ಗುಣ–ಲೀಲೆಗಳೂ ಅನಂತ ವಾಗಿಯೇ ಇರುವವು. ವೇದಗಳು, ಶೇಷನು, ಮುನಿಜನರು ಹರಿಗುಣಗಾನವನ್ನು ತಮ್ಮ ತಮ್ಮ ಬುದ್ಧಿಯನ್ನು ಅನುಸರಿಸಿ ಮಾಡುತ್ತಿರುವರು; ಆದರಿಗೂ ಅವುಗಳ ಅಂತವು ಹತ್ತಿರುವದಿಲ್ಲ. ಸೊಳ್ಳೆಯಿಂದ ಆರಂಭಿಸಿ ಕೇವಲ ಗರುಡನವರೆಗೆ ಎಲ್ಲ ಪ್ರಾಣಿಗಳು ಆಕಾಶದಲ್ಲಿ ಹಾರುತ್ತಿರುವವು; ಆದರೆ ಅವುಗಳಿಗೊಂದಕ್ಕಾದರೂ ಆಕಾಶದ ಕೊನೆಯು ಗೊತ್ತಾಗಿರುವದೋ? ಅದರಂತೆ ಎಲೈ ತಾತನೇ, ರಘುಪತಿಯ ಮಹಿಮಾಸಾಗರದ ತಳಕ್ಕೆ ಈ ವರೆಗೆ ಯಾವನಾದರೂ ಹೋಗಿ ಮುಟ್ಟಿರುವನೇನು? ನೂರುಕೋಟಿ ಕೋಟಿ ಹುಳಗಳಷ್ಟು ಪ್ರಕಾಶವುಳ್ಳವನು ಸೂರ್ಯನಿರುವನೆಂದು ಹೇಳುವದರಿಂದ

ಸೂರ್ಯನಿಗೆ ಗೌಣತ್ವ ಉಂಟಾಗುವಂತೆ, ರಾಮಚಂದ್ರನ ಸೌಂದರ್ಯ, ಶತ್ರುಸಂಹಾರಕತ್ವ, ಐಶ್ವರ್ಯಭೋಗತ್ವ, ವಿಪುಲಬಲ, ಅಮಿತ ತೇಜ, ಭವದುಃಖಶಾಮಕ ಶೀತಲತೆ, ಮಸ್ಥಿರತ್ವ, ದುರ್ಧರ್ಷತ್ವ, ಅಗಾಧತ್ವ, ವಿಕ್ರಾಳಸ್ವರೂಪ, ಪವಿತ್ರತೆ, ಅಚಲತ್ವ, ಗಾಂಭೀರ್ಯ, ಮನೋರಥಪೂರಕತ್ವ, ಚಾತುರ್ಯ, ಸೃಷ್ಟಿನೈಪುಣ್ಯ, ಜಗತ್ಪಾಲಕತ್ವ, ಜಗತ್‌ಸಂಹಾರಕತ್ವ, ಸಂಪತ್ತಿಮತ್ವ, ಭವವಿಸ್ತಾರಕತ್ವ, ಬ್ರಹ್ಮಾಂಡ ಭಾರ ಧಾರಣಕ್ಷಮತ್ವಗಳು ನಿರುಪಮವಾಗಿರುವವು. ಆದರೂ ಸಂತಜನರಿಂದ ಅಲ್ಪಸ್ವಲ್ಪ ಕೇಳಿದುದನ್ನೇ ನಿನಗೆ ಹೇಳುವೆನು. ಭಗವಾನ್ ರಾಮಚಂದ್ರನು ಭಾವದ ಅಧೀನನಾಗಿರುವನರಿಂದ ಮಮತಾ, ಮದ, ಅಹಂಕಾರಗಳನ್ನು ತ್ಯಜಿಸಿ ನಿರಂತರದಲ್ಲಿಯೂ ಆ ಜಾನಕೀರಮಣನನ್ನು ಭಜಿಸತಕ್ಕದ್ದು.

ಭುಶುಂಡಿಯು ಈ ಸುಂದರ ಭಾಷಣವನ್ನು ಕೇಳಿ ಗರುಡನಿಗೆ ಆನಂದವಾಗಿ ಆತನು ರೆಕ್ಕೆಗಳನ್ನು ಅರಳಿಸಿದನು. ಅನಾದಿ ಪರಬ್ರಹ್ಮರಾಮನನ್ನು ತಾನು ಮನುಷ್ಯನೆಂದು ತಿಳಿದದ್ದಕ್ಕಾಗಿ ಆತನಿಗೆ ಪಶ್ಚಾತ್ತಾಪವಾಯಿತು. ಆತನು ಪುನಃ ಪುನಃ ಭುಶುಂಡಿಯ ಚರಣಕ್ಕೆರಗಿ ಆತನನ್ನು ರಾಮನಂತೆ ತಿಳಿದು ಆತನನ್ನು ಕುರಿತು— ಶಿವ-ಬ್ರಹ್ಮರಿಗೆ ಸರಿಯಾದಂಥವರಿದ್ದರೂ ಗುರುವಿನ ಹೊರತು ಅವರು ಭವಸಾಗರವನ್ನು ದಾಟಹೋಗಲಾರರು. ನಿನ್ನ ಅನುಗ್ರಹದಿಂದ ನನ್ನ ಮೋಹವು ನಷ್ಟವಾಗಿ ಅನುಪಮ ರಾಮತತ್ವದ ಜ್ಞಾನವು ನನಗೆ ಆಗತೊಡಗಿತು, ಎಂದು ನುಡಿದು ಭುಶುಂಡಿಯನ್ನು ಬಗೆಬಗೆಯಾಗಿ ಹೊಗಳಿ, ಆತನನ್ನು ನಮಸ್ಕರಿಸಿ ಕೈಜೋಡಿಸಿ ಮತ್ತೆ ಆತನನ್ನು ಕುರಿತು— ಪ್ರಭೋ ಸ್ವಾಮಿನ್, ದಯಾಸಿಂಧೋ, ಅಜ್ಞಾನದಿಂದ ಮಾಡುವ ನನ್ನ ಪ್ರಶ್ನಗಳಿಗೆ ನಾನು ದಾಸನೆಂದು ತಿಳಿದು ಉತ್ತರ ಕೊಡಬೇಕು. ನೀನು ಸರ್ವಜ್ಞತ್ವಾದಿ ಸರ್ವಗುಣಗಳುಳ್ಳವನಾಗಿಯೂ, ರಾಘವನ ಪ್ರಿಯದಾಸನಾಗಿಯೂ ಇದ್ದು, ನೀನು ಈ ವಾಯಸ ದೇಹವನ್ನು ಯಾವಕಾರಣದಿಂದ ಧರಿಸಿದೆ? ಈ ಸುಂದರ ರಾಮಚರಿತಮಾನಸವು ನಿನಗೆ ಎಲ್ಲಿ ಪ್ರಾಪ್ತವಾಯಿತು? ಅತಿಕರಾಲನಾದ ಕಾಲನು ಪ್ರಳಯ ಕಾಲದಲ್ಲಿ ತ್ರೈಲೋಕ್ಯಗಳನ್ನು ನಾಶಮಾಡುತ್ತಿರಲು, ನಿನ್ನ ಮೇಲೆ ಆ ಕಾಲನ ಆಟವು ನಡೆಯುವದಿಲ್ಲೆಂದು ಶಂಕರನಿಂದ ನನಗೆ ಗೊತ್ತಾಯಿತು. ಹೀಗೆ ನೀನು ಕಾಲನಿಗೂ ಅಜಿಂಕ್ಯನಾಗಲಿಕ್ಕೆ ಕಾರಣವೇನು? ನಿನ್ನ ಆಶ್ರಮಕ್ಕೆ ಬಂದಕೂಡಲೆ ನನ್ನ ಮೋಹಭ್ರಮಗಳು ನಷ್ಟವಾದವು. ಇದಕ್ಕೆ ಕಾರಣವೇನು? ಎಂದು ಪ್ರಶ್ನಮಾಡಲು, ಭುಶುಂಡಿಯು ಯೋಗ್ಯಪ್ರಶ್ನಮಾಡಿದ್ದಕ್ಕಾಗಿ ಗರುಡನನ್ನು ಶ್ಲಾಘಿಸುತ್ತ— ಎಲೈ ಖಗಪತಿಯೇ, ನಿನ್ನ ಪ್ರೇಮಲವೂ, ಯೋಗ್ಯವೂ ಆದ ಪ್ರಶ್ನಮಾಲಿಕೆಯನ್ನು ಕೇಳಿ ನನಗೆ ನನ್ನ ಅನೇಕ ಜನ್ಮಾಂತರಗಳ ಸ್ಮರಣವಾಯಿತು. ನನ್ನು ನಾನು ಹೇಳುವ ನನ್ನ ವೃತ್ತಾಂತವನ್ನು ಲಕ್ಷವಿಟ್ಟು ಕೇಳು. ಈ ಕಾಕದೇಹದಲ್ಲಿಯೇ ನನಗೆ ರಾಮಭಕ್ತಿಯು ಉತ್ಪನ್ನವಾದದ್ದರಿಂದ ನನಗೆ ಅದು ಅತ್ಯಂತ ಪ್ರಿಯವಾ

ಗಿರುವದು. ಸ್ವಂತದ ಸ್ವಾರ್ಥವು ಸಾಧಿಸುತ್ತಿರುವದರ ಮೇಲೆ ಎಲ್ಲರೂ ಪ್ರೇಮವಿಡು ತ್ತಿರುವರು. ತನ್ನ ಪರರು ಕಲ್ಯಾಣದಲ್ಲಿ ಲಕ್ಷ ವಿಟ್ಟು ಅತ್ಯಂತ ನೀಚನೊಡನೆಯಾದರೂ ಪ್ರೇಮವನ್ನು ಬೆಳೆಸಬೇಕೆಂಬದು ಶ್ರುತಿಸಮ್ಮತವೂ, ಸಜ್ಜನ ಸ್ವೀಕೃತವೂ ಆದ ನೀತಿ ಇರುವದು. ಲೇಶಿನೆಯು ಹುಳಗಳು ಅತ್ಯಂತ ಅಪವಿತ್ರವಾಗಿದ್ದರೂ ಲೇಶಿನೆಯ ಆಕೆ. ಗಾಗಿ ಎಲ್ಲರೂ ತಮ್ಮ ಪ್ರಾಣಗಳಂತೆ ಅವನ್ನು ರಕ್ಷಿಸುವರು. ತ್ರಿಕರಣಪೂರ್ವಕ ವಾಗಿಯೂ ಪತಿಯು ಚರಣಗಳನ್ನು ಪ್ರೀತಿಸುವದೇ ಪತಿವ್ರತೆಯರ ನಿಜವಾದ ಸ್ವಾರ್ಥ ವಿರುವದು. ಎಲೈ ಗರುಡನೇ, ಆ ರಾಮಚರಣಪ್ರೇಮವು ಈ ದೇಹದಲ್ಲಿಯೇ ನನ್ನ ಹೃದ ಯದಲ್ಲಿ ಉಂಟಾದದ್ದರಿಂದೇ ಇದರವೇಲೆ ನನ್ನ ಅತ್ಯಂತ ಪ್ರೀತಿಯಿರುವದು. ನಾನು ಇಚ್ಛಾಮರಣಿಯಾಗಿದ್ದರೂ ಈ ದೇಹವನ್ನು ಬಿಡುವದಿಲ್ಲ; ಯಾಕಂದರೆ ದೇಹವಿಲ್ಲದೆ ಭಕ್ತಿಯು ಸಾಧ್ಯವಲ್ಲನೆಂದು ವೇದಗಳೂ ಹೇಳುತ್ತಿರುವವು. ನಾನು ಅನಂತ ಯೋನಿಗ ಳಲ್ಲಿ ಹುಟ್ಟಿಬಂದು, ಯೋಗ, ಜಪ, ತಪ, ಯಜ್ಞ ಇತ್ಯಾದಿ ಎಲ್ಲ ಕರ್ಮಗಳನ್ನು ಆಚ ರಿಸಿ ನೋಡಿದೆನು; ಆದರೆ ಈಗಿನಂತೆ ಸುಖಿಯು ನಾನು ಎಂದೂ ಆಗಿದ್ದಿಲ್ಲವು. ನನಗೆ ಬಹುತರ ಎಲ್ಲ ಜನ್ಮಗಳ ಸ್ಮರಣವಿರುವದು; ಯಾಕಂದರೆ ಶ್ರೀಶಂಕರನ ಕೃಪೆಯಿಂದ ನನ್ನ ಬುದ್ಧಿಯಮೇಲೆ ಮೋಹದ ಶಕ್ತಿಯು ನಡೆಯಲಿಲ್ಲ. ಎಲೈ ಗರುಡಾ, ಇನ್ನು ನನ್ನ ಪ್ರಥಮ ಜನ್ಮದ ಚರಿತ್ರವನ್ನು ಹೇಳುವೆನು ಕೇಳು. ಅದನ್ನು ಕೇಳುವದರಿಂದ ಪ್ರಭು ಪದದಲ್ಲಿ ಪ್ರೇಮವು ಉತ್ಪನ್ನವಾಗಿ ಕ್ಲೇಶದ ಪರಿಹಾರವಾಗುವದು.

ಸ್ವಾಮಿನ್, ಪೂರ್ವದಲ್ಲಿ ಒಂದು ಕಲ್ಪದೊಳಗಿನ ಯುಗಾಂತರದಲ್ಲಿ ಪಾಪಮೂಲ ಕವಾದ ಕಲಿಯುಗವು ಪ್ರಸ್ತುತವಾಯಿತು. ಅದರಲ್ಲಿಯು ಯಾವತ್ತು ಸ್ತ್ರೀಪುರುಷರು ವೇದಬಾಹ್ಯರೂ, ಅಧರ್ಮನಿರತರೂ ಆಗಿದ್ದರು. ಆ ಕಲಿಯುಗದಲ್ಲಿ ನಾನು ಅಯೋ ಧ್ಯೆಯಲ್ಲಿ ಶೂದ್ರಯೋನಿಯಲ್ಲಿ ಹುಟ್ಟಿ ಬಂದೆನು. ನಾನು ತ್ರಿಕರಣಪೂರ್ವಕ ಶಿವಭಕ್ತ ನಿದ್ದು, ದುರಭಿಮಾನದಿಂದ ನಾನು ಇತರ ದೇವತೆಗಳನ್ನು ನಿಂದಿಸುತ್ತಿದ್ದೆನು. ನಾನು ಧನಮದದಿಂದ ಉನ್ಮತ್ತನಾಗಿ, ಅತ್ಯಂತ ವಾಚಾಲನೂ, ಉಗ್ರಬುದ್ಧಿಯವನೂ, ಅಂತ ರಂಗದಲ್ಲಿ ಅತ್ಯಂತ ದಾಂಭಿಕನೂ ಆಗಿದ್ದೆನು. ನಾನು ರಘುಪತಿಯು ರಾಜಧಾನಿಯಲ್ಲಿ ಇರುತ್ತಿದ್ದರೂ, ನಾನು ಆತನ ಮಹಿಮೆಯನ್ನು ಎಷ್ಟುಮಾತ್ರವೂ ತಿಳಿದಿದ್ದಿಲ್ಲ. ಈಗ ಮಾತ್ರ ನಾನು ಅಯೋಧ್ಯೆಯ ಪ್ರಭಾವವನ್ನು ಅರಿತಿರುವೆನು. ಮನುಷ್ಯನು ಎಲ್ಲಿಯೇ ಹುಟ್ಟಿರಲಿ, ಅವನು ಅಯೋಧ್ಯೆಯಲ್ಲಿ ವಾಸಿಸಿದಂದಿನಿಂದ ರಾಮಭಕ್ತಿಪರಾಯಣನೇ ಆಗು ವನೆಂದು ನಿಗಮಾಗಮ ಪುರಾಣಗಳು ಪ್ರತಿಪಾದಿಸುತ್ತಿರುವವು. ಅಯೋಧ್ಯೆಯ ಮಾಹಾ ತ್ಮ್ಯವು ಪ್ರಾಣಿಗೆ ತಿಳಿದಾಗಲೇ ಅದರ ಹೃದಯದಲ್ಲಿ ಧನುರ್ಧರ ಶ್ರೀರಾಮಚಂದ್ರನು ವಾಸಿಸತೊಡಗುವನು. ಗರುಡಾ, ಆ ಕಲಿಕಾಲವು ಅತ್ಯಂತ ಕಠಿಣವಾಗಿದ್ದು, ಅದರಲ್ಲಿ ಯಾವತ್ತು ಸ್ತ್ರೀಪುರುಷರು ಪಾಪರತರಾಗಿದ್ದರು. ಆಗ ಕಲಿಮಲದಿಂದ ಆವೇ ಧರ್ಮ

ದೇಶಾನ್ತವಾಗಿದ್ದು, ವೇದಾದಿ ಸದ್ಗ್ರಂಥಗಳು ಲುಪ್ತವಾಗಿ, ದಾಂಭಿಕರು ಸ್ವಕಪೋಲಕಲ್ಪಿತ ಅನೇಕ ಧರ್ಮಪಂಥಗಳನ್ನು ಉತ್ಪನ್ನಮಾಡಿದ್ದರು. ಯಾವತ್ತು ಜನರು ಮೋಹಗ್ರಸ್ತರಾಗಲು ಲೋಭದಿಂದ ಎಲ್ಲ ಸತ್ಕರ್ಮಗಳು ಲೋಪಹೊಂದಿದವು. ಎಲೈ ಜ್ಞಾನನಿಧೆ, ಗರುಡಾ, ಕಲಿಯ ಲಕ್ಷಣಗಳನ್ನು ಸ್ವಲ್ಪ ಸ್ವಲ್ಪ ಹೇಳುವೆನು ಕೇಳು. ಕಲಿಯುಗದಲ್ಲಿ ಚಾತುರ್ವರ್ಣಾಶ್ರಮ ಧರ್ಮವು ನಷ್ಟವಾಗಿ ಯಾವತ್ತು ಜನರು ವೇದಬಾಹ್ಯಾಚರಣೆಯಲ್ಲಿ ತತ್ಪರರಾಗುವರು. ಬ್ರಾಹ್ಮಣರು ವೇದವಿಕ್ರಯಮಾಡುವರು. ಅರಸರು ಪ್ರಜಾಭಕ್ಷಕರಾಗುವರು. ವೇದಾಜ್ಞೆಯನ್ನು ಯಾರೂ ಮನ್ನಿಸುವದಿಲ್ಲ. ಯಾವನಿಗೆ ಯಾವದು ಸೇರುವದೋ ಅದೇ ಅವನಿಗೆ ಧರ್ಮಮಾರ್ಗವು. ಯಾವನು ಬಹಳ ಮಾತಾಡುವನೋ ಅವನೇ ಪಂಡಿತನು. ತಗಲತನಮಾಡಿ ಹೊರಗೆ ಉತ್ತಮ ಸೋಗು ಹಾಕಿದವರನ್ನೇ ಎಲ್ಲರೂ ಸಂತರೆಂದು ತಿಳಿಯುವರು. ಎರಡನೆಯವರ ದ್ರವ್ಯಹರಣಮಾಡುವವನೇ ಜಾಣನು, ಡಾಂಭಿಕನೇ ದೊಡ್ಡ ಆಚಾರ್ಯನು, ಸುಳ್ಳು ಹೇಳುವವನೂ, ಠಗೆಮಾಡುವವನೂ ಗುಣಿಯೆಂದು ಕಲಿಯುಗದಲ್ಲಿ ಶ್ಲಾಘಿಸಲ್ಪಡುವರು. ವೇದಮಾರ್ಗವನ್ನು ತ್ಯಜಿಸಿ ಆಚಾರಶೂನ್ಯನಾಗಿ ನಡೆಯುವವನೇ ಕಲಿಯುಗದಲ್ಲಿಜ್ಞಾನಿಯೂ ವಿರಕ್ತನೂ ಎಂದು ತಿಳಿಯಲ್ಪಡುವನು. ಉಗುರುಗಳೂ ಜಡೆಗಳೂ ಉದ್ದವಾಗಿರುವವನೇ ಕಲಿಯುಗದಲ್ಲಿ ತಪಸ್ವಿಯೆಂದು ಮೆರೆಯುವನು. ಅಮಂಗಲ ವೇಷವನ್ನೂ, ಭೂಷಣಗಳನ್ನೂ ಧರಿಸಿ ಭಕ್ಷ್ಯಾಭಕ್ಷ್ಯಗಳ ವಿಚಾರವಿಲ್ಲದೆ ಸಿಕ್ಕದ್ದನ್ನೆಲ್ಲ ತಿನ್ನುವವರೇ ಯೋಗಿಗಳು, ಅವರೇ ಸಿದ್ಧರು; ಅವರೇ ಪೂಜನೀಯರು. ಕಲಿಯುಗದಲ್ಲಿ ಅಪಕಾರ ಮಾಡುವ ಗುಪ್ತಚಾರರ ಪ್ರತಿಷ್ಠೆಯು ಹೆಚ್ಚುವದು. ತ್ರಿಕರಣಪೂರ್ವಕ ಸುಳ್ಳು ಆಡುವವನು ವಾಚಸ್ಪತಿಯಾಗುವನು.

ಎಲೈ ಸ್ವಾಮಿಯೇ, ಯಾವತ್ತು ಪುರುಷರು ಸ್ತ್ರೀಲಂಪಟರಾಗಿ ಮರ್ಕಟಗಳಂತೆ ಕುಣಿಯುತೊಡಗುವರು. ಶೂದ್ರರು ದ್ವಿಜರಿಗೆ ಜ್ಞಾನೋಪದೇಶಮಾಡುತ್ತ ಕೊರಳಲ್ಲಿ ಜನಿವಾರವನ್ನು ತೊಡಕಿಸಿಕೊಂಡು ಕೆಟ್ಟದಾನಗಳನ್ನು ತಕ್ಕೊಳ್ಳುವರು. ಕಾಮ-ಲೋಭಪರತರರಾಗಿ, ಸಿಟ್ಟಿನವರೂ, ವೇದ-ವಿಪ್ರ-ಗುರು-ಸಂತರನ್ನು ನಿಂದಿಸುವವರೂ ಆಗುವರು. ಸ್ತ್ರೀಯರು ಪರಪುರುಷರಿಗೆ ಮರುಳಾಗಿ ತಮ್ಮ ಸುಸ್ವರೂಪಿಗಳೂ, ಸುಲಕ್ಷಣರೂ ಆದ ಪತಿಗಳನ್ನು ತ್ಯಜಿಸುವರು. ಮುತ್ತೈದೆಯರು ಅಲಂಕಾರವಿಹೀನರಾಗಿ ವಿಧವೆಯರು ಮಾತ್ರ ನಿತ್ಯದಲ್ಲಿ ಹೊಸ ಶೃಂಗಾರಮಾಡುವರು. ಗುರುಶಿಷ್ಯರು ಪರಸ್ಪರರನ್ನು ಕಿವುಡರನ್ನೂ, ಕುರುಡರನ್ನೂ ಆಗಿ ತಿಳಿಯುವರು. ಒಬ್ಬನು ಕೇಳುವದಿಲ್ಲ, ಒಬ್ಬನು ಕಣ್ಣೆತ್ತಿ ನೋಡುವದಿಲ್ಲೆಂಬಂತಾಗುತ್ತದೆ. ಗುರುಗಳು ಶಿಷ್ಯರ ದುಃಖಹರಣಮಾಡದೆ ದ್ರವ್ಯಹರಣವನ್ನು ಮಾತ್ರ ಮಾಡುವರು. ಇಂಥ ಗುರುಗಳು ಘೋರನರಕದಲ್ಲಿ ಬೀಳುವವರಾಗುವರು. ಹೊಟ್ಟೆಯು ಯಾತರಿಂದ ತುಂಬುವದೋ ಅದೇ ಧರ್ಮ

ವೆಂದು ತಾಯಿತಂದೆಗಳು ಮಕ್ಕಳಿಗೆ ಹೇಳುವರು. ಸ್ತ್ರೀ-ಪುರುಷರು ಬ್ರಹ್ಮಜ್ಞಾನದ ಹೊರತು ಬೇರೆ ಮಾತುಗಳನ್ನೇ ಆಡುವದಿಲ್ಲ; ಆದರೆ ಕವಡಿಕವಡಿಯ ಆಶೆಯಿಂದ ಗುರು-ವಿಪ್ರರನ್ನು ಘಾತಿಸುವರು. ನಾವು ನಿಮಗಿಂತ ಏನು ಕಡಿಮೆ ಇರುವೆವು? ಎಂದು ಶೂದ್ರರು ಬ್ರಾಹ್ಮಣರೊಡನೆ ವಾದವಾದವನ್ನು ಮಾಡುತ್ತ, ಬ್ರಹ್ಮವನ್ನು ತಿಳಿದವನೇ ಬ್ರಾಹ್ಮಣನೆಂದು ಕಣ್ಣುಕೆಕ್ಕರಿಸಿ ಗದ್ದರಿಸುವರು ಸಹ! ಪರಸ್ತ್ರೀಲಂಪಟರೂ, ಕಪಟಪಟುಗಳೂ, ಮಹಾದ್ರೋಹ ಮಮತಾಗ್ರಸ್ತರೂ ಆದವರೇ ಜ್ಞಾನಿಗಳೂ, ಅದ್ವೈತಸಿದ್ಧಾಂತವನ್ನು ಹೇಳುವವರೂ ಇರುವರು. ಕಲಿಯುಗದ ಆಟವನ್ನು ನಾನು ಪ್ರತ್ಯಕ್ಷ ನೋಡಿರುವೆನು. ತಾವು ಮುಣುಗುವರು, ಸನ್ಮಾರ್ಗದಿಂದ ನಡೆಯುವವರನ್ನು ಬಕ್ಕಬೋರಲು ಹಾಕುವರು. ವೇದನಿಂದಕರು ಕಲ್ಪಪರ್ಯಂತವಾಗಿ ನರಕದಲ್ಲಿ ಬೇಯುತ್ತಿರುವರು. ಗಾಣಿಗರು, ಕುಂಬಾರರು, ಶ್ವಪಚರು, ಕಿರಾತರು, ಭಿಲ್ಲರು, ಶೆಟಿಗಾರರು ಮೊದಲಾದ ಹೀನಜಾತಿಯವರು, ಹೆಂಡತಿ ಸತ್ತಬಳಿಕ, ಅಥವಾ ಮನೆಮಾರು ಹಾಳಾದಬಳಿಕ ತಲೆಬೋಳಿಸಿಕೊಂಡು ಸನ್ಯಾಸಿಗಳಾಗಿ ಬ್ರಾಹ್ಮಣರಕೈಯಿಂದ ಪಾದಪ್ರಕ್ಷಾಲನ ಮಾಡಿಸಿಕೊಂಡು, ತಮ್ಮಕೈಯಿಂದ ತಾವಾಗಿಯೇ ಉಭಯಲೋಕಕ್ಕೆ ಎರವಾಗುವರು. ಬ್ರಾಹ್ಮಣರು ಅಕ್ಷರಶತ್ರುಗಳೂ, ಕಾಮಲಂಪಟರೂ, ಆಚಾರಶೂನ್ಯರೂ, ನೀಚರೂ, ಸೂಳೆಬಾಕರೂ ಆಗುವರು. ಕಲಿಯುಗದೊಳಗಿನ ಶೂದ್ರರು ಅನೇಕ ಜಪ-ತಪ-ವ್ರತ-ದಾನಗಳನ್ನು ಮಾಡುತ್ತ, ವ್ಯಾಸಪೀಠದಲ್ಲಿ ಕುಳಿತು ಪುರಾಣವನ್ನು ಹೇಳುವರು. ಎಲ್ಲ ಜನರು ಮನಸ್ಸಿಗೆ ಬಂದಂತೆ ನಡೆಯುವರು. ಹೇಳಲಶಕ್ಯವಾಗುವಂತೆ ಅವರ ಅನೀತಿಯು ಹೆಚ್ಚುವದು. ಎಲ್ಲ ಕಡೆಯಲ್ಲಿ ವರ್ಣಸಂಕರವು ಹೆಚ್ಚಿ ಎಲ್ಲರೂ ಧರ್ಮಬಂಧನಗಳನ್ನು ಮೀರಿ ನಡೆಯುವರು. ಕಡೆಗೆ ಪಾಪಗಳನ್ನು ಮಾಡಿ ಮಾಡಿ ಭಯ-ರೋಗ-ಶೋಕ-ವಿಯೋಗ ಮೊದಲಾದ ದುಃಖಗಳನ್ನು ಭೋಗಿಸತೊಡಗುವರು. ಕಲಿಕೌತುಕವು ಅವರ್ಣನೀಯವಾಗಿರುವದು. ಯತಿಗಳು ನೆಲೆಯಿಲ್ಲವೆ ದುಡ್ಡುಗಳಿಸಿ ಮನೆತನಸ್ಥರಾಗಲು, ಇವರ ಶೀಲವು ನಷ್ಟವಾಗುವದು. ತಪಸ್ವಿಗಳು ಧನವಂತರೂ, ಕುಟುಂಬಿಗಳು ದರಿದ್ರರೂ ಆಗುವರು. ಕುಲೀನರು ತಮ್ಮ ಸಾಧ್ವಿಗಳಾದ ಸ್ತ್ರೀಯರನ್ನು ಹೊರದೂಡಿ ಲೌಕಿಕಕ್ಕೂ ಪರಲೋಕಕ್ಕೂ ಎರವಾಗಿ ಸೂಳೆಯರನ್ನು ಮನೆಯಲ್ಲಿ ಇಟ್ಟುಕೊಳ್ಳುವರು. ಹುಡುಗರು ಹೆಂಡತಿಯಮೋರೆಯನ್ನು ನೋಡದಿರುವವರೆಗೆಮಾತ್ರ ತಾಯಿತಂದೆಗಳನ್ನು ಕೇಳುವರು. ಒಮ್ಮೆ ಅವರಿಗೆ ಅತ್ತೆಯಮನೆಯವರ ಸವಿಹತ್ತಿದರೆ ತನ್ನ ಮನೆಯವರು ಶತ್ರುಗಳಂತೆ ತೋರುವರು. ಅರಸರು ಪಾಪಪರಾಯಣರಾಗಿ ಧರ್ಮಲಂಡರಾಗುವರು; ಅವರು ನಿತ್ಯದಲ್ಲಿ ಪ್ರಜೆಗಳ ಮೇಲೆ ಬಲಾತ್ಕಾರಮಾಡಿ ಆಗಾಗ್ಗೆ ಅವರ ವಿಡಂಬನೆಮಾಡುವರು. ಧನಿಕನು ಪಾಪಿಯಿದ್ದರೂ ಕುಲೀನನೆಂದು ತಿಳಿಯಲ್ಪಡುವನು. ಬ್ರಾಹ್ಮಣರಗುರುತು ಕೇವಲ ಜನಿವಾರವಾಗುವದು. ಬತ್ತಲೆತಿರಗುವವನು ತಪಸ್ವಿ

ಯೆಂಬ ಎಣಿಸಲ್ಪಡುವನು. ಗುಣಿಗಳನ್ನು ದೂಷಿಸುವ ವ್ಯಕ್ತಿಯ ಹೊರತು ಯಾವನೂ ಗುಣವಂತನೆಂದು ಹೊಗಳಿಸಿಕೊಳ್ಳಲಾರನು. ಕಲಿಯುಗದಲ್ಲಿ ಮೇಲಿಂದ ಮೇಲೆ ಬರ ಬಿದ್ದು, ಎಲ್ಲ ಜನರೂ ಅನ್ನವಿಲ್ಲದೆ ತಳಮಳಿಸಿ ಸಾಯುವರು.

ಗರುಡಾ, ಕೇಳು. ಕಲಿಯುಗದಲ್ಲಿ ಕಪಟ, ಹಟಮಾರಿತನ, ದಂಭ, ದ್ವೇಷ, ಪಾಖಂಡ, ಮಾನ, ಮೋಹ, ಮದ, ಕಾಮ ಮೊದಲಾದವು ಯಾವತ್ತು ಬ್ರಹ್ಮಾಂಡವನ್ನು ವ್ಯಾಪಿಸಿ ಉಳಿಯುವವು. ಯಾವತ್ತು ಜನರು ಜಪ, ತಪ, ಯಜ್ಞ, ವ್ರತ, ದಾನ ಇತ್ಯಾದಿ ಧರ್ಮಗಳನ್ನು ಕಾಮುಕತನದಿಂದ ಮಾಡುವರು. ದೇವತೆಗಳು ಪೃಥ್ವಿಯ ಮೇಲೆ ಮಳೆಗರೆಯರು; ಆದದ್ದರಿಂದ ಬಿತ್ತಿಯೂ ಧಾನ್ಯಗಳು ಉತ್ಪನ್ನವಾಗುವದಿಲ್ಲವು. ಸ್ತ್ರೀಯರು ಕೂದಲುಗಳನ್ನೇ ಭೂಷಣವೆಂದು ತಿಳಿಯತೊಡಗಿ, ಯಾವಾಗಲೂ ಕ್ಷುಧೆಯಿಂದ ಪೀಡಿತರಾಗಿ ಬಹಳ ದರಿದ್ರರೂ, ದುಃಖಿಗಳೂ, ಕೇವಲ "ನನ್ನದು ನನ್ನದು" ಎಂದು ಬಡಕೊಳ್ಳುವವರೂ ಆಗುವರು. ಅವರು ಸುಖಕ್ಕಾಗಿ ಪಾತ್ರತಳ ಮಳಿಸುವರು; ಆದರೆ ಆಮೂರ್ಖರು ಧರ್ಮದಿಂದ ನಡೆಯಲಾರರು. ಅವರು ಮಂದಬುದ್ಧಿಯವರಾಗಿ ಕೋಮಲತ್ವವನ್ನು ಮರೆತು ಕಠೋರತನದಿಂದ ನಡೆಯತೊಡಗುವರು. ಪುರುಷರು ರೋಗಪೀಡಿತರಾಗಲು, ಅವರಿಗೆ ಎಲ್ಲಿಯೂ ಸುಖವು ದೊರೆಯಲಾರದು; ಯಾಕಂದರೆ ಅವರು ಗರ್ವಿಷ್ಠರಾಗಿ ನಿಷ್ಕಾರಣ ದ್ವೇಷವನ್ನು ಬಳಿಸತೊಡಗುವರು. ಅವರ ಆಯುಮರ್ಯಾದೆಯು ಅಲ್ಪವೆಂದರೆ ಐವತ್ತುವರ್ಷದ್ದಾಗಿದ್ದು, "ನನಗೆ ತವಗೆ ಕಲ್ಪಪರ್ಯಂತವಾಗಿ ಮೃತ್ಯುವು ಇಲ್ಲ" ವೆಂಬ ಅಹಂಕಾರ ಪಡುವರು. ಯಾರೂ ಹೆಣ್ಣುಮಕ್ಕಳನ್ನೂ, ತಂಗೆಂದಿರನ್ನೂ ಮನ್ನಿಸಲಾರರು. ಸಂತೋಷವಿಲ್ಲ, ವಿಚಾರವಿಲ್ಲ, ಶಾಂತಿಯಿಲ್ಲ ಎಂಬಂತಾಗುವದು, ಜಾತಿವಂತರೂ, ಜಾತಿಹೀನರೂ, ಎಲ್ಲರೂ ಭಿಕ್ಷೆಬೇಡತೊಡಗುವರು. ಈರ್ಷೆ, ಕಠೋರವಚನ, ಲೋಲುಪತೆ ಇವು ಎಲ್ಲ ಕಡೆಯಲ್ಲಿಯೂ ವಿಪುಲವಾಗಿ ಕಂಡುಬರುತ್ತ, ಸಮತ್ವದ ಉಚ್ಚಾಟನ ವಾಗುವದು. ದಮ, ದಾನ, ದಯಾ ಎಂಬ ಶಬ್ದಗಳು ಕೂಡ ತಿಳಿಯದಾಗುವವು. ಅಜ್ಞಾನ, ಪರವಂಚಕತನಗಳ ಸಮೃದ್ಧಿಯಾಗುವದು. ಎಲ್ಲ ಸ್ತ್ರೀ ಪುರುಷರು ಸ್ವಪಿಂಡಪೋಷಕರಾಗಿ, ಪರ-ನಿಂದಕರ ಸುಳಿದಾಟವೇ ಜಗತ್ತಿನತುಂಬ ಆಗುವದು.

ಗರುಡಾ, ಕೇಳು. ಕಲಿಯುಗವು ಪಾಪದ ಹಾಗು ದುರ್ಗುಣದ ತವರುಮನೆಯಂತು ಇಷ್ಟೇ ಇರುವದು; ಆದರೆ ಅದರಲ್ಲಿ ಉದ್ಧಾರವಾಗಲಿಕ್ಕೆ ಪ್ರಯಾಸವಾಗದಿರುವದೊಂದು ದೊಡ್ಡ ಸದ್ಗುಣವೂ ಇರುವದು; ಕೃತಯುಗದಲ್ಲಿ ಅಷ್ಟಾಂಗಯೋಗದಿಂದ, ತ್ರೇತಾಯುಗದಲ್ಲಿ ಯಜ್ಞಾನುಷ್ಠಾನಗಳಿಂದ, ದ್ವಾಪರದಲ್ಲಿ ದೇವತಾರ್ಚನೆಯಿಂದ ಪ್ರಾಪ್ತವಾಗುವ ಗತಿಯು, ಕಲಿಯುಗದಲ್ಲಿ ಹರಿನಾಮದಿಂದಲೇ ಜನರಿಗೆ ಪ್ರಾಪ್ತವಾಗುವದು. ಕೃತಯುಗದಲ್ಲಿ ಎಲ್ಲರೂ ಯೋಗಿಗಳೂ, ವಿಜ್ಞಾನಿಗಳೂ ಇರುವರು. ಅನ

ಜನರು ಭಗವಂತನ ಧ್ಯಾನಮಾಡಿ ಭವದಿಂದ ಮುಕ್ತರಾಗುವರು. ತ್ರೇತಾಯುಗದಲ್ಲಿ ಮನುಷ್ಯರು ಅನೇಕ ಯಜ್ಞಗಳನ್ನು ಮಾಡಿ ಅವನ್ನು ಭಗವಂತನಿಗೆ ಅರ್ಪಿಸಿ ಭವದೊಳಗಿಂದ ಪಾರಾಗುವರು. ದ್ವಾಪರದಲ್ಲಿ ಶ್ರೀ ರಾಮಚಂದ್ರನನು ಪೂಜಿಸಿ ಸಂಸಾರವನ್ನು ದಾಟಿ ಹೋಗುವರು. ಆಯಾ ಯುಗಗಳಲ್ಲಿ ಆಯಾ ಸಾಧನಗಳಲ್ಲದೆ ಅನ್ಯ ಸಾಧನಗಳೇ ಇರುವದಿಲ್ಲ. ಕಲಿಯುಗದಲ್ಲಿ ಕೇವಲ ಭಗವದ್ಗುಣಾನುವಾದದಿಂದಲೇ ಮನುಷ್ಯರು ಭವಸಾಗರವನ್ನು ದಾಟಿಹೋಗುವರು. ಕಲಿಯುಗದಲ್ಲಿ ನಾಮದ ಪ್ರಭಾವವು ಪ್ರತ್ಯಕ್ಷವಾಗಿ ಇರುವದು. ಗರುಡಾ, ಕಲಿಯುಗದದೊಂದು ಪವಿತ್ರ ಪ್ರಭಾವವಿರುವದನ್ನು ಹೇಳುವೆನು ಕೇಳು—ಅದರಲ್ಲಿ ಮಾನಸಿಕ ಪಾಪವು ತಗಲದೆ, ಮಾನಸಿಕ ಪುಣ್ಯವು ಮಾತ್ರ ಬರುವದು. ಮನುಷ್ಯನು ಶ್ರದ್ಧಾವಂತನಾದರೆ ಕಲಿಯುಗದಂಥ ಬೇರೆ ಯುಗವೇ ಇಲ್ಲವು; ಯಾಕೆಂದರೆ ಮನುಷ್ಯನು ಕೇವಲ ಪವಿತ್ರವಾದ ಶ್ರೀ ರಾಮಗುಣಗಣದ ಗಾಯನದಿಂದಲೇ ಅನಾಯಾಸವಾಗಿ ಭವವನ್ನು ದಾಟಿಹೋಗುವನು. ಸತ್ಯ, ಶೌಚ, ಕ್ಷಮಾ, ದಯಾ ಎಂಬ ಈ ನಾಲ್ಕು ಧರ್ಮದ ಪಾದಗಳು ಪ್ರಸಿದ್ಧವಾಗಿರುವವು. ಕಲಿಯುಗದಲ್ಲಿ ದಯಾ ಎಂಬುವೊಂದೇ ಮುಖ್ಯವಾಗಿರುವದು. ಏನಕೇನ ವಿಧಿಯಿಂದ ದಾನಮಾಡಿದರೂ ಅದು ಕಲ್ಯಾಣಪ್ರದವೇ ಆಗುವದು. ಸತ್ಯಯುಗದಲ್ಲಿ ಶ್ರೀ ರಾಮಚಂದ್ರನ ಮಾಯೆಯು ಪ್ರೇರಿಸುವ ಎಲ್ಲರ ಅಂತಃಕರಣಗಳು ಸತ್ವದಲ್ಲಿಯೂ [illegible] ಇರುವವು. ಶಾಂತ ಸತ್ಪ್ರವೃತ್ತಿ, ಸಂತೋಷ, ವಿಜ್ಞಾನ ಇವು ಕೃತಯುಗದ ಪ್ರಭಾವವಾಗಿದ್ದು ಆ ಯುಗದಲ್ಲಿ ಚಿತ್ತವು ಪ್ರಸನ್ನವಾಗಿರುವದು. ಬಹಳ ಸತ್ವಗುಣ, ಕಿಂಚಿತ್ ರಜೋಗುಣವಿರುವದರಿಂದ ಕರ್ಮದಲ್ಲಿ ಆಸಕ್ತಿಯೂ, ಸರ್ವಪ್ರಕಾರದಿಂದ ಸುಖಸ್ಥಿತಿಯೂ ಉಂಟಾಗುವದು ತ್ರೇತಾಯುಗದ ಧರ್ಮವಾಗಿರುವದು. ಬಹಳ ರಜೋಗುಣಾಂಶ, ಸ್ವಲ್ಪ ಸತ್ವಗುಣಾಂಶ, ಕಿಂಚಿತ್ ತಮೋಗುಣಾಂಶವು ದ್ವಾಪರ ಲಕ್ಷಣವಾಗಿರುವದರಿಂದ ಅದರಲ್ಲಿ ಮನೋವೃತ್ತಿಗಳು ಸುಖದುಃಖಾತ್ಮಕವಾಗಿರುವವು. ಬಹಳ ತಮೋಗುಣ, ಸ್ವಲ್ಪ ರಜೋಗುಣವಿರುವದರಿಂದ ಕಲಿಯುಗದಲ್ಲಿ ಸರ್ವ ವಿರೋಧ ಪ್ರವೃತ್ತಿಯು ಕಂಡುಬರುವದು ಅದರ ಪ್ರಭಾವವಾಗಿರುವದು. ಈ ಕಾಲಧರ್ಮವನ್ನು ಮನಸ್ಸಿನಲ್ಲಿ ತಂದೇ ಸುಜ್ಞ ಜನರು ಅಧರ್ಮವನ್ನು ತ್ಯಜಿಸಿ ಧರ್ಮದಲ್ಲಿ ಆಸಕ್ತಿಯನ್ನಿಡುವರು. ರಘುಪತಿಯ ಚರಣದಲ್ಲಿ ಪ್ರೀತಿಯೂ, ಅನುರಾಗವೂ ಉಳ್ಳವನಿಗೆ ಈ ಕಲಿಕಾಲದ ಧರ್ಮಗಳು ಬಾಧಕವಾಗಲಾರವು. ಗರುಡಾ, ಉದಾಹರಣಾರ್ಥವಾಗಿ ಹೇಳುವೆನು ಕೇಳು. ಗಾರುಡಿಗನು ಮಾಡುವ ಕಪಟವು ಆತನ ಸೇವಕನಿಗೆ ಬಾಧಿಸುವದೆಯೆ? ಅದರಂತೆ ಶ್ರೀ ರಾಮನ ಮಾಯೆಯು ಆತನ ಸೇವಕನನ್ನು ಬಾಧಿಸಲಾರದು.- ಪ್ರಭುಮಾಯಾನಿರ್ಮಿತಗಳಾದ ಗುಣ–ದೋಷಗಳ ನಾಶವು, ಪರಮೇಶ್ವರನ ಭಕ್ತಿಯ ಹೊರತು ಆಗಲಾರದು; ಆದ್ದರಿಂದ ಯಾವತ್ತು ವಾಸನೆಗಳನ್ನು ತ್ಯಜಿಸಿ ರಾಮನನ್ನು ಭಜಿಸುತ್ತಿರಬೇಕು.

ಎಲೈ ಗರುಡಾ, ಇಂಥ ಕಲಿಕಾಲದಲ್ಲಿ ನಾನು ಅಯೋಧ್ಯೆಯಲ್ಲಿ ಬಹಳ ವರ್ಷ ಕಾಲಹರಣ ಮಾಡಿದೆನು; ಆದರೆ ಬರಬೀಳಲು, ನಾನು ಗುಳೆಕಟ್ಟಿ ದೇಶಾಂತರಕ್ಕೆ ಹೋದೆನು. ನಾನು ಉಜ್ಜಯಿನಿಗೆ ಹೋದಾಗ ದೀನನೂ, ಮಲಿನನೂ, ದರಿದ್ರನೂ ದುಃಖಿಯೂ ಆಗಿದ್ದೆನು. ಆದರೆ ಕಾಲಾಂತರದಿಂದ ನನಗೆ ಅಲ್ಲಿ ಕೆಲವು ದ್ರವ್ಯಪ್ರಾಪ್ತಿಯಾಗಿ, ಪುನಃ ನಾನು ಶಂಕರನನ್ನು ಆರಾಧಿಸತೊಡಗಿದೆನು. ಅಲ್ಲಿ ಒಬ್ಬ ವೈದಿಕ ಬ್ರಾಹ್ಮಣನಿದ್ದನು. ಆತನು ನಿತ್ಯದಲ್ಲಿ ಶಿವಾರ್ಚನೆ ಮಾಡುತ್ತಿದ್ದನಲ್ಲದೆ, ಮತ್ತೊಂದು ವ್ಯಸನವೇ ಆತನಿಗಿದ್ದಿಲ್ಲ. ಆತನು ಪರಮ ಸಾಧುವೂ, ಆತ್ಮಾನುಭವಿಯೂ ಆಗಿದ್ದನು. ಆತನು ಶಿವೋಪಾಸಕನಾಗಿಯೂ ವಿಷ್ಣುವನ್ನು ದ್ವೇಷಿಸುತ್ತಿದ್ದಿಲ್ಲ. ನಾನು ಮನಸ್ಸಿನಲ್ಲಿ ಕಪಟವಿಟ್ಟು ಆತನನ್ನು ಸೇವಿಸುತ್ತಿದ್ದೆನು; ಆ ಬ್ರಾಹ್ಮಣನು ಮಾತ್ರ ಬಹು ದಯಾಳುವಾಗಿದ್ದು. ನೀತಿಯ ಕೇವಲ ಆಗರವಾಗಿದ್ದನು. ನನ್ನ ಆ ತೋರಿಕೆಯ ನಮ್ರತನವನ್ನು ನೋಡಿ ಆತನು ನನ್ನನ್ನು ಹೊಟ್ಟೆಯ ಮಗನಂತೆ ನಡಿಸಿಕೊಳ್ಳುತ್ತಿದ್ದನು. ಆ ದ್ವಿಜಶ್ರೇಷ್ಠನು ನನಗೆ ಶಿವಮಂತ್ರವನ್ನು ಉಪದೇಶಿಸಿ, ಹಲವು ಪ್ರಕಾರದ ಉತ್ತಮ ಉಪದೇಶವನ್ನು ಮಾಡಿದನು. ನಾನು ಶಿವಾಲಯಕ್ಕೆ ಹೋಗಿ ಆ ಮಂತ್ರವನ್ನು ಜಪಿಸುತ್ತಿದ್ದೆನು. ಆದರೆ ನನ್ನ ಮನಸ್ಸಿನಲ್ಲಿ ಡಾಂಭಿಕತನವೂ, ಅಹಂಕಾರವೂ ಮಾತ್ರ ಹೆಚ್ಚುತ್ತ ನಡೆದವು. ನಾನು ಮೊದಲೇ ದುಷ್ಟನು, ಪಾಪಬುದ್ಧಿಯು, ಜಾತಿಹೀನನು ಇದ್ದದ್ದರಿಂದ ಸ್ವಾಭಾವಿಕವಾಗಿಯೇ ಮೋಹವಶನಾದೆನು. ಯಾವನಾದರೊಬ್ಬ ವೈಷ್ಣವ ಬ್ರಾಹ್ಮಣನನ್ನು ನೋಡಿದಕೂಡಲೆ ನನಗೆ ಸಂತಾಪವಾಗುತ್ತಿತ್ತು; ಯಾಕೆಂದರೆ ನಾನು ವಿಷ್ಣುದ್ವೇಷಿಯಾಗಿದ್ದೆನು. ನನ್ನ ಈ ವೃತ್ತಿಯನ್ನು ನೋಡಿ ನನ್ನ ಗುರುಗಳು ದುಃಖಿತರಾಗಿ ನನಗೆ ಮೇಲೆ ಮೇಲೆ ಉಪದೇಶಮಾಡುತ್ತಿದ್ದರು; ಆದರೆ ಅದರಿಂದ ನನಗೆ ಬಹಳ ಸಂತಾಪವಾಗುತ್ತಿತ್ತು; ಯಾಕೆಂದರೆ ದಾಂಭಿಕನಿಗೆ ನೀತಿಯು ಹೇಗೆ ಸೇರಬೇಕು? ಒಂದು ದಿನ ಗುರುಗಳು ನನ್ನನ್ನು ಕುರಿತು—ತಮ್ಮಾ, ಶ್ರೀ ರಾಮಚರಣದಲ್ಲಿ ದೃಢಪ್ರೇಮವುಂಟಾಗುವದೇ ಶ್ರೀ ಶಂಕರನ ಉಪಾಸನೆಯ ಸಾರ್ಥಕತೆಯಾಗಿರುವದು. ಎಲೈ ತಾತನೇ, ಶಿವ-ಬ್ರಹ್ಮಾದಿಗಳೂ ರಾಮನಲ್ಲಿ ಭಕ್ತಿಯನ್ನು ಮಾಡುವರು; ಅಂದಬಳಿಕ ಪಾಮರ ಮನುಷ್ಯರ ಪಾಡೇನು? ಎಲೈ ಹತಭಾಗ್ಯನೇ, ಶ್ರೀ ರಾಮನನ್ನು ದ್ವೇಷಿಸಿ ನೀನು ಸುಖವನ್ನು ಇಚ್ಛಿಸುವೆಯಾ? ಎಂದು ಬೋಧಿಸಲು, ಗುರುಗಳು ಶಿವನಿಗೆ ವಿಷ್ಣುಸೇವಕನೆಂದು ಅಂದದ್ದನ್ನು ಕೇಳಿ ನನ್ನ ಮನಸ್ಸು ವ್ಯಗ್ರವಾಯಿತು. ನಾನು ಜಾತಿಯಿಂದಲೇ ನೀಚನು. ವಿದ್ಯೆಯು ಪ್ರಾಪ್ತವಾದದ್ದರಿಂದ ಹಾವಿಗೆ ಹಾಲೆರೆದಂತಾಗಿ, ನಾನು ಉನ್ಮತ್ತನಾದೆನು. ಮಾನಿಯೂ, ಕುಟಿಲನೂ, ಕುಜಾತಿಯೂ, ಹತಭಾಗ್ಯನೂ ಆದ ನಾನು ಹಗಲು ರಾತ್ರಿ ಗುರುವನ್ನು ದ್ವೇಷಿಸತೊಡಗಿದೆನು. ಆದರೆ ಗುರುಗಳು ಅತ್ಯಂತ ದಯಾಳುಗಳಾದದ್ದರಿಂದ ಅವರಿಗೆ ಸ್ವಲ್ಪವಾದರೂ ಸಿಟ್ಟು ಬರದೆ, ಅವರು ನನಗೆ ಮೇಲಿಂದಮೇಲೆ ಸದುಪದೇಶಮಾಡುತ್ತಲಿದ್ದರು. ನೀಚರು ಯಾರ ಯೋಗದಿಂದ

ಮುಂದಕ್ಕೆ ಬರುವರೋ, ಅವರನ್ನೇ ಮೊದಲು ಈರ್ಷೆಯಿಂದ ನಾಶಮಾಡುವರು. ಹೊಗೆಯು ಬೆಂಕಿಯಿಂದ ಉತ್ಪನ್ನವಾಗುವದು; ಆದರೆ ಅದೇ ಮೇಘದ ರೂಪವನ್ನು ಹೊಂದಿದ ಕೂಡಲೆ ಆ ಅಗ್ನಿಯನ್ನೇ ಆರಿಸಿಬಿಡುವದು. ಧೂಲಿಯು ಬೀದಿಯಲ್ಲಿ ಬಿದ್ದಿರುವಾಗ ಅದಕ್ಕೆ ಬೆಲೆಯಿರುವದಿಲ್ಲ; ಅದು ಎಲ್ಲರ ಕಾಲತುಳಿತವನ್ನೂ ಸಹಿಸುತ್ತಿರುವದು; ಆದರೆ ಅದು ಗಾಳಿಯಿಂದ ಮೇಲಕ್ಕೆದ್ದಿತೆಂದರೆ, ಮೊದಲು ಅರಸನ ಕಿರೀಟದಮೇಲೆ ಕುಳಿತುಕೊಳ್ಳುವದು, ಬಳಿಕ ಕಣ್ಣಲ್ಲಿ ಬಿದ್ದು ಒತ್ತತೊಡಗುವದು! ಗರುಡಾ, ಈ ವಿಚಾರವನ್ನು ಮನಸ್ಸಿನಲ್ಲಿ ತಂದು ಜಾಣರಾದವರು ಅಧಮರ ಸಹವಾಸವನ್ನು ಮಾಡುವದಿಲ್ಲ. ಕವಿಗಳೂ ಪಂಡಿತರೂ ಹೇಳುವರೇನಂದರೆ—ದುಷ್ಟರೊಡನೆ ದ್ವೇಷಬೆಳಿಸುವದೂ ಒಳಿತಲ್ಲ, ಸ್ನೇಹಮಾಡುವದೂ ಒಳಿತಲ್ಲ, ಅವರೊಡನೆ ಔದಾಸೀನ್ಯದಿಂದ ಇರಬೇಕು. ಖಳರನ್ನು ಯಾವಾಗಲೂ ನಾಯಿಯಂತೆ ದೂರಮಾಡುತ್ತಲೇ ಇರಬೇಕು. ಒಮ್ಮೆ ನಾನು ಶಿವಾಲಯದಲ್ಲಿ ಶಿವನಾಮದ ಜಪಮಾಡುತ್ತಿರುವಾಗ ಗುರುಗಳು ಬಂದರು; ಆದರೆ ನಾನು ಎದ್ದುನಿಂತುಕೊಳ್ಳುವದಂತು ಇರಲಿ, ಉನ್ಮತ್ತತನದಿಂದ ಅವರಿಗೆ ನಮಸ್ಕಾರವನ್ನು ಮಾಡಲಿಲ್ಲ; ಆದರೆ ದಯಾಳುಗಳಾದ ಗುರುಗಳು ನನಗೆ ಏನೂ ಅನ್ನಲಿಲ್ಲ. ಅವರು ಮನಸ್ಸಿನಲ್ಲಿ ಸ್ವಲ್ಪವೂ ಸಿಟ್ಟು ಹಿಡಿಯಲಿಲ್ಲ; ಆದರೆ ಗುರುವಿನ ಅವಮಾನದಿಂದ ನನಗೆ ಘೋರಪಾತಕವು ಬಂದು ಮಹಾದೇವನಿಗೆ ಅದು ಸಹನವಾಗಲಿಲ್ಲ. ಆಗ ಗರ್ಭಗುಡಿಯಿಂದ—"ಎಲೈ ಹತಭಾಗ್ಯಾ ಮೂಢಾ, ಉನ್ಮತ್ತಾ, ನಿನ್ನ ಗುರುವು ದಯಾರ್ದ್ರ ಅಂತಃಕರಣನೂ, ಆತ್ಮಜ್ಞಾನಿಯೂ ಆಗಿರುವದರಿಂದ ಸಿಟ್ಟಾಗದಿದ್ದರೂ, ಎಲೈ ಶಠನೇ, ನಾನು ನಿನಗೆ ಶಾಪಕೊಡುವೆನು; ಯಾಕಂದರೆ ನೀತಿಗೆ ವಿರೋಧವಾಗಿ ನಡೆವದ್ದು ನನಗೆ ತಡೆಯುವದಿಲ್ಲ. ಎಲೈ ನೀಚನೇ, ನಾನು ನಿನಗೆ ಶಾಸನಮಾಡದಿದ್ದರೆ ನನ್ನ ಶ್ರುತಿಮಾರ್ಗವು ಭ್ರಷ್ಟವಾದೀತ-ಶಠಾ, ಗುರುವನ್ನು ಸ್ಪರ್ಧಿಸುವವರು ಕೋಟ್ಯವಧಿ ಯುಗಗಳವರೆಗೆ ರೌರವನರಕದಲ್ಲಿ ಬೇಯುತ್ತ, ಮತ್ತೆ ಮೂರೂ ಲೋಕಗಳಲ್ಲಿ ಅನೇಕ ಯೋನಿಗಳಲ್ಲಿ ಹುಟ್ಟುತ್ತ ಸಹಸ್ರಾವಧಿ ಜನ್ಮಗಳವರೆಗೆ ದುಃಖವನ್ನೇ ಅನುಭೋಗಿಸುವರು. ಎಲೈ ಪಾಪಿಯೇ, ನೀನು ಅಜಗರನಂತೆ ಸ್ವಸ್ಥ ಕುಳಿತುಕೊಂಡು ಬಿಟ್ಟದ್ದರಿಂದ ಅಜಗರವೇ ಆಗುವೆ. ದುಷ್ಟಾ, ನಿನ್ನ ಬುದ್ಧಿಯು ಮಲಿನವಾಗಿರುವದು. ನೀನು ಮಹಾವೃಕ್ಷದ ಪೊದರಿನಲ್ಲಿ ವಾಸಿಸಿ ಅಧೋಗತಿಯನ್ನು ಹೊಂದುವೆ.

ಈ ಅತ್ಯುಗ್ರ ಶಿವಶಾಪವನ್ನು ಕೇಳಿದಕೂಡಲೆ ನನ್ನ ಗುರುಗಳು ಹಾಹಾಃಕಾರವನ್ನು ಮಾಡತೊಡಗಿದರು. ನಾನು ಗದಗುಟ್ಟಿ ನಡಗುವದನ್ನು ನೋಡಿ ಅವರ ಮನಸ್ಸಿಗೆ ಬಹಳ ದುಃಖವಾಯಿತು. ಅವರು ಶ್ರೀಶಂಕರನ ಸಂತೋಷಕ್ಕಾಗಿ "ಉಮೀರಕ್ಷ ಎಂಬ ರುದ್ರಾಷ್ಟಕದಿಂದ ಆತನನ್ನು ಪ್ರಾರ್ಥಿಸತೊಡಗಿದರು. ಸರ್ವಜ್ಞನಾದ ಶಂಕರನು ಬ್ರಾಹ್ಮಣನ ವಿನಯವನ್ನೂ, ಭಕ್ತಿಯನ್ನೂ ನೋಡಿದಮೇಲೆ ಗರ್ಭಗುಡಿಯಲ್ಲಿ—"ಎಲೈ ದ್ವಿಜವರಾ, ವರವನ್ನು ಕೇಳಿಕೋ" ಎಂದು ಆಕಾಶವಾಣಿಯಾಗಲು, ವಿಪ್ರನು—ಪ್ರಭುವೇ

ನನ್ನಮೇಲೆ ನೀನು ಪ್ರಸನ್ನನಾಗಿದ್ದರೆ, ಹಾಗು ದೀನನಾದ ನನ್ನಮೇಲೆ ನಾಥನಾದ ನಿನ್ನ ಕೃಪೆಯು ಇದ್ದದ್ದೇ ಆದರೆ ನನಗೆ ನಿನ್ನ ಪದಕಮಲದಲ್ಲಿ ಸ್ಥಿರವಾದ ಭಕ್ತಿಯನ್ನು ಕೊಡಬೇಕು; ಮತ್ತು ಪ್ರಭುವರನೇ, ನಿನ್ನ ಮಾಯೆಯಿಂದ ಬದ್ಧನಾದ ಈ ಅಜ್ಞಾನಿ ಜೀವನು ಭ್ರಮಿಷ್ಟನಾಗಿ ನಿರಂತರ ಭ್ರಮಣಮಾಡುತ್ತಿರುವನು, ಆತನಮೇಲೆ ತಾವು ಸಿಟ್ಟಾಗಬಾರದು. ಅಲ್ಪವಕಾಶದಲ್ಲಿಯೇ ಈತನಿಗೆ ಶಾಪಾನುಗ್ರಹನಾಗುವಂತೆ ಕೃಪೆಮಾಡಬೇಕು, ಎಂದು ಬೇಡಿಕೊಳ್ಳಲು, ಪರೋಪಕಾರಪೂರ್ಣವಾದ ಆ ವಿಪ್ರನ ವಾಣಿಯನ್ನು ಕೇಳಿ ಗಭೀರಗಿರದಿಂದ-"ತಥಾಸ್ತು. ಈತನು ಘೋರಪಾತಕವನ್ನು ಮಾಡಿದ್ದರೂ, ನಾನು ಸಿಟ್ಟಾಗಿ ಈತನಿಗೆ ಶಾಪವನ್ನು ಕೊಟ್ಟಿದ್ದರೂ ನಿನ್ನ ಸೌಜನ್ಯವನ್ನು ನೋಡಿ ಈತನಮೇಲೆ ನಾನು ವಿಶೇಷ ಅನುಗ್ರಹವನ್ನು ಮಾಡುವೆನು. ಎಲೈ ಬ್ರಾಹ್ಮಣನೇ ಕ್ಷಮಾಶೀಲರೂ, ಪರೋಪಕಾರಿಗಳೂ ಆದವರು ಶ್ರೀರಾಮನಿಗೆ ಸಮಾನವಾಗಿ ನನಗೆ ಪ್ರಿಯರಾಗಿರುವರು. ನನ್ನ ಶಾಪವು ಸುಳ್ಳಾಗಲಾರದು ಈತನು ಸಾವಿರಜನ್ಮಗಳನ್ನು ಅವಶ್ಯವಾಗಿ ಎತ್ತಬೇಕಾಗುವದು. ಜನ್ಮ ಮರಣಗಳ ದುಃಖವು ಅಸಹ್ಯವಾಗಿದ್ದರೂ ಈತನಿಗೆ ಮಾತ್ರ ಅವನ್ನು ಸ್ವಲ್ಪವೂ ಭೋಗಿಸಬೇಕಾಗಲಿಕ್ಕಿಲ್ಲ. ಈತನ ಪೂರ್ವಜನ್ಮದ ಜ್ಞಾನವು ಯಾವಜನ್ಮದಲ್ಲಿಯೂ ನಷ್ಟವಾಗಲಾರದು. ಎಲೈ ಶೂದ್ರನೇ, ನನ್ನ ಸತ್ಯವಚನಗಳನ್ನು ಕೇಳು. ನಿನ್ನ ಜನ್ಮವು ಅಯೋಧ್ಯೆಯಲ್ಲಿ ಆಯಿತು. ತರುಗಿ ನೀನು ನನ್ನ ಸೇವೆಯಲ್ಲಿ ಮನಸ್ಸು ಹಾಕಿದೆ; ಅದ್ದರಿಂದ ಅಯೋಧ್ಯೆಯ ಪ್ರಭಾವದಿಂದಲೂ, ನನ್ನ ಪ್ರಸಾದದಿಂದಲೂ ನಿನ್ನ ಅಂತಃಕರಣದಲ್ಲಿ ರಾಮಭಕ್ತಿಯು ಉತ್ಪನ್ನವಾಯಿತು. ಅಪ್ಪಾ, ಇನ್ನಾದರೂ ನನ್ನ ಮಾತನ್ನು ಕೇಳಿ ಅದರಲ್ಲಿ ವಿಶ್ವಾಸವಿಡು. ಪರಮೇಶ್ವರನನ್ನು ಸಂತುಷ್ಟನಾಗ ಮಾಡಲಿಕ್ಕೆ ಬ್ರಾಹ್ಮಣಸೇವೆಯೊಂದೇ ವ್ರತವಾಗಿರುವದು. ಇಂದಿನಿಂದ ಬ್ರಾಹ್ಮಣರ ಅವಮಾನಮಾಡಬೇಡ. ಅವರನ್ನು ಸಂತರಿಗೂ, ಪರಮೇಶ್ವರನಿಗೂ ಸಮಾನವಾಗಿ ತಿಳಿಯುತ್ತ ಹೋಗು. ಇಂದ್ರನ ವಜ್ರವು, ನನ್ನ ವಿಶಾಲವಾದ ತ್ರಿಶೂಲವು, ಯಮನ ದಂಡವು, ಮಹಾವಿಷ್ಣುವಿನ ತೀವ್ರಕರ ಸುದರ್ಶನವು ಇತ್ಯಾದಿಗಳ ಹೊಡತದಿಂದ ಸಾಯದವನು ಬ್ರಹ್ಮದ್ವೇಷರೂಪ ಅಗ್ನಿಯಿಂದ ಸುಟ್ಟು ಭಸ್ಮವಾಗುವನೆಂಬ ನಿಶ್ಚಯವನ್ನು ಮನಸ್ಸಿನಲ್ಲಿ ಮಾಡು, ಅಂದರೆ ನಿನಗೆ ಜಗತ್ತಿನಲ್ಲಿ ದುರ್ಲಭವಾದದ್ದೇನೂ ಉಳಿಯುವದಿಲ್ಲ. ಶೂದ್ರನೇ, ಈಗ ನಾನು ನಿನ್ನನ್ನು ಆಶೀರ್ವದಿಸುವೆನು. ನಿನ್ನ ಗತಿಯು ಅಕುಂಠಿತವಾಗುವದು," ಎಂದು ಆಕಾಶವಾಣಿಯಾಯಿತು. ಆ ಶಿವವಾಣಿಯನ್ನು ಕೇಳಿ ಗುರುಗಳಿಗೆ ಆನಂದವಾಯಿತು. ಅವರು "ಏವಮಸ್ತು" ಎಂದು ನುಡಿದು ನನ್ನನ್ನು ಬೋಧಿಸಿ ಶಂಭುಚರಣವನ್ನು ಹೃದಯದಲ್ಲಿ ಧ್ಯಾನಿಸುತ್ತ ಮನೆಗೆ ಹೋದರು. ಕಾಲಗತಿಯಿಂದ ವಿಂಧ್ಯಪರ್ವತದಮೇಲೆ ನಾನು ಅಜಗರನಾಗಿ ಬಿದ್ದುಕೊಂಡೆನು. ಬಳಿಕ ಸ್ವಲ್ಪ ಕಾಲದಲ್ಲಿಯೇ ಆ ದೇಹವು ಅನಾಯಾಸವಾಗಿ ನಷ್ಟವಾಯಿತು. ಗರುಡಾ, ಮನುಷ್ಯನ

ಹಳೆಯವಸ್ತ್ರಗಳನ್ನು ಬಿಟ್ಟು, ಹೊಸವಸ್ತ್ರಗಳನ್ನು ಧರಿಸುವಂತೆ, ನಾನು ಒಂದು ದೇಹ ವನ್ನು ಧರಿಸಬೇಕು, ಅದನ್ನು ಅನಾಯಾಸವಾಗಿ ಬಿಡಬೇಕು ಹೀಗೆ ಆಗುತ್ತಾಗುತ್ತ ದೇವ, ನರ ಮೊದಲಾದ ತ್ರೈಲೋಕ್ಯದೊಳಗಿನ ಹಲವ ಜನ್ಮಗಳನ್ನು ಹೊಂದಿದೆನು. ಅವೆಲ್ಲ ಜನ್ಮಗಳಲ್ಲಿಯೂ ನನ್ನ ಸ್ಮೃತಿಯು ಭ್ರಷ್ಟವಾಗದೆ ನಾನು ರಾಮಭಜನೆಯನ್ನು ಮಾಡು ತ್ತಿದ್ದೆನು. ಕಡೆಗೆ ನನಗೆ ದೇವತೆಗಳಿಗೂ ದುರ್ಲಭವಾದ, ಹಾಗು ಶ್ರುತಿ-ಪುರಾಣಗಳಿಂದ ಹೊಗಳಲ್ಪಡುವ ಬ್ರಾಹ್ಮಣ-ಜನ್ಮವು ಪ್ರಾಪ್ತವಾಯಿತು. ಆಗ ಬಾಲ್ಯದಲ್ಲಿಯಾಗಲಿ-ಪ್ರೌಢವಯಸ್ಸಿನಲ್ಲಿಯಾಗಲಿ ನನಗೆ ರಾಮಭಜನೆಯ ಹೊರತು ಮತ್ತೊಂದು ಸೇರದಾ ಯಿತು. ಕಾಲಾಂತರದಲ್ಲಿ ನನ್ನ ತಾಯಿತಂದೆಗಳು ತೀರಿಕೊಳ್ಳಲು, ನಾನು ಪ್ರಭುವಿನ ಧ್ಯಾನಮಾಡುವದಕ್ಕಾಗಿ ಅರಣ್ಯಕ್ಕೆ ಹೋದೆನು. ನಾನು ಅಲ್ಲಿ ಮುನಿಗಳ ಆಶ್ರಮಕ್ಕೆ ಹೋದಾಗೆಲ್ಲ ಅವರಿಂದ ರಾಮಚರಿತ್ರವನ್ನು ಆನಂದದಿಂದ ಕೇಳಿಕೊಳ್ಳುತ್ತ ತಿರುಗತೊ ಡಗಿದೆನು. ಶಿವಪ್ರಸಾದದಿಂದ ನನ್ನ ಗತಿಯು ಅಕುಂಠಿತವಾಗಿತ್ತು. ಪುತ್ರ-ಕಳತ್ರ-ವಿತ್ತ ಎಂಬವೀ ಮೂರು ಬಲವತ್ತರ ಈಷಣಾಗಳು ನನ್ನ ಕೊರಳಿಗೆ ಇದ್ದರೂ, ಶ್ರೀ ರಾಮ ಚರಣದರ್ಶನವಾದಾಗಲೇ ನನ್ನ ಜನ್ಮಸಾರ್ಥಕವಾಗುವದೆಂಬ ಪ್ರಬಲವಾದ ಇಚ್ಛೆಯು ನನ್ನ ಮನಸ್ಸಿನಲ್ಲಿ ಬಹಳ ಬಲವತ್ತರವಾಗಿ ಇತ್ತು.

ನಾನು ಯಾವಮುನಿಗಳನ್ನು ಕೇಳಿದರೂ, ಈಶ್ವರನು ಸರ್ವಭೂತಾತ್ಮಕನಿರುವ ನೆಂಬ ನಿರ್ಗುಣಸಿದ್ಧಾಂತವನ್ನೇ ಅವರು ಹೇಳುತ್ತಿದ್ದರು; ಆದರೆ ನನ್ನ ಮನಸ್ಸಿನ ಒಲವು ಸಗುಣಬ್ರಹ್ಮದಕಡೆಗೆ ಇದ್ದುದ್ದರಿಂದ ನನಗೆ ಅವರ ಬೋಧವು ರುಚಿಸದಾ ಯಿತು ಗುರುಗಳ ವಚನದ ಸ್ಮರಣವಿದ್ದುದ್ದರಿಂದ ನನ್ನ ಮನಸ್ಸು ಯಾವಾಗಲೂ ರಾಮಚರಣದಲ್ಲಿಯೇ ರಮಿಸುತ್ತಿತ್ತು ನಾನು ರಾಘವನ ಯಶಸ್ಸಿನ ಗಾಯನವನ್ನೇ ಮಾಡುತ್ತ ಸಂಚರಿಸುತ್ತಿರುವಾಗ ಪ್ರತಿಕ್ಷಣದಲ್ಲಿ ಹೊಸಹೊಸ ಪ್ರೇಮವು ನನ್ನಲ್ಲಿ ಉತ್ಪ ನ್ನವಾಗತೊಡಗಿತು. ನಾನು ಹೀಗೆ ಸಂಚರಿಸುತ್ತಿರುವಾಗ ಮೇರುಪರ್ವತದಮೇಲೆ ವಟವೃಕ್ಷದಬುಡದಲ್ಲಿ ಕುಳಿತಿರುವ ಲೋಮಶಋಷಿಗಳು ನನ್ನ ಕಣ್ಣಿಗೆ ಬಿದ್ದರು. ಆಗ ನಾನು ಅವರ ಚರಣಗಳನ್ನು ವಂದಿಸಿ ಅತ್ಯಂತ ದೈನ್ಯದಿಂದ ಅವರನ್ನು ಕುರಿತು, ಸಗುಣ ಬ್ರಹ್ಮದ ಉಪಾಸನೆಯನ್ನು ಬೋಧಿಸಬೇಕೆಂದು ಬೇಡಿಕೊಂಡೆನು. ಆಗ ಮುನಿವರನು ಒಳ್ಳೇ ಆದರದಿಂದ ರಘುಪತಿಯ ಲೀಲೆಯನ್ನು ಕಿಂಚಿತ್ ವರ್ಣಿಸಿದನು. ಆ ಮುನೀಂ ದ್ರರು ಬ್ರಹ್ಮಜ್ಞಾನರತರೂ, ಅನುಭವಿಕರೂ ಆಗಿದ್ದರು. ನನ್ನನ್ನಾದರೂ ಅವರು ದೊಡ್ಡ ಅಧಿಕಾರಿಯೆಂದು ತಿಳಿಯತೊಡಗಿದರು. ಅವರು ಬ್ರಹ್ಮಜ್ಞಾನವನ್ನು ಕುರಿತು ನಿರೂಪಿಸುತ್ತ ನನಗೆ- ಎಲೈ ಬ್ರಾಹ್ಮಣನೇ, ಬ್ರಹ್ಮವು, ಅಜವು, ಅದ್ವೈತವು, ನಿರ್ಗು ಣವು, ಹೃದಯಾಧೀಶವು, ಅನಾಕಲನೀಯವು, ನಿರೀಹವು, ನಾಮರೂಪರಹಿತವು, ಅನು ಭವಗಮ್ಯವು, ಅಖಂಡವು, ಅನುಪಮೇಯವು, ಮನಸ್ಸೇ ಮೊದಲಾದ ಇಂದ್ರಿಯಗಳಿಗೆ

ಕಾಲುಕದ್ದು, ಪುಲರಹಿತವು, ಅವಿನಾಶಿಯು, ನಿರ್ವಿಕಾರವು, ಅನಂತವು, ಸುಖನಿಧಾನವು ಆಗಿಷ್ಟು, ಆ ಬ್ರಹ್ಮವೇ ನೀನು ಆಗಿರುತ್ತೀ. ನೀರು ನೀರಿನ ತೆರೆಗಳಂತೆ ಅದಕ್ಕೂ ನಿನಗೂ ಏನೂ ಭೇದವಿಲ್ಲವೆಂದು ವೇದವು ಹೇಳುತ್ತಿರುವದು, ಎಂದು ಪರಿಪರಿಯಾಗಿ ನನಗೆ ತಿಳಿಸಿಹೇಳಿದರು; ಆದರೆ ಅದ್ವೈತಸಿದ್ಧಾಂತವು ನನ್ನ ಮನಸ್ಸಿಗೆ ಸೇರಲೊಲ್ಲದು. ಆಗ ನಾನು ಅವರನ್ನು ವಂದಿಸಿ-ಮುನಿಶ್ರೇಷ್ಠರೇ, ನೀವು ನನಗೆ ಸಗುಣೋಪಾಸನೆಯನ್ನು ಹೇಳಬೇಕು. ನನ್ನ ಮನಸ್ಸೆಂಬ ಮೀನವು ರಾಮಭಕ್ತಿರೂಪ ಜಲದಿಂದ ಹೇಗೆ ಬೇರೆಯಾದೀತು? ದಯಮಾಡಿ ರಘುವೀರನನ್ನು ನನ್ನ ಕಣ್ಣುಗಳಿಂದ ನೋಡುವಂತೆ ನನ್ನನ್ನು ಬೋಧಿಸಿರಿ. ಅಯೋಧ್ಯಾಧೀಶನನ್ನು ನಾನು ಕಣ್ತುಂಬ ನೋಡಿದಬಳಿಕ ನಿಮ್ಮ ಅದ್ವೈತಬೋಧವನ್ನು ಕಿವಿಯಮೇಲೆ ಹಾಕಿಕೊಳ್ಳುವೆನು, ಎಂದು ಪ್ರಾರ್ಥಿಸಿದೆನು. ಮುನಿವರನು ಪುನಃ ಅಪ್ರತಿಮ ಹರಿಕಥೆಯನ್ನು ವರ್ಣಿಸಿದನು; ಆದರೆ ಸಗುಣಮತವನ್ನು ಖಂಡಿಸಿ ನಿರ್ಗುಣಮತವನ್ನೇ ಮಂಡಿಸಿದನು. ಆಗ ನಾನು ಅತ್ಯಂತ ಆಗ್ರಹದಿಂದ ಸಗುಣವನ್ನು ನಿರೂಪಿಸಿ ನಿರ್ಗುಣದ ಪ್ರತಿಪಕ್ಷವನ್ನೇ ಮಾಡಿದೆನು. ನಾನು ಉತ್ತರಕ್ಕೆ ಪ್ರತ್ಯುತ್ತರಕೊಟ್ಟದರಿಂದ್ದ ಮುನಿಯ ಮುಖಮುದ್ರೆಯಮೇಲೆ ಸಿಟ್ಟಿನ ಚಿಹ್ನಗಳು ತೋರಹತ್ತಿದವು. ಎಲೈ ಸ್ವಾಮಿ, ಗರುಡಾ, ಬಹಳ ಉದ್ದಾಮತನಮಾಡದರೆ ಜ್ಞಾನಿಗಳ ಮನಸ್ಸಿನಲ್ಲಿಯೂ ಸಿಟ್ಟುಬಂದೇಬರುವದು. ಯಾವನಾದರೂ ಅತ್ಯಂತ ಘರ್ಷಣವನ್ನು ಮಾಡಿದರೆ ಚಂದನದ ಕಟ್ಟಿಗೆಯಲ್ಲಾದರೂ ಅಗ್ನಿಯು ಪ್ರಕಟವಾಗುವದು. ಮುನಿಗಳು ಕ್ರುದ್ಧರಾಗಿ ಪುನ: ಪುನಃ ಅದ್ವೈತಸಿದ್ಧಾಂತವನ್ನೇ ಪ್ರಸ್ಥಾಪಿಸತೊಡಗಿದರು. ಆಗ ನಾನು ಸುಮ್ಮನಾಗಿ ಮನಸ್ಸಿನಲ್ಲಿ ವಿಚಾರಮಾಡತೊಡಗಿದೆನೇನಂದರೆ—ದ್ವೈತಭಾವವಿಲ್ಲದೆ ಕ್ರೋಧವು ಶಕ್ಯವಿರುವದೋ? ಅಜ್ಞಾನವಿಲ್ಲದೆ ದ್ವೈತವು ಹೇಗೆ ಉತ್ಪನ್ನವಾಗುವದು? ಮಾಯೆಗೆ ಅಂಕಿತನಾಗಿರುವ, ಹಾಗು ಅದರಿಂದ ವ್ಯಾಪ್ತನಾಗಿರುವ ಜೀವನು ಈಶ್ವರನ ಸಾಮ್ಯತೆಗೆ ಹೇಗೆ ಹೋಗಿ ಮುಟ್ಟುವನು? ಎಲ್ಲರ ಹಿತವನ್ನು ಮಾಡುವವನು ಎಂದಾದರೂ ದು:ಖಿಯಾದಾನೇ? ಹತ್ತರ ಪರಶುಗಲ್ಲಿದ್ದವನು ದರಿದ್ರನಾಗಿರಬಹುದೇ? ಪರದ್ರೋಹಿಯು ಎಂದಾದರೂ ನಿಶ್ಚಿಂತನಾಗಿರಬಹುವೇ? ಆದರಂತೆ ಕಾಮಲಂಪಟನು ನಿಷ್ಪಾಪನಾಗಿರಬಹುದೇ? ಬ್ರಹ್ಮಚ್ಛಲಮಾಡಿ ವಂಶವು ನಿಲ್ಲಬಹುದೇ? ಸ್ವರೂಪದ ಗುರುತಾದಬಳಿಕ ಕರ್ಮವು ಉಳಿಯಬಹುದೇ? ದುಷ್ಟಸಂಗತಿಯುಳ್ಳ ಯಾರಿಗಾದರೂ ಸುಬುದ್ಧಿಯು ಉತ್ಪನ್ನವಾಗಬಹುವೇ? ಪರಸ್ತ್ರೀಗಾಮಿಯು ಸದ್ಗತಿಹೊಂದಬಹುದೇ? ಬ್ರಹ್ಮವೇತ್ತಾರನು ಸಂಸಾರದಲ್ಲಿ ಮೋಸಹೋಗಬಹುದೇ? ಲೋಕನಿಂದಕನು ಎಂದಾದರೂ ಸುಖಿಯಾಗಬಹುದೇ? ನೀತಿಯನ್ನು ಲೆಕ್ಕಿಸದೆ ರಾಜಸತ್ತೆಯು ನೆಲೆಯೂರಿ ನಿಲ್ಲಬಹುದೇ? ಹಾಗು ಹರಿಸ್ಮರಣವಾದಬಳಿಕ ಪಾಪಗಳು ನಿಲ್ಲಬಹುದೇ? ಪುಣ್ಯವಿಲ್ಲದ ಸದ್ಯಶವು ದೊರೆಯಬಹುದೇ? ಪಾತಕವಿಲ್ಲದೆ ಯಾರಿಗಾದರೂ ಅಪಕೀರ್ತಿಯು ಉಂಟಾಗುವದೇ? ಸಂತರು, ಶ್ರುತಿಗಳು

ಪುರಾಣಗಳು ಪ್ರತಿಪಾದಿಸುವ ಭಕ್ತಿಯಂತಹ ಲಾಭವು ಬೇರೆ ಯಾವದಾದರೂ ಇರುವದೇ? ನರದೇಹಪ್ರಾಪ್ತವಾಗಿಯೂ ರಾಮಭಜನೆಯು ಘಟಿಸದಂತಹ ಹಾನಿಯು ಜಗತ್ತಿನಲ್ಲಿ ಯಾವದಾದರೂ ಇರುವದೇ? ಪಿಶುನತೆ, ತಾಮಸಿತನಗಳಂಥ ಪಾತಕಗಳು ಬೇರೆಯಾವವಾದರೂ ಇರುವವೇ? ಗರುಡಾ, ಪರೋಪಕಾರದಂಥ ಧರ್ಮವಾದರೂ ಯಾವದಿರುವದು ಹೇಳು.

ಈ ಮೇರೆಗೆ ನನ್ನ ಮನಸ್ಸಿನಲ್ಲಿ ನೆಲೆಯಿಲ್ಲದೆ ತರ್ಕಗಳು ಉತ್ಪನ್ನವಾಗತೊಡಗಿದವು. ಮುನಿಗಳ ಉಪದೇಶವನ್ನು ನಾನು ಕೇಳಿದೆನು; ಆದರೆ ಅದು ಮನಸ್ಸಿಗೆ ನಡಲಿಲ್ಲವು. ನಾನು ಪುನಃ ಪುನಃ ಸಗುಣ ಪಕ್ಷವನ್ನೇ ಎತ್ತಿಹಿಡಿಯುವದನ್ನು ನೋಡಿ ಮುನಿಗಳು ಸಿಟ್ಟಿನಿಂದ—ಮೂರ್ಖಾ, ನಾನು ಉತ್ತಮ ಬೋಧಮಾಡುತ್ತಿರಲು, ನೀನು ಅದನ್ನು ಮನ್ನಿಸದೆ ಉತ್ತರಕ್ಕೆ ಅನೇಕ ಪ್ರತ್ಯುತ್ತರಗಳನ್ನು ಕೊಡುವೆಯಾ? ಸತ್ಯಸಿದ್ಧಾಂತದ ಮೇಲೆ ವಿಶ್ವಾಸವಿಡದೆ, ಕಾಗೆಯಂತೆ ಎಲ್ಲರಮೇಲೆ ಕೂಗಾಡುವೆಯಾ? ಶಠಾ, ನಿನ್ನ ಮನಸ್ಸಿಗೆ ನಿನ್ನ ಪಕ್ಷವೇ ದೊಡ್ಡದಾಗಿ ತೋರುವದರಿಂದ ನೀನು ಈಗಿಂದೀಗಲೇ ಚಾಂಡಾಲಪಕ್ಷಿ (ಕಾಗೆ)ಯಾಗು, ಎಂದು ಶಪಿಸಿದನು. ನಾನು ಆ ಶಾಪವನ್ನು ಶಿರಸಾವಹಿಸಿದೆನು. ನನಗೆ ಅಪಮಾನವಾಗಲಿ, ಕೊರತೆಯಾಗಲಿ ಉಂಟಾಗಲಿಲ್ಲ. ಕೂಡಲೆ ನಾನು ಕಾಗೆಯಾಗಿ ಮುನಿಗಳ ಚರಣಗಳಲ್ಲಿ ಮಸ್ತಕವಿಟ್ಟು ರಾಮಸ್ಮರಣ ಮಾಡುತ್ತ ಆನಂದದಿಂದ ಹಾರುತ್ತ ಹೊರಟೆನು. ಎಲೈ ಪಾರ್ವತೀ, ರಾಮಚರಣದಲ್ಲಿಯೇ ರಮಮಾಣರಾದವರ, ಕಾಮ–ಕ್ರೋಧ–ಮದಗಳು ಕಳಚಿಹೋಗಿ, ಅವರು ಯಾವತ್ತು ಜಗತ್ತನ್ನು ನಿಜಪ್ರಭುಮಯವಾಗಿ ನೋಡುವಾಗ ಅವರು ದ್ವೇಷವನ್ನಾದರೂ ಯಾರಸಂಗಡಮಾಡಬೇಕು? ಎಲೈ ಗರುಡನೇ ಕೇಳು. ಇದರಲ್ಲಿ ಮುನಿಯು ದೋಷವು ಎಷ್ಟುಮಾತ್ರವೂ ಇರುವದಿಲ್ಲ. ಅಂತಃಕರಣದ ಚಾಲಕನು ರಘುವಂಶಭೂಷಣನೇ ಆಗಿರುವನು. ಅಕೃಪಾಸಿಂಧುವು ಮುನಿಯ ಬುದ್ಧಿಯನ್ನು ಕ್ಷೋಭಿಸಿ ನನ್ನ ಪ್ರೇಮವನ್ನು ಪರೀಕ್ಷಿಸಿದನು. ತ್ರಿಕರಣ ಪೂರ್ವಕವಾಗಿ ನಾನು ತನ್ನ ದಾಸನಿರುವೆನೆಂಬವರ ನಂಬಿಗೆಯಾದ ಕೂಡಲೆ ಭಗವಂತನು ಮುನಿಯ ಬುದ್ಧಿಯನ್ನು ಸ್ಥಿರಗೊಳಿಸಿದನು. ನನ್ನ ಸಹನ ಶೀಲತೆಯನ್ನೂ, ರಾಮಚರಣದಲ್ಲಿರುವ ಅತ್ಯಂತ ಶ್ರದ್ಧೆಯನ್ನೂ ನೋಡಿ ಮುನಿಗಳಿಗೆ ಬಹಳ ಆಶ್ಚರ್ಯವಾಗಿ, ಅವರು ಪುನಃ ಪುನಃ ಪಶ್ಚಾತ್ತಾಪಪಡುತ್ತ ತಿರುಗಿ ನನ್ನನ್ನು ಆದರ ಪೂರ್ವಕ ಕರೆದುಕೊಂಡು ಬಂದರು. ಅವರು ಪರಿಪರಿಯಿಂದ ನನ್ನನ್ನು ಸಮಾಧಾನಪಡಿಸಿ ಆ ಮೇಲೆ ಪ್ರಸನ್ನರಾಗಿ ನನಗೆ ರಾಮ ಮಂತ್ರವನ್ನು ಉಪದೇಶಿಸಿದರು. ರಾಮನ ಬಾಲಸ್ವರೂಪದ ಧ್ಯಾನವನ್ನು ನನಗೆ ಕೃಪಾನಿಧಿಗಳಾದ ಆ ಮುನಿಗಳೇ ಹೇಳಿದರು. ಆ ಸುಂದರವೂ, ಸುಖಕಾರಕವೂ ಆದ ಧ್ಯಾನವು ನನಗೆ ಬಹಳ ಮೆಚ್ಚಿಗೆಯಾಯಿತೆಂಬದನ್ನು ನಾನು ನಿನಗೆ ಮೊದಲೇ ಹೇಳಿಯುತ್ತೇನ

ಬಳಿಕ ಮುನಿಗಳವರು ಕೆಲವು ಕಾಲ ನನ್ನನ್ನು ಅಲ್ಲಿಯೇ ಇಟ್ಟುಕೊಂಡು ನನಗೆ ರಾಮ ಚರಿತ ಮಾನಸವನ್ನು ಹೇಳಿದರು. ಆ ಮೇಲೆ ಅವರು ಸರಳವಾಣಿಯಿಂದ ನನ್ನನ್ನು ಕುರಿತು—ಅಪ್ಪಾ, ಈ ಉಜ್ವಲ ರಾಮಚರಿತ ಮಾನಸವು ಗುಪ್ತವಾಗಿದ್ದು, ಅದು ನನಗೆ ಶ್ರೀ ಶಂಕರನ ಕೃಪೆಯಿಂದ ಪ್ರಾಪ್ತವಾಯಿತು. ನೀನು ರಾಮಚಂದ್ರನ ಸಾಕ್ಷಾತ್ ಭಕ್ತ ನಾದುದರಿಂದ ನಾನು ನಿನಗೆ ಇದನ್ನು ಸಾದ್ಯಂತವಾಗಿ ಹೇಳಿದೆನು. ರಾಮಭಕ್ತಿಯಿ ಲ್ಲದವನಿಗೆ ಇದನ್ನು ಎಂದೂ ಹೇಳಬಾರದು ಎಂದು ನುಡಿದು, ತನ್ನ ಹಸ್ತಕಮಲ ದಿಂದ ನನ್ನ ಮಸ್ತಕವನ್ನು ಸ್ಪರ್ಶಮಾಡಿ—"ಇಂದಿನಿಂದ ನನ್ನ ಪ್ರಸಾದದಿಂದ ನಿನ್ನ ಹೃದಯದಲ್ಲಿ ಅಖಂಡ ರಾಮಭಕ್ತಿಯು ನಿರಂತರ ನೆಲಸಿರುವುದು. ನೀನು ಶುಭಗುಣಾವ ಲಂಬನನೂ, ನಿರಭಿಮಾನಿಯೂ, ಇಚ್ಛಾರೂಪಿಯೂ, ಇಚ್ಛಾಮರಣಿಯೂ, ಜ್ಞಾನವೈರಾಗ್ಯನಿಧಾನನೂ, ಸತತ ರಾಮಪ್ರಿಯನೂ ಆಗುವೆ; ನೀನು ಯಾವ ಆಶ್ರ ಮದಲ್ಲಿ ಭಗವತ್‌ಸ್ಮರಣಮಾಡುತ್ತ ವಾಸಿಸುವೆಯೋ ಅದರ ಸುತ್ತುಮುತ್ತು ಒಂದು ಯೋಜನದವರೆಗೆ ಅವಿದ್ಯೆಯು ಪ್ರವೇಶವು ಕೂಡ ಆಗಲಾರದು. ಕಾಲ, ಕರ್ಮ, ಗುಣ, ದೋಷ ಸ್ವಭಾವ ಇವುಗಳಿಂದಾಗುವ ಯಾವ ಪೀಡೆಯೂ ಎಂದೂ ನಿನಗೆ ಬಾಧಿಸಲಾರದು. ಪುರಾಣೇತಿಹಾಸಾದಿಗಳಲ್ಲಿ ಪ್ರಕಟವಾಗಿ ಯಾಗಲಿ ಗುಪ್ತ ವಾಗಿಯಾಗಲಿ ಇರುವಂಥ ಮನೋಹರ ರಹಸ್ಯಗಳು ನಿನಗೆ ತಮ್ಮಿಂದ ತಾವೇ ತಿಳಿಯುತ್ತಿರುವವು. ರಾಮಪದದಲ್ಲಿ ದಿನದಿನಕ್ಕೆ ಹೊಸ ಹೊಸ ಭಕ್ತಿಯುಂಟಾ ಗುತ್ತ ಹೋಗಿ, ನಿನ್ನ ಮನೋರಥಗಳೆಲ್ಲ ಶ್ರೀ ರಾಮನ ಕೃಪೆಯಿಂದ ದುರ್ಲಭವಾಗಲಾ ರವು, ಎಂದು ಆಶೀರ್ವದಿಸಿದನು.

ಎಲೈ ಮತಿಧೀರಾ, ಗರುಡಾ, ಕೇಳು ಮುನಿಗಳ ಆ ಆಶೀರ್ವಾದವನ್ನು ಶ್ರವ ಣಮಾಡಿದ ಬಳಿಕ ಆಕಾಶದಲ್ಲಿ ಶಾಂತವೂ, ಗಂಭೀರವೂ ಆದ ದೇವವಾ ಣಿಯು—"ಎಲೈ ಜ್ಞಾನವಂತ ಮುನಿಯೇ, ನೀನು ಹೇಳಿದಂತೆಯೇ ಎಲ್ಲವೂ ಆಗು ವದು. ಈತನು ತ್ರಿಕರಣಪೂರ್ವಕವಾಗಿ ನನ್ನ ಭಕ್ತನಿರುವನು." ಎಂದು ಆದದ್ದನ್ನು ಕೇಳಿ ನಾನೂ ಹರ್ಷಿತನೂ, ಪ್ರೇಮಮಗ್ನನೂ ಆದೆನು. ನನ್ನ ಸಂಶಯಗಳೆಲ್ಲ ನಷ್ಟವಾ ದವು. ನಾನು ಮುನಿಗಳನ್ನು ಪ್ರಾರ್ಥಿಸಿ ಅವರ ಚರಣಗಳ ಮೇಲೆ ಮಸ್ತಕವಿಟ್ಟು ಅವರ ಅಪ್ಪಣೆಪಡೆದು ಈ ಆಶ್ರಮಕ್ಕೆ ಬಂದು ವಾಸಿಸಹತ್ತಿದೆನು. ನಾನು ಇಲ್ಲಿ ವಾಸಿಸಹತ್ತಿ ಇಪ್ಪತ್ತೇಳು ಕಲ್ಪಗಳಾದವು. ಇಲ್ಲಿ ನಾನು ಸತತವಾಗಿ ರಘುಪತಿಯ ಗುಣಗಳ ಗಾಯನಮಾಡುತ್ತಿರುವೆನು, ಈ ಪಕ್ಷಿಗಳು ಕೇಳುತ್ತಿರುವವು. ರಘುವೀರನು ಭಕ್ತರ ಹಿತಕ್ಕಾಗಿ ಅಯೋಧ್ಯೆಯಲ್ಲಿ ಮನುಷ್ಯಾವತಾರ ಧಾರಣಮಾಡಿದಾಗೆಲ್ಲ ನಾನು ಅಯೋಧ್ಯೆಗೆ ಹೋಗಿ ಆತನ ಬಾಲಲೀಲೆಗಳನ್ನು ನೋಡಿ, ಸುಖಿಯಾಗುತ್ತ ತಿರುಗಿ ರಾಮನ ಬಾಲರೂಪವನ್ನು ಹೃದಯದಲ್ಲಿ ಧರಿಸಿಕೊಂಡು ನನ್ನ ಆಶ್ರಮಕ್ಕೆ ಬರುತ್ತಿರುವೆನು.

ಎಲೈ ತಾತನೇ, ನಿನ್ನ ಯಾವತ್ತು ಪ್ರಶ್ನಗಳಿಗೆ ಉತ್ತರವನ್ನು ಕೊಟ್ಟೆನು; ರಾಮ ಭಕ್ತಿಯ ಮಹಿಮೆಯನ್ನು ನಿವೇದಿಸಿದೆನು. ಮುನಿಯು ನನಗೆ ಘೋರಶಾಪವನ್ನು ಕೊಟ್ಟರೂ ನಾನು ಹಟದಿಂದ ಭಕ್ತಿಯ ಪಕ್ಷವನ್ನೇ ಹಿಡಿದು, ಮುನಿಯಿಂದ ದುರ್ಲಭ ವರಗಳನ್ನು ಸಂಪಾದಿಸಿದೆನು. ಇದರಿಂದ ಭಕ್ತಿಯ ಪ್ರತಾಪವೆಷ್ಟೆಂಬದು ನಿನಗೆ ಗೊತ್ತಾಗಬಹುದು. ಇದನ್ನರಿತು ಭಕ್ತಿಯ ಪಕ್ಷವನ್ನು ಬಿಟ್ಟು ಕೇವಲ ಜ್ಞಾನದ ಸಲುವಾಗಿಯೇ ಒದ್ದಾಡುವ ಮೂರ್ಖರು, ಮನೆಗೆ ಬಂದ ಕಾಮಧೇನುವನ್ನು ಹೊರಗಟ್ಟಿ, ಹಾಲಿಗಾಗಿ ಎಕ್ಕೆಯ ಗಿಡವನ್ನು ಶೋಧಿಸುತ್ತ ತಿರುಗಿದಹಾಗಾಗುವದು. ಗರುಡಾ, ಹರಿಭಕ್ತಿಯನ್ನು ನಿರಾಕರಿಸಿ ಇತರ ಸಾಧನಗಳಿಂದ ಸುಖಪಡಬೇಕೆಂದು ಇಚ್ಛಿಸುವವರ ಕೃತಿಯು, ನೌಕೆಯಿಲ್ಲದೆ ಮಹಾಸಾಗರವನ್ನು ದಾಟಿಹೋಗಲಿಚ್ಛಿಸುವಮೂರ್ಖರಕೃತಿಗೆ ಸರಿಯಾದದ್ದು, ಅನ್ನಲು, ಗರುಡನು ಹರ್ಷಿತನಾಗಿ ಮೃದುವಾಣಿಯಿಂದ—ಎಲೈ ಪ್ರಭುವೇ, ನಿನ್ನ ಕೃಪೆಯಿಂದ ನನ್ನ ಹೃದಯದಲ್ಲಿಯ ಸಂಶಯ, ಶೋಕ, ಮೋಹ, ಭ್ರಮಗಳಾವವೂ ಉಳಿಯಲಿಲ್ಲ. ನಿನ್ನ ಕೃಪೆಯಿಂದಲೇ ನನಗೆ ರಾಮಕಥೆಯ ಶ್ರವಣವಾಗಿ ನಾನು ಶಾಂತನಾದೆನು. ಪ್ರಭೋ, ನಾನೊಂದು ಮಾತು ಕೇಳುವೆನು.ಕೃಪಾನಿಧಿಯು ನನಗೆ ತಿಳಿಸಿಹೇಳಬೇಕು. ಸಂತರು, ವೇದಗಳು, ಪುರಾಣಗಳು, ಮುನಿಗಳು "ಜ್ಞಾನದಂತೆ ದುರ್ಲಭವಾದದ್ದೇನೂ ಇರುವದಿಲ್ಲವೆಂ„ದುಹೇಳುತ್ತಿರುವರು. ಎಲೈ ಸ್ವಾಮಿಯೇ, ಅದೇ ಜ್ಞಾನವನ್ನೇ ಮುನಿಗಳು ನಿನಗೆ ಉಪದೇಶಿಸಲು, ನೀನು ಭಕ್ತಿಯಂತೆ ಅದನ್ನು ಯಾಕೆ ಆದರಿಸಲಿಲ್ಲ? ಜ್ಞಾನದಲ್ಲಿಯೂ, ಭಕ್ತಿಯಲ್ಲಿಯೂ ಅಂತರವೆಷ್ಟಿರುವದು? ಕೃಪಾನಿಧಿಯೇ, ಇದನ್ನೆಲ್ಲ ನನಗೆ ಕಥನಮಾಡಬೇಕು.

ಗರುಡನ ಮಾತುಗಳನ್ನು ಕೇಳಿ ಪರಮಜ್ಞಾನಿಯಾದ ಭುಶುಂಡಿಗೆ ಆನಂದವಾಯಿತು. ಆತನು ಗರುಡನ ಪ್ರಶ್ನವನ್ನು ಆದರಿಸಿ ಆತನನ್ನು ಕುರಿತು—ಗರುಡಾ, ಭಕ್ತಿಯಲ್ಲಿಯೂ, ಜ್ಞಾನದಲ್ಲಿಯೂ ಏನೂ ಭೇದವಿರುವದಿಲ್ಲ. ಎರಡೂ ಸಂಸಾರಜನ್ಯವಾದ ಪೀಡೆಯ ಹರಣಮಾಡುವವು. ಎಲೈ ಪಕ್ಷಿಶ್ರೇಷ್ಠಾ, ತಥಾಪಿ, ಮುನೀಶ್ವರರು ಅವುಗಳಲ್ಲಿ ಕಿಂಚಿತ್ ಭಿನ್ನತ್ವವನ್ನು ಪ್ರತಿಪಾದಿಸುವರು, ಅದನ್ನು ನೀನು ಸಾವಧಾನದಿಂದ ಕೇಳು- ಜ್ಞಾನ, ವೈರಾಗ್ಯ, ಯೋಗ, ವಿಜ್ಞಾನ ಇವೆಲ್ಲ ಗಂಡಸರಿರುವರೆಂದು ತಿಳಿ. ಎಲ್ಲ ಪ್ರಕಾರದಿಂದಲೂ ಪುರುಷರ ಪ್ರತಾಪವು ದೊಡ್ಡದಾಗಿದ್ದು, ಅಬಲೆಯರು ನಿರ್ಬಲರಾಗಿಯೇ ಇರುವರು; ಸ್ವಾಭಾವಿಕವಾಗಿಯೇ ಸ್ತ್ರೀವರ್ಗವು ಜಡವಾಗಿರುವದು. ವಿರಕ್ತರೂ, ಸ್ಥಿತಪ್ರಜ್ಞರೂ, ಜ್ಞಾನಿಗಳೂ, ಯೋಗಿಗಳೂ ಆದ ಪುರುಷರೇ ಸ್ತ್ರೀಯನ್ನು ತ್ಯಜಿಸಲು ಸಮರ್ಥರಾಗುವರಲ್ಲದೆ, ಕಾಮುಕರು, ವಿಷಯಲಂಪಟರು, ರಾಮಪದವಿಮುಖರು ಆ ಕೆಲಸದಲ್ಲಿ ಅಸಮರ್ಥರಾಗಿರುವರು. ಮೇಲೆ ಹೇಳಿದ ಪ್ರಕಾರದ ಜ್ಞಾನನಿಧಾನಮುನಿಗಳು ಕೂಡ ಹರಿಣಾಕ್ಷಿಯ ಚಂದ್ರವದನವನ್ನು ನೋಡಿ ವಿಹ್ವಲರಾಗುವರು. ಯಾಕಂ

ದರೆ ಜಗತ್ತಿನಲ್ಲಿ ಪುರುಷರು ಸ್ತ್ರೀಯರ ಮರುಳಾಗುವದು ಸ್ವಾಭಾವಿಕವಾಗಿರುವದು. ಜಗತ್ತಿನಲ್ಲಿ ಸ್ತ್ರೀಯು ಪ್ರತ್ಯಕ್ಷ ಮಾಯೆಯೇ ಆಗಿರುವಳು. ಈ ಸಂಬಂಧದಲ್ಲಿ ಪಕ್ಷಪಾತ ಮಾಡದೆ ದಸ್ಸನ್ನೀನ ಮಾಡದ ವೇದಗಳು, ಪುರಾಣಗಳು, ಸಂತರು ಇವರ ಸಿದ್ಧಾಂತವನ್ನೇ ಹೇಳುವೆನು. ಗಂಡಸು ಹೆಂಗಸಿನ ರೂಪಕ್ಕೆ ಮರುಳಾಗುವಂತೆ ಹೆಂಗಸು ಗಂಡಸಿನ ರೂಪಕ್ಕೆ ಮರುಳಾಗುತ್ತಿರುವದಿಲ್ಲೆಂಬುದು ವಿಲಕ್ಷಣವಾಗಿರುವದು. ಮಾಯಾ, ಭಕ್ತಿ ಎಂಬವು ಸ್ತ್ರೀವರ್ಗದೊಳಗಿನವೆಂಬುದು ಎಲ್ಲರಿಗೂ ಗೊತ್ತಿರುವದು. ಅವುಗಳಲ್ಲಿ ರಘುಪತಿಗೆ ಭಕ್ತಿಯು ಪ್ರಿಯವಾದದ್ದು, ಕಾರಣ ಮಾಯೆಯು ಹೇಳಿ ಕೇಳಿ ನರ್ತಕಿಯು. ರಘುಪತಿಯು ಭಕ್ತಿಗೆ ಅನುಕೂಲನಾಗಿರುವದರಿಂದ ಆ ಮಾಯೆಯು ಭಕ್ತಿಗೆ ಬಹಳವಾಗಿ ಅಂಜಿಕೊಂಡು ನಡೆಯುವಳು. ನಿರುಪಮವೂ, ನಿರುಪಾಧಿಕವೂ ಆದ ರಾಮಭಕ್ತಿಯು ಯಾರ ಹೃದಯದಲ್ಲಿ ನಿರ್ಬಾಧವಾಗಿಯೂ, ನಿರಂತರವಾಗಿಯೂ ವಾಸಿಸುವದೋ, ಅವನನ್ನು ನೋಡಿ ಮಾಯೆಗೆ ಸಂಕೋಚವು ಉತ್ಪನ್ನವಾಗಿ ಅವನಮೇಲೆ ಅದು ಸ್ವಲ್ಪತಃ ಅಧಿಕಾರವನ್ನೇ ನಡಿಸುವದಿಲ್ಲ. ಇದನ್ನರಿತು ವಿಜ್ಞಾನಿಗಳಾದ ಮುನಿಗಳು ಸರ್ವಗುಣಾಗರಳಾದ ಭಕ್ತಿಯನ್ನೇ ಇಚ್ಛಿಸುವರು. ಶ್ರೀ ರಘುಪತಿಯ ರಹಸ್ಯವು ಬೇಗನೆ ಯಾರ ಲಕ್ಷ್ಯದಲ್ಲಿಯೂ ಬರುವದಿಲ್ಲ; ರಘುಪತಿಯ ಕೃಪೆಯಿಂದ ಅದು ಯಾರಿಗೆ ಗೊತ್ತಾದರೆ ಅವರಿಗೆ ಸ್ವಪ್ನದಲ್ಲಿಯೂ ಮೋಹವು ಉತ್ಪನ್ನವಾಗುವದಿಲ್ಲ. ಎಲೈ ಗರುಡನೇ, ಭಕ್ತಿಜ್ಞಾನಗಳಲ್ಲಿರುವ ಇನ್ನೂ ಒಂದು ಬಗೆಯ ಭೇದವನ್ನು ಕೇಳು. ಅದನ್ನು ಕೇಳುವದರಿಂದ ರಾಮಪದದಲ್ಲಿ ನಿರಂತರವಾದ ಅವಿಚ್ಛಿನ್ನ ಪ್ರೇಮವು ಉಂಟಾಗುವದು.

ಎಲೈ ತಾತನೇ, ಈ ಪ್ರಕರಣವು ಅವರ್ಣನೀಯವಾಗಿರುವದು. ಅದನ್ನು ತಿಳಿಯಬಹುದು; ಆದರೆ ಹೇಳಲಿಕ್ಕೆ ಬರುವದಿಲ್ಲ. ಜೀವನು ಈಶ್ವರನ ಅಂಶನಾಗಿರುವದರಿಂದ ಅವನೂ ಅವಿನಾಶಿಯೂ, ಚೇತನನೂ, ನಿರ್ಮಲನೂ, ಸಹಜಸುಖರಾಶಿಯೂ ಆಗಿರುವನು. ಆದರೆ ಗರುಡನೇ, ಆತನು ಮಾಯಾವಶನಾದದ್ದರಿಂದ ಗಿಳಿ-ಮಂಗಗಳಂತೆ ಬದ್ಧನಾಗಿರುವನು. ಜಡಚೇತನಗಳ ಗಂಟುಬಿದ್ದ ಬಳಿಕ ಅದು ಸುಳ್ಳು ಇದ್ದರೂ, ಅದು ಉಚ್ಚಲಿಕ್ಕೆ ಬಾರದ ಕಗ್ಗಂಟಾಗಿರುವದು! ಹೀಗೆ ಗಂಟುಬಿದ್ದಾಗಿನಿಂದಲೇ ಜೀವನು ಸಂಸಾರಿಯಾದನು. ಆ ಗಂಟು ಉಚ್ಚುವದಿಲ್ಲ, ಜೀವನು ಸುಖಿಯಾಗುವದಿಲ್ಲ! ಶ್ರುತಿ—ಪುರಾಣಾದಿಗಳು ಅನೇಕ ಉಪಾಯಗಳನ್ನು ಹೇಳಿರುವವು. ಆದರೆ ಆ ಉಪಾಯಗಳಿಂದ ಗಂಟು ಉಚ್ಚುವದರಬದಲು, ಮತ್ತಿಷ್ಟು ಕಗ್ಗಂಟು ಬೀಳುತ್ತಹೋಗುವದು. ಜೀವರ ಹೃದಯದಲ್ಲಿ ಮೋಹರೂಪವಾದ ಕತ್ತಲೆಯು ವಿಶೇಷವಾಗಿ ಇರುವದರಿಂದ, ಅದರಲ್ಲಿ ಆ ಗಂಟು ಅವರಿಗೆ ಕಾಣುವದೇ ಇಲ್ಲ.... ಅಂದಬಳಿಕ ಅದು ಬಿಚ್ಚುವದೆತ್ತ? ಪರಮೇಶ್ವರನು ಯೋಗಾಯೋಗವನ್ನು ಒದಗಿಸಿಕೊಟ್ಟಾಗಲೇ

ಆ ಗಂಟು ಬಿಚ್ಚಿದರೆ ಮಾತ್ರ ಈ ಜೀವನು ಕೃತಕೃತ್ಯನಾಗುವನು. ಆದರೆ ಗರುಡಾ, ಗಂಟುಬಿಚ್ಚುತ್ತಿರುವದನ್ನು ನೋಡಿದ ಕೂಡಲೆ ಅವಿದ್ಯಾರೂಪವಾದ ಮಾಯೆಯು, ಅನೇಕ ವಿಘ್ನಗಳನ್ನುಂಟುಮಾಡುತ್ತಿರುವದು. ಅದು ಋದ್ಧಿ–ಸಿದ್ಧಿಗಳನ್ನು ಹಲವುಸಾರೆ ಕಳಿಸಿಕೊಡುವದು. ಅವು ಬಂದು ಬುದ್ಧಿಗೆ ಆಶೆತೋರಿಸುವವು. ಸಲಿಗೆ, ಬಲ, ಛಲ ಇತ್ಯಾದಿ ಉಪಾಯಗಳಿಂದ ಆ ಋದ್ಧಿ ಸಿದ್ಧಿಗಳು ಬುದ್ಧಿಯ ಸಮೀಪಕ್ಕೆ ಹೋಗಿ ತಮ್ಮ ಸೆರಗಿನ ಗಾಳಿಯಿಂದ ಆ ದೀಪವನ್ನು ನಂದಿಸಲಿಕ್ಕೆ ಮುಂದುವರಿಯುವವು. ಆ ಬುದ್ಧಿಯು ಒಳ್ಳೇ ವಿಚಕ್ಷಣವಾದದ್ದಿದ್ದರೆ, ಆ ಋದ್ಧಿ ಸಿದ್ಧಿಗಳ ವಿಘ್ನ–ಸಂತೋಷತ್ವವನ್ನು ಮನಸ್ಸಿನಲ್ಲಿ ತಿಳಿದುಕೊಂಡು ಅವುಗಳ ಕಡೆಗೆ ನೋಡುವದೇ ಇಲ್ಲ. ಅವು ಮಾಡುವ ವಿಘ್ನಗಳ ಆಟವು ಬುದ್ಧಿಯ ಮುಂದೆ ನಡೆಯದಾದರೆ, ತಿರುಗಿ ದೇವತೆಗಳು ವಿಘ್ನಮಾಡುವರು. ಇಂದ್ರಿಯದ್ವಾರಗಳು ಅನೇಕ ಛಿದ್ರಗಳಾಗಿರುವವು. ಅವುಗಳಲ್ಲೆಲ್ಲ ದೇವತೆಗಳು ಬಾಗಿಲುಕಟ್ಟಿ ಕಾಯುತಿರುವರು. ವಿಷಯರೂಪ ವಾಯುವು ಬೀಸಹತ್ತಿದ್ದನ್ನು ನೋಡಿದ ಕೂಡಲೆ ಅವರು ಇಂದ್ರಿಯದ್ವಾರದ ಕದಗಳನ್ನು ಬುದ್ಧಿಪೂರ್ವಕವಾಗಿ ತೆರೆದಿಡುವರು. ಆ ಗಾಳಿಯು ಹೃದಯರೂಪವಾದ ಮನೆಯಲ್ಲಿ ಹೊಕ್ಕ ಕೂಡಲೆ ಅವಿಜ್ಞಾನರೂಪವಾದ ದೀಪವನ್ನು ನಂದಿಸಿ ಬಿಡುವದು. ಗಂಟೂ ಬಿಚ್ಚುವದಿಲ್ಲ ಬೆಳಕೂ ಹೋಗಿ ಬಿಟ್ಟಿತು, ವಿಷಯರೂಪ ಗಾಳಿಯು ಬೀಸುತ್ತಲೇ ಇರುವದು, ಹೀಗಾಗಿ ಬುದ್ಧಿಯು ವಿಕಲವಾಗುವದು. ಇಂದ್ರಿಯಗಳ ದೇವತೆಗಳಿಗೆ ಜ್ಞಾನವು ಸೇರುವದಿಲ್ಲ. ಅವು ಯಾವಾಗಲೂ ವಿಷಯಭೋಗದಲ್ಲಿಯೇ ಲುಬ್ಧವಾಗಿರುವವು. ವಿಷಯವಾಯುವಿನಿಂದ ಬುದ್ಧಿಯು ಗಲಿತವಾದಬಳಿಕ ತಿರುಗಿ ಮೊದಲಿನಂತೆಯೇ ದೀಪವನ್ನು ಯಾರು ಹಚ್ಚಬೇಕು? ಬಳಿಕ ಜೀವನು ಮತ್ತೆ ಸಂಸಾರದಲ್ಲಿ ಅನೇಕವಿಧ ದುಃಖಗಳನ್ನು ಭೋಗಿಸತೊಡಗುವನು. ಎಲೈ ಪಕ್ಷಿಶ್ರೇಷ್ಠಾ, ಗರುಡಾ, ಪರಮೇಶ್ವರನ ಮಾಯೆಯು ದಾಟಲಿಕ್ಕೆ ಬಾರದ್ದಾಗಿರುವದು. ಅದನ್ನು ದಾಟಿಹೋಗುವದು ಜೀವನಿಗೆ ಕಠಿಣವಾಗಿರುವದು. ಜ್ಞಾನವು ಹೇಳಲಿಕ್ಕೂ ಕಠಿಣವು, ತಿಳಿಯಲಿಕ್ಕೂ ಕಠಿಣವು, ಆಚರಿಸಲಿಕ್ಕೂ ಕಠಿಣವೇ ಆಗಿರುವದು. ಇದರ ಮೇಲೆಯೂ ಘುಣಾಕ್ಷರನ್ಯಾಯದಿಂದ ಅದು ಸಾಧ್ಯವಾದರೆ, ಮೇಲೆ ಹೇಳಿದಂತೆ ತಿರುಗಿ ಅನೇಕ ವಿಘ್ನಗಳು ಉತ್ಪನ್ನವಾಗುವವು. ಜ್ಞಾನಮಾರ್ಗವು ಕೇವಲ ಖಡ್ಗದಧಾರೆಯಂತಿರುವದು. ಅದರ ಮೇಲಿಂದ ಬೀಳಲಿಕ್ಕೆ ತಡವೇ ಆಗುದಿಲ್ಲ. ಈ ಮಾರ್ಗವು ಸುರಕ್ಷಿತವಾಗಿ ಸಾಧಿಸಿದರೆ ಮಾತ್ರ ಕೈವಲ್ಯರೂಪಿಯಾದ ಪರಮಪದವು ಇಟ್ಟೇ ಇರುವದು.

ಕೈವಲ್ಯರೂಪ ಶ್ರೇಷ್ಠಪದವು ಮಹದ್ದುರ್ಲಭವೆಂದು ಸಂತರೂ, ಪುರಾಣಗಳೂ, ವೇದಗಳೂ, ಆಗಮಗಳೂ ಹೇಳುತ್ತಿರುವವು. ಎಲೈ ಸ್ವಾಮಿಯೇ, ಗರುಡಾ, ರಾಮಭಜನೆಯಿಂದ ಅದೇ ಮೋಕ್ಷವು, ಇಚ್ಛೆ ಇಲ್ಲದಿದ್ದರೂ ಹಟದಿಂದ ಪ್ರಾಪ್ತವಾಗುತ್ತಿರುವದು.

ಯಾರು ಎಷ್ಟು ಹಂಚಿಕೆ ಹಾಕಿದರೂ, ಸ್ಥಳವಿಲ್ಲದೆ ನೀರು ನಿಲ್ಲುವದು ಶಕ್ಯವಿಲ್ಲೆಂಬ ಮಾತು ಹೇಗೆ ಸತ್ಯವಾದದ್ದೋ, ಅದರಂತೆ ಗರುಡಾ, ಮೋಕ್ಷಸುಖವಾದರೂ ಹರಿಭಕ್ತಿಯಿಲ್ಲದೆ ನಿಲ್ಲುವದು ಶಕ್ಯವಿಲ್ಲವು. ಈ ವಿಚಾರದಿಂದಲೇ ಸುಜ್ಞರಾದ ಹರಿಭಕ್ತರು ಮುಕ್ತಿಯನ್ನು ತಿರಸ್ಕರಿಸಿ ಭಕ್ತಿಯಲ್ಲಿಯೇ ಲುಬ್ಧರಾಗಿರುವರು. ಭಕ್ತಿಯಿಂದ ಪ್ರಯತ್ನವೂ ಆಯಾಸವೂ ಇಲ್ಲದೆ ಸಂಸಾರಕ್ಕೆ ಕಾರಣವಾದ ಅವಿದ್ಯೆಯು ನಾಶವಾಗುತ್ತದೆ. ತೃಪ್ತಿಯು ಸಲುವಾಗಿ ಊಟವನ್ನು ಮಾಡದೇ ಇದ್ದರೂ, ಯಾವತ್ತು ಅನ್ನವನ್ನು ಜಠರಾಗ್ನಿಯು ಪಚನ ಮಾಡಿಬಿಡುವದು. ಅದರಂತೆ ದುಃಖವಾದರೂ ಕಾಗೆ ಭಕ್ತಿಯನ್ನು ಮಾಡಿದರೆ ದುಃಖದ ಕಾರಣಗಳನ್ನು ಪ್ರಭುರಾಮನು ನಾಶಮಾಡುವನು. ಆದ್ದರಿಂದ ಹರಿಭಕ್ತಿಯು ಸುಲಭವೂ, ಸುಖದಾಯಕವೂ ಆಗಿದ್ದು, ಅದು ಸೇರದಿರುವ ಮೂಢನು ಯಾವನಿರಬಹುದು? ಎಲೈ ಗರುಡನೇ, ಸೇವ್ಯ-ಸೇವಕಭಾವದ ಹೊರತು ಭವವನ್ನು ದಾಟಲಾಗುವದಿಲ್ಲವೆಂಬ ಸಿದ್ಧಾಂತವಿರುವದು. ಇದನ್ನರಿತು ರಾಮಪದದಲ್ಲಿ ಭಕ್ತಿಯನ್ನು ಮಾಡುತ್ತಿರಬೇಕು. ಸಚೇತನವನ್ನು ಅಚೇತನವನ್ನಾಗಿಯೂ, ಅಚೇತನವನ್ನು ಸಚೇತನವನ್ನಾಗಿಯೂ ಮಾಡುವ ಸಮರ್ಥ ಶ್ರೀರಾಘವನಲ್ಲಿ ಭಕ್ತಿಯನ್ನು ಮಾಡುವ ಜನರೇ ಧನ್ಯರು. ಗರುಡಾ, ಜ್ಞಾನಮಾರ್ಗದ ಸಿದ್ಧಾಂತವನ್ನು ನಿನಗೆ ವಿಶದವಾಗಿ ಹೇಳಿದೆನು. ಇನ್ನು ಭಕ್ತಿರೂಪ ರತ್ನದ ಸಾಮರ್ಥ್ಯವನ್ನು ಶ್ರವಣ ಮಾಡು. ರಾಮಭಕ್ತಿಯು ದೇದೀಪ್ಯಮಾನ ಚಿಂತಾಮಣಿಯಾಗಿರುವದು. ಗರುಡಾ, ಭಕ್ತಿಯು ವಾಸಿಸುತ್ತಿರುವವನ ಹೃದಯದಲ್ಲಿ ಅದು ಅಹೋರಾತ್ರ ಪ್ರಕಾಶರೂಪವಾಗಿಯೇ ಇರುವದರಿಂದ ಅಲ್ಲಿ ದೀಪ, ತುಪ್ಪ, ಬತ್ತಿ ಇವುಗಳ ಅವಶ್ಯಕತೆಯೇ ಇಲ್ಲ. ಮೋಹರೂಪ ದಾರಿದ್ರ್ಯವು ಭಕ್ತಿಯು ಗಾಳಿಗೂ ನಿಲ್ಲುವದಿಲ್ಲ. ಲೋಭರೂಪ ಗಾಳಿಯು ಅದನ್ನು ಆರಿಸಲಾರದು. ಅವಿದ್ಯಾರೂಪ ಗಾಢ ಅಂಧಃಕಾರವೂ ನಷ್ಟವಾಗುವದು. ಭಕ್ತಿಯು ಹೃದಯದಲ್ಲಿ ವಾಸಿಸುತ್ತಿರುವವನ ಬಳಿಯಲ್ಲಿ ಕಾಮಾದಿ ದುಷ್ಟ ಶಲಭಸಮುದಾಯವು ಸುಳಿಯದೆ, ಎಲ್ಲವೂ ಹಿಂದಿರುಗಿ ಹೋಗುವವು. ಆತನಿಗೆ ವಿಷವು ಅಮೃತದಂತೆ ಆಗಿ ಆತನ ಶತ್ರುಗಳೂ ಮಿತ್ರರಾಗುವರು. ದುರ್ಧರ ಮಾನಸಿಕ ರೋಗಗಳೂ ಕೂಡ ಆತನನ್ನು ಬಾಧಿಸಲಾರವು. ಆ ಭಕ್ತಿರೂಪಮಣಿಯು ಎಲ್ಲರ ಕಣ್ಣಿಗೂ ಕಾಣಿಸುತ್ತಿದ್ದರೂ, ಶ್ರೀ ರಾಮನ ಕೃಪೆಯ ಹೊರತು ಯಾರಿಗೂ ಅದು ಸಿಗಲಾರದು. ಸತ್ಸಂಗ ಮಾಡುವವನಿಗೆ ರಾಮನ ಕೃಪೆಯು ಸುಲಭವಾಗಿ ಆಗುವದು. ರಾಮನಿಗಿಂತಲೂ ರಾಮನ ಭಕ್ತರೇ ಶ್ರೇಷ್ಠರೆಂದು ನನ್ನ ಮನಸ್ಸಿನ ನಿರ್ಧಾರವಿರುವದು. ರಾಮನು ಚಂದನ ವೃಕ್ಷವಿದ್ದು ಸಂತರು ಅದರ ಸುಗಂಧವನ್ನು ಒಯ್ಯುವ ವಾಯುವಾಗಿರುವರು. ವೈರಾಗ್ಯದ ಢಾಲನ್ನು ತಕ್ಕೊಂಡು ಜ್ಞಾನರೂಪವಾದ ಖಡ್ಗದಿಂದ ಮದ-ಲೋಭ-ಮೋಹಾದಿ ಶತ್ರುಗಳನ್ನು ಗೆದ್ದು ವಿಜಯವನ್ನು ಸಂಪಾದಿಸುವದೇ ಹರಿಭಕ್ತಿಯು.

ಈ ವೇಳೆಗೆ ಪೂಜಿಸಿದ ಭುಶುಂಡಿಯ ಬೋಧವನ್ನು ಕೇಳಿ ಪುನಃ ಗರುಡನು ಪ್ರೇಮಪೂರ್ವಕವಾಗಿ ಆತನನ್ನು ಕರೆದು— ಎಲೈ ನಾಥನೇ, ನನ್ನ ಮೇಲೆ ನಿನ್ನ ಪ್ರೀತಿಯು ಇರುವದರಿಂದ ನನ್ನ ಏಳು ಪ್ರಶ್ನೆಗಳ ಉತ್ತರಗಳನ್ನು ಹೇಳಬೇಕು. ಎಲ್ಲ ದೇಹಗಳಲ್ಲಿ ಶ್ರೇಷ್ಠ ದೇಹವು ಯಾವದು? ಮಹದ್ದುಃಖವು ಯಾವದು? ಮಹತ್ಸುಖವು ಯಾವದು? ಸಂತರ ಹಾಗು ಅಸಂತರ ಸಹಜಸ್ವಭಾವಗಳು ಯಾವವು? ವೇದ ವಿಹಿತವಾದ ಮಹತ್ಪುಣ್ಯವು ಯಾವದು? ಅತಿಘೋರವಾದ ಪಾತಕವು ಯಾವದು? ಮಾನಸಿಕ ರೋಗಗಳು ಯಾವವು? ಎಂದು ಕೇಳಲು, ಭುಶುಂಡಿಯು— ಎಲೈ ಗರುಡನೇ, ಅತ್ಯಂತ ಪ್ರೀತಿಯಿಂದ ಆದರಪೂರ್ವಕವಾಗಿ ಕೇಳು. ಮನುಷ್ಯದೇಹದಂಥ ಯೋನಿಯೇ ಇಲ್ಲವು. ಚರಾಚರ ಜೀವಗಳು ಅದನ್ನೇ ಇಚ್ಛಿಸುವವು. ಅದು ನರಕ, ಸ್ವರ್ಗ, ಮೋಕ್ಷಗಳ ನಿಚ್ಚಣಿಕೆಯಾಗಿದ್ದು, ಜ್ಞಾನ, ವೈರಾಗ್ಯ, ಭಕ್ತಿ, ಸುಖಗಳನ್ನು ಕೊಡುವಂಥದಾಗಿರುವದು. ಇಂಥ ಮನುಷ್ಯಜನ್ಮವು ಪ್ರಾಪ್ತವಾಗಿಯೂ ಭಗವದ್ಭಜನ ಮಾಡದೆ ವಿಷಯಲಂಪಟರಾಗಿರುವವರು [illegible]. ಜಗತ್ತಿನಲ್ಲಿ ದಾರಿದ್ರ್ಯದಂಥ ದುಃಖವಿಲ್ಲ; ಸಂತಸಮಾಗಮದಂಥ ಸುಖವಿಲ್ಲ. ತ್ರಿಕರಣಪೂರ್ವಕ ಪರೋಪಕಾರ ಮಾಡುವದೇ ಸಂತರ ಸ್ವಭಾವವಾಗಿರುವದು. ಸಂತರು ಪರಹಿತಕ್ಕಾಗಿ, ದುರ್ದೈವಿಗಳಾದ ದುರ್ಜನರು ಪರಪೀಡೆಗಾಗಿ ಸ್ವತಃ ದುಃಖವನ್ನು ಸಹಿಸುತ್ತಿರುವರು. ಆಣೆಯ ಕಲ್ಲುಗಳು ಪೈರುಗಳನ್ನು ಕೆಡಿಸಿ ತಾವು ಕರಗಿ ಹೋಗುವಂತೆ, ದುರ್ಜನರು ಎರಡನೆಯವರನ್ನು ಕೆಡಿಸಿ ತಾವೂ ಕೆಟ್ಟು ಹೋಗುವರು. ವೇದಪ್ರತಿಪಾದ್ಯವಾದ ಶ್ರೇಷ್ಠ ಧರ್ಮವು ಅಹಿಂಸೆಯು. ಪರನಿಂದೆಯಂಥ ಮಹತ್ಪಾತಕವಿಲ್ಲ. ದೇವತೆಗಳನ್ನೂ, ಗುರುಗಳನ್ನೂ ನಿಂದಿಸುವವನು ಕಪ್ಪೆಯಾಗಿ ಹುಟ್ಟಿ ಅದೇ ಯೋನಿಯಲ್ಲಿ ಸಾವಿರಾರು ಜನ್ಮಗಳನ್ನು ಎತ್ತುವನು. ಬ್ರಾಹ್ಮಣ ನಿಂದಕನು ಅನೇಕ ನರಕಗಳನ್ನು ಭೋಗಿಸಿ ಕಾಗೆಯ ದೇಹದಿಂದ ಜಗತ್ತಿನಲ್ಲಿ ಹುಟ್ಟುವನು. ದೇವತೆಗಳನ್ನೂ, ವೇದಗಳನ್ನೂ ನಿಂದಿಸುವ ಉನ್ಮತ್ತರು ರೌರವ ನರಕದಲ್ಲಿ ಬೀಳುವರು. ಸಂತರನ್ನು ನಿಂದಿಸುವಲ್ಲಿ ತತ್ಪರರಾದವರು ಗೂಗೆಯಾಗುವರು. ಎಲ್ಲರನ್ನೂ ನಿಂದಿಸುವಮೂರ್ಖರು ತೊಗಲಬಾವುಲಿಗಳಾಗಿ ಹುಟ್ಟುವರು. ಗರುಡಾ, ಎಲ್ಲ ಜನರೂ ವ್ಯಥಿತರಾಗುವ ಮಾನಸಿಕ ರೋಗಗಳನ್ನು ಹೇಳುವೆನು ಕೇಳು. ಎಲ್ಲ ವ್ಯಾಧಿಗಳ ಮೂಲವು ಮೋಹದಲ್ಲಿರುವದು. ಕಾಮರೂಪ ವಾತ, ಲೋಭರೂಪವಾದ ಕಫ, ಕ್ರೋಧರೂಪವಾದ ಪಿತ್ತ ಇವುಗಳ ಯೋಗದಿಂದ ಹೃದಯವು ಯಾವಾಗಲೂ ಸಂತಪ್ತವಾಗುತ್ತಿರುತ್ತದೆ. ಈ ಮೂರೂ ಒಟ್ಟುಗೂಡಿದರೆ ಮಾತ್ರ ಶೋಕಪರಿಣಾಮಿಯಾದ ಸನ್ನಿಪಾತವಾಗಲೇಬೇಕು. ವಿಷಯವಾಸನೆಗಳು ಹಲವು ಇದ್ದು, ಅವು ದುರ್ಧರವಾಗಿರುವವು. ಇವೆಲ್ಲವೂ ರೋಗಗಳೇ ಆಗಿರುವವು. ಅವುಗಳ ಹೆಸರುಗಳಾದರೂ ಯಾರಿಗೆಗೊತ್ತಿರುವವು!

ಮಾಮತೆಯು ಗಜಕರ್ಣರೋಗವಾಗಿದೆ, ಈರ್ಷೆಯು ತಿಂಡಿಯು ರೋಗವಾಗಿರುವದು. ಹರ್ಷ ಹಾಗು ವಿಷಾದಗಳು ಅನೇಕಪ್ರಕಾರದ ಉಪದಂಶ ರೋಗಗಳಾಗಿರುವವು. ಎರಡನೆಯವರ ಐಶ್ವರ್ಯವನ್ನು ನೋಡಿ ಸಂತಾಪಪಡುವದು ಕ್ಷಯರೋಗವಾಗಿದ್ದು, ಮನಸ್ಸಿನ ಕುಟಿಲತನವೂ, ದುಷ್ಟತನವೂ ಕುಷ್ಠರೋಗಗಳಾಗಿರುವವು. ಅಹಂಕಾರವು ಅತಿ ದುಃಖಕಾರಕವಾದ ಒಂದು ಬಗೆಯ ಕ್ರಿಮಿರೋಗವಿದ್ದು, ದಂಭ, ಕಪಟ, ಮದ, ಮಾನಗಳು ನಾರುಹುಣ್ಣುಗಳಾಗಿರುವವು. ತೃಷ್ಣೆಯು ಮಹಾಭಯಂಕರವಾದ ಜಲೋದರವಿದ್ದು, ಈಷಣಾತ್ರಯಗಳು ವಾರದಿನಗಳಿಗೊಮ್ಮೆ ಬರುವ ಜ್ವರಗಳಾಗಿರುವವು. ಅವಿವೇಕ-ಮಾತ್ಸರ್ಯಗಳು ಎರಡು ಬಗೆಯ ಜ್ವರಗಳಾಗಿರುವವು. ಇದರಂತೆ ಇರುವ ದುಷ್ಟರೋಗಗಳನ್ನು ಎಷ್ಟೆಂತ ಹೇಳಬೇಕು? ಒಂದು ವ್ಯಾಧಿಯು ಬಂದರೆ ಜನ್ಮವನ್ನೇ ಮರಣಕ್ಕೀಡು ಮಾಡುತ್ತಿರಲು, ಹೀಗೆ ಅನೇಕ ಅಸಾಧ್ಯರೋಗಗಳು ಜೀವನನ್ನು ನಿರಂತರ ಬಾಧಿಸುತ್ತಿರುವಾಗ ಅವನಿಗೆ ಆತ್ಮಸುಖವು ಹೇಗೆ ದೊರೆಯಬೇಕು? ನೇಮ, ಧರ್ಮ, ಆಚಾರ, ತಪ, ಜ್ಞಾನ, ಯಜ್ಞ, ಜಪ, ದಾನ ಇತ್ಯಾದಿ ಕೋಟ್ಯವಧಿ ಔಷಧಗಳಿರುವವು; ಆದರೆ ಗರುಡಾ, ಈ ರೋಗಗಳು ಮಾತ್ರ ಹೋಗುವದಿಲ್ಲ. ಈ ಮೇರೆಗೆ ಎಲ್ಲ ಜಡಜೀವರೂ ಶೋಕ-ಹರ್ಷ-ಭಯ-ಪ್ರೀತಿ-ವಿಯೋಗ ಇತ್ಯಾದಿ ವ್ಯಾಧಿಗ್ರಸ್ತರಾಗಿರುವರು. ಈ ಮಾನಸಿಕರೋಗಗಳು ಎಲ್ಲರಿಗೂ ಇರುವವು; ಆದರೆ ಈ ಮಾತು ಬಹು ಸ್ವಲ್ಪಜನರಿಗೆ ಗೊತ್ತಾಗುವದು. ಚಿಕಿತ್ಸೆಯಾದರೆ ಈ ರೋಗಗಳ ಬಾಧೆಯು ಕೆಲಮಟ್ಟಿಗೆ ಕಡಿಮೆಯಾಗುವದು; ಆದರೆ ಅವು ಸಮೂಲ ನಷ್ಟವಾಗುವದಿಲ್ಲ. ವಿಷಯರೂಪ ಕುಪಥ್ಯವಾದಕೂಡಲೆ ಮುನಿಗಳ ಹೃದಯದಲ್ಲಿಯಾದರೂ ತಿರುಗಿ ಅವುಗಳ ಮೊಳಕೆಗಳು ಒಡೆಯುವವು; ಅಂದಬಳಿಕ ಉಳಿದವರ ಪಾಡೇನು?

ಗರುಡಾ, ರಾಮಕೃಪೆಯಿಂದ ಎಲ್ಲ ರೋಗಗಳ ಬೀಜಗಳು ನಷ್ಟವಾಗುವವು; ಆದರೆ ಸದ್ಗುರುವೈದ್ಯನು, ಅತನ ಮಾತಿನಲ್ಲಿ ವಿಶ್ವಾಸ, ವಿಷಯೇಚ್ಛೆಯಲ್ಲಿ ಮನಸ್ಸಿನ ಪೂರ್ಣನಿಗ್ರಹ, ರಘುಪತಿ ಭಕ್ತಿರೂಪ ಸಂಜೀವನೌಷಧಿಯು, ಪೂರ್ಣ ಶ್ರದ್ಧಾಯುಕ್ತ ಬುದ್ಧಿಯ ಅನುಪಾನ, ಹೀಗೆ ಎಲ್ಲ ಯೋಗಗಳು ಕೂಡಿಬರಬೇಕು; ಅಂದರೆ ದುರ್ಧರರೋಗಗಳು ನಷ್ಟವಾಗುವವು. ಇಲ್ಲದ್ದರೆ ಇತರ ಕೋಟ್ಯವಧಿ ಉಪಾಯಗಳಿಂದಾದರೂ ರೋಗನಾಶವು ಶಕ್ಯವಾಗಿರುವದಿಲ್ಲ. ಎಲೈ ಸ್ವಾಮಿಯೇ, ಹೃದಯದಲ್ಲಿ ವೈರಾಗ್ಯವು ಹೆಚ್ಚಿ, ಸದ್ಬುದ್ಧಿಕ್ಷುಧೆಯು ನಿತ್ಯ ಹೆಚ್ಚ ಹೆಚ್ಚು ಬೆಳೆಯುತ್ತಹೋಗಿ, ವಿಷಯಾಶಕ್ತಿರೂಪ ಅಶಕ್ತತೆಯು ನಷ್ಟವಾಗಿ, ನಿರ್ಮಲಜ್ಞಾನದಲ್ಲಿ ಮನಸ್ಸು ಸ್ನಾನಮಾಡಿದರೆ, ಆಗ ಮಾತ್ರ ರೋಗವು ನಾಶವಾಯಿತೆಂದು ತಿಳಿಯಬೇಕು. ಆಗ ರಾಮಭಕ್ತಿಯು ಹೃದಯದಲ್ಲಿ ವ್ಯಾಪಿಸಿಕೊಳ್ಳುವದು. ಎಲೈ ಗರುಡಾ, ರಘುಪತಿಯ ಭಕ್ತಿಯಹೊರತು ಸುಖವು ದೊರೆಯುವದು ಶಕ್ಯವಿಲ್ಲೆಂದು ಶ್ರುತಿಪುರಾಣಗಳು ಘೋಷಿಸುತ್ತಿರುವವು;

ಆದ್ದರಿಂದ ಹರಿವಿಸ್ಮೃತಜೀವನಿಗೆ ಸುಖವಾಗುವದಿಲ್ಲವೆಂದು ಪುನಃ ಪುನಃ ನಾನು ನಿನಗೆ ಹೇಳುವೆನು. ಪ್ರಭುವು ನೊಣವನ್ನು ಬ್ರಹ್ಮದೇವನನ್ನಾಗ ಮಾಡುವನು, ಬ್ರಹ್ಮದೇವನನ್ನು ನೊಣಕ್ಕಿಂತಲೂ ಕಡೆಯಾದದರೂ ಮಾಡುವನು, ಎಂಬ ವಿಚಾರವನ್ನು ಮನಸ್ಸಿನಲ್ಲಿತಂದು ಸುಜ್ಞಜನರು ಸಂಶಯವನ್ನು ತ್ಯಜಿಸಿ ರಾಮಚಂದ್ರನನ್ನು ಭಜಿಸತೊಡಗುವರು. ಗರುಡಾ, ನಿಶ್ಚಯದಿಂದ ಹೇಳುತ್ತೇನೆ, ನನ್ನ ವಚನವು ಸುಳ್ಳು ಆಗಲಾರದು. ಹರಿಭಕ್ತರು ಅತ್ಯಂತ ದುಸ್ತರವಾದ ಭವಸಾಗರವನ್ನಾದರೂ ದಾಟಿ ಹೋಗುವರು. ಎಲೈ ನಾಥನೇ, ಅನುಪಮೇಯವಾದಹರಿಕಥೆಯನ್ನು ವಿಸ್ತಾರವಾಗಿಯೂ, ಸಂಕ್ಷೇಪವಾಗಿಯೂ ಯಥಾಮತಿ ನಿರೂಪಿಸಿದೆನು. ನನ್ನಂಥಶಠನನ್ನೂ ಪ್ರೀತಿಸುವ ಅರಾಘವನನ್ನುಬಿಟ್ಟು ಮತ್ತೆ ಯಾರನ್ನು ಸೇವಿಸಬೇಕು?ನೀನುಇಂದುಶಂಕರಪ್ರಭೃತಿ ಶುಕಸನಕಾದಿಕರಿಗೂ ಸ್ಪೃಹಣೀಯವಾಗಿರುವ ರಾಮಕಥೆಯನ್ನು ಕುರಿತು ಪ್ರಶ್ನಮಾಡಿ ನನ್ನಮೇಲೆ ಬಹುದೊಡ್ಡ ಅನುಗ್ರಹಮಾಡಿರುವೆ ಈ ಜಗತ್ತಿನಲ್ಲಿ ಸತ್ಸಮಾಗಮವು ಅತ್ಯಂತ ದುರ್ಲಭವಾಗಿರುವದು. ಎಲೈ ನಾಥನೇ, ಈ ರಾಮಚರಿತಮಾನಸವನ್ನು ಯಥಾಮತಿಯಾಗಿ ಹೇಳಿದೆನು. ಏನೂಗುಪ್ತವಾಗಿಇಟ್ಟಿರುವದಿಲ್ಲ.ರಘುನಾಥನು ಲೀಲಾಸಾಗರನಾದದ್ದರಿಂದಅತನನೆಲೆಯು ಯಾರಿಗಾದರೂ ಹತ್ತಬಹುದೇ? ಸಾಧಕರು, ಸಿದ್ಧರು, ವಿರಕ್ತರು, ಉದಾಸೀನರು, ಕವಿಗಳು, ಕೋವಿದರು, ಕೃತಜ್ಞರು, ಸನ್ಯಾಸಿಗಳು, ಶೂರರು, ತಪಸ್ವಿಗಳು, ಜ್ಞಾನಿಗಳು, ಧರ್ಮನಿಷ್ಠರು, ಪಂಡಿತರು, ವಿಜ್ಞಾನಿಗಳು ಇವರಾದರೂ ನನ್ನ ಸ್ವಾಮಿಯನ್ನು ಸೇವಿಸದೆ ದಾಟಿಹೋಗಿರುವದಿಲ್ಲ. ಅಂಥ ಆ ಶ್ರೀರಾಮನಿಗೆ ನಾನು ಪುನಃ ಪುನಃ ನಮಸ್ಕರಿಸುವೆನು ಯಾವನ ನಾಮವು ತಾಪತ್ರಯರೂಪ ವ್ಯಾಧಿಯ ಪಾರಿಪತ್ಯಮಾಡುವ ಭವೌಷಧಿಯಾಗಿರುವದೋ ಆದಯಾಘನನು ನನ್ನಮೇಲೆಯೂ, ನಿನ್ನ ಮೇಲೆಯೂ ಯಾವಾಗಲೂ ಪ್ರಸನ್ನನಾಗಿರಲಿ.

ಭುಶುಂಡಿಯ ಈಶುಭವ್ಯಾಖ್ಯಾನವನ್ನು ಕೇಳಿ, ರಾಮಪದದಲ್ಲಿರುವ ಆತನ ಪ್ರೇಮವನ್ನು ನೋಡಿ ಗರುಡನು ಸಂದೇಹವಿಲ್ಲದವನಾಗಿ ಪ್ರೇಮಪೂರ್ವಕವಾಗಿ ಆತನನ್ನು ಕುರಿತು—ಎಲೈ ನಾಥನೇ, ರಘುವೀರ-ಭಕ್ತಿರಸದಿಂತ ತುಂಬಿತುಳುಕುತ್ತಿರುವ ನಿನ್ನ ಭಾಷಣವನ್ನು ಕೇಳಿ ನಾನು ಕೃತಕೃತ್ಯನಾದೆನು. ರಾಮಚರಣದಲ್ಲಿ ನನ್ನ ಅಭಿನವ ಪ್ರೇಮವುಂಟಾಗಿ ನನ್ನ ಮಾಯಾಜನಿತ ಕ್ಲೇಶವೆಲ್ಲ ನಷ್ಟವಾಯಿತು. ಈ ಮೋಹರೂಪಸಾಗರದಲ್ಲಿ ನೀನು ನನಗೆ ನೌಕೆಯಂತೆ ಆಗಿ ನನ್ನನ್ನು ಹಲವುಬಗೆಯಿಂದ ಸುಖಿಯಾಗಮಾಡಿದೆ. ನನ್ನಿಂದ ನಿನ್ನ ಈಉಪಕಾರವು ತೀರುವ ಸಂಭವ ವಿರದ್ದರಿಂದ ನಾನು ಹಲವು ಸಾರೆ ನಿನ್ನ ಚರಣಗಳಿಗೆ ಎರಗುವೆನು. ನೀನು ಪೂರ್ಣಕಾಮನಾದ ರಾಮಭಕ್ತನಿರುವೆ. ಎಲೈ ತಾತನೆ, ನಿನ್ನಂಥ ಮಹಾನ್ ಭಾಗ್ಯಶಾಲಿಯು ಬೇರಿಯಾವನೂ ಇಲ್ಲವು. ಸಂತರು, ವೃಕ್ಷಗಳು, ನದಿಗಳು, ಪರ್ವತಗಳು, ಪೃಥ್ವಿಯು

ಇವೆಲ್ಲವುಗಳ ಜನ್ಮವು ಕೇವಲ ಪರೋಪಕಾರಕ್ಕಾಗಿಯೇ ಇರುವದು. ಸಂತರಹೃದಯವು ಬೆಣ್ಣೆಯಂತೆ ಇರುವದೆಂದು ಕವಿಗಳು ವರ್ಣಿಸಿರುವರು; ಆದರೆ ಅದರ ಅರ್ಥವು ಅವರಿಗೆ ತಿಳಿದಂತೆ ತೋರುವದಿಲ್ಲ. ಯಾಕಂದರೆ, ಪ್ರತ್ಯಕ್ಷತನಗೇ ಉಷ್ಣತೆಯು ತಾಪವಾದಾಗ ಬೆಣ್ಣೆಯು ಕರುಗುತ್ತದೆ; ಆದರೆ ನಿಜವಾಗಿಯೇ ಪಾವನರಾಗಿರುವ ಸಂತರು ಅನ್ಯರ ದುಃಖವನ್ನು ನೋಡಿಯೇ ಕರಗುತ್ತಿರುವರು. ನಾಥನೇ, ಇಂದಿನಿಂದ ನನ್ನನ್ನು ನಿನ್ನ ದಾಸನೆಂದು ತಿಳಿಯಬೇಕು. ಎಂದು ಪ್ರಾರ್ಥಿಸಿದನು. ಪಾರ್ವತೀ, ಈಮೇರೆಗೆ ಸ್ಥಿರ ಬುದ್ಧಿಯು ಆ ಗರುಡನು ಪುನಃ ಪುನಃ ಪ್ರಾರ್ಥಿಸಿ ಭುಶುಂಡಿಯ ಚರಣಗಳ ಮೇಲೆ ಮಸ್ತಕವಿಟ್ಟು ರಘುವೀರನನ್ನು ಹೃದಯದಲ್ಲಿ ಚಿಂತಿಸುತ್ತ ವೈಕುಂಠಕ್ಕೆ ತಿರುಗಿ ಹೋದನು. ಎಲೈ ಪಾರ್ವತೀ, ಸತ್ಸಮಾಗಮದಂಥ ಬೇರೆ ಲಾಭವಿಲ್ಲ; ಆದರೆ ಹರಿಕೃಪೆಯು ಹೊರತು ಅದು ಲಭಿಸುತ್ತಿರುವದಿಲ್ಲೆಂದು ವೇದ ಪುರಾಣಗಳ ಸಿದ್ಧಾಂತವಿರುತ್ತದೆ. ನಿನಗೆ ನಾನು ಈ ಪರಮಪವಿತ್ರವಾದ ಇತಿಹಾಸವನ್ನು ಹೇಳಿದೆನು. ಇದರ ಶ್ರವಣಮಾತ್ರದಿಂದ ಭವ ಬಂಧನವು ಹರಿದು ಹೋಗುವದು. ಮನಃಪೂರ್ವಕವಾಗಿ ಇದನ್ನು ಕೇಳುವವರ ಕಾಯಿಕ-ವಾಚಿಕ-ಮಾನಸಿಕ ಪಾಪಗಳು ದಗ್ಧವಾಗುವವು. ಮುನಿಗಳಿಗೂ ದುರ್ಲಭವಾದ ಹರಿಭಕ್ತಿಯು ಅನಾಯಾಸವಾಗಿ ಪ್ರಾಪ್ತವಾಗುವದು. ಅವರೇ ಧನ್ಯರು. ಪಾರ್ವತೀ, ಭಾಗೀರಥಿಯು ಹರಿಯುವ ಪ್ರದೇಶವು ಧನ್ಯವಾದದ್ದು. ಪತಿವ್ರತಾಧರ್ಮದಿಂದ ನಡೆಯುವ ಸ್ತ್ರೀಯು ಧನ್ಯಳು. ನೀತಿಯಿಂದ ರಾಜ್ಯವಾಳುವ ಅರಸನು ಧನ್ಯನು. ಸ್ವಧರ್ಮದಿಂದ ಯತ್ಕಿಂಚಿತ್ತಾದರೂ ನಿವೃತ್ತನಾಗದ ಬ್ರಾಹ್ಮಣನುಧನ್ಯನು. ಧರ್ಮಕೃತ್ಯದಲ್ಲಿ ವಿನಿಯೋಗವಾಗುವ ಸಂಪತ್ತುಧನ್ಯವಾದದ್ದು. ಪುಣ್ಯಕರ್ಮದಲ್ಲಿಯೇ ತೊಡಗಿರುವ ಪವಿತ್ರ ಬುದ್ಧಿಯು ಧನ್ಯವಾದದ್ದು. ಸತ್ಸಂಗವು ಒದಗಿದ ವೇಳೆಯು ಧನ್ಯವಾದದ್ದು. ಬ್ರಾಹ್ಮಣರ ಅಖಂಡ ಭಕ್ತಿಯು ಒದಗಿದವನ ಆಯುಷ್ಯವು ಧನ್ಯವಾದದ್ದು. ಎಲೈ ಪಾರ್ವತಿಯೇ, ಯಾವ ಕುಲದಲ್ಲಿ ವಿನಯಸಂಪನ್ನರಾದ ವೈಷ್ಣವರು ಉತ್ಪನ್ನರಾಗುವರೋ ಆ ಕುಲವು ಜಗತ್ಪೂಜ್ಯವೂ, ಅತ್ಯಂತ ಪವಿತ್ರವೂ, ಧನ್ಯವೂ ಆಗಿರುವದು. ಸುಮಂಗಲೇ, ಗುಪ್ತವಾಗಿ ಇಟ್ಟಿದ್ದ ಈ ಹರಿಕಥೆಯನ್ನು ಪ್ರೇಮಪೂರ್ಣಳಾದ ನಿನಗೆ ಯಥಾಮತಿ ಹೇಳಿದೆನು. ಚಿತ್ತವಿಟ್ಟು ಕೇಳದ ಮೂರ್ಖ ಹಟಮಾರಿಗಳಿಗೆ ಇದನ್ನು ಹೇಳಬಾರದು. ಲೋಭಿಗಳಿಗೂ, ಸಿಟ್ಟಿನವರಿಗೂ, ರಾಮಭಕ್ತರಲ್ಲದವರಿಗೂ ಇದನ್ನು ಹೇಳಬಾರದು ಬ್ರಹ್ಮದ್ವೇಷಿಗೆ—ಅವನು ಇಂದ್ರನಿಗೆ ಸಮಾನನಾದ ರಾಜನಿದ್ದರೂ ಅವನಿಗೆ ಈ ಕಥೆಯನ್ನು ಎಂದೂ ಹೇಳಬಾರದು. ಸತ್ಸಂಗತಿಯಲ್ಲಿಉತ್ಕಟಲಾಲಸೆಯುಳ್ಳವರೇ ರಾಮಕಥಾಶ್ರವಣಕ್ಕೆ ಅಧಿಕಾರಿಗಳು. ಗುರುಪದನಿಷ್ಠರೂ, ನೀತಿರತರೂ, ದ್ವಿಜಸೇವಕರೂ ಇವರಾದರೂ ಅಧಿಕಾರಿಗಳು. ರಘುರಾಜನು ಪ್ರಾಣಪ್ರಿಯನಾಗಿರುವವರಿಗಂತು ಈ ಕಥೆಯು

ಅತ್ಯಂತ ಆನಂದದಾಯಕವಾಗುವದು. ಈ ಕಥೆಯನ್ನು ವಿಶ್ವಾಸಭಾವದಿಂದ ಪಠಿಸುವವನ ಮನಃಕಾಮನೆಗಳು ಸಿದ್ಧಿಸುವವು. ಇದನ್ನು ಪಠಿಸುವವರೂ, ಶ್ರವಣಮಾಡುವವರೂ, ಪಠಣ-ಶ್ರವಣಗಳನ್ನು ಅನುಮೋದಿಸುವವರೂ ಗೋಷ್ಪದದಂತೆ ಭವಸಾಗರವನ್ನು ದಾಟಿಹೋಗುವರು, ಎಂದು ಹೇಳಲು, ಪಾರ್ವತಿಯು ಪರಮೇಶ್ವರನನ್ನು ಕುರಿತು— ನಾಥ, ತ್ವತ್ಕೃಪೆಯಿಂದ ನನ್ನ ಸಂಶಯಗಳು ನಷ್ಟವಾಗಿ ರಾಮಚರಣದಲ್ಲಿ ನವೀನ ಪ್ರೇಮವು ಉತ್ಪನ್ನವಾಯಿತು ಎಂದು ಹೇಳಿ ಕೃತಕೃತ್ಯತೆಯನ್ನು ಪ್ರಕಟಿಸಿದಳು.

ಈ ಶಂಕರ ಪಾರ್ವತೀ-ಸಂವಾದವು ಸುಖವನ್ನು ಒದಗಿಸಿಕೊಡುವಂತಹದೂ, ದುಃಖಗಳನ್ನು ನಷ್ಟಗೊಳಿಸುವಂತಹದೂ, ಭವವನ್ನು ದೂರಮಾಡುವಂತಹದೂ, ಸಂದೇಹವನ್ನು ಕಳೆಯುವಂತಹದೂ, ಜನರ ಮನೋರಂಜನ ಮಾಡುವಂತಹದೂ, ಸಂತರಿಗೆ ಪ್ರಿಯವಾದದ್ದೂ ಇರುವದು. ರಾಮೋಪಾಸಕರಿಗಂತೂ ಇದಕ್ಕಿಂತ ಪ್ರಿಯವಾದದ್ದು ಜಗತ್ತಿನಲ್ಲಿ ಯಾವದೂ ಇರುವದಿಲ್ಲ. ಈ ಪಾವನವೂ, ಸುಂದರವೂ ಆದ ಚರಿತ್ರವನ್ನು ನಾನು ರಘುಪತಿಯ ಕೃಪೆಯಿಂದ ಯಥಾಮತಿ ಗಾಯನಮಾಡಿದೆನು. ಈ ಕಲಿಕಾಲದಲ್ಲಿ ಯೋಗ, ಯಜ್ಞ, ಜಪ, ತಪ, ವ್ರತ, ಪೂಜೆ ಮೊದಲಾದ ಸಾಧನಗಳು ಉಕ್ತವಾಗಿರುವದಿಲ್ಲ. ಯಾವಾಗಲೂ ರಾಮನನ್ನೇ ಸ್ಮರಿಸಬೇಕು. ಆತನ ಗುಣಗಳನ್ನೇ ಗಾಯನಮಾಡಬೇಕು. ರಾಮಗುಣಸಮುದಾಯವನ್ನೇ ಯಾವಾಗಲೂ ಕೇಳಬೇಕು. ಆದ್ದರಿಂದ ಎಲೈ ಮನಸ್ಸೇ, ಯಾವತ್ತು ಕೌಟಿಲ್ಯವನ್ನು ತ್ಯಜಿಸಿ ರಾಮನಿಗೆ ಶರಣು ಹೋಗು. ರಾಮಭಜನೆಯಿಂದ ಮುಕ್ತಿಯು ಯಾರಿಗೆ ಸಾಧ್ಯವಾಗಿರುವದಿಲ್ಲ? ಗಣಿಕೆ, ಅಜಾಮಿಳ, ವ್ಯಾಧ, ಗೃಧ್ರ, ಗಜೇಂದ್ರ ಮೊದಲಾದ ಅನೇಕ ಮಹಾಪಾಪಿಗಳು ಕೂಡ ಅದರಿಂದ ದಾಟಿಹೋಗಿರುವರು. ಯವನ, ಕಿರಾತ, ಚಾಂಡಾಳ ಮೊದಲಾದವರು ಒಮ್ಮೆ ನಾಮೋಚ್ಚಾರ ಮಾಡಿದಮಾತ್ರದಿಂದ ಪಾವನರಾಗುವರು. ಎಲೈ ರಾಮನೇ, ಇಂಥ ನಿನಗೆ ನನ್ನ ವಂದನೆಗಳು. ರಘುವಂಶ-ಭೂಷಣನ ಚರಿತ್ರದ ಶ್ರವಣವನ್ನಾಗಲಿ ಪಠಣವನ್ನಾಗಲಿ ಮಾಡುವ ನರರ ಕಲಿಮಲ-ಮನೋಮಲಗಳು ತೊಳೆದುಹೋಗಿ, ಅನಾಯಾಸವಾಗಿ ಅವರು ರಾಮನಸ್ಥಾನವನ್ನು ಕುರಿತು ತೆರಳುವರು. ನೂರಾರು "ಚೌಪಾಯಿಗ"ಳನ್ನು ತಿಳಿದುಕೊಂಡು ಹೃದಯದಲ್ಲಿ ಧರಿಸುವ ನರನ ಅವಿದ್ಯಾಜನ್ಯ ವಿಕಾರವನ್ನು ಶ್ರೀರಘುವೀರನು ಹರಣಮಾಡುವನು. ಶ್ರೀರಾಮನ ಕೃಪಾವಲೋಕನದಿಂದ ಮತಿಮಂದನು ನಾನು "ತುಳಸೀದಾಸ"ನಾಗಿ ಪರಮವಿಶ್ರಾಂತಿಯನ್ನು ಹೊಂದಿದೆನು; ಆದ್ದರಿಂದ ಆ ರಾಮಚಂದ್ರನಂಥ ಪ್ರಭುವು ಎಲ್ಲಿಯೂ ಇಲ್ಲ. ಎಲೈ ರಘುವೀರನೇ, ನನ್ನಂಥ ದೀನನೂ, ನಿನ್ನಂಥ ದೀನದಯಾಳುವೂ ಇಲ್ಲವೆಂಬದನ್ನು ಲಕ್ಷ್ಯದಲ್ಲಿಟ್ಟು ಎಲೈ ರಘುವಂಶಮಣಿಯೇ, ನನ್ನ ಘೋರವಾದ ಭವಭಯವನ್ನು ನಿವಾರಣ ಮಾಡಬೇಕು. ಕಾಮುಕರಿಗೆ ಸ್ತ್ರೀಯೂ, ಲೋಭಿಗಳಿಗೆ ದ್ರವ್ಯವೂ ಪ್ರಿಯವಾಗಿರುವಂತೆ ಎಲೈ ಶ್ರೀರಾಮಾ, ನನಗೆ ರಘುವಂಶವು.

## ಶ್ರೀರಾಮಃಸಮರ್ಥೋ ವಿಜಯತೇ.

## ಶ್ರೀರಾಮಗೀತಾ ಪ್ರಾರಭ್ಯತೇ.

ಶ್ರೀ ಮಹಾದೇವ ಉವಾಚ— ತತೋ ಜಗನ್ಮಂಗಲಮಂಗಲಾತ್ಮನಾ ವಿ
ಧಾಯ ರಾಮಾಯಣಕೀರ್ತಿಮುತ್ತಮಾಂ । ಚಚಾರ ಪೂರ್ವಾಚರಿತಂ ರಘೂತ್ತಮೋ
ರಾಜರ್ಷಿವರ್ಯೈರಭಿಸೇವಿತಂ ಯಥಾ ॥ ೧ ॥
ಸೌಮಿತ್ರಿಣಾ ಪೃಷ್ಟ ಉದಾರಬುದ್ಧಿನಾ ರಾಮಃ ಕಥಾಃ ಪ್ರಾಹ ಪುರಾತನೀಃ ಶುಭಾಃ ।
ರಾಜ್ಞಃ ಪ್ರಮತ್ತಸ್ಯ ನೃಗಸ್ಯ ಶಾಪತೋ ದ್ವಿಜಸ್ಯ ತಿರ್ಯಕ್ತ್ವಮಥಾಹ ರಾಘವಃ ॥ ೨ ॥
ಕದಾಚಿದೇಕಾಂತ ಉಪಸ್ಥಿತಂ ಪ್ರಭುಂ ರಾಮಂ ರಮಾಲಾಲಿತ ಪಾದಪಂಕಜಂ ।
ಸೌಮಿತ್ರಿರಾಸಾದಿತ ಶುದ್ಧಭಾವನಃ ಪ್ರಣಮ್ಯ ಭಕ್ತ್ಯಾ ವಿನಯಾನ್ವಿತೋಽಬ್ರವೀತ್ ॥ ೩ ॥
ಸೌಮಿತ್ರಿರುವಾಚ— ತ್ವಂ ಶುದ್ಧ ಬೋಧೋಽಸಿ ಹಿ ಸರ್ವದೇಹಿನಾಮಾತ್ಮಾಸ್ಯಧೀ
ಶೋಽಸಿ ನಿರಾಕೃತಿಃ ಸ್ವಯಂ । ಪ್ರತೀಯಸೇ ಜ್ಞಾನದೃಶಾಂ ಮಹಾಮತೇ ಪಾದಾಬ್ಜ
ಭೃಂಗಾಹಿತ ಸಂಗಸಂಗಿನಾಂ ॥ ೪ ॥
ಅಹಂ ಪ್ರಪನ್ನೋಽಸ್ಮಿ ಪದಾಂಬುಜಂ ಪ್ರಭೋ ಭವಾಪವರ್ಗಂ ತವ ಯೋಗಿ ಭಾವಿತಂ ।
ಯಥಾಂಜಸಾ ಜ್ಞಾನಮಪಾರವಾರಿಧಿಂ ಸುಖಂ ತರಿಷ್ಯಾಮಿ ತಥಾನುಶಾಧಿ ಮಾಂ ॥ ೫ ॥
ಶ್ರುತ್ವಾಥ ಸೌಮಿತ್ರಿವಚೋಽಖಿಲಂ ತದಾ ಪ್ರಾಹ ಪ್ರಪನ್ನಾರ್ತಿಹರಃ ಪ್ರಸನ್ನಧೀಃ ।
ವಿಜ್ಞಾನಮಜ್ಞಾನ ತಮಃಪ್ರಶಾಂತಯೇ ಶ್ರುತಿಪ್ರಪನ್ನಂ ಕ್ಷಿತಿಪಾಲಭೂಷಣಃ ॥ ೬ ॥
ಶ್ರೀರಾಮ ಉವಾಚ— । ಆದೌ ಸ್ವವರ್ಣಾಶ್ರಮ ವರ್ಣಿತಾಃ ಕ್ರಿಯಾಃ ಕೃತ್ವಾ ಸಮಾ
ಸಾದಿತ ಶುದ್ಧಮಾನಸಃ । ಸಮಾಪ್ಯ ತತ್ಪೂರ್ವಮುಪಾತ್ತಸಾಧನಃ ಸಮಾಶ್ರಯೇತ್ಸ
ದ್ಗುರುಮಾತ್ಮಲಬ್ಧಯೇ ॥ ೭ ॥
ಕ್ರಿಯಾಶರೀರೋದ್ಭವ ಹೇತುರಾದೃತಾ ಪ್ರಿಯಾಪ್ರಿಯೌ ತೌ ಭವತಃ ಸುರಾಗಿಣಃ ।
ಧರ್ಮೇತರೌ ತತ್ರ ಪುನಃ ಶರೀರಕಂ ಪುನಃ ಕ್ರಿಯಾ ಚಕ್ರವದೀರ್ಯತೇ ಭವಃ ॥ ೮ ॥
ಅಜ್ಞಾನಮೇವಾಸ್ಯ ಹಿ ಮೂಲಕಾರಣಂ ತದ್ಧಾನಮೇವಾತ್ರ ವಿಧೌ ವಿಧೀಯತೇ ।
ವಿದ್ಯೈವ ತನ್ನಾಶವಿಧೌ ಪಟೀಯಸೀ ನ ಕರ್ಮ ತಜ್ಜಂ ಸವಿರೋಧ ಮೀರಿತಂ ॥ ೯ ॥
ನಾಜ್ಞಾನಹಾನಿರ್ನ ಚ ರಾಗಸಂಕ್ಷಯೋ ಭವೇತ್ತತಃ ಕರ್ಮ ಸದೋಷಮುದ್ಭವೇತ್ ।
ತತಃ ಪುನಃ ಸಂಸೃತಿರಪ್ಯವಾರಿತಾ ತಸ್ಮಾದ್ಬುಧೋ ಜ್ಞಾನವಿಚಾರವಾನ್ ಭವೇತ್ ॥ ೧೦ ॥
ನನು ಕ್ರಿಯಾ ವೇದಮುಖೇನ ಚೋದಿತಾ ಯಥೈವ ವಿದ್ಯಾ ಪುರುಷಾರ್ಥಸಾಧನಂ ।
ಕರ್ತವ್ಯತಾ ಪ್ರಾಣಭೃತಃ ಪ್ರಚೋದಿತಾ ವಿದ್ಯಾಸಹಾಯತ್ವಮುಪೈತಿ ಸಾ ಪುನಃ ॥ ೧೧ ॥
ಕರ್ಮಾಕೃತೌ ದೋಷಮಪಿ ಶ್ರುತಿರ್ಜಗೌ ತಸ್ಮಾತ್ಸದಾ ಕಾರ್ಯಮಿದಂ ಮುಮುಕ್ಷುಣಾ ।
ನನು ಸ್ವತಂತ್ರಾ ಧ್ರುವಕಾರ್ಯಕಾರಿಣೀ ವಿದ್ಯಾ ನ ಕಿಂಚಿನ್ಮನಸಾಪ್ಯಪೇಕ್ಷತೇ ॥ ೧೨ ॥

